# ಕೃಷ್ಣಾ ನದಿ ತೀರದ ನಡುಗಡ್ಡೆಗಳ ಜಾನಪದ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)




ಸಂಶೋಧಕರು

ಗಂಗಮ್ಮ

ಮಾರ್ಗದರ್ಶಕರು

ಡಾ.ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬


೨೦೧೮

# ಕೃಷ್ಣಾ ನದಿ ತೀರದ ನಡುಗಡ್ಡೆಗಳ ಜಾನಪದ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು

**ಗಂಗಮ್ಮ**

ಮಾರ್ಗದರ್ಶಕರು

**ಡಾ.ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ಗಂಗಮ್ಮ** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕೃಷ್ಣಾ ನದಿ ತೀರದ ನಡುಗಡ್ಡೆಗಳ ಜಾನಪದ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಜಾನಪದ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**
ಪ್ರಾಧ್ಯಾಪಕರು
**ಜಾನಪದ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ:** ವಿದ್ಯಾರಣ್ಯ
**ದಿನಾಂಕ:**

# ಸಂಶೋಧಕರ ಘೋಷಣಾ ಪತ್ರ

**ಕೃಷ್ಣಾ ನದಿ ತೀರದ ನಡುಗಡ್ಡೆಗಳ ಜಾನಪದ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಜಾನಪದ ವಿಭಾಗದ ಪ್ರಾಧ್ಯಾಪಕರಾದ **ಡಾ.ಮಂಜುನಾಥ ಬೇವಿನಕಟ್ಟಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಗಂಗಮ್ಮ**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿನಿ
**ಜಾನಪದ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ :

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಮಹತ್ವ

### ೧.೧. ಪ್ರಸ್ತಾವನೆ

ಮಾನವನು ಸಂಘಜೀವಿ, ಸಮಾಜಜೀವಿ ಎಂಬ ಅರಿಸ್ಟಾಟಲ್‌ನ ಮಾತು ತುಂಬಾ ಮಾರ್ಮಿಕವಾದುದು. ವ್ಯಕ್ತಿ ಏಕಾಂಗಿಯಾಗಿ ಬದುಕಲಾರ. 'ಮನಕ್ಕೆ ಮನ ಕೂಡಿದರೆ ಮನಿಮಾರ, ಜನಕ್ಕ ಜನ ಕೂಡಿದರೆ ಸಹಕಾರ' ಎಂಬ ಜನಪದರ ಮಾತಿನಂತೆ, ಕಾಡಿನಿಂದ ನಾಡಿಗೆ ಬಂದ ಮಾನವರು ಗುಂಪು ಗುಂಪಾಗಿಯೇ ಇರುತ್ತಿದ್ದರು. ಮಾನವ ಅಲೆಮಾರಿ ಜೀವನ ಸಾಗಿಸುತ್ತಿರುವಾಗಲೂ ಗುಂಪುಗಳು ಚದುರಿರಲಿಲ್ಲ. ಅಲೆಮಾರಿ ಮಾನವನ ಗುಂಪು ತನ್ನ ಮೂಲಭೂತ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳಲು ಆಯಕಟ್ಟಿನ ಸ್ಥಳಗಳಲ್ಲಿ ಯಾವಾಗ ನೆಲೆ ನಿಂತನೋ ಆಗ ಕುಟುಂಬ, ಸಮಾಜ, ಧರ್ಮ ಮುಂತಾದ ಸಂಸ್ಥೆಗಳು ಜನ್ಮ ತಾಳಿದವು. ಇದೇ ಗ್ರಾಮಗಳ ಉಗಮಕ್ಕೆ ಕಾರಣವಾಯಿತು. ಹೀಗೆ ಉಗಮವಾದ ಗ್ರಾಮಗಳಿಗೆ ಪೂರ್ವದಿಂದಲೂ ನಡೆದುಬಂದ ತನ್ನದೇ ಆದ ಸಾಮಾಜಿಕ ನಡೆ ಇರುತ್ತದೆ. ಆದಿವಾಸಿಗಳ ಪ್ರಾಥಮಿಕ ಹೆಜ್ಜೆಯಿಂದ ಹಿಡಿದು ಈವರೆಗೆ ಅದರ ನಿರಂತರತೆಯಿದೆ. ಇಂತಹ ಪ್ರಾಚೀನ ಭವ್ಯ ಪರಂಪರೆಯ ಗ್ರಾಮೀಣ ಸಂಸ್ಕೃತಿಯ ಜಾನಪದದ ಬಗ್ಗೆ ಇಂದು ಕಳಕಳಿ ಹಾಗೂ ಗೊಂದಲದ ಭಾವನೆಯನ್ನು ವ್ಯಕ್ತಪಡಿಸಲಾಗುತ್ತಿದೆ.

ಭಾರತ ದೇಶವು ವೈವಿಧ್ಯಮಯವಾದ ರಾಷ್ಟ್ರವಾಗಿದೆ. ಅದರಲ್ಲಿ ಕರ್ನಾಟಕ ರಾಜ್ಯವು ತನ್ನದೇ ಆದ ಪುಟ್ಟ ಪುಟ್ಟ ಗ್ರಾಮಗಳನ್ನು ಹೊಂದಿದ್ದು, ಇಂತಹ ಗ್ರಾಮಗಳ ನಡುವೆ ಹರಿಯುವ ಕೃಷ್ಣಾ ನದಿಯು ಕರ್ನಾಟಕದ ಗ್ರಾಮಗಳಿಗೆ ಜೀವ ನದಿಯಾಗಿದೆ. ಇದೆ ನದಿ ತೀರದಲ್ಲಿ ನಡುಗಡ್ಡೆಗಳು ಇದ್ದು ಈ ನಡುಗಡ್ಡೆಗಳು ಯಾವುದೇ ಬದಲಾವಣೆ ಕಾಣದೇ ಇನ್ನು ಹಾಗೆ ಉಳಿದಿವೆ. ಈ ನಡುಗಡ್ಡೆಗಳು ಕೃಷ್ಣಾನದಿಯಿಂದ ಸುತ್ತುವರೆದಿವೆ. ಕೃಷ್ಣಾನದಿ ತೀರದ ನಡುಗಡ್ಡೆಗಳಲ್ಲಿ ವಾಸವಾಗಿದ್ದು, ಕೆಲವು ಗಡ್ಡೆಗಳಿಗೆ ಯಾವುದೇ ಕಾಲುದಾರಿ ಮತ್ತು ಸಿದ್ದಗೊಂಡ ಮಾರ್ಗ ಇರುವುದಿಲ್ಲ. ಅಂದರೆ

ನೀಲಕಂಠರಾಯನಗಡ್ಡೆ, ಕುರವಪೂರಗಡ್ಡೆ, ರಾಮಗಡ್ಡೆ, ನಾರದಗಡ್ಡೆ, ಈ ಗಡ್ಡೆಗಳಿಗೆ ಯಾವುದೇ ಸಾರಿಗೆ ಮತ್ತು ಮೂಲಭೂತ ಸೌಲಭ್ಯವಿಲ್ಲ. ಇವರು ಪಟ್ಟಣಗಳಿಗೆ ಹೋಗಿ ಬರಬೇಕಾದರೆ ದೋಣಿಯ ಮೂಲಕ ಅಥವಾ ಈಜಿಕೊಂಡು ಹೋಗಿಬರಬೇಕು. ಒಂದೊಂದು ಗಡ್ಡೆಯಲ್ಲಿ ೪೦-೮೦ ಕುಟುಂಬಗಳು ವಾಸವಾಗಿದ್ದು, ಆ ಗಡ್ಡೆಯಲ್ಲಿ ಪಶುಸಂಗೋಪನೆ, ಕೃಷಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಆ ನಡುಗಡ್ಡೆಗಳಲ್ಲಿ ಜಮೀನು ಇದೆ. ಆದರೂ ಅವು ಅವರ ಅಧೀನದಲ್ಲಿಲ್ಲ. ಸರ್ಕಾರದ ಗೋಮಾಳ ಭೂಮಿಯಾಗಿದೆ.

ಸ್ವಾತಂತ್ರ್ಯೋತ್ತರ ಭಾರತ ಕಂಡ ಸಾಮಾಜಿಕ, ಆರ್ಥಿಕ, ರಾಜಕೀಯ ಬದಲಾವಣೆಗಳು ಸುಮಾರು ೧೯೯೦ರ ಹೊತ್ತಿಗೆ ಕರ್ನಾಟಕದ ಜನಸಮುದಾಯಗಳನ್ನು ಉನ್ನತ ಮಟ್ಟಕ್ಕೆ ತಂದು ನಿಲ್ಲಿಸಲು ಪ್ರಯತ್ನಸಿವೆ. ಈ ಬಗೆಯ ಪ್ರಯತ್ನಗಳನ್ನು ಇತರೆ ಸಂಸ್ಥೆಗಳು ಕೂಡ ಮಾಡಲು ಯತ್ನಿಸಿವೆ. ಕೆಲವು ಸಮುದಾಯಗಳ ವಾಸ್ತವಿಕತೆಯನ್ನು ಗುರುತಿಸುವಲ್ಲಿ ಇನ್ನೂ ವಿಫಲವಾಗಿವೆ. ಆದರೆ ಬಹಳಷ್ಟು ಸಮುದಾಯಗಳ ಅಧ್ಯಯನಗಳು ಸಾಹಿತ್ಯಿಕವಾದವು. ಇನ್ನುಳಿದ ಸಮುದಾಯ ಅಂದರೆ ನದಿಯ ನಡುವೆ ಇರುವ ಗಡ್ಡೆಗಳಲ್ಲಿ, ಜನರು ವಾಸ ಮಾಡುವ ಸ್ಥಳೀಯ ಸ್ಥಾನವಾಗಿದ್ದು, ಇಂತಹ ನೆಲೆಗಳನ್ನು ಸುಧಾರಿತ ನೆಲೆಗಳಾಗಿ ಮಾಡದೇ ಇರುವುದು ಖೇದಕರವಾದ ಸಂಗತಿಯಾಗಿದೆ.

ಆಧುನಿಕ ಜೀವನಕ್ಕೆ ಅನುಗುಣವಾಗಿ ಬದುಕುತ್ತಿರುವ ಇಂದಿನ ಸಮಾಜದ ಜನರು ಗ್ರಾಮಗಳಲ್ಲಿ ಇದ್ದಾರೆ. ಇವರು ಮಾತ್ರ ಇನ್ನು ನಡುಗಡ್ಡೆಗಳಲ್ಲಿ ಇರಲು ಕಾರಣವೇನು ಮತ್ತು ಇವರು ವಾಸಿಸುವ ನೆಲೆಗೂ ಇವರಿಗೂ ಸಂಬಂಧವೇನು ಎಂಬುದನ್ನು ಅಧ್ಯಯನದ ಮುಖಾಂತರ ತಿಳಿದುಕೊಳ್ಳಲಾಗಿದೆ.

ಪಶುಪಾಲನೆ ಮತ್ತು ಬೇಸಾಯ ಕಸುಬುಗಳನ್ನು ಅವಲಂಬಿಸಿದ ಅನೇಕ ಸಮುದಾಯಗಳು ಗುಂಪು ಗುಂಪುಗಳಾಗಿ ನಡು ಗಡ್ಡೆಗಳಲ್ಲಿ ವಾಸ ಮಾಡುತ್ತಿದ್ದಾರೆ. ಈ ಗಡ್ಡೆಗಳ ಜನರು ನಿಸರ್ಗದೊಂದಿಗೆ ಸಂಬಂಧ ಬೆಸೆಯುತ್ತಾ ತಮ್ಮದೇ ಆದ ಜೀವನ ಕ್ರಮವನ್ನು ರೂಢಿಸಿಕೊಂಡಿರುವುದು ಕಂಡುಬರುತ್ತದೆ. ಅವರ ಉದ್ಯೋಗಗಳನ್ನು ಗಮನಿಸಿದಾಗ, ಜೊತೆಗೆ ಅವರು ನೆಲೆಸಿರುವ ಸ್ಥಳಗಳನ್ನು ನೋಡಿದಾಗ ಗೊತ್ತಾಗುವುದೇನೆಂದರೆ ಇವುಗಳಿಂದ ಅವರು ಎಂದೂ ಸುಖ-ಸಂತೋಷದಿಂದ ಬದುಕಲು ಸಾಧ್ಯವಿಲ್ಲ. ತಾತ್ಕಾಲಿಕ ಬದುಕನ್ನು ಸಾಗಿಸಲು ಮಾತ್ರ ಸಾಧ್ಯವಾಗುತ್ತದೆ. ಮುಂದಿನ ಜೀವನ ಭದ್ರತೆ ಕಾಣಲು ಸಾಧ್ಯವಿಲ್ಲವೆಂದು ನಡುಗಡ್ಡೆಗಳ ಜನರು ಹೇಳುತ್ತಾರೆ.

ನಡುಗಡ್ಡೆಗಳಲ್ಲಿ ವಾಸಿಸುವ ಸಮುದಾಯಗಳಲ್ಲಿ ಪರಂಪರೆ ಮತ್ತು ಧಾರ್ಮಿಕ ಹೆಸರಿನಲ್ಲಿ ಇಂದಿಗೂ ಬಾಲ್ಯ ವಿವಾಹ, ಬಾಲ ಕಾರ್ಮಿಕರು, ಜೀತಪದ್ಧತಿ, ಅರೆಬೆತ್ತಲ ಸೇವೆ, ಮೂಢನಂಬಿಕೆಗಳು, ಇಂತಹ ಅನೇಕ ಅನಿಷ್ಠ ಪದ್ಧತಿಗಳು ಸಂಪ್ರದಾಯದ ಹೆಸರಿನಲ್ಲಿ ಉಳಿದಿವೆ. ಪ್ರಸ್ತುತ ಸಂದರ್ಭದಲ್ಲಿ ಅವೈಜ್ಞಾನಿಕ ಅನಿಷ್ಟ ಪದ್ಧತಿಗಳೆಂದು ಸಂಬಂಧಿಸಿದ ಕುಟುಂಬಗಳಿಗೆ ಮನನ ಮಾಡುವ ಪ್ರಯತ್ನಗಳು

ನಡೆಯುತ್ತಿವೆಯಾದರೂ ಸಂಸ್ಕೃತಿಯ ಹೆಸರಿನಲ್ಲಿ ಮಹಿಳೆಯರ ಮೇಲೆ ದೌರ್ಜನ್ಯ, ಶೋಷಣೆ ನಿರಂತರವಾಗಿ ನಡುಗಡ್ಡೆಗಳಲ್ಲಿ ನಡೆಯುತ್ತಿದೆ. ಇದನ್ನು ಅಪಮಾನವೆಂದು ವಿದ್ಯಾವಂತರು ಮತ್ತು ತಿಳಿವಳಿಕೆ ಉಳ್ಳವರು ಪರಿಗಣಿಸಿದರೆ, ಅನಕ್ಷರಸ್ಥರು ನಡುಗಡ್ಡೆಗಳಲ್ಲಿ ಇರುವವರು ಇದನ್ನು ಸಂಪ್ರದಾಯದ ಹಿರಿಮೆ ಎಂದು ಹೇಳಿಕೊಳ್ಳುತ್ತಾರೆ. ಇದರ ಮನವರಿಕೆಯಾಗಬೇಕಾದರೆ ಇವರಿಗೆ ಶಿಕ್ಷಣ ಅಗತ್ಯವಾಗಿದೆ.

ಈ ನಡುಗಡ್ಡೆಗಳಲ್ಲಿ ನೆಲೆಸಿದವರನ್ನು ಮಲತಾಯಿ ಧೋರಣೆಗೆ ಒಳಗಾಗಿಸಿ ಯಾವುದೇ ಸೌಲಭ್ಯ ಒದಗಿಸದೇ ಅತ್ಯಂತ ದುಸ್ಥಿತಿಗೆ ಬರಲು ಕಾರಣವಾಗಿದೆ. ಇದಕ್ಕೆ ರಾಜಕಾರಣಿಗಳ ನಿರ್ಲಕ್ಷ್ಯ ಸಂಘಟನೆಯ ಕೊರತೆ, ಜೀವನ ನಿರ್ವಹಣೆಯ ತೊಂದರೆ, ರೋಗ–ರುಜಿನಗಳ ಬಾಧೆ, ಅಧಿಕಾರಿಗಳ ದಿವ್ಯ ನಿರ್ಲಕ್ಷ್ಯ, ಸರಕಾರದ ಯೋಜನೆಗಳ ಮಾಹಿತಿ ಕೊರತೆ, ನಿರುದ್ಯೋಗ ಅದರಲ್ಲೂ ಮುಖ್ಯವಾಗಿ ವಾಸ ಮಾಡುತ್ತಿರುವ ಸಮುದಾಯಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರು, ಪ್ರಮುಖವಾಗಿ ಮಹಿಳಾ ಸಾಕ್ಷರತೆಯಂತೂ ಅತ್ಯಂತ ಕಡಿಮೆ. ಇಂತಹ ಸ್ಥಳಗಳಲ್ಲಿ ವಾಸಿಸುವ ಸಮುದಾಯಗಳ ಮಹಿಳೆಯರ ಹೆರಿಗೆಗಳು ತೀರಾ ಅವೈಜ್ಞಾನಿಕ, ಅಸುರಕ್ಷಿತ ರೀತಿಯಲ್ಲಿ ಆಗುತ್ತವೆ. ಯಾವುದೇ ರೀತಿಯ ವೈದ್ಯಕೀಯ ಸೌಲಭ್ಯ ಸಿಗುವುದಿಲ್ಲ. ಸಿಗಬೇಕಾದರೆ ದೂರದ ತಾಲೂಕು ಕೇಂದ್ರಗಳಿಗೆ ಹೋಗ ಬೇಕಾಗುತ್ತದೆ. ಆದ್ದರಿಂದ ಸಂದರ್ಭಕ್ಕೆ ತಕ್ಕಂತೆ ಆರೋಗ್ಯ ಕಾಪಾಡಿಕೊಳ್ಳದೇ ಸ್ಥಳೀಯವಾಗಿ ಸಿಗುವ ಸೂಲಗಿತ್ತಿಯರನ್ನು ಕಂಡು ಹೆರಿಗೆಯನ್ನು ಮಾಡಿಸಿಕೊಳ್ಳುತ್ತಾರೆ. ಇದರಿಂದ ಗರ್ಭಿಣಿ ಮಹಿಳೆಯರ ಸಾವು, ನವಜಾತ ಶಿಶುಗಳ ಮರಣ, ಅಪೌಷ್ಠಿಕತೆಯಿಂದ ಬಳಲುತ್ತಿರುವ ಮಕ್ಕಳ ಸಾವು. ಇಂತಹ ಸಾವು, ನೋವುಗಳಿಗೆ ನಡುಗಡ್ಡೆಗಳಲ್ಲಿ ವಾಸಿಸುವವರ ಪಾಲು ಹೆಚ್ಚು. ಆಸ್ಪತ್ರೆ ಎಂದರೆ ನಿಲುಕದ ವಿಷಯವಾಗಿದೆ. ಉದಾ: ೨೦೧೪ರಲ್ಲಿ, ನೀಲಕಂಠರಾಯನ ಗಡ್ಡೆಯ ಗರ್ಭಿಣಿ ಮಹಿಳೆ, ರಂಗಮ್ಮ ಅನ್ನುವಾಕೆ ಸ್ಥಳೀಯವಾಗಿ ಆಸ್ಪತ್ರೆ ಇಲ್ಲದ ಕಾರಣ ಹೆರಿಗೆ ಬೇನೆ ಸಂದರ್ಭದಲ್ಲಿ ನದಿಯನ್ನು ಈಜಿ, ದಡ ಸೇರಿ ತಾಲೂಕು ಆಸ್ಪತ್ರೆಯಲ್ಲಿ ಬಂದು ಹೆರಿಗೆ ಮಾಡಿಸಿಕೊಂಡ ಸಂದರ್ಭವನ್ನು ನಾವು ಕಾಣಬಹುದು. ಈ ಮಹಿಳೆಯ ಸಾಹಸವನ್ನು ಕಂಡು ಹಲವಾರು ಸಂಘಟನೆಗಳು, ಸರ್ಕಾರಗಳು ಸನ್ಮಾನ ಮಾಡಿದವು, ಹೊರತು ಅಲ್ಲಿ ಒಂದು ಆಸ್ಪತ್ರೆ ಕಟ್ಟಲು ಮುಂದೆ ಬರಲಿಲ್ಲ. ಇದು ವಿಪರ್ಯಾಸದ ಸಂಗತಿ ಎಂದು ಹೇಳಬಹುದು. ಕಾರಣ ರಸ್ತೆ ಸಾರಿಗೆ ಇಲ್ಲ. ಇದು ಕೃಷ್ಣಾ ನದಿಯಿಂದ ಸುತ್ತುವರಿಯಲ್ಪಟ್ಟಿದೆ. ಯಾವುದೇ ತಿಳುವಳಿಕೆಯಿಲ್ಲದೆ ನಾಗರಿಕತೆಯ ಸೌಲಭ್ಯ ಇಲ್ಲದೇ ಎಷ್ಟೇ ತೊಂದರೆಯಾದರೂ ಇವರಿಗೆ ಈ ನೆಲೆಗಳು ಆಧಾರ ಸ್ತಂಭವಾಗಿವೆ. ಸರ್ಕಾರ ನಡುಗಡ್ಡೆಗಳನ್ನು ಅಭಿವೃದ್ಧಿಪಡಿಸಿ ಸಮಾಜದ ಮುಖ್ಯವಾಹಿನಿಗೆ ತರಬೇಕೆಂಬ ನಿಟ್ಟಿನಲ್ಲಿ ಕ್ರಿಯಾಶೀಲವಾಗಿದೆ. ಆದರೆ ಈ ದಿಸೆಯಲ್ಲಿ ಯಾವುದೇ ಪ್ರಯೋಜನವಾಗಿಲ್ಲ ಎನ್ನುತ್ತಾರೆ ಸ್ಥಳೀಯರು. ಶಾಲೆ, ಕುಡಿಯುವ ನೀರು, ವಸತಿ, ಸಾರಿಗೆ ಸಂಪರ್ಕ, ಶೌಚಾಲಯ, ಆಸ್ಪತ್ರೆ, ವಿದ್ಯುತ್ ಇವೆ ಮೊದಲಾದ ಸೌಕರ್ಯಗಳ ಕೊರತೆಯಿಂದ ನರಕಯಾತನೆಯನ್ನು ನಡುಗಡ್ಡೆಗಳ ಜನರು ಅನುಭವಿಸುತ್ತಿದ್ದಾರೆ. ಕೃಷ್ಣಾನದಿ

ತುಂಬಿ ಹರಿದಾಗ ಮಾತ್ರ, ಸುದ್ದಿ ಮಾಧ್ಯಮಗಳಾದ ಟಿ.ವಿ, ಪತ್ರಿಕೆಯಲ್ಲಿ ಈ ಕುರಿತು ವರದಿ ಬಂದಾಗ ಮಾತ್ರ, ಜನಪ್ರತಿನಿಧಿಗಳು ಎಲ್ಲಾ ಸಮಸ್ಯೆಯನ್ನು ಬಗೆಹರಿಸುತ್ತೇವೆ ಎಂದು ಜಾಣತನದಿಂದ ನುಣಿಚಿ ಕೊಳ್ಳುತ್ತಾರೆ. ಇದರಿಂದ ಬದುಕು ಮತ್ತಷ್ಟು ದುಸ್ತರವಾಗಿದೆ.

## ೧.೨. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ಜಾನಪದೀಯ ನೆಲೆಯಿಂದ ರೂಪುಗೊಂಡಿರುವಂಥದ್ದು. ಮೌಖಿಕ ಪರಂಪರೆಯಲ್ಲಿ ಜಾನಪದವನ್ನು ಆಧರಿಸಿ ಸಾಂಸ್ಕೃತಿಕ ಶಿಸ್ತಿನ ಹಿನ್ನೆಲೆಯಲ್ಲಿ ನಡುಗಡ್ಡೆಗಳ ವಿವಿಧ ಮಗ್ಗಲುಗಳನ್ನು ವಿಶ್ಲೇಷಿಸುವುದು ಇಲ್ಲಿನ ಪ್ರಮುಖ ಅಧ್ಯಯನದ ಉದ್ದೇಶವಾಗಿದೆ.

ಇಂದು ಹಲವು ಬಗೆಯ ಅಧ್ಯಯನಗಳು ನಡೆಯುತ್ತಿರುವುದರ ಫಲವಾಗಿ ಜಾನಪದ ಕ್ಷೇತ್ರವು ವಿಸ್ತಾರಗೊಳ್ಳುತ್ತಿದೆ. ಈ ಹೊತ್ತಲ್ಲಿ ನಡುಗಡ್ಡೆಗಳ ಜನ ಮತ್ತು ಆಧುನಿಕತೆಯ ಸಂಬಂಧಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ನಡುಗಡ್ಡೆಗಳ ಜಾನಪದ ಕುರಿತ ಅಧ್ಯಯನವು ತುಂಬ ಮಹತ್ವದ್ದಾಗಿದ್ದು, ಅಷ್ಟೇ ರೋಮಾಂಚನಕಾರಿಯು ಹೌದು. ಇಲ್ಲಿರುವ ವಿಶಿಷ್ಟ ಅನುಭವಗಳು ಗತಕಾಲದ ಚರಿತ್ರೆಯೊಂದಿಗೆ ಜಾನಪದೀಯ ಆಚರಣೆಗಳ ರೀತಿ ನೀತಿ ನಿಯಮಗಳಂತಹ ಮುಂತಾದ ಸಂಗತಿಗಳು ಕುತೂಹಲ ಕಾರಿಯಾಗಿ ಪರಿಣಮಿಸುತ್ತವೆ. ಇಲ್ಲಿಯ ಅಧ್ಯಯನದ ವಿಸ್ತಾರದ ಬಗ್ಗೆ ತಿಳಿಯಲು ಆಸ್ತಿಕರು, ನಾಸ್ತಿಕರು ಎಂಬುದು ಪ್ರಮುಖವಲ್ಲ. ಮೂಲದಿಂದ ಇಲ್ಲಿಯವರೆಗೆ ಸಾಗಿಬಂದ ಅವರ ಬದುಕಿನ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಇಂದು ಯಾವ ಹಂತದಲ್ಲಿ ಸಾಗಿಬರುತ್ತವೆ ಎಂಬುದರ ಮಹತ್ವವನ್ನು ಅರಿಯುವುದು ಈ ಅಧ್ಯಯನ ಬಹುಮುಖ್ಯ ಉದ್ದೇಶವಾಗಿದೆ. ಒಂದು ಪ್ರದೇಶದ ಗ್ರಾಮ ದೈವಗಳನ್ನು ಅಭ್ಯಸಿಸುವುದರ ಮೂಲಕ ದೈವ ಪರಿಕಲ್ಪನೆ ಮತ್ತು ನಮ್ಮ ಸಮಾಜ ಹಾಗೂ ಮನುಷ್ಯ ಸಂಬಂಧಗಳ ಮೇಲಾಗುವ ಪರಿಣಾಮವನ್ನು ಗುರುತಿಸುವುದರ ಜೊತೆಗೆ ಎಲ್ಲವೂ ಆಧುನೀಕರಣಗೊಳ್ಳುತ್ತಿರುವ ಈ ಹೊತ್ತಲ್ಲಿ ನಡುಗಡ್ಡೆಗಳು ಹಳೆ ಸಾಂಪ್ರದಾಯಿಕ ಸಂಕೋಲೆಯನ್ನು ಅನಾವರಣಗೊಳಿಸುವುದು ಈ ಪ್ರಬಂಧದ ಉದ್ದೇಶವಾಗಿದೆ

ಇಂದಿನ ಸಂದರ್ಭದಲ್ಲಿ ಹಳ್ಳಿಗಳು ನರಕಗೊಳ್ಳುತ್ತಿವೆ. ರೈತರ ಆತ್ಮಹತ್ಯೆಗಳು ಹೆಚ್ಚುತ್ತಿವೆ. ಕಾರಣ ನೈಸರ್ಗಿಕವಾಗಿ ಮಳೆ ಇಲ್ಲದಿರುವುದು, ರೈತನ ಬೆಳೆಗೆ ನ್ಯಾಯಯುತವಾದ ಬೆಲೆ ಸಿಗದೆ ಇರುವುದು, ಯುವ ಜನತೆ ಗಡ್ಡೆಗಳ ಬಿಟ್ಟು ನಗರಕ್ಕೆ ವಲಸೆ ಹೋಗುತ್ತಿರುವುದರಿಂದ ಕೃಷಿಯಾಧರಿತ ಬದುಕು ಪ್ರಮಾಣದಲ್ಲಿ ಕಡಿಮೆಯಾಗುತ್ತಿದೆ. ಇಂತಹ ಸಂದರ್ಭದ ಪ್ರಸ್ತುತ ಕಾಲದಲ್ಲಿ ಅವುಗಳ ಪರಿಣಾಮವೇನು ಎಂಬುದನ್ನು ಗುರುತಿಸುವುದು ಈ ಅಧ್ಯಯನ ಉದ್ದೇಶವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳಲ್ಲಿ ಅತಿಮುಖ್ಯವಾಗಿ ನಡುಗಡ್ಡೆಗಳಲ್ಲಿ ಚಿಕ್ಕ ಚಿಕ್ಕ ಹುಲ್ಲಿನ ಗುಡಿಸಲುಗಳಲ್ಲಿ ವಾಸ ಮಾಡುವ ಜನರು ಅಧಿಕ ಸಂಖ್ಯೆಗಳಲ್ಲಿ ಇರುವುದು ಕಂಡು ಬರುತ್ತದೆ ಮತ್ತು ಇತ್ತೀಚಿನ ದಿನಗಳಲ್ಲಿ ಬಹಳಷ್ಟು ಆರ್ಥಿಕ ತೊಂದರೆಯಿಂದ ಗಡ್ಡೆಗಳನ್ನು ಬಿಟ್ಟು ವಲಸೆ ಹೋಗುವುದನ್ನು ಅಧ್ಯಯನ ಮುಖಾಂತರ ಕಂಡುಕೊಳ್ಳಲಾಗಿದೆ.

೧. ನಡುಗಡ್ಡೆಗಳಲ್ಲಿ ವಾಸಿಸುವ ಸಮುದಾಯಗಳು ಗಡ್ಡೆಬಿಟ್ಟು ಯಾಕೆ ಹೊರಗೆ ಬರುತ್ತಿಲ್ಲ

೨. ಪ್ರಸ್ತುತ ಕಾಲದಲ್ಲಿ ಅವುಗಳ ಪರಿಣಾಮವೇನು?

೩. ನಡುಗಡ್ಡೆ ಸಮುದಾಯಗಳು ಎದುರಿಸುತ್ತಿರುವ ನೋವು-ನಲಿವುಗಳೇನು?

೪. ಆಧುನಿಕ ಜಗತ್ತನ್ನು ಬಿಟ್ಟು ಈ ಸಮುದಾಯಗಳು ಕೃಷ್ಣಾ ನದಿಯ ನಡುಗಡ್ಡೆಗಳಲ್ಲಿ ವಾಸಿಸುವುದಕ್ಕೆ ಕಾರಣವೇನು?

೫. ಗಡ್ಡೆಗಳ ಸಮುದಾಯಗಳಲ್ಲಿರುವ ಸಾಂಸ್ಕೃತಿಕ ಪರಂಪರೆಯ ಮೌಲ್ಯಗಳೇನು?

೬. ನಡುಗಡ್ಡೆಗಳ ಉಗಮ ಹೇಗಾಯಿತು

೭. ಈ ಗಡ್ಡೆಗಳ ಮೂಲ ಏನು

೮. ಗಡ್ಡೆಗಳ ಭೌಗೋಳಿಕ ಪರಿಸರ ಹೇಗಿದೆ

೯. ಈ ಸಮುದಾಯಗಳ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯವಾಗಿ ಇವರ ಸ್ಥಿತಿಗತಿ ತಿಳಿಯುವುದು

೧೦. ನಡುಗಡ್ಡೆಗಳ ದೈವಗಳು ಹಾಗೂ ಇತರ ದೇವಗಳೊಂದಿಗೆ ಸಂಬಂಧ ಹೇಗಿದೆ ಎಂದು ತಿಳಿಯುವುದು

೧೧. ನಡುಗಡ್ಡೆಗಳು ವಿಶೇಷವಾಗಿ ನಡೆಯುವ ಜಾತ್ರೆಗಳ ಬಗ್ಗೆ ಚರ್ಚಿಸುವುದು

೧೨. ನಡುಗಡ್ಡೆಗಳ ಆಚರಣೆಗಳಾದ ಜೀವನವರ್ತನ ಮತ್ತು ವಾರ್ಷಿಕಾವರ್ತನ ಹಾಗೂ ನಂಬಿಕೆ ನಿಷೇಧ ಹರಕೆಗಳ ಬಗ್ಗೆ ತಿಳಿಯುವುದು.

೧೩. ನಡುಗಡ್ಡೆಗಳ ಸಮುದಾಯಗಳ ಭಾಷೆ ಮತ್ತು ಸಾಹಿತ್ಯದ ಬಗ್ಗೆ ತಿಳಿಯುವುದು

೧೪. ಆಧುನಿಕತೆ ಮತ್ತು ನಡುಗಡ್ಡೆಗಳ ವ್ಯತ್ಯಾಸವೇನು?

೧೫. ನಡುಗಡ್ಡೆಗಳ ಸಮಸ್ಯೆ ಮತ್ತು ಸವಾಲುಗಳೇನು(ಪ್ರವಾಹ ಸಂದರ್ಭದಲ್ಲಿ)?

ಒಟ್ಟಾರೆಯಾಗಿ ಸಮುದಾಯಗಳ ಜೀವನ ಕ್ರಮವನ್ನು ಜಾನಪದೀಯ ಹಿನ್ನೆಲೆಯಲ್ಲಿ ಹೇಗೆ ಪ್ರಸ್ತುತಪಡಿಸುವುದು ಎಂಬುದರ ಕುರಿಕತು ಈ ಅಧ್ಯಯನದ ಉದ್ದೇಶವಾಗಿದೆ.

### ೧.೩. ಅಧ್ಯಯನದ ವ್ಯಾಪ್ತಿ

ರಾಯಚೂರು ಜಿಲ್ಲೆಯ ನಡುಗಡ್ಡೆಗಳು ಮತ್ತು ಯಾದಗಿರಿ ಜಿಲ್ಲೆಯ ನಡುಗಡ್ಡೆಗಳು ನಾಗರಿಕ ಪ್ರಪಂಚವನ್ನು ಬಿಟ್ಟು ದೂರದ ಕೃಷ್ಣಾನದಿಯ ತೀರದಲ್ಲಿ ಬರುವ ನಡುಗಡ್ಡೆಗಳಲ್ಲಿ ವಾಸ ಮಾಡುವ ಸಮುದಾಯಗಳ ಜಾನಪದವನ್ನು ಗುರುತಿಸುವಲ್ಲಿ ಮತ್ತು ಅವುಗಳನ್ನು ಸಂಗ್ರಹಿಸುವುದರ ಜೊತೆಗೆ ಆ ಗಡ್ಡೆಗಳ ಜನರ ಆಧುನಿಕತೆ, ಬದುಕಿನ ಭೌಗೋಳಿಕ ಚರಿತ್ರೆಯನ್ನು ಅರಿಯಲು, ಕೃಷ್ಣಾ ನದಿತೀರದ ನಡುಗಡ್ಡೆಗಳ ಜಾನಪದ ಎಂಬ ವಿಷಯವನ್ನು ನನ್ನ ಅಧ್ಯಯನಕ್ಕೆ ಆಯ್ಕೆ ಮಾಡಿ ಕೊಂಡಿದ್ದೇನೆ. ಇದರ ಅಧ್ಯಯನದ ವ್ಯಾಪ್ತಿಯನ್ನು ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ಬರುವ ದೇವರಗಡ್ಡೆ, ಮೇಲಿನ ಗಡ್ಡೆ, ನೀಲಕಂಠರಾಯನ ಗಡ್ಡೆ ಮತ್ತು ರಾಯಚೂರು ಜಿಲ್ಲೆ ಲಿಂಗಸೂರು ತಾಲೂಕಿನಲ್ಲಿ ಬರುವ ಜಲದುರ್ಗ, ನಡುಗಡ್ಡೆ, ಹಂಚಿನಾಳ ಗಡ್ಡೆ, ಯರಗೋಡೆ, ಯಳಗುಂದಿ, ಕಡದರಗಡ್ಡೆ, ರಾಯಚೂರು ಜಿಲ್ಲಾ ವ್ಯಾಪ್ತಿಯೊಳಗೆ ಬರುವ ನಾರದಗಡ್ಡೆ, ರಾಮಗಡ್ಡೆ ಕುರವಪುರಗಡ್ಡೆ, ಬಸವಸಾಗರ ಅಣೆಕಟ್ಟಿನಿಂದ ಕರ್ನಾಟಕದ ಕೊನೆಯ ಗಡಿಯವರೆಗೆ ಆಂಧ್ರದ ಪ್ರಾರಂಭದ ಗಡಿಯವರೆಗೆ ಕೃಷ್ಣಾ ನದಿ ತೀರದ ನಡುಗಡ್ಡೆಗಳನ್ನು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಸೇರಿಸಿಕೊಳ್ಳಲಾಗಿದೆ.

### ೧.೪. ಸಂಶೋಧನಾ ವಿನ್ಯಾಸ

"ಕೃಷ್ಣಾನದಿ ತೀರದ ನಡುಗಡ್ಡೆಗಳ ಜಾನಪದ" ಶೀರ್ಷಿಕೆ ಅಡಿಯಲ್ಲಿ ಸಂಶೋಧನೆಯನ್ನು ಕೈಗೊಳ್ಳಲಾಗಿದ್ದು, ಅಧ್ಯಯನದಲ್ಲಿ ಹಲವು ವಿಧಾನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಪ್ರಶ್ನಾವಳಿ, ಸಂದರ್ಶನ, ಅವಲೋಕನ, ಐತಿಹಾಸಿಕ ವಿಧಾನಗಳ ಮೂಲಕ ಮಾಹಿತಿ ಸಂಗ್ರಹಿಸ ಲಾಗಿದ್ದು, ಅದನ್ನು ಸಂಶೋಧನಾ ಚೌಕಟ್ಟಿನೊಳಗೆ ಜೋಡಿಸಲು ಸಂಶೋಧನಾ ವಿನ್ಯಾಸವನ್ನು ರಚಿಸಿಕೊಳ್ಳಲಾಯಿತು. ಆ ಮೂಲಕವಾಗಿ ಮಾಹಿತಿಯನ್ನು ಒಂಬತ್ತು ಅಧ್ಯಾಯಗಳಲ್ಲಿ ಕ್ರಮಾನುಗತವಾಗಿ ಜೋಡಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ಆಕರ ಸಾಮಗ್ರಿಗಳು, ಅಧ್ಯಯನದ ಮಹತ್ವ, ಅಧ್ಯಯನದ ವಿಧಾನಗಳು, ಮತ್ತು ಕೃಷ್ಣಾನದಿತೀರದ ನಡುಗಡ್ಡೆಗಳ ಬಗ್ಗೆ ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ ಕುರಿತು ತಿಳಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಕೃಷ್ಣಾನದಿ ತೀರದ ನಡುಗಡ್ಡೆಗಳ ಪರಿಚಯ, ಗಡ್ಡೆಗಳ ನಿಷ್ಪತ್ತಿ, ಗಡ್ಡೆಗಳ ಮೂಲ, ಗಡ್ಡೆಗಳ ರಚನೆ, ಗಡ್ಡೆಗಳ ಭೌಗೋಳಿಕ ಪರಿಸರ ಮತ್ತು ನಡುಗಡ್ಡೆಗಳ ಸಾರಿಗೆ ವ್ಯವಸ್ಥೆ ಹಾಗೂ ಜಲದುರ್ಗ ಕೋಟೆಯ ಕುರಿತು ಪರಿಚಯ ಮಾಡಿಕೊಡಲಾಗಿದೆ.

ಅಧ್ಯಾಯ ಮೂರರಲ್ಲಿ ನಡುಗಡ್ಡೆಗಳ ಜನರ ಬದುಕು, ಸಮುದಾಯಗಳು ಮತ್ತು ವೃತ್ತಿಗಳ ಬಗೆಗೆ ತಿಳಿಯಲಾಗಿದೆ. ಈ ಅಧ್ಯಾಯದಲ್ಲಿ ಕುಟುಂಬ ವ್ಯವಸ್ಥೆ, ಮನೆ, ಕಟ್ಟಡ ಶೈಲಿ, ಆಹಾರ ಪದ್ಧತಿ, ನಾಯಪದ್ಧತಿ, ಜಾತಿ ವ್ಯವಸ್ಥೆ, ಜನಪದ ವೈದ್ಯಪದ್ಧತಿ, ಬೇಟೆ ಪದ್ಧತಿ, ಉಡುಗೆ ತೊಡುಗೆಗಳು ಕಲೆಗಳು, ಆರ್ಥಿಕ ಸ್ಥಿತಿಗತಿ, ಶೈಕ್ಷಣಿಕ ಸ್ಥಿತಿಗತಿ, ರಾಜಕೀಯ, ಆಡಳಿತ, ಸ್ಥಿತ್ಯಂತರಗಳನ್ನು ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ನಡುಗಡ್ಡೆಗಳ ದೈವಗಳ ಪರಿಚಯ, ಪೂಜೆ, ಪುನಸ್ಕಾರ, ದೇವಸ್ಥಾನದ ಆಡಳಿತ ಹಾಗೂ ಈ ದೇವರುಗಳ ಇತರೆ ದೇವರುಗಳೊಂದಿಗಿನ ಸಂಬಂಧ, ಜಾತ್ರೆಗಳ ಬಗ್ಗೆ ತಿಳಿಸಲಾಗಿದೆ.

ಅಧ್ಯಾಯ ಐದರಲ್ಲಿ ನಡುಗಡ್ಡೆ ಸಮುದಾಯಗಳ ಜೀವನಾವರ್ತನ ಆಚರಣೆಗಳು ಮತ್ತು ವಾರ್ಷಿಕಾವರ್ತನದ ಆಚರಣೆಗಳು ಹಾಗೂ ನಂಬಿಕೆ-ನಿಷೇಧ-ಹರಕೆಗಳನ್ನು ವಿವರಿಸಲಾಗಿದೆ.

ಅಧ್ಯಾಯ ಆರರಲ್ಲಿ ಜನಪದ ಭಾಷೆ ಮತ್ತು ಸಾಹಿತ್ಯ, ಜನಪದ ಗೀತೆಗಳು, ಗಾದೆಗಳು, ಒಡಪು-ಒಗಟುಗಳನ್ನು ಚಿತ್ರಿಸಲಾಗಿದೆ.

ಅಧ್ಯಾಯ ಏಳರಲ್ಲಿ ನಡುಗಡ್ಡೆಗಳ ಸಮಸ್ಯೆಗಳು, ನಡುಗಡ್ಡೆಗಳು ಮತ್ತು ಪ್ರಸ್ತುತ ಜಗತ್ತನ್ನು ಪ್ರತಿಬಿಂಬಿಸಲಾಗಿದೆ.

ಅಧ್ಯಾಯ ಎಂಟರಲ್ಲಿ ಉಪಸಂಹಾರ ಅಧ್ಯಯನದ ಫಲಿತಗಳು, ಸಲಹೆಗಳು, ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ತಿಳಿಸುವ ಪ್ರಯತ್ನವನ್ನು ಮಾಡಲಾಗಿದೆ. ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳು, ವಕ್ತೃ ವಿವರಗಳು, ಪ್ರಶ್ನಾವಳಿ, ಛಾಯಾಚಿತ್ರಗಳನ್ನು ಜೋಡಿಸಲಾಗಿದೆ. ಒಟ್ಟು ಎಂಟು ಅಧ್ಯಾಯಗಳಲ್ಲಿ ನಡುಗಡ್ಡೆಗಳ ಸಮುದಾಯಗಳ ಚಿತ್ರಣವನ್ನು ಜಾನಪದದ ಹಿನ್ನೆಲೆಯಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

### ೧.೫. ಆಕರ ಸಾಮಗ್ರಿ

ಒಂದು ಪ್ರದೇಶದ ಸಾಂಸ್ಕೃತಿಕ ಚರಿತ್ರೆ ತಿಳಿಯಲು ಅನೇಕ ಬಗೆಯ ಆಕರ ಸಾಮಗ್ರಿಗಳ ಮೊರೆ ಹೋಗುವುದು ಅನಿವಾರ್ಯ. ಒಂದು ನಾಡಿನ ಇತಿಹಾಸ ರಚನೆಗೆ ಸಂಬಂಧಿಸಿದ ಮಾಹಿತಿಯನ್ನು ಮುಖ್ಯವಾಗಿ ಪ್ರಾಚ್ಯವಸ್ತು ಮತ್ತು ಸಾಹಿತ್ಯಿಕ ಆಕರಗಳು ಒದಗಿಸುತ್ತವೆ. ಪ್ರಾಚ್ಯವಸ್ತುಗಳಲ್ಲಿ

ಶಾಸನ ಹಾಗೂ ಸ್ಮಾರಕಗಳು ಸೇರ್ಪಡೆಯಾದರೆ, ಸಾಹಿತ್ಯಿಕ ಆಕರಗಳಲ್ಲಿ, ದೇಶೀಯ ಮತ್ತು ವಿದೇಶಿಯ ಬರವಣಿಗೆಗಳು ಮುಖ್ಯವಾಗುತ್ತವೆ. ಪ್ರಸ್ತುತ "ಕೃಷ್ಣಾನದಿ ತೀರದ ನಡುಗಡ್ಡೆಗಳ ಜಾನಪದ" ಅಧ್ಯಯನದಲ್ಲಿ ಶಾಸನಗಳು, ಸ್ಮಾರಕಗಳು, ಸಾಹಿತ್ಯಿಕ, ದೇಶಿ ಮತ್ತು ವಿದೇಶಿ ಬರವಣಿಗೆಗಳು, ಅಲ್ಲಿನ ವಕ್ತೃಗಳ ಮಾಹಿತಿಗಳು, ಛಾಯಾಚಿತ್ರಗಳನ್ನು ಆಕರವಾಗಿ ಬಳಸಿಕೊಂಡಿದ್ದೇನೆ.

## ೧.೬. ಅಧ್ಯಯನದ ವಿಧಾನಗಳು

### ಪ್ರಶ್ನಾವಳಿ ವಿಧಾನ

ಅಧ್ಯಯನಕ್ಕೆ ಸಂಬಂಧಸಿದ ಜನಪದ ಸಾಹಿತ್ಯ ಅವಲೋಕನೆಯಿಂದ ಗಡ್ಡೆಯ ಜನರನ್ನು ಅಧ್ಯಯನ ಮಾಡಲು ಪ್ರಶ್ನಾವಳಿಯು ಪ್ರಮುಖ ಪಾತ್ರವಹಿಸುತ್ತದೆ.

ಅಧ್ಯಯನಗೊಳ್ಳುವ ಪೂರ್ವದಲ್ಲಿ ಆಯ್ಕೆ ಮಾಡಿಕೊಂಡಿರುವ ಕೃಷ್ಣಾ ನದಿ ತೀರದ ನಡುಗಡ್ಡೆಗಳ ಪೂರ್ವಾಪರ ತಿಳಿದುಕೊಂಡು, ಆ ಸಮುದಾಯಗಳಿಗೆ ಮತ್ತು ಅಧ್ಯಯನದ ಮುಖ್ಯ ಉದ್ದೇಶಗಳಿಗೆ ಅನುಗುಣವಾಗಿ ವಿವಿಧ ಆಯಾಮಗಳಲ್ಲಿ ಹಲವಾರು ಪ್ರಶ್ನೆಗಳನ್ನು ಹೊಂದಿರುವ ಸೂಕ್ತ ಪ್ರಶ್ನಾವಳಿಯನ್ನು ತಯಾರಿಸಿಕೊಂಡು ಮಾಹಿತಿಯನ್ನು ಪಡೆಯಲಾಗಿದೆ. ಆ ಮೂಲಕ ಗಡ್ಡೆಗಳ ಜನರನ್ನು ಮುಖಾಮುಖಿಯಾಗಿ ಜೊತೆಗೆ ಮೌಖಿಕವಾಗಿ ಗಡ್ಡೆಗಳ ಜನರಿಂದ ಮಾಹಿತಿಯನ್ನು ಅಚ್ಚುಕಟ್ಟಾದ ಜವಾಬ್ದಾರಿಯಿಂದ ಸಂಗ್ರಹಿಸಲಾಗಿದೆ.

### ಸಂದರ್ಶನ ವಿಧಾನ

ವಿಷಯಕ್ಕೆ ಸಂಬಂಧಿಸಿದಂತೆ ಮೊದಲಿಗೆ ಗಡ್ಡೆಗಳನ್ನು ಸಂಪೂರ್ಣವಾಗಿ ಪರಿಚಯ ಮಾಡಿ ಕೊಳ್ಳಲಾಯಿತು. ನಂತರ ನಡುಗಡ್ಡೆಗಳಲ್ಲಿ ವಾಸಿಸುವ ನಿವಾಸಿಗರಿಗೆ ಮುಖಾಮುಖಿ ಸಂದರ್ಶನ ನಡೆಸಿ ಮೌಖಿಕ ದಾಖಲೆ ಸಂಗ್ರಹಿಸಲಾಗಿದೆ. ಆ ನಡುಗಡ್ಡೆಗಳ ಸಮುದಾಯಗಳ ಸಮಗ್ರ ಮಾಹಿತಿಯನ್ನು ಪ್ರಾಥಮಿಕವಾಗಿ ದಾಖಲಿಸಿಕೊಳ್ಳಲಾಗಿದೆ. ಇದರಿಂದ ಸಂದರ್ಶನ ವಿಧಾನವನ್ನು ಬಳಸಿಕೊಂಡು ಕೃಷ್ಣಾ ನದಿಯ ನಡುಗಡ್ಡೆಗಳ ಜನರನ್ನು ಅಳವಡಿಸಿಕೊಂಡು ಎಲ್ಲಾ ಕುಟುಂಬಗಳ ಜೊತೆ ಅವರ ವ್ಯಾಪ್ತಿಗೆ ಬರುವ ಇತರೆ ವ್ಯಕ್ತಿಗಳೊಂದಿಗೆ ಸಂದರ್ಶನ ನಡೆಸಿ, ಮಾಹಿತಿಯನ್ನು ಸಂಗ್ರಹಿಸಲಾಗಿದೆ.

### ಐತಿಹಾಸಿಕ ವಿಧಾನ

ಆ ಗಡ್ಡೆಗಳ ಜನರ ಹಿನ್ನೆಲೆ, ಚರಿತ್ರೆ ಮತ್ತು ಶಾಸನಗಳನ್ನು ತಿಳಿಯಲು ಈ ವಿಧಾನವನ್ನು ಬಳಸಲಾಗಿದೆ. ಆ ಸಮುದಾಯಗಳ ಹಿರಿಯರ ಅನುಭವ, ಅವರ ಸ್ವರೂಪ, ಸಂಸ್ಕೃತಿ, ಇತಿಹಾಸವನ್ನು ಗುರುತಿಸುವಲ್ಲಿ ಈ ವಿಧಾನ ಸಹಕಾರಿಯಾಗಿದೆ.

### ಅವಲೋಕನ ವಿಧಾನ

ಅವಲೋಕನ ವಿಧಾನವನ್ನು ಬಳಸಿಕೊಂಡು ನಡುಗಡ್ಡೆಗಳ ಸಮುದಾಯಗಳ ಜನರ ಜೀವನ ಮಟ್ಟ, ನಡುಗಡ್ಡೆಗಳಲ್ಲಿ ಎದುರಿಸುತ್ತಿರುವ ಸಮಸ್ಯೆಗಳು, ಮುಂತಾದ ಮಾಹಿತಿಗಳನ್ನು ಪಡೆಯಲಾಗಿದೆ. ಅವರು ಇರುವ ನಡುಗಡ್ಡೆಗಳ ಸ್ಥಳಗಳನ್ನು ಅವಲೋಕನ ಮಾಡುವುದರ ಮುಖಾಂತರ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

### ಸಹಭಾಗಿತ್ವ ಅವಲೋಕನ ವಿಧಾನ

ಸಹಭಾಗಿತ್ವ ಅವಲೋಕನದಿಂದ ನಡುಗಡ್ಡೆಗಳ ಸಮುದಾಯದವರ ವಾಸ್ತವ ಸ್ಥಿತಿಗತಿಯನ್ನು ಅರಿತುಕೊಳ್ಳಲು ಸಾಧ್ಯವಾಯಿತು. ನಡುಗಡ್ಡೆಗಳಲ್ಲಿ ಇರುವ ಜನರ ಜೊತೆಯಲ್ಲಿ ಬೆರೆತುಕೊಳ್ಳುವುದರ ಮೂಲಕ ಸಂಪೂರ್ಣ ಮಾಹಿತಿಯನ್ನು ಪಡೆದುಕೊಳ್ಳಲು ಈ ವಿಧಾನ ಅನುವು ಮಾಡಿಕೊಟ್ಟಿದೆ. ಗಡ್ಡೆಯ ಜನರು ಇನ್ನು ಅಲ್ಲಿ ಉಳಿದು ವಿಫಲತೆ ಹೊಂದಲು ಕಾರಣಗಳ ಬಗ್ಗೆ, ಸರ್ಕಾರಿ ಅಧಿಕಾರಿಗಳು ಭೇಟಿ ನೀಡಿ ಅವರ ಸಮಸ್ಯೆಗಳನ್ನು ಬಗೆಹರಿಸಲು ಕೈಗೊಂಡ ಕ್ರಮಗಳ ಬಗ್ಗೆ, ಮತ್ತು ಪುನರ್ ವಸತಿಗಳನ್ನು ಯಾಕೆ ಸ್ವೀಕರಿಸುತ್ತಿಲ್ಲ ಎನ್ನುವುದರ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ ಮತ್ತು ಅವರ ವಿಶೇಷವಾದ ಸಾಂಸ್ಕೃತಿಕ ಕೊಡುಗೆಗಳನ್ನು ತಿಳಿಯಲು, ಸಹಭಾಗಿತ್ವ, ಅವಲೋಕನ ವಿಧಾನ ನನಗೆ ತುಂಬ ಸಹಕಾರಿಯಾಗಿದೆ.

## ೧.೭. ಅಧ್ಯಯನದ ಮಹತ್ವ

ಈ ನಡುಗಡ್ಡೆಗಳ ಸಮುದಾಯಗಳಲ್ಲಿ ಜಾನಪದದ ನೆಲೆಗಟ್ಟನ್ನು ಕಟ್ಟಿ ಸಂಗ್ರಹಿಸಿ, ಸ್ವತಂತ್ರ ಅಸ್ತಿತ್ವ, ತಿಳುವಳಿಕೆ ನೀಡಬೇಕೆಂಬ ಭಾವನೆಯಿಂದ ಹಾಗೂ ಸಾಮಾಜಿಕ ಸ್ಥಾನಮಾನವನ್ನು ಆಧುನಿಕ ಜಗತ್ತಿನೊಳಗೆ ತರಲು ತಿಳಿಯಪಡಿಸುವುದೇ ಈ ಅಧ್ಯಯನದ ಮಹತ್ವವಾಗಿದೆ.

ಅವರ ಮೂಲ ನೆಲೆ ಮತ್ತು ಸ್ಥಳಾಂತರ ಆಗಿದೆಯೇ ಎನ್ನುವುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಇಂತಹ ಸಮುದಾಯಗಳ ಅಭಿವೃದ್ಧಿಗೆ ಕೈಗೊಳ್ಳಬಹುದಾದ ಕ್ರಮಗಳ ಕುರಿತು ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ನಡುಗಡ್ಡೆಗಳ ಜಾನಪದವನ್ನು ಗುರುತಿಸಲಾಗುವುದು. ಶೈಕ್ಷಣಿಕ, ಆರ್ಥಿಕ, ರಾಜಕೀಯವಾಗಿ ಹಿನ್ನೆಡೆ ಅನುಭವಿಸಿದ್ದು ಇದಕ್ಕೆ ಕಾರಣವಾದ ಅಂಶಗಳ ಮತ್ತು ಇವರ ಬದುಕಿನಲ್ಲಿ ಉಂಟಾದ ಸ್ಥಿತ್ಯಂತರಗಳನ್ನು ಅನಾವರಣಗೊಳಿಸಿ ಪರಿಹಾರ ಕಂಡುಕೊಳ್ಳಲು ಸಹಕಾರಿ ಯಾಗುತ್ತದೆ ಎಂಬ ಅಂಶವನ್ನಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

## ೧.೮. ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

ವೇದಮೂರ್ತಿ ಶ್ರೀ ಶಿವನಗೌಡ, ವೀರನಗೌಡ ಪಾಟೀಲ ಸಂಪಾದಿಸಿರುವ ಗದ್ದೆಮ್ಮಾದೇವಿ ದೇವಾಲಯದ ಕಳಸಾರೋಹಣ ಹಾಗೂ ಸಾಮೂಹಿಕ ವಿವಾಹ ಸಮಾರಂಭದ ಸ್ಮರಣ ಸಂಚಿಕೆಯಲ್ಲಿ ದೇವರ ಗಡ್ಡೆಯ ಗದ್ದೆಮ್ಮನ ಚರಿತ್ರೆ ಬಗ್ಗೆ ಮಾಹಿತಿ ನೀಡಿದ್ದಾರೆ.

ಡಾ.ಅಮರೇಶ ಯಾತಗಲ್‌ರವರು 'ಇತಿಹಾಸ ಇಂಚರ' ಎಂಬ ಪುಸ್ತಕದಲ್ಲಿ ಜಲದುರ್ಗ ಕೋಟೆಯ ಬಗ್ಗೆ ವಿವರಣೆ ನೀಡಿದ್ದಾರೆ ಮತ್ತು ಜಲದುರ್ಗ ಸ್ಥಳನಾಮ ಪದ ನಿಷ್ಪತ್ತಿ ಅರ್ಥವನ್ನು ನೀಡಿದ್ದಾರೆ.

ಕರೋಸ್ಕಿನವರು 'ಪುರಾತನ ಜಗತ್ತಿನ ಇತಿಹಾಸ' ಎಂಬ ಪುಸ್ತಕದಲ್ಲಿ ದ್ವೀಪಗಳ ಉಗಮದ ಬಗ್ಗೆ ತಿಳಿಸಿದ್ದಾರೆ. ಡಾ.ಶ್ರೀಧರ ಅಡಿಗರವರ 'ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು' ಎಂಬ ಪುಸ್ತಕದಲ್ಲಿ ನಾರದಗಡ್ಡೆಯ ಸ್ಥಳನಾಮ, ಪದ ನಿಷ್ಪತ್ತಿ, ಅರ್ಥವನ್ನು ತಿಳಿಸಿದ್ದಾರೆ.

ಶ್ರೀ ಸಿದ್ಧಲಿಂಗೇಶ್ವರ ಮಹಾಸ್ವಾಮಿಗಳವರ 'ಗರತಿಯರ ಗುಡುಗು' ಎಂಬ ಜನಪದ ಗೀತೆಗಳ ಪುಸ್ತಕದಲ್ಲಿ, ರಾಮಗಡ್ಡೆಯ ಜನಪದ ಗೀತೆಗಳನ್ನು ಸಂಗ್ರಹಿಸಿದ್ದಾರೆ.

'ಶ್ರೀ ನಾರದಗಡ್ಡೆ ಕ್ಷೇತ್ರ ದರ್ಶನ', ಸ್ವಯಂಪ್ರಭಾ ಗ್ರಂಥಮಾಲಾ ರಾಯಚೂರ ಎಂಬ ಪುಸ್ತಕದಲ್ಲಿ ನಾರದಗಡ್ಡೆ ಮಠದ ಸ್ವಾಮಿಗಳ ವಂಶಾವಳಿ ಮತ್ತು ಚೆನ್ನಬಸವೇಶ್ವರ ಪವಾಡಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

ಪಾಟೀಲ್ ಚನ್ನಬಸಪ್ಪರವರ 'ಆರನೇಯ ವಿಕ್ರಮಾದಿತ್ಯನ ಜಲದುರ್ಗದ ಶಾಸನ' ಪುಸ್ತಕದಲ್ಲಿ ಜಲದುರ್ಗದ ಶಾಸನಕ್ಕೆ ಸಂಬಂಧಿಸಿದಂತೆ ಐತಿಹಾಸಿಕ ಘಟನೆಗಳ ಬಗ್ಗೆ ಮಾಹಿತಿ ನೀಡಿದ್ದಾರೆ.

'ಕರ್ನಾಟಕ ವಿಷಯ ವಿಶ್ವಕೋಶ' ಮೈಸೂರು ವಿಶ್ವವಿದ್ಯಾಲಯ ಈ ಕೋಶದಲ್ಲಿ ಜಲದುರ್ಗ ಕೋಟೆ ಬಗ್ಗೆ ಮಾಹಿತಿ ನೀಡಿದ್ದಾರೆ.

ಕನ್ನಡಪ್ರಭ, ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ 'ಕೃಷ್ಣಾಗೆ ಅಪಾರ ನೀರು: ನೀಲಕಂಠರಾಯನ ಗಡ್ಡೆ ಜಲಾವೃತ್ತಗೊಂಡಿದೆ' ಎಂದು ತಿಳಿಸಲಾಗಿತ್ತು. ಮುನ್ನೆಚ್ಚರಿಕೆ ಕ್ರಮದ ಬಗ್ಗೆ ಕೂಡ ಹೇಳಲಾಗಿತ್ತು. ೫೭ ಗ್ರಾಮಗಳಿಗೇ ಪುನಾಃ ಭೀತಿ ಎಂದು ತಿಳಿಸಲಾಗಿತ್ತು. ೬ ಆಗಸ್ಟ್, ೨೦೧೬ ರಂದು, ಸ್ಥಳಾಂತರಕ್ಕೆ ನಡುಗಡ್ಡೆ ಜನರ ಒತ್ತಾಯ ಎಂಬ ವಿಷಯ ಕೂಡ ಕೊಡಲಾಗಿತ್ತು.

ಉದಯವಾಣಿ, ರಾಯಚೂರುವಾಣಿ, ಪ್ರಜಾವಾಣಿ, ವಿಜಯ ಕರ್ನಾಟಕ ಪತ್ರಿಕೆಗಳಲ್ಲಿ ಐದು ದಿನಗಳ ಬಳಿಕ ಸಾಧ್ಯವಾದ ಗಡ್ಡೆಗಳ ಸಂಪರ್ಕ, ದಿನಸಿ ವಿತರಣೆ, ಆರೋಗ್ಯ ತಪಾಸಣೆ

ಎಂಬ ವಿಷಯವನ್ನು ತಿಳಿಸಲಾಗಿತ್ತು ಮತ್ತು ಹಸಿವಿನಿಂದ ಬಳಲುತ್ತಿರುವ ನಡುಗಡ್ಡೆಗಳ ಜನರು, ಪ್ರವಾಹದ ಗಡ್ಡೆ ತಲುಪಿದ ಜಿಲ್ಲಾಡಳಿತ ಎಂದು ಕೊಡಲಾಗಿತ್ತು ೯ ಅಗಸ್ಟ್, ೨೦೧೬ ರಂದು.

ವಿಜಯವಾಣಿ ಪತ್ರಿಕೆಯಲ್ಲಿ ಆಗಸ್ಟ್ ೮, ೨೦೧೬ರಂದು, ಜಲಾಯಶಗಳ ಒಳ ಹರಿವು ಹೆಚ್ಚಳ, ನಡುಗಡ್ಡೆಗಳಿಗೆ ಎಚ್ಚರಿಕೆ ಎಂಬ ವಿಷಯವನ್ನು ಪ್ರಸ್ತಾಪಪಡಿಸಲಾಗಿತ್ತು.

ಈ ನಡುಗಡ್ಡೆಗಳ ಕುರಿತಾಗಿ ವಿರಳ ಪ್ರಮಾಣದಲ್ಲಿ ಅನುಷಂಗಿಕ ಆಕರಗಳು ದೊರೆಯುತ್ತವೆ. ಈ ಅನುಷಂಗಿಕ ಆಕರಗಳಿಗೆ ಪ್ರದೇಶ, ಕಾಲ, ದೃಷ್ಟಿಕೋನಗಳ ಮಿತಿಯನ್ನು ಕಾಣಬಹುದು, ಸಂಶೋಧನೆಯು ನಿರಂತರವಾಗಿ ಸಾಗುವಂತಹದ್ದು. ಹಾಗಾಗಿ ಈ ಅನುಷಂಗಿಕ ಆಕರಗಳು ಎಲ್ಲವನ್ನು ಕಟ್ಟಿಕೊಡಲು ಸಾಧ್ಯವಾಗುವುದಿಲ್ಲ. ಹಾಗಾಗಿ ಮೌಖಿಕ ಆಕರಗಳನ್ನು ಬಳಸಿಕೊಂಡು ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಎರಡು

# ಗಡ್ಡೆಗಳ ಸ್ಥಳನಾಮ ಪದನಿಷ್ಪತ್ತಿ

೨.೧. ಗಡ್ಡೆಗಳ ನಿಷ್ಪತ್ತಿ

೨.೨. ಗಡ್ಡೆಗಳ ಮೂಲ

೨.೩. ಗಡ್ಡೆಗಳ ಪರಿಚಯ

೨.೪. ಗಡ್ಡೆಗಳ ಭೌಗೋಳಿಕ ಪರಿಸರ

೨.೫. ಗಡ್ಡೆಗಳ ಪ್ರಾಣಿ ಸಂಕುಲ

೨.೬. ಜಲದುರ್ಗ ಕೋಟೆಯ ಸಂಕ್ಷಿಪ್ತ ಪರಿಚಯ

೨.೭. ಗಡ್ಡೆಗಳ ಸಾರಿಗೆ

## ಅಧ್ಯಾಯ ಎರಡು

# ಗದ್ದೆಗಳ ಸ್ಥಳನಾಮ ಪದನಿಷ್ಪತ್ತಿ

### ೨.೧. ಗದ್ದೆಗಳ ನಿಷ್ಪತ್ತಿ

ಸ್ಥಳನಾಮವೆಂದರೆ ಊರ ಹೆಸರು ಎಂದರ್ಥ. ಗ್ರೀಕ್ ಭಾಷೆಯಲ್ಲಿ Topos ಎಂದರೆ ಸ್ಥಳಗಳು Nomos ಎಂದರೆ ಹೆಸರುಗಳು. ಆದ್ದರಿಂದ ಸ್ಥಳಗಳ ಹೆಸರುಗಳನ್ನು ಅಧ್ಯಯನ ಮಾಡುವ ವಿಜ್ಞಾನಕ್ಕೆ Toponomy ಎಂದು ಕರೆಯಲಾಗುತ್ತದೆ.

ತನ್ನ ನಿಜ ಅರ್ಥವನ್ನು ಕಳೆದುಕೊಂಡಿರುವುದರಿಂದ ಸಹಜವಾಗಿಯೇ ನಿಜ ಅರ್ಥವನ್ನು ಹುಡುಕುವ ಕುತೂಹಲ ಕೆರಳುವುದು ಸಹಜವಾಗಿದೆ. ವ್ಯಕ್ತಿಗೊಂದು ಹೆಸರು ಅನಿವಾರ್ಯ ಹೇಗೋ, ಹಾಗೆಯೇ ಆತ ನೆಲೆಸಿದ ಸ್ಥಳಕ್ಕೂ ಒಂದು ಹೆಸರು ಅನಿವಾರ್ಯ. ತಾನು ನೆಲೆಸಿದ ನೆಲೆಗೊಂದು ಹೆಸರಿಡುವ ಪದ್ಧತಿ ಅಥವಾ ಪ್ರಕ್ರಿಯೆ ಇಂದು ನಿನ್ನೆಯದಲ್ಲ. ಅದು ಮನುಷ್ಯನಷ್ಟೇ ಪ್ರಾಚೀನವಾದುದು. "ತನ್ನ ಸಮುದಾಯ, ಮನುಷ್ಯ ತನ್ನನ್ನು ತಾನು ಗುರುತಿಸಿಕೊಳ್ಳಲೋಸುಗ ಹೆಸರಿಟ್ಟುಕೊಳ್ಳುವಂತೆ ತಾನು ವಾಸಿಸುವ ಜಾಗಕ್ಕೂ ಹೆಸರಿಟ್ಟುಕೊಂಡು ತನ್ನ ಸುತ್ತಮುತ್ತಲಿನ ನಿಸರ್ಗವೇ ಆತನಿಗೆ ಆಧಾರವಾಗಿ ಕಂಡಿರುವುದರಲ್ಲಿ ಆಶ್ಚರ್ಯವಿಲ್ಲ. ಆದ್ದರಿಂದ ಪ್ರಾಚೀನ ಸ್ಥಳನಾಮಗಳನ್ನು ನಿಸರ್ಗವಾಚಿ ಹೆಸರುಗಳನ್ನು ಒಳಗೊಂಡಿರುವುದು"[೧] ವಿಶೇಷವಾಗಿದೆ. ವಿಶೇಷವಾದಂತಹ ಸ್ಥಳನಾಮ ಗದ್ದೆಗಳನ್ನು ಇಲ್ಲಿ ನೋಡಬಹುದು.

"೧. ಗದ್ದೆ ಎಂದರೆ? ನೀರಿನ ಮಧ್ಯವಿರುವ ಸಣ್ಣ ಭೂಭಾಗ ಅಥವಾ ದಿಬ್ಬ. ದ್ವೀಪ ಎಂಬುದು ಸಂಪೂರ್ಣ ಅರ್ಥವನ್ನು ಹೊಂದಿದೆ.

೨. ಕಂದಮೂಲ ಅಥವಾ ಮುದ್ದೆ; ಉಂಡೆ. ಶರೀರದಲ್ಲಿ ರೋಗದಿಂದ ಬೆಳೆಯುವ ಗ್ರಂಥಿ. ಹೆಪ್ಪುಗಟ್ಟಿದುದು ಎಂಬ ಅರ್ಥಗಳನ್ನು ಒಳಗೊಂಡಿದೆ(ಪದಕೋಶ ನಿಘಂಟು).

ಗಡ್ಡಿ ಎಂದರೇನು? ಹತ್ತು ವಸ್ತುಗಳ ಕಾಗದದ ಕಟ್ಟು; ಅರ್ಧ ರೀಮು ಎಂದರ್ಥ."[೨]

## ೨.೨. ಗಡ್ಡೆಗಳ ಮೂಲ

ಈ ಸಣ್ಣ ದ್ವೀಪಗಳ ಉಗಮದ ಬಗೆಗೆ ಒಂದು ಪುರಾತನ ದಂತ ಕಥೆ ಇದೆ. ಶ್ರೀರಾಮಚಂದ್ರನ ಸೈನಿಕರು ಶ್ರೀಲಂಕಾ ದ್ವೀಪಕ್ಕೆ ಸೇತುವೆ ಕಟ್ಟಲು ಸಮುದ್ರದೊಳಕ್ಕೆ ಕಲ್ಲುಗಳನ್ನು, ಬಂಡೆಗಳನ್ನು ಎಸೆದರೆಂದೂ, ಅವೇ ನೀರಿನಲ್ಲಿ ಹರಿದು-ಬಂದು ಈಗ ದ್ವೀಪಗಳಾಗಿ ಹಾಗೂ ನಡುಗಡ್ಡೆಗಳಾಗಿ ದಿಬ್ಬಗಳಾಗಿವೆಯೆಂದು ಆ ಕಥೆ ತಿಳಿಸುತ್ತದೆ.

"ಪುರಾತನ ಕಾಲದಲ್ಲಿ ಗಡ್ಡೆಗಳಲ್ಲಿ ಮುಳ್ಳಿನ ಪೊದೆಗಳು, ಕಾಡುಗಳು ತುಂಬಿದ್ದವು. ದ್ವೀಪದಲ್ಲಿ ತೇವದಿಂದ ಕೂಡಿದ ದಟ್ಟವಾದ ದುರ್ಗಮವಾದ ಕಾಡುಗಳು ಬೆಳೆದಿದ್ದವು. ಕಾಡುಗಳಲ್ಲಿ ಬೆಳೆಯುತ್ತಿದ್ದ ಸಮೃದ್ಧ ಗಿಡಮರಗಳು ಮತ್ತು ಪ್ರಾಣಿಗಳು ವಾಸವಾಗಿದ್ದವು. ಇದನ್ನೆ ಮಾನವ ತನ್ನ ವಾಸದ ನೆಲೆಯನ್ನಾಗಿ ಮಾಡಿಕೊಂಡ. ಕಾಲಾನಂತರ ಜನರ ಗುಂಪಿನ ವಾಸದ ನೆಲೆಯಾಗಿ ಇಂದು ದ್ವೀಪಗಳಾಗಿ ಮಾರ್ಪಟ್ಟವು"[೩] ಅಧ್ಯಯನಕ್ಕೆ ಒಳಪಡಿಸಿರುವ ಗಡ್ಡೆಗಳೆಂದರೆ"(ಕರೋಸ್ಕಿನ-೧೯೮೭, ಪು.೨೨೩)

**ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ಬರುವ ಗಡ್ಡೆಗಳು**

೧. ಮೇಲಿನ ಗಡ್ಡೆ

೨. ದೇವರ ಗಡ್ಡೆ

೩. ನೀಲಕಂಠರಾಯನ ಗಡ್ಡೆ

**ರಾಯಚೂರು ಜಿಲ್ಲೆಯ ಲಿಂಗಸ್ಗೂರು ತಾಲೂಕಿನಲ್ಲಿ ಬರುವ ಗಡ್ಡೆಗಳು**

೧. ಜಲದುರ್ಗ ನಡುಗಡ್ಡೆ

೨. ಹಂಚಿನಾಳ ಗಡ್ಡೆ

೩. ಯರಗೋಡೆ ಗಡ್ಡೆ

೪. ಯಳಗುಂದಿ ಗಡ್ಡೆ

೫. ಕಡದರ ಗಡ್ಡೆ

**ರಾಯಚೂರು ಜಿಲ್ಲಾ ಸ್ಥಳದಲ್ಲಿ ಬರುವ ಗಡ್ಡೆಗಳು**

೧. ಕುರವಪುರ ಗಡ್ಡೆ

೨. ರಾಮಗಡ್ಡೆ

೩. ನಾರದ ಗಡ್ಡೆ

**ನಾರದ ಗಡ್ಡೆ :** "ದೇವಲೋಕದ ನಾರದ ಶಿವನ ಶಾಪದಿಂದ ಭೂಮಿಗೆ ಬಂದು ಈ ಕೃಷ್ಣಾ ನದಿಯ ಮಧ್ಯದಲ್ಲಿರುವ ಒಂದು ನಿಸರ್ಗ ಗಡ್ಡೆಯಲ್ಲಿ ನೆಲೆಸಿ ಕಠಿಣ ತಪಸ್ಸು ಮಾಡಿದ. ತನ್ನ ಶಾಪ ವಿಮೋಚನೆ ಆದ ಮೇಲೆ ಮತ್ತೆ ತಾನು ದೇವಲೋಕಕ್ಕೆ ಹಿಂತಿರುಗಿ ಹೋಗುವಾಗ ತಾನು ಕುಳಿತು ತಪ್ಪು ಮಾಡಿದ ಜಾಗದಲ್ಲಿ ಒಂದು ಶಿವಲಿಂಗವನ್ನು ಸ್ಥಾಪನೆ ಮಾಡಿ ಕೈಲಾಸಕ್ಕೆ ಹೋದನು. ಇದರ ಗುರುತಾಗಿ ನಾರದ ಮುನೀಶ್ವರ ಅಥವಾ ಈಶ್ವರ ಎಂದು ಒಂದು ದೇವಾಲಯವನ್ನು ನಿರ್ಮಿಸಿ ಜನರು ವಾಸಿಸತೊಡಗಿದರು. ಈ ಗಡ್ಡೆಗೆ ಒಂದು ಹೆಸರಿಡಲು ಪ್ರಶ್ನೆ ಬಂದಾಗ ನಾರದರ ಹೆಸರನ್ನು ಈ ಗಡ್ಡೆ ತನ್ನ ಸ್ಥಳನಾಮ ಪದ ನಿಷ್ಪತ್ತಿ ಪಡೆದುಕೊಂಡಿದೆ ಎಂದು ಕ್ಷೇತ್ರಕಾರ್ಯದ ಮೂಲಕ ಗಡ್ಡೆಯ ಹಿರಿಯ ದೋಣಿಯ ವೃತ್ತಿಕಾರನಾದ ಶಂಕರಪ್ಪನವರಿಂದ ಮಾಹಿತಿಯನ್ನು ಪಡೆಯಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಶ್ರೀ ನಾರದಗಡ್ಡೆ ಕ್ಷೇತ್ರ ದರ್ಶನ ಸ್ವಯಂ ಪ್ರಭಾ ಗ್ರಂಥ ಮಾಲಾ ರಾಯಚೂರು ಇವರಿಂದ ಸ್ಪಷ್ಟಪಡಿಸಿಕೊಳ್ಳಲಾಗಿದೆ."[೪]

**ಕುರಮಗಡ್ಡೆ :** ಕುರಮ ಅಂದರೆ ಮರಾಠಿಯಲ್ಲಿ ಆಮೆ. ಪುರ ಅಂದರೆ ಗಾತ್ರದಲ್ಲಿ ದೊಡ್ಡದು. ಗಡ್ಡೆ ಅಂದರೆ ನೀರಿನ ಮಧ್ಯ ಇರುವ ದ್ವೀಪ ಎಂದು. ಈ ಅರ್ಥದಿಂದ ಕುರಮಗಡ್ಡೆ ಅಥವಾ ಕುರವ ಪುರಗಡ್ಡೆ ಎಂದು ಕರೆಯುತ್ತಾರೆ. ಈ ಗಡ್ಡೆಯಲ್ಲಿ ಶ್ರೀಪಾದವಲ್ಲಭ ದೇವಸ್ಥಾನವಿದ್ದು, ಇದಕ್ಕೆ ಮೊದಲು ಆಮೆಯನ್ನು ಪ್ರತಿಷ್ಠಾಪಿಸಿ ನಂತರ ವಲ್ಲಭರ ದೇವಾಲಯವನ್ನು ಕಟ್ಟಲಾಗಿದೆ. ಅದರಿಂದ ಇದು ಕುರವಪೂರ ಎಂದು ಹೆಸರು ಪಡೆದುಕೊಂಡಿತು.

**ರಾಮಗಡ್ಡೆ :** ರಾಮ ಎಂದರೆ, ಒಬ್ಬ ವ್ಯಕ್ತಿಯ ಅಂಕಿತನಾಮ. ಇದನ್ನು ಇಟ್ಟುಕೊಂಡು ರಾಮಗಡ್ಡೆ ಎಂಬ ಅರ್ಥ ಬರುತ್ತದೆ. ಈ ಸುಂದರ ದ್ವೀಪಕ್ಕೆ ತ್ರೇತಾಯುಗದಲ್ಲಿ ರಾಮಾಯಣದ ಶ್ರೀರಾಮಚಂದ್ರ ತನ್ನ ಹದಿನಾಲ್ಕು ವರ್ಷದ ವನವಾಸದ ಸಮಯದಲ್ಲಿ ಮೂರು ತಿಂಗಳ ಕಾಲ ಇಲ್ಲಿ ನೆಲೆಸಿದ್ದನೆಂದು ಮತ್ತು ತನ್ನ ಹೆಸರಿನ ಲಿಂಗವನ್ನು ಸ್ಥಾಪನೆ ಮಾಡಿ ಹೋಗಿದ್ದರಿಂದ ಈ ಗಡ್ಡೆಗೆ ರಾಮಗಡ್ಡೆ ಎಂದು ಹೆಸರು ಪಡೆದುಕೊಂಡಿತು ಎಂಬ ಐತಿಹ್ಯ ಉಂಟು.

**ನೀಲಕಂಠರಾಯನ ಗಡ್ಡೆ :** ನೀಲ ಅಂದರೆ ಬೂದು ಬಣ್ಣ ಅಥವಾ ಕಣ್ಣಿಗೆ ಕಾಣಲಾರದು. ಕಂಠ ಅಂದರೆ ವಿಷ ಎಂದರ್ಥ. ರಾಯ ಅಂದರೆ ಒಡೆಯ, ರಾಜ. ಇದು ಕೂಡ ನೀರಿನ ಮಧ್ಯ ಇರುವುದರಿಂದ ನೀಲಕಂಠರಾಯನ ಗಡ್ಡೆ ಎಂದು ಕರೆಯುತ್ತಾರೆ. ನೀಲಕಂಠರಾಯ ಅಂದರೆ ಯಾರು? ಶಿವ ಪರಮಾತ್ಮ ಮಾದೇವ ಎಂದು ಹೇಳುತ್ತಾರೆ. ವಿಷವನ್ನು ತನ್ನ ಕಂಠದಲ್ಲಿ ಇಟ್ಟುಕೊಂಡ ಬೂದುಬೂದು ಆಕಾರದಿಂದಿರುವ ಶಿವನನ್ನು ನೀಲಕಂಠನೆಂದು ಕರೆಯಲಾಗುತ್ತದೆ. ಸುರಪುರ ಸಂಸ್ಥಾನ ಆಡಳಿತ ಕಾಲದಲ್ಲಿ ಇದು ಮೂಲ ಸ್ಥಳವಾಗಿತ್ತು ಎಂದು ಸ್ಥಳೀಯರು ಹೇಳುತ್ತಾರೆ. ಈ ಗಡ್ಡೆಯಲ್ಲಿ ಪೂರ್ವಕಾಲದ ಶಿವಲಿಂಗವಿದ್ದು, ಅದಕ್ಕೆ ನೀಲಕಂಠರಾಯ ಎಂದು ಹೇಳುತ್ತಾರೆ. ಈ ಗಡ್ಡೆಯಲ್ಲಿ ಸಂಪೂರ್ಣವಾಗಿ ಬೇಡ ಸಮುದಾಯದವರು ವಾಸಿಸುತ್ತಾರೆ. ಇವರು ಶ್ರೀಶೈಲದ

ಪರಮಭಕ್ತರು. ಆ ಕಾರಣದಿಂದ ಈ ಗಡ್ಡೆಗೆ ನೀಲಕಂಠರಾಯನ ಗಡ್ಡೆ ಎಂದು ಹೆಸರು ನಾಮಕರಣ ಮಾಡಿಕೊಂಡಿದ್ದಾರೆ.

**ಮೇಲಿನಗಡ್ಡೆ :** ಹೆಸರೇ ಸೂಚಿಸುವಂತೆ ಈ ಗಡ್ಡೆ ಎಲ್ಲಾ ಗಡ್ಡೆಗಳ ಪಶ್ಚಿಮದಿಕ್ಕಿನ ಮೊದಲಿಗೆ ಬರುವುದರಿಂದ ಮತ್ತು ಎತ್ತರದ ದಿಬ್ಬವಾಗಿರುವುದರಿಂದ ಇದನ್ನು ಮೇಲಿನ ಗಡ್ಡೆಯೆಂದು ಕರೆಯುತ್ತಾರೆ.

**ದೇವರಗಡ್ಡೆ ಅಥವಾ ಜಂಗಿನಗಡ್ಡೆ :** ಈ ಗಡ್ಡೆಯಲ್ಲಿ ಆದಿಶಕ್ತಿ ಅವತಾರವಾದ ಗದ್ದೆಮ್ಮ ದೇವತೆ ಬಂದು ನೆಲೆಸಿರುವುದರಿಂದ ಈ ಗಡ್ಡೆ ದೇವರಗಡ್ಡೆ ಎಂಬ ಹೊಸ ನಾಮಕರಣವನ್ನು ಮಾಡಿಕೊಂಡಿತು. ಮೊದಲು ಇದಕ್ಕೆ ಜಂಗಿನ ಗಡ್ಡೆಯೆಂದು ಕರೆಯುತ್ತಿದ್ದರು ಎಂದು ಸ್ಥಳೀಯರು ಹೇಳುತ್ತಾರೆ.

**ಜಂಗು :** ಅಂದರೆ ನೀರಿನಿಂದ ನಿಂತ ಪ್ರದೇಶ ಎನ್ನಲಾಗಿದೆ. ನೀರಿನ ಮಧ್ಯವಿರುವ ದಿಬ್ಬವು ಗಡ್ಡೆಯೆಂದು ನಾಮ ನಿಷ್ಪತ್ತಿ ಪಡೆದು, ಜಂಗಿನ ಗಡ್ಡೆಯೆಂದು ಹೆಸರು ಪಡೆದುಕೊಂಡಿತು. ಇಂದಿಗೂ ಸರ್ಕಾರದ ದಾಖಲೆಗಳಲ್ಲಿ ಜಂಗಿನ ಗಡ್ಡೆಯೆಂದೇ ದಾಖಲಿಸಲಾಗುತ್ತದೆ.

**ಕಡದರಗಡ್ಡೆ :** ಇದರ ಮೊದಲ ರೂಪ ಕಂದರಗಡ್ಡೆ. ಕಂದರ ಅಂದರೆ ಕಂದಕ ಕೋಟೆಯ ಸುತ್ತು ಅಥವಾ ನೀರು ಸುತ್ತ ಇರುವುದರಿಂದ ಇದು ಕಂದರಗಡ್ಡೆ ಎಂಬ ಪದ ನಿಷ್ಪತ್ತಿ ಹೊಂದಿದೆ.

ಮೌಖಿಕ ಭಾಷೆಯಲ್ಲಿ ಈಗ ಕಡದರ ಗಡ್ಡೆಯಾಗಿದೆ ಮತ್ತು ಈ ಗಡ್ಡೆಯಲ್ಲಿ ಕಂದ್ರಮ್ಮ ದೇವತೆ ನೆಲೆಸಿರುವುದರಿಂದ ಈ ಗಡ್ಡೆಗೆ ಕಡದರಗಡ್ಡೆ ಅಥವಾ ಕಂದರಗಡ್ಡೆ ಎಂಬ ಹೆಸರು ಬಂದಿದೆಯೆಂದು ಸ್ಥಳೀಯರು ಹೇಳುತ್ತಾರೆ.

ಇನ್ನೊಂದು ಊಹೆ ಪ್ರಕಾರ ಈ ಗಡ್ಡೆಯಲ್ಲಿ ಮೊದಲು ಗೊಲ್ಲ ಸಮುದಾಯ ವಾಸವಾಗಿದ್ದು, ಸುತ್ತಮುತ್ತಲಿನ ಗ್ರಾಮದವರು ಈ ಗೊಲ್ಲರನ್ನು ಕಡಿದು ಅಥವಾ ಅಲ್ಲಿಂದ ಕಡದಾಡಿ ಓಡಿಸಿದರು. ನಂತರ ತಾವುಗಳು ಈ ಗಡ್ಡೆಯಲ್ಲಿ ವಾಸ ಮಾಡತೊಡಗಿದರು. ಆದ್ದರಿಂದ ಈ ಗಡ್ಡೆಗೆ ಕಡದರ ಗಡ್ಡೆಯೆಂಬ ಹೆಸರು ಪಡೆದುಕೊಂಡಿತು ಎಂದು ಕೆಲವು ಸ್ಥಳೀಯರು ಹೇಳುತ್ತಾರೆ.

ಗೊಲ್ಲರೇ ಇದ್ದರು ಎನ್ನುವುದು ಬಲವಾದ ಕಾರಣ. ಗಡ್ಡೆಯ ಹತ್ತಿರದಲ್ಲಿ ೫ ಕಿ.ಮೀ. ದೂರದಲ್ಲಿರುವ ಗೊನೆವಂಟ್ಲ ಗ್ರಾಮ ಬರುತ್ತದೆ. ಗೊಲ್ಲರಿಂದ ಗೊನೆವಂಟ್ಲ ಎಂಬ ಹೆಸರು ಬಂದಿದೆ ಎಂದು ನಂಬಬಹುದಾಗಿದೆ ಮತ್ತು ಆ ಊರಿನ ಸ್ಥಳೀಯರು ಕೂಡ ಹೇಳುತ್ತಾರೆ.

**ಜಲದುರ್ಗ :** ಹಿಂದೆ ಇದನ್ನು 'ಕುಡುಗುಂದೆ' ಎಂದು ಕರೆಯುತ್ತಿದ್ದರೆಂದು ಶಾಸನದಲ್ಲಿದೆ ಮತ್ತು ಸ್ಥಳೀಯರು ಹೇಳುತ್ತಾರೆ. ಭೌಗೋಳಿಕ ಹಿನ್ನೆಲೆಯಲ್ಲಿಯೂ ಸಹಿತ ಇದು ಸರಿ ಎನಿಸುತ್ತದೆ. ಕುಡುಗುಂದೆ ಇದರರ್ಥ ಕುಡು ಎಂದರೆ ಬಾಗಿರುವುದು. 'ಗುಂದೆ' ಎಂದರೆ ಬೆಟ್ಟ, ಗುಡ್ಡ ಎಂದರ್ಥ. ಕಂದಕ ಅಥವಾ ಕಣಿವೆಯನ್ನು ಹೊಂದಿರುವ ಬೆಟ್ಟ ಎಂತಲೂ ಅರ್ಥಕೊಡುತ್ತದೆ. ಅಂದರೆ ಬಾಗಿದ

ಬೆಟ್ಟ\ಗುಡ್ಡವೆಂದೂ, ಸ್ವಲ್ಪ ದೂರದಲ್ಲಿ ನಿಂತು ವೀಕ್ಷಿಸಿದರೆ ಅದು ಬಾಗಿದ ಬೆಟ್ಟದಂತೆ ಕಾಣುತ್ತದೆ. ಆದ್ದರಿಂದ ಇದನ್ನು ಕುಡುಗುಂದೆ ಎನ್ನಲಾಗಿತ್ತು.

ಈಗ ಇದನ್ನು ಜಲದುರ್ಗವೆಂದು ಕರೆಯುತ್ತಾರೆ. ಎತ್ತರವಾದ ನಿಸರ್ಗ ನಿರ್ಮಿತವಾದ ಬೆಟ್ಟ, ಗುಡ್ಡ ಹಾಗೂ ಕೃಷ್ಣಾನದಿಯ ಕವಲೊಡೆದು ಅವರಿಸಿರುವ ನಡುಗಡ್ಡೆಯ ಪ್ರದೇಶದಲ್ಲಿ ಕೋಟೆ ಇರುವುದರಿಂದಲೆ ಇದನ್ನು ಜಲದುರ್ಗ ಎನ್ನಲಾಗಿದೆ. ಜಲ>ಎಂದರೆ ನೀರು, ದುರ್ಗ>ಎಂದರೆ ಕೋಟೆ, ನಾಮಪದ ಎಂಬ ಅರ್ಥಹೊಂದಿ ಜಲದುರ್ಗವೆಂದು ಕರೆಯುತ್ತಾರೆ. ಇದೊಂದು ಪ್ರತ್ಯೇಕ ದ್ವೀಪ ಮತ್ತು ನಿಸರ್ಗ ರಮಣೀಯ ಸ್ಥಳವಾಗಿದೆ.

ಇನ್ನೊಂದು ಸ್ಥಳೀಯ ಐತಿಹ್ಯ ಇದೆ. ಈ ಕೋಟೆಯೊಳಗಡೆ ಹೆಜ್ಜೆಗೊಂದು, ನಿಧಿ ಸಂಪತ್ತು ಇರುವುದರಿಂದ ಇದನ್ನು ಧನುಷ್ಯ ಕೋಟೆಯೆಂದು ಹೇಳುತ್ತಿದ್ದರು ಎಂದು ಸ್ಥಳೀಯ ಹಿರಿಯರು ಹೇಳುತ್ತಾರೆ. ಅಲ್ಲಿ ಸಿಕ್ಕಿರುವ ತಾಮ್ರಶಾಸನಗಳ ಲಿಪಿಯಲ್ಲಿ ನಿಧಿ ಸಂಪತ್ತು ಬಗ್ಗೆ ಹೇಳುತ್ತದೆ."[೫]

**ಹಂಚಿನಾಳ್** : ಹಂಚಿ-ಅಂದರೆ ಒಂದು ಬಗೆಯ ಹುಲ್ಲು, ಮೆದೆಹುಲ್ಲು. ನಾಳ್-ಅಂದರೆ ನಾಡು, ದೇಶ, ದಿನ, ದಿವಸ, ಹಂಚಿನಾಳ=ಅಂದರೆ ಮೆದೆ ಹುಲ್ಲಿನಿಂದ ಕೂಡಿದ ನಾಡು. ಹಂಚಿಕೆನಾಳ=ಹಂಚಿಕೆ ಅಂದರೆ ಉಪಾಯ, ಪಾಲು ಮಾಡುವಿಕೆ, ವಿತರಣೆ, ಪಿತೂರಿ. ನಾಳ-ನಾಲ ಎಂದರ್ಥ. ನಾಳಂ ಎಂದರೆ ನೀರು ಎಂಬ ಅರ್ಥಗಳನ್ನು ಕೊಡುತ್ತವೆ.

**ಯರಗೋಡೆ** : ಹೆಸರೆ ಸೂಚಿಸುವಂತೆ ಯರಗೋಡೆ ಎಂದರೆ, ಯಾರು ಇಲ್ಲದ ಸ್ಥಳದಲ್ಲಿ ಕಟ್ಟಿದ ಗೋಡೆ ಯರಗೋಡೆ ಎಂದು ಸ್ಥಳೀಯರು ಹೇಳುತ್ತಾರೆ. ಯಾರು ಇವರ ಸಮಸ್ಯೆಗಳನ್ನು ಕೇಳದ ಹಾಳದ ಊರು ಎನ್ನುವ ಅರ್ಥವನ್ನು ನೀಡುತ್ತದೆ. ಯರ-ಬೇರೆ ಗೋಡೆ ಅಂದರೆ ವ್ಯವಸ್ಥಿತವಾಗಿ ಜೋಡಿಸಿದ(ಯಾರ ಕಟ್ಟಿದ ಊರು) **ಯಳಗುಂದ** ಯಲ್-ಅಂದರೆ, ಒಂದು ಬಗೆಯ ಸಣ್ಣ ಡೋಣಿ. ಗುಂದ-ಅಂದರೆ, ಬೆಟ್ಟ, ಗುಡ್ಡ, ಮರಳು ದಿಣ್ಣೆ.

ಬೆಟ್ಟಗುಡ್ಡದ ನಡುವೆ ಇರುವ ಸಣ್ಣದಾದ ಒಂದು ಡೋಣಿಯಂತೆ ಇರುವ ಊರೇ ಯಳಗುಂದ.

## ೨.೩. ಗಡ್ಡೆಗಳ ಪರಿಚಯ

### ಜಲದುರ್ಗ

ಜಲದುರ್ಗವು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನಲ್ಲಿ ವೈಶಿಷ್ಟಪೂರ್ಣ ಸಂಸ್ಕೃತಿಯನ್ನು ಹೊಂದಿದೆ. ಚರಿತ್ರೆಪೂರ್ವದ ಇತಿಹಾಸ ಈ ತಾಲೂಕಿಗಿದೆ. ಈ ತಾಲ್ಲೂಕಿನ ವಾಯುವ್ಯ ದಿಕ್ಕಿಗೆ ೨೭ ಕಿ.ಮೀ. ದೂರದಲ್ಲಿರುವುದೆ ಜಲದುರ್ಗ. ಎತ್ತರವಾದ ನಿಸರ್ಗ ನಿರ್ಮಿತವಾದ ಬೆಟ್ಟ ಗುಡ್ಡ ಹಾಗೂ ಕೃಷ್ಣಾನದಿಯು ಟಿಸಿಲೊಡೆದು ಆವರಿಸಿರುವ ನಡುಗಡ್ಡೆಯ ಪ್ರದೇಶದಲ್ಲಿ

ಕೋಟೆ ಇರುವುದರಿಂದಲೆ ಜಲದುರ್ಗವೆಂದು ಕರೆಯುವರು. ಇದೊಂದು ಪ್ರತ್ಯೇಕ ದ್ವೀಪವಾಗಿದ್ದು, ನಿಸರ್ಗ ರಮಣೀಯ ಸ್ಥಳವಾಗಿದೆ.[೬]

ಗಡ್ಡೆಯ ಪೂರ್ವಕ್ಕೆ ಯರಗೋಡೆ ಹಂಚಿನಾಳ ಗ್ರಾಮ ೮ ಕಿ.ಮೀ. ದೂರದಲ್ಲಿ, ಉತ್ತರಕ್ಕೆ ಹಾಲಭಾವಿ ಗ್ರಾಮ ೬ ಕಿ.ಮೀ. ದೂರದಲ್ಲಿದೆ. ಐತಿಹಾಸಿಕವಾಗಿ, ಚಾರಿತ್ರಿಕವಾಗಿ, ಭೌಗೋಳಿಕವಾಗಿ ತನ್ನ ಛಾಪನ್ನು ಮೂಡಿಸಿದ್ದು, ಪ್ರವಾಸಿಗರ ತಾಣವಾಗಿರುವ ಜಲದುರ್ಗಾ ನಡುಗಡ್ಡೆ ಹಿಂದೂ–ಮುಸ್ಲಿಂ ಭಾವೈಕ್ಯತೆ ಸಾರುವ ಸಮನ್ವಯ ಐತಿಹಾಸಿಕ ಮತ್ತು ಧಾರ್ಮಿಕ ಕ್ಷೇತ್ರವಾಗಿದೆ.

ಏಳುಸುತ್ತಿನ ಕೋಟೆಯೊಳಗಿನ ಹಾಳು ಊರು ಎಂದು ಕೋಟೆಯ ಹೊರಗಡೆ ಹೊಸ ಊರು ಇದೆ. ವಾರ್ಗಿಕವಾದ ಪದ ಹಾಳು ವಾಸ್ತವ್ಯ ವಾಚಿ ಪದ. ದ್ರಾವಿಡ ಮೂಲದ ವಾರ್ಗಿಕ ತಮಿಳು ಮಲಯಾಳಂಗಳಲ್ಲಿ "ಪಾಳ" ಎಂದೂ, ತುಳುವಿನಲ್ಲಿ "ಪಾಳು" ಎಂದು, ಕನ್ನಡದಲ್ಲಿ "ಹಾಳ್" ಎಂದು ಬಳಕೆಯಾಗಿದೆ. ಹಾಳ, ಪಾಳ ಮುಂತಾದ ರೂಪಗಳ ಮೂಲ 'ಪಡು'ವಿನಲ್ಲಿದೆ. ಕನ್ನಡದಲ್ಲಿ ಈ ಶಬ್ದಗಳಿಗೆ ಪಾಳು ಬಿದ್ದ ಊರು. ಜನರಿಲ್ಲದ ಪ್ರದೇಶ ಎಂಬ ಅರ್ಥಗಳಿವೆ." (ಬಸವರಾಜು ಬಿ.ಎಸ್., ೨೦೧೪, ಪು.೧೬)

ಕೋಟೆಯೊಳಗಡೆ ಎರಡು ಮಠಗಳಿದ್ದು ಮೇಲಿನ ಮಠ ಮತ್ತು ಕೆಳಗಿನ ಮಠ ಎಂದು. ಮೇಲಿನಮಠ ಕೋಟೆಯ ಮೇಲಿದೆ. ಕೋಟೆಯ ಕೆಳಗಡೆ ಪ್ರಥಮ ದ್ವಾರ ಬಾಗಿಲಲ್ಲಿ ಕೆಳಗಿನ ಮಠವಿದೆ. ಕೋಟೆಯ ಹೊರಗಡೆ ಜನರು ವಾಸವಾಗಿದ್ದಾರೆ. ಇಲ್ಲಿ ಯಾರು ಮೂಲ ನಿವಾಸಿಗಳಿಲ್ಲ. ಬೇರೆ ಬೇರೆ ಗ್ರಾಮಗಳಿಂದ ಬಂದು ಇಲ್ಲಿ ವಾಸವಾಗಿದ್ದಾರೆ. ಮೊದಲಿಗೆ ಬಂದವರು ಠಕ್ಕಳಿಕೆ, ನಂತರ ಹಾಲಭಾವಿ, ಉಪ್ಪೇರಿ ಐಯ್ಯನಗುಡಿ ಗ್ರಾಮಗಳಿಂದ ಬಂದು ಭೂಖಾತೆದಾರರಾಗಿದ್ದಾರೆ. ಈ ನಡುಗಡ್ಡೆಗೆ ಯಾವುದೇ ರಸ್ತೆ ಮಾರ್ಗವಿದ್ದಲ್ಲಿ ಈಗ ರಸ್ತೆ ಮಾರ್ಗವಾಗಿ ೩೦ ವರ್ಷಗಳಾಗಿ ಮೊದಲು ಜನರು ಈಜುಕಾಯಿಗಳ ಮೂಲಕ ಹೋಗಿ ಬರುತ್ತಿದ್ದೇವೆ ಎಂದು ಹೇಳುತ್ತಾರೆ. ಈ ನಡುಗಡ್ಡೆಯಲ್ಲಿ ಕೆಲವು ಸಮುದಾಯಗಳು ವಾಸವಾಗಿದ್ದು ಬೇಡರು, ಕಬ್ಬೇರು, ಮಾದಿಗರು, ಜಂಗಮರು ಕಟಬರು, ಕುರುಬರು, ಲಿಂಗಾಯಿತರು ಸೇರಿ ಒಟ್ಟು ೪೦ ಕುಟುಂಬಗಳು ವಾಸವಾಗಿವೆ. ೨೦೧೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೨೫೩. ಪರಿಶಿಷ್ಟ ಜಾತಿ ೪೧ ಪರಿಶಿಷ್ಟ ಪಂಗಡ ೭೦, ೧೩೦ ಅಲ್ಪಸಂಖ್ಯಾತರು ಜೊತೆಗೆ ಹಿಂದುಳಿದ ಇತರೆ ವರ್ಗಕ್ಕೆ ಸೇರಿದ ಜನರಿದ್ದಾರೆ. ಇಲ್ಲಿಯ ಮನೆಗಳು ಮೊದಲು ಗುಡಿಸಲುಗಳಿದ್ದು, ನಂತರ ಆಧುನಿಕತೆಯಿಂದ ಸಣ್ಣ ಸಣ್ಣ ಸರ್ಕಾರಿ ಜಂತಮನೆಗಳೆ ಆಗಿವೆ. ಕೆಲವು ಇನ್ನು ಹಾಗೆ ಗುಡಿಸಲುಗಳಿವೆ.

**ಕೋಟೆ**

"ಇಲ್ಲಿ ೫ ಸುತ್ತಿನ ಕೋಟೆ ಇದೆ. ೧೨ನೇ ಶತಮಾನದಲ್ಲಿ ದೇವಗಿರಿಯ ಯಾದವರು ಕಟ್ಟಿಸಿರಬಹುದುದೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ."(ಅಮರೇಶ ಯತಗಲ್, ೨೦೦೭, ಪು.೧೪). ಆದರೆ ಅದಕ್ಕೆ ಸಂಬಂಧಿಸಿದ ಯಾವುದೇ ಶಾಸನಗಳ ಉಲ್ಲೇಖಗಳಿರುವುದಿಲ್ಲ. ೧೪, ೧೫, ೧೬ ಮತ್ತು ೧೭ನೇ ಶತಮಾನಗಳಲ್ಲಿ ಇನ್ನಷ್ಟು ಅಭಿವೃದ್ಧಿಯನ್ನು ಕಂಡಿದೆ. ಈ ಕೋಟೆಯು ಆದಿಲ್‌ಶಾಹಿಗಳ ವಾಸ್ತುಶೈಲಿಯಲ್ಲಿದೆ. ಕೋಟೆಯನ್ನು ಕಟ್ಟಲು ದೊಡ್ಡದಾದ ಚೌಕಾಕಾರದ ಕಲ್ಲುಗಳನ್ನು, ಇನ್ನೂ ಕೆಲವು ಕಡೆ ಉದ್ದವಾದ ದಿಮ್ಮಿಯಾಕಾರದ, ಅನಿಯಮಿತಾಕಾರದ ಕಲ್ಲುಗಳನ್ನು ಬಳಸಿದ್ದಾರೆ. ಕೋಟೆಯ ಒಳಭಾಗದಲ್ಲಿ ಚಿಕ್ಕ ಕಲ್ಲುಗಳನ್ನು ಉಪಯೋಗಿಸಿದ್ದಾರೆ. ಕೋಟೆಯ ಕಲ್ಲುಗಳು ಒಂದಕ್ಕೊಂದು ಹೊಂದಿಕೊಂಡಿರುವು ದರಿಂದ ಎಲ್ಲಿಯೂ ಸಂಧಿಗಳು ಕಂಡುಬರುವುದಿಲ್ಲ. ವಿಜಯನಗರದ ಅರಸರು ಮತ್ತು ಆದಿಲ್‌ಶಾಹಿಗಳ ಕಾಲದಲ್ಲಿ ಇದೊಂದು ಸೈನಿಕರ ನೆಲೆಯಾಗಿದ್ದು, ಅಪರಾಧಿಗಳನ್ನು ಬಂಧಿಸಿಡುವ ಸ್ಥಳವಾಗಿತ್ತು. ಬಂಧಿಸಿಡುತ್ತಿದ್ದ ಮನೆಗಳ ಕುರುಹುಗಳನ್ನು ಇಂದಿಗೂ ಕಾಣಬಹುದಾಗಿದೆ. ಆ ಮನೆಯುಗಳನ್ನು ದೊಡ್ಡ ದೊಡ್ಡ ಕಲ್ಲುಗಳಿಂದ ಕಟ್ಟಿದ್ದಾರೆ. ಭೂಸಂಶೋಧನೆಯಾದರೆ ಇನ್ನೂ ಅನೇಕ ಮನೆಗಳು ಸಿಗುತ್ತವೆ. ಕೆಲವು ಕಡೆ ಅರ್ಧ ಅಥವಾ ಸ್ವಲ್ಪ ಅಥವಾ ಸರ್ವ ಗೋಡೆಗಳು ಮಾತ್ರ ಉಳಿದಿವೆ.

ಸಂಗನಾಥ ದೇವಾಲಯದ ವಾಯುವ್ಯ ಭಾಗಕ್ಕಿರುವ ೪೦೦ ರಿಂದ ೫೦೦ ಅಡಿ ಎತ್ತರವಿರುವ ಕೋಟೆಯ ಮೇಲಿನಿಂದ ಅಪರಾಧಿಗಳನ್ನು ಕೃಷ್ಣಾನದಿಗೆ ದೂಡುತ್ತಿದ್ದರಂತೆ. ಹೀಗೆ ದೂಡುವ ಬುರುಜನ್ನು ಸ್ಥಳೀಯರು 'ತೊಟ್ಟಿಲ ಬುರುಜು' ಎಂದು ಕರೆಯುತ್ತಾರೆ. ಅದು ಕಲ್ಲಿನ ತೊಟ್ಟಿಲಾಗಿತ್ತು. ಆ ತೊಟ್ಟಿಲಿನಲ್ಲಿ ತೂಗುತ್ತಾ ಅಪರಾಧಿಯನ್ನು ಮೇಲಿನಿಂದ ಕೆಳಕ್ಕೆ ಎಸೆಯುತ್ತಿದ್ದರಂತೆ. ಈಗ ಈ ತೊಟ್ಟಿಲು ನಾಶವಾಗಿದೆ.

ಇಲ್ಲಿ ಬೃಹದಾಕಾರದ ಕಾವಲು ಗೋಪುರಗಳಿವೆ. ಇವುಗಳ ಮೇಲೆ ನಿಂತು, ಸುತ್ತಲೂ ದೃಷ್ಟಿ ಹಾಯಿಸಿದರೆ ಸುಮಾರು ೧೦ ರಿಂದ ೨೦ ಕಿ.ಮೀ. ದೂರದಲ್ಲಿರುವ ವೈರಿ ಸೈನಿಕರು ಕಾಣಿಸುತ್ತಿದ್ದರಂತೆ. ಹೀಗಾಗಿ ವೈರಿಗಳ ಆಕ್ರಮಣವನ್ನು ತಿಳಿಯಬಹುದಾಗಿತ್ತು. ಈ ಕೋಟೆಯ ಮೇಲೆ ನಿಂತರೆ ಮುದಗಲ್ಲು ಕೋಟೆ ಕಾಣುತ್ತಿತ್ತಂತೆ. ೫ನೇ ಸುತ್ತಿನ ಒಳಕೋಟೆಯಲ್ಲಿ ಅರಮನೆಯಂತಹ ಬೃಹದಾಕಾರದ ಕಟ್ಟಡವೊಂದಿದೆ. ಇದರಲ್ಲಿ ಹಜಾರವಿದೆ. ಪಕ್ಕ ವೃತ್ತಾಕಾರದ ಕೊತ್ತಳದ ಗೋಡೆಗೆ ಬಂದೂಕಿನ ಕಿಂಡಿಗಳಿವೆ. ಕಟ್ಟಡ ಎತ್ತರವಾಗಿರುವುದರಿಂದ ಮೇಲೆ ಹತ್ತಲು ಪಾವಟಿಗೆಗಳನ್ನು ಮಾಡಿದ್ದಾರೆ.

**ದೇವಾಲಯಗಳು**

ಇಲ್ಲಿರುವ ದೇವಾಲಯಗಳಲ್ಲಿ ನೀಲಮ್ಮನ ದೇವಾಲಯ, ಈಶ್ವರ ದೇವಾಲಯ, ಗಂಗಾಧರ ದೇವಾಲಯ, ಹನುಮಂತನ ಕಟ್ಟೆ, ಬಸವಣ್ಣನ ಕಟ್ಟೆ, ಮಂಡ ಎಲ್ಲಮ್ಮನ ದೇವಾಲಯ ಮತ್ತು ಸಂಗಮೇಶ್ವರ ದೇವಾಲಯ ಪ್ರಮುಖವಾಗಿವೆ.

ಸಂಗಮೇಶ್ವರ ದೇವಾಲಯ ಸಂಶೋಧಕರ ಗಮನವನ್ನು ಸೆಳೆಯುವಂತಹದ್ದು. ಇಸ್ಲಾಮಿಕ ವಾಸ್ತುಶೈಲಿಯಲ್ಲಿರುವ ಈ ದೇವಾಲಯದ ಒಳಗೆ ಸಂಗಮನಾಥನ ಸಮಾಧಿ ಇದೆ. ಕೆಲವರು ಇದನ್ನು ಸೂಫೀಕರಣಕ್ಕೆ ಒಳಗಾದ ಸಂತರ ಸಮಾಧಿ ಎಂದು ಕರೆಯುತ್ತಾರೆ. ಈ ದೇವಸ್ಥಾನಕ್ಕೆ ಮೇಲ್ಛಾವಣಿಯಾಗಲಿ, ಕಳಸವಾಗಲಿ ಇಲ್ಲ. ಇಲ್ಲಿಗೆ ಹಿಂದೂಗಳು, ಮುಸಲ್ಮಾನರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

**ಬಾವಿ**

ಸಂಗಮನಾಥನ ದೇವಾಲಯದ ಬಲಗಡೆಗೆ ಒಂದು ವಿಶಾಲವಾದ ಬಾವಿ ಇದೆ. ಸ್ಥಳೀಯರು ಇದನ್ನು "ಸಿಡಿಲು ಬಾವಿ" ಎಂದು ಕರೆಯುತ್ತಾರೆ. ಕಾರಣ ಒಂದು ಕಾಲಕ್ಕೆ ಸಿಡಿಲು ಬಡಿದು ಅದು ಬಹಳ ಆಳವಾಗಿದೆ ಎನ್ನುವರು. ಆದರೆ ಅದು ವ್ಯವಸ್ಥಿತವಾಗಿ ತೋಡಿದ ಬಾವಿಯೇ ಆಗಿದೆ. ಒಂದು ಕಡೆ ನೀರನ್ನು ಸೇದಲು ಕಟ್ಟೆಯನ್ನು ಕಟ್ಟಲಾಗಿದೆ. ಹಾಗೂ ಇಳಿಯಲು ಪಾವಟಿಗೆಗಳೂ ನಮಗೆ ಸಿಗುತ್ತವೆ. ಬಹುಶಃ ಇಲ್ಲಿ ವಾಸವಾಗಿದ್ದ ಸೈನಿಕರು ನೀರಿಗಾಗಿ ಬಳಸಲ್ಪಡುತ್ತಿರಬಹುದಾಗಿದೆ.

**ವಿದ್ಯುತ್ ಉತ್ಪಾದನೆ**

ಮಧ್ಯ ಅಮೇರಿಕಾದ ಕಂಪನಿಯ ಮೇಸರ್ಪ ತಾಂಡ್ಕೋರವರ ಪ್ರಸ್ತಾವನೆಯ ಪ್ರಕಾರ ಜಲದುರ್ಗದಲ್ಲಿ ಕೃಷ್ಣ ನದಿಯ ನೀರು ರಭಸವಾಗಿ ಹರಿಯುತ್ತಿರುವುದರಿಂದ ಇಲ್ಲಿ ಸಣ್ಣ ಅಣೆಕಟ್ಟನ್ನು ನಿರ್ಮಿಸಿ ವಿದ್ಯುಚ್ಛಕ್ತಿ ಉತ್ಪಾದನೆ ಮಾಡಬಹುದಾಗಿದೆ.[೮]

**ಅರಣ್ಯ ಭೂಭಾಗ ಕಂದಾಯ ಇಲಾಖೆಯಿಂದ ಅರಣ್ಯ ಇಲಾಖೆಗೆ ಸೇರಿದೆ**

ಈ ಗಡ್ಡೆಯ ಪೂರ್ವ ಮತ್ತು ಈಶಾನ್ಯ, ಅಗ್ನೇಯ, ದಿಕ್ಕಿಗಿರುವ ಅರಣ್ಯ ಭೂಭಾಗ ಅರಣ್ಯ ಇಲಾಖೆಗೆ ಸಂಬಂಧಿಸಿದೆ. ಮೊದಲು ಇದು ರೆವಿನ್ಯೂ ಇಲಾಖೆಯ ವ್ಯಾಪ್ತಿಯಲ್ಲಿದ್ದ ಹಾಗೆ ಸುತ್ತಮುತ್ತಲಿನ ಗ್ರಾಮದವರು ದನ-ಕರ, ಆಡು-ಕುರಿಗಳನ್ನು ಮೇಯಿಸಲು, ಹುಲ್ಲುಗಾವಲು ಪ್ರದೇಶವಾಗಿತ್ತು ಎಂಬುದನ್ನು ಗಡ್ಡೆಯ ಹಿರಿಯರು ಈಗ ನೆನಪಿಸಿಕೊಳ್ಳುತ್ತಾರೆ. ಈಗ ಅದು "ಕಾಯ್ದಿಟ್ಟ ಅರಣ್ಯ" ಎಂದಾಗಿದೆ. ಆಗಿನ ಕಾಲದಲ್ಲಿ ಅವರ ಉದ್ದೇಶ ಸರಿಯಾಗಿರಬಹುದು. ಆದರೆ ಪ್ರಸಕ್ತ ಕಾಲ ಘಟ್ಟದಲ್ಲಿ ಗಡ್ಡೆಯ ಜನರಿಗೆ ಸುತ್ತಮುತ್ತಲ ಗ್ರಾಮದ ಜನರಿಗೆ ಅದೊಂದು ಗಂಭೀರ ಸಮಸ್ಯೆಯಾಗಿ

ಪರಿಣಮಿಸಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ೩೦೦ ಎಕರೆ ಅರಣ್ಯ ಪ್ರದೇಶವಿದ್ದದ್ದು ಕಂಡುಬರುತ್ತದೆ.

**ಹಂಚಿನಾಳ, ಯರಗೋಡೆ, ಯಳಗುಂದ ಕಡದರ ಗಡ್ಡೆ**

ಅದೇ ಲಿಂಗಸೂಗೂರು ತಾಲ್ಲೂಕಿನ ಜಲದುರ್ಗದ ಪೂರ್ವಕ್ಕೆ ೬–೭ ಕಿ.ಮೀ.ದಲ್ಲಿ ಒಂದರ ಮುಂದೆ ಒಂದು ಈ ಗಡ್ಡೆಗಳು ಬರುತ್ತವೆ. ಈ ಗಡ್ಡೆಗಳು ಕೂಡ ಜಲದುರ್ಗ ಹೊಂದಿರುವ ಭೌಗೋಳಿಕ ಲಕ್ಷಣಗಳು. ಮಳೆ, ಬೆಳೆ, ಭೂಮಿ, ಪರಿಸರ, ಪ್ರಾಣಿ ಸಂಕುಲ, ಹವಾಗುಣ ಎಲ್ಲವೂ ಒಂದೇ ರೀತಿಯಾಗಿವೆ. ಎತ್ತರವಾದ ನಿಸರ್ಗ ನಿರ್ಮಿತವಾದ ಬೆಟ್ಟಗುಡ್ಡ ಹಾಗೂ ಕೃಷ್ಣಾನದಿಯು ಟಿಸಿಲೊಡೆದು ಆವರಿಸಿರುವ ನಡುಗಡ್ಡೆಗಳಾಗಿವೆ. ಈ ಗಡ್ಡೆಗಳಿಗೆ, ಎರಡು ರಸ್ತೆ ಮಾರ್ಗಗಳಿರುತ್ತವೆ. ಒಂದು ಜಲದುರ್ಗಕ್ಕೆ ವಾಹನ ಸೌಲಭ್ಯವಿದೆ. ಇನ್ನೊಂದು ದಾರಿ ಗೊನೆವಂಟ್ಲದಿಂದ ಲಿಂಗಸೂರಿಗೆ ಹೋಗುವ ರಸ್ತೆ, ಗೊನೆವಂಟ್ಲದವರೆಗೆ ವಾಹನಗಳ ಸೌಲಭ್ಯವಿಲ್ಲ, ನದಿಯನ್ನು ದಾಟಿಕೊಂಡು ಗೊನೆವಂಟ್ಲಗೆ ೫ ಕಿ.ಮೀ. ಹೋದರೆ ಅಲ್ಲಿಂದ ಲಿಂಗಸೂರಿಗೆ ವಾಹನ ಸೌಲಭ್ಯವಿದೆ. ಜಲದುರ್ಗದ ಮಾರ್ಗವಾಗಿ ಹಾಲಭಾವಿ ಗ್ರಾಮದಿಂದ ವಾಹನಗಳ ಸೌಲಭ್ಯವಿದೆ. ಅಂದರೆ ಈ ಮಾರ್ಗವಾಗಿ ಒಂದು ದಿನಕ್ಕೆ ಮೂರು ಬಾರಿ ಬಸ್ಸು ಈ ನಡುಗಡ್ಡೆಗಳಿಗೆ ಬಂದು ಹೋಗುತ್ತದೆ.

ಈ ಗಡ್ಡೆಗಳು ಜನರ ಸಂಪರ್ಕದೊಂದಿಗೆ ಬೆರೆತುಕೊಂಡಿವೆ ಎಂದು ಹೇಳಬಹುದು ಮತ್ತು ಸ್ವಲ್ಪಮಟ್ಟಿಗೆ ಆಧುನಿಕತೆಯೊಳಗಡೆ ಇದ್ದಾರೆ. ಈ ಎಲ್ಲ ಗಡ್ಡೆಗಳಿಗೆ ಸಾರಿಗೆ ಸಂಪರ್ಕ ಇದ್ದ ಕಾರಣ ಈ ಗಡ್ಡೆಗಳು, ಗುಂತಗೋಳ, ಪಂಚಾಯಿತಿ ವ್ಯಾಪ್ತಿಗೆ ಬರುವಂತಹ ನಡುಗಡ್ಡೆಗಳು. ಅಷ್ಟೊಂದೇನು ಅಭಿವೃದ್ಧಿಯನ್ನು ಹೊಂದಿಲ್ಲ. ತಮ್ಮ ಜೀವನ ಸಾಗಿಸುವ ಮಟ್ಟಿಗೆ, ದುಡಿದು ಜೀವನ ಮಾಡುತ್ತಿದ್ದಾರೆ. ಈ ನಡುಗಡ್ಡೆಗಳು ತಮ್ಮ ಹೆಸರಿನ ಮನೆ ಮತ್ತು ಭೂಮಿಯನ್ನು ಹೊಂದಿರುತ್ತಾರೆ. ಇವರು ಕೃಷಿಯೊಂದಿಗೆ ಪಶುಸಂಗೋಪನೆ ಹೊಂದಿರುವುದು ಇವರಿಗೆ ಆರ್ಥಿಕ ಬಂಡವಾಳ ಎಂದು ಹೇಳಬಹುದು. ಈ ನಡುಗಡ್ಡೆಗಳಿಗೆ ಸುತ್ತಲು ನದಿ ಇದ್ದರು ಸಹ ಅತಿಹೆಚ್ಚಿನ ಗೋಮಾಳ ಭೂಮಿ, ಗುಡ್ಡ ಬೆಟ್ಟಗಳನ್ನು ಹೊಂದಿದ್ದಾರೆ. ಕೃಷಿಗೆ ಯೋಗ್ಯವಲ್ಲದ ಭೂಮಿ, ಕೆಂಪು ಮಸಾರಿ ಭೂಮಿ, ಕಲ್ಲುಗಳಿಂದ ಕೂಡಿದೆ. ಸಮಪ್ರಮಾಣ ಮಳೆ ಆಶ್ರಿತ ಭೂಮಿ, ಸಮಪ್ರಮಾಣ ನದಿಯಿಂದ ಪಂಪ್‌ಸೆಟ್‌ಗಳ ಮೂಲಕ ನೀರಾವರಿ ಮಾಡಿಕೊಂಡಿದ್ದಾರೆ.

**ದೇವರಗಡ್ಡೆ ಮತ್ತು ಮೇಲಿನ ಗಡ್ಡೆ**

ಯಾದಗಿರಿ ಜಿಲ್ಲಾ ಸ್ಥಳದಿಂದ ೧೨೦ ಕಿ.ಮೀ.ದೂರದಲ್ಲಿ ದಕ್ಷಿಣಕ್ಕೆ ಕೃಷ್ಣಾನದಿಯ ಕವಲುಗಳ ನಡುವೆ ಇದೆ. ತಾಲೂಕು ಸ್ಥಳವಾದ ಸುರಪುರ ದಕ್ಷಿಣಕ್ಕಿದ್ದು, ೭೦ ಮೀ. ದೂರದಲ್ಲಿದೆ. ಲಿಂಗಸೂರು ತಾಲೂಕು ಸ್ಥಳದಿಂದ ವಾಯುವ್ಯಕ್ಕೆ ೨೫ ಕಿ.ಮೀ. ದೂರದಲ್ಲಿದೆ. ಹುನಗುಂದ ತಾಲ್ಲೂಕು ಸ್ಥಳದಿಂದ

೪೭ ಕಿ.ಮೀ.ದಲ್ಲಿ ಈಶಾನ್ಯ ದಿಕ್ಕಿಗಿದೆ. ಮುದ್ದೇಬಿಹಾಳ ತಾಲ್ಲೂಕು ಸ್ಥಳದಿಂದ ಆಗ್ನೇಯ ದಿಕ್ಕಿಗೆ ೪೮ ಕಿ.ಮೀ.ದಲ್ಲಿದೆ. ದೇವರಗಡ್ಡೆ ಇದು ಮೂಲ ನಡುಗಡ್ಡೆ. ೪೫೦ ಎಕರೆ ಭೂವಿಸ್ತೀರ್ಣವನ್ನು ಈ ನಡುಗಡ್ಡೆ ಹೊಂದಿದೆ. ಈ ನಡುಗಡ್ಡೆಯಲ್ಲಿ ಆದಿಶಕ್ತಿ ರೂಪವಾದ ಗದ್ದೆಮ್ಮ ದೇವಿ ನೆಲೆಸಿದ್ದಾಳೆ. ಅದಕ್ಕಾಗಿ ಇದು ಸುತ್ತಮುತ್ತಲ ಜಿಲ್ಲಾ, ತಾಲೂಕು ಗ್ರಾಮಗಳಿಗೆ ಪ್ರಸಿದ್ಧಿಯನ್ನು ಪಡೆದಂತಹ ನಡುಗಡ್ಡೆಯಾಗಿದೆ.

ಈ ನಡುಗಡ್ಡೆಯಲ್ಲಿ ಮನೆ ಮತ್ತು ಭೂಮಿಯನ್ನು ತಮ್ಮ ಹೆಸರಿನಲ್ಲಿ ಪಡೆದುಕೊಂಡಿದ್ದಾರೆ. ಈ ಎರಡು ಗಡ್ಡೆಗಳು ಕೂಡ ಆಧುನೀಕರಣದ ಜಗತ್ತಿನೊಳಗೆ ಸ್ವಲ್ಪ ಮಟ್ಟಿಗೆ ಬೆಸೆದುಕೊಂಡಿವೆ. ಬ್ಯಾಂಕ್‌ಗಳಿಂದ ಸಾಲಗಳನ್ನು ಕೂಡ ಪಡೆದಿದ್ದಾರೆ. ಈ ಗಡ್ಡೆ ನಾರಾಯಣಪುರ ಪಂಚಾಯಿತಿ ವ್ಯಾಪ್ತಿಗೆ ಸೇರ್ಪಡೆಯಾಗುತ್ತದೆ. ಯಾವ ಗಡ್ಡೆಯಲ್ಲೂ ನ್ಯಾಯ ಬೆಲೆ ಅಂಗಡಿ ಇಲ್ಲ. ಆದರೆ ಒಂದು ಗಡ್ಡೆಯಲ್ಲಿ ಮಾತ್ರ ನ್ಯಾಯಬೆಲೆ ಅಂಗಡಿಯನ್ನು ಕಾಣಬಹುದು. ಈ ಎರಡು ಗಡ್ಡೆಗಳು ಹಂಚಿಕೊಳ್ಳುತ್ತವೆ. ಮತ್ತೆ ಇದನ್ನು ಬಿಟ್ಟರೆ ಬೇರೆ ಏನು ಸೌಲಭ್ಯವಿಲ್ಲ.

ಇಲ್ಲಿಯ ಭೂಮಿ ಕೆಂಪು ಮಿಶ್ರಿತ ಭೂಮಿ, ಸಮಪ್ರಮಾಣ ನೀರಾವರಿ, ಸಮಪ್ರಮಾಣ ಮಳೆಮಿಶ್ರಿತ ಭೂಮಿಯಾಗಿದೆ. ಸುತ್ತಲು ನೀರು ಇರುವುದರಿಂದ ಕೆಲವರು ನದಿಗೆ ಪಂಪ್‌ಸೆಟ್‌ಗಳ ಮೂಲಕ ನೀರಾವರಿ ಮಾಡಿದ್ದಾರೆ.

ಮೇಲಿನಗಡ್ಡೆ ಮೂಲ ನಡುಗಡ್ಡೆ ಅಲ್ಲ. ಇದು ಕೃಷ್ಣ ನದಿಯಲ್ಲಿ ಕೆಲವು ಗ್ರಾಮಗಳು ಮುಳಗಡೆಯಾದಾಗ ಮತ್ತು ಬಸವಸಾಗರ ಅಣೆಕಟ್ಟು ಕಟ್ಟುವಾಗ ಈ ಸ್ಥಳಕ್ಕೆ ಸ್ಥಳಾಂತರಗೊಂಡಿವೆ. ೧೯೭೨ರಲ್ಲಿ ಸ್ಥಳಾಂತರವಾಗಿ ೪೫ ವರ್ಷಗಳ ಹಿಂದೆ ಈ ಸ್ಥಳಕ್ಕೆ ಬಂದಿದ್ದಾರೆ. ಈ ಗಡ್ಡೆ ಕೇವಲ ೨೦ ಎಕರೆ ಭೂ ವಿಸ್ತೀರ್ಣವನ್ನು ಹೊಂದಿದೆ. ೭೦ ಕುಟುಂಬಗಳನ್ನು ಹೊಂದಿದೆ. ಈ ಮುಳಗಡೆಯಾದ ಕುಟುಂಬಗಳಿಗೆ ಯಾವುದೇ ರೀತಿಯ ಸೌಲಭ್ಯಗಳನ್ನು ಸರಕಾರ ನೀಡಿಲ್ಲ. ಭರವಸೆ ಕೊಟ್ಟು ೪೫ ವರ್ಷಗಳಾದರೂ, ಇನ್ನು ಅದರ ಬಗ್ಗೆ ಅಧಿಕಾರಿಗಳು ಯಾವುದೇ ರೀತಿಯ ಕ್ರಮ ತೆಗೆದುಕೊಂಡಿಲ್ಲ. ನಾವು ಹೋಗಿ ಕೇಳಿದರು ಯಾವ ಅಧಿಕಾರಿಗಳು ಅದರ ಕಾಳಜಿ ವಹಿಸುತ್ತಿಲ್ಲ ಎಂದು ಸ್ಥಳೀಯರು ಹೇಳುತ್ತಾರೆ. ಈಗ ಅದರ ಬಗ್ಗೆ ಮರೆತು ನಮ್ಮ ಜೀವನಕ್ಕಾಗಿ ಬೇರೆ ಬೇರೆ ದಾರಿಗಳನ್ನು ಕಂಡುಕೊಂಡು ಜೀವನ ಮಾಡುತ್ತಿದ್ದೇವೆ ಎಂದು ಅಳಲು ತೋಡಿಕೊಳ್ಳುತ್ತಾರೆ.

ಈ ಗಡ್ಡೆಯನ್ನು ಬಿಟ್ಟು ಮೂಲ ಗಡ್ಡೆಯಲ್ಲಿ ೧೨ ಮನೆಗಳಿವೆ. ಅವು ದೇವದಾಸಿಯರ ಮನೆಗಳು. ಇದಕ್ಕೆ ಮೇಲಿನ ಗಡ್ಡೆ ಕ್ಯಾಂಪ್ ಎಂದು ಕರೆಯುತ್ತಾರೆ. ಇವರನ್ನು ಮೇಲಿನಗಡ್ಡೆಯೊಳಗಡೆ ಕರೆದುಕೊಳ್ಳುವುದಿಲ್ಲ. ಅವರು ಅಲ್ಲೇ ಜೀವನ ಮಾಡುತ್ತಾರೆ.

## ನೀಲಕಂಠರಾಯನಗಡ್ಡೆ

ಈ ನಡುಗಡ್ಡೆ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನಿಂದ ೨೫ ಕಿ.ಮೀ.ದೂರದಲ್ಲಿದೆ. ಕಕ್ಕರೆ ಗ್ರಾಮದಿಂದ ೧೫ ಕಿ.ಮೀ.ದೂರದಲ್ಲಿ ಬರುವ ಈ ನಡುಗಡ್ಡೆಗೆ ಯಾವುದೇ ದಾರಿ ಮಾರ್ಗ ಇರುವುದಿಲ್ಲ. ದೋಣಿಯ ಮೂಲಕ ನಡುಗಡ್ಡೆಗೆ ಹೋಗಿ ಬರಬೇಕು. ಈ ನಡುಗಡ್ಡೆಗೆ ಎರಡು ದಾರಿ ಮಾರ್ಗಗಳಿವೆ. ಇವು ಗಡ್ಡೆಗೆ ನೇರವಾಗಿ ಇಲ್ಲ. ನದಿಯನ್ನು ದಾಟಿದ ನಂತರ ಈ ದಾರಿಗಳು ಬರುತ್ತವೆ. ಯಾವುದೇ ರೀತಿಯ ವಾಹನಗಳ ಸೌಲಭ್ಯವಿಲ್ಲ. ಗಡ್ಡೆಯ ಪೂರ್ವಕ್ಕೆ ಕಕ್ಕರೆ ಗ್ರಾಮಕ್ಕೆ ಹೋಗುವ ಒಂದು ದಾರಿ, ಗಡ್ಡೆಯ ದಕ್ಷಿಣಕ್ಕೆ ಗುರಗುಂಟಕ್ಕೆ ಹೋಗುವ ಇನ್ನೊಂದು ದಾರಿ, ದೋಣಿಯ ಮೂಲಕ ಅಥವಾ ಈಜಿಕೊಂಡು ದಾರಿಯನ್ನು ಸೇರಿ ಗ್ರಾಮಗಳಿಗೆ ಹೋಗಬೇಕು. ಇಲ್ಲಿ ಬೇಡ ಸಮುದಾಯದ ೮೦ ಮನೆಗಳು ಇವೆ. ಈ ಗಡ್ಡೆ ೪೦೦ ಎಕರೆ ಭೂಪ್ರದೇಶವನ್ನು ಹೊಂದಿದೆ. ಈ ಗಡ್ಡೆಯಲ್ಲಿರುವ ಜನರ ಹೆಸರಲ್ಲಿ ಮನೆ ಆಗಲಿ, ಭೂಮಿಯಾಗಲಿ ಇಲ್ಲ. ಎಲ್ಲವೂ ಸರ್ಕಾರದ ಗೋಮಾಳ ಭೂಮಿ, ಗಡ್ಡೆಗಳ ಜನರು, ಒಬ್ಬರಿಗೆ ಇಂತಿಷ್ಟು ಭೂಮಿ ಎಂದು ಹಿರಿಯರು ಹಂಚಿಕೊಟ್ಟಿದ್ದಾರೆ. ಹಿಂದಿನ ಕಾಲದಿಂದಲೂ ಹಾಗೇ ಕೃಷಿ ಮಾಡಿಕೊಂಡು ಬಂದಿದ್ದಾರೆ. ಎಲ್ಲಾ ಭೂಮಿಯು ಮಳೆಯಾಶ್ರಿತ  ಭೂಮಿ. ಸುತ್ತ ನೀರಿದ್ದರು, ನೀರಾವರಿ ಇಲ್ಲ. ಏಕೆಂದರೆ ವಿದ್ಯುತ್ ಸಂಪರ್ಕ ಈ ಗಡ್ಡೆಗೆ ಇನ್ನು ಬಂದಿಲ್ಲ. ಇವರು ಸೀಮೆ ಎಣ್ಣೆ ಬೆಳಕಿನಲ್ಲಿ ಜೀವನ ಸಾಗಿಸುತ್ತಿದ್ದಾರೆ.

ಸ್ವಾತಂತ್ರ್ಯಪೂರ್ವದ ಈ ಗಡ್ಡೆಯ ಮೂಲ ನಾಯಕನಾದ ಕಲ್ಲಪ್ಪ ನಾಯಕನಿಂದ ಪ್ರಾರಂಭಗೊಂಡು ಮುಂದೆ ಆ ಗಡ್ಡೆಯಿಂದ ಹೋಗಿ ಸಂಸ್ಥಾನಗಳನ್ನು ಕಟ್ಟಿಕೊಂಡರು. ಅಂದರೆ ಸುರಪುರ ಸಂಸ್ಥಾನದ ಮೂಲನಾಯಕನಾದ ದಡ್ಡನಾಯಕ ಮತ್ತು ಗುರಗುಂಟಿ ಸಂಸ್ಥಾನದ ಗಡ್ಡೆ ಲಿಂಗನಾಯಕ ಈ ನಾಯಕರು. ಆ ಗಡ್ಡೆಯನ್ನು ಬಿಟ್ಟು ಬಂದರು. ಇನ್ನು ಕೆಲವರು ಬರಲು ನಿರಾಕರಿಸಿ ಅಲ್ಲಿಯೇ ಉಳಿದುಕೊಂಡರು. ಈಗಲೂ ಸಹ ಆ ಗಡ್ಡೆಯನ್ನು ಬಿಟ್ಟು ಬರಲು ಅವರು ಸಿದ್ಧರಿಲ್ಲ. ಅವರನ್ನು ಇಟ್ಟುಕೊಂಡ  ಆ ನೆಲೆಯ ಗೌರವ ನಮಗೆ ಕಾಣತೊಡಗುತ್ತದೆ.

ಇಲ್ಲಿ ವಾಸ ಮಾಡುವ ಬೇಡ ಸಮುದಾಯದವರನ್ನು ಅನೇಕ ಹೆಸರುಗಳಿಂದ ಗುರುತಿಸಬಹುದು. ವಾಲ್ಮೀಕಿ, ಬ್ಯಾಡರು, ಬೇಡ, ನಾಯಕ, ವಾಲ್ಮೀಕಿ ಮಕ್ಕಳು ಅಥವಾ ವಾಲ್ಮೀಕಿ ಋಷಿಗಳ ವಂಶದವರೆಂದು ಹೇಳಿಕೊಳ್ಳುತ್ತಾರೆ. ಕೆಲವು ಐತಿಹ್ಯಗಳ ಪ್ರಕಾರ ಇವರು ಪಶುಪಾಲನೆ ಮಾಡುತ್ತಿದ್ದು ಶ್ರೀಶೈಲದಿಂದ ಬಂದವರೆಂದು ತಿಳಿಯುತ್ತದೆ. ಈ ಗಡ್ಡೆಯಲ್ಲಿ 'ನೀಲಕಂಠರಾಯ'ರು ನೆಲೆಸಿರುವ ಕಾರಣಕ್ಕೆ ನೀಲಕಂಠರಾಯನಗಡ್ಡೆ ಎಂದು ಕರೆಯುತ್ತಾರೆ. ಇಲ್ಲಿ ಪಾರಂಪರಿಕವಾಗಿ ಬೇಡರು ಬೇಟೆಯಾಡುತ್ತ ಬಂದಿದ್ದಾರೆ. ಇವತ್ತಿಗೂ ಇಲ್ಲಿ ನೋಡಬಹುದು. ಇನ್ನು ಇಲ್ಲಿ ಪ್ರಾಚೀನ ವೈದ್ಯಕೀಯ ಮದ್ದನ್ನು ಬಳಸುತ್ತಾರೆ. ಯಾವುದೇ ವೈದ್ಯಕೀಯ ಸೌಲಭ್ಯವಿಲ್ಲ. ಶೈಕ್ಷಣಿಕ ಮಟ್ಟದಲ್ಲಿ ತುಂಬಾನೇ ಹಿಂದುಳಿದ

ಜನ ಸಮುದಾಯವಾಗಿದೆ. ಯಾವುದೇ ರೀತಿಯಲ್ಲಿ ಸೌಲಭ್ಯಗಳಿಲ್ಲದೆ ಬದುಕುವ ಈ ಜನರು ಆ ಪ್ರದೇಶವನ್ನು ಬಿಟ್ಟು ಬರಲು ಸಿದ್ದವಿಲ್ಲವೆಂದರೆ ಜನಪದ ಬದುಕಿನೊಂದಿಗೆ ಅವರು ಹೊಂದಿದ ಸಂಬಂಧಗಳ ಸ್ವರೂಪವೇನು ಎಂದು ಇಲ್ಲಿ ತಿಳಿಯಲಾಗಿದೆ. ಆದರೂ ಇನ್ನು ಬೇರೆ ಬೇರೆ ವಿಷಯಗಳಲ್ಲಿ ಈ ಗಡ್ಡೆಯ ಕುರಿತು ಅಧ್ಯಯನ ನಡೆಯಬೇಕಾಗಿದೆ. ಎಲ್ಲಾ ಗಡ್ಡೆಗಳಿಗಿಂತ ಈ ಗಡ್ಡೆ ತುಂಬ ಭೀಕರ ಪರಿಸ್ಥಿತಿಯನ್ನು ಎದುರಿಸುತ್ತದೆ. ಇಲ್ಲಿ ಜನ ಜೀವನ ಬಹಳ ಕಷ್ಟಕರವಾದ ಸ್ಥಿತಿಯಲ್ಲಿ ನೆಲೆಗೊಂಡಿದೆ. ಅಂದರೆ ನದಿ ತೀರದ ನಡುಗಡ್ಡೆಯಲ್ಲಿ ಜನರು ಗುಡಿಸಲುಗಳಲ್ಲಿ ವಾಸವಿದ್ದಾರೆ. ಇವರ ಊಟ, ವಸತಿ, ಆರೋಗ್ಯದ ಬಗ್ಗೆ ಹೇಳತೀರದು. ಸುಮಾರು ೪೦ ಕುಟುಂಬಗಳಿದ್ದು, ೪೦೦ ವರ್ಷಗಳು ಗತಿಸಿ ಹೋದರು, ಈ ಗಡ್ಡೆಗೆ ಆಧುನಿಕ ಪ್ರಪಂಚದ ಬಿಸಿ ಇನ್ನು ಮುಟ್ಟಿಲ್ಲ. ಅದರಲ್ಲಿ ಮಕ್ಕಳು ಮತ್ತು ಮಹಿಳೆಯರ ಸ್ಥಿತಿಯಂತು ಕಂಬನಿಯ ಕಥೆಯಾಗಿದೆ.

**ಕುರವಪುರ ಗಡ್ಡೆ**

ಕುರವಪುರಗಡ್ಡೆಯು ರಾಯಚೂರು ಜಿಲ್ಲೆಯ ಸ್ಥಳದಿಂದ ಆತಕೂರ ಗ್ರಾಮ ಪಂಚಾಯಿತಿಗೆ ಸೇರುತ್ತದೆ. ಆತಕೂರದಿಂದ ೪ ಕಿ.ಮೀ.ದಲ್ಲಿ ರಾಯಚೂರಿನಿಂದ ೩೦ ಕಿ.ಮೀ. ದೂರದಲ್ಲಿದೆ. ಎತ್ತರವಲ್ಲದ ತೀರ ಕಡಿಮೆಯು ಅಲ್ಲದ ಸಮ ಎತ್ತರದ ನಿಸರ್ಗ ನಿರ್ಮಿತವಾದ ನಡುಗಡ್ಡೆಯಾಗಿದೆ. ಕೃಷ್ಣಾನದಿ ಆವರಿಸಿರುವ ನಡುಗಡ್ಡೆಯ ಇಲ್ಲಿ ದತ್ತಾತ್ರೇಯ ಸ್ವರೂಪವಾದ ಶ್ರೀಪಾದ ವಲ್ಲಭ ದೇವಸ್ಥಾನವಿದ್ದು, ೧೯೦ ಕುಟುಂಬಗಳು ವಾಸವಾಗಿವೆ. ಈ ನಡುಗಡ್ಡೆಯನ್ನು ಅಗ್ರಹಾರವೆಂತಲೂ ಕರೆಯುತ್ತಾರೆ. ಇದೊಂದು ಪ್ರತ್ಯೇಕವಾದ ದ್ವೀಪವಾಗಿದ್ದು, ಕಾಡುಗಳಿಂದ ಕೂಡಿದ ನಿಸರ್ಗ ರಮಣೀಯ ಸ್ಥಳವಾಗಿದೆ.

ಈ ದ್ವೀಪ ಧಾರ್ಮಿಕ ಕ್ಷೇತ್ರವಾಗಿ ಮಾರ್ಪಟ್ಟಿದೆ. ಬೇರೆ ಬೇರೆ ರಾಜ್ಯಗಳಿಂದ ಭಕ್ತರು ಬರುತ್ತಾರೆ. ಆಂಧ್ರ ಪ್ರದೇಶ ಮತ್ತು ಕರ್ನಾಟಕದ ಅತ್ಯಂತ ಹೆಚ್ಚಿನ ಭಕ್ತರೂ ಬರುತ್ತಾರೆ. ಈ ನಡುಗಡ್ಡೆಯಲ್ಲಿ ೮೦೦ ಜನಸಂಖ್ಯೆಯಿದ್ದು, ೪೦೦ ಎಕರೆ ಭೂಪ್ರದೇಶವಿದೆ. ಇಲ್ಲಿ ವಾಸ ಮಾಡುವ ಜನರಿಗೆ ಮೊದಲಿನಿಂದಲೂ ಯಾರಿಗೂ ಅವರ ಹೆಸರಿನಲ್ಲಿ ಭೂಮಿ ಹೊಂದಿಲ್ಲ. ೪೦೦ ಎಕರೆ ಸರ್ಕಾರದ ಜಮೀನು ಆಗಿರುತ್ತದೆ. ಪ್ರತಿಯೊಬ್ಬರು ಪೂರ್ವಜರು, ಹಂಚಿ ಬಿಟ್ಟಿದ್ದ ಭೂಮಿಯನ್ನು ಕೃಷಿ ಮಾಡುತ್ತ ಬಂದಿದ್ದಾರೆ. ಈ ಭೂಮಿ ಕಪ್ಪು ಮಣ್ಣಿನಿಂದ ಕೂಡಿರುತ್ತದೆ. ಭತ್ತ ಮತ್ತು ಹತ್ತಿಯನ್ನು ಬೆಳೆಯುತ್ತಾರೆ. ವಿದ್ಯುತ್ ಸಂಪರ್ಕದಿಂದ ಪಂಪ್‌ಸೆಟ್‌ಗಳಿಂದ ನೀರಾವರಿಯನ್ನು ಅಲ್ಪಪ್ರಮಾಣದಲ್ಲಿ ಹೊಂದಿದ್ದಾರೆ. ಈ ಗಡ್ಡೆಯಲ್ಲಿ ಗೊಲ್ಲಸಮುದಾಯದವರು ಹೆಚ್ಚಿನ ಪ್ರಮಾಣದಲ್ಲಿ ಭೂಮಿ ಉಳುಮೆಯನ್ನು ಮಾಡುತ್ತಿದ್ದಾರೆ. ಅದರಲ್ಲಿ ಮಾದಿಗ ಸಮುದಾಯದವರು ಯಾವುದೇ ರೀತಿ

ಭೂಮಿ ಹೊಂದಿಲ್ಲ. ಕೂಲಿ ಮಾಡಿ ಜೀವನವನ್ನು ನಡೆಸುತ್ತಾರೆ. ಅತ್ಯಂತ ಭೀಕರ ಪರಿಸ್ಥಿತಿಯನ್ನು ಈ ಸಮುದಾಯ ಎದುರಿಸುತ್ತದೆ. ಗೊಲ್ಲ ಸಮುದಾಯವೇ ಈ ಗಡ್ಡೆಯನ್ನು ಕಪಿಮುಷ್ಠಿಯಲ್ಲಿ ಇಟ್ಟುಕೊಂಡಿದೆ. ಯಾಕೆಂದರೆ ಹೆಚ್ಚಿನ ಪ್ರಮಾಣದಲ್ಲಿ ಈ ಸಮುದಾಯದವರಿದ್ದಾರೆ.

ಈ ನಡುಗಡ್ಡೆಗೆ ಯಾವುದೇ ರೀತಿಯ ದಾರಿ ಮಾರ್ಗವಿಲ್ಲ. ಸುತ್ತಲು ನದಿ ಇರುವ ಕಾರಣ ಇವರು ತೆಪ್ಪವನ್ನು ಅಲವಂಬಿಸಿರುತ್ತಾರೆ. ೪ ಕಿ.ಮೀ.ದಲ್ಲಿರುವ ಆತಕೂರಿಗೆ ದೋಣಿಯ ಮೂಲಕ ಬಂದು, ವಾಹನ ಸಂಪರ್ಕ ಪಡೆದು ರಾಯಚೂರಿಗೆ ಬರುತ್ತಾರೆ.

### ರಾಮಗಡ್ಡೆ

ರಾಯಚೂರು ಜಿಲ್ಲೆಯ ಸ್ಥಳದಿಂದ ಸುಮಾರು ೨೬ ಕಿ.ಮೀ. ಅಂತರದಲ್ಲಿದೆ. ಕೊರ್ತಕುಂಡ ಮತ್ತು ಕೊರವಿಹಾಳ ಗ್ರಾಮದಿಂದ ಸುಮಾರು ೨ ಕಿ.ಮೀ. ಸಮೀಪದಲ್ಲಿದೆ. ಈ ಗಡ್ಡೆಯನ್ನು ಕೃಷ್ಣ ನದಿಯು ಸುತ್ತವರಿದಿದ್ದು, ಒಂದು ದ್ವೀಪವಾಗಿದೆ. ಈ ಗಡ್ಡೆಯ ಸಂಪರ್ಕಕ್ಕಾಗಿ ತೆಪ್ಪಗಳನ್ನು ಅವಲಂಬಿಸ ಬೇಕಾಗಿದೆ. ಯಾವುದೇ ರೀತಿಯ ದಾರಿ ಮಾರ್ಗ ಇರುವುದಿಲ್ಲ.

### ಸ್ಥಳದ ಮಹಿಮೆ

ಐತಿಹಾಸಿಕವಾಗಿ ಇಲ್ಲಿ ರಾಮಾಯಣ ಭಾಗದ ಹಲವಾರು ಕುರುಹುಗಳು ಲಭ್ಯವಿರುವುದಾಗಿ ಸ್ಥಳೀಯರು ವ್ಯಕ್ತಪಡಿಸಿರುತ್ತಾರೆ. ಶ್ರೀರಾಮಚಂದ್ರನು ವನವಾಸದ ಅವಧಿಯಲ್ಲಿ ಸೀತಾಮಾತೆಯನ್ನು ಹುಡುಕುತ್ತಾ ಇಲ್ಲಿ ಬಂದು ಸ್ಥಳೀಯ ಪ್ರಕೃತಿಯ ಸೊಬಗಿಗೆ ಮಾರು ಹೋಗಿ ಸುಮಾರು ಆರು ತಿಂಗಳುಗಳ ಕಾಲ ಇಲ್ಲಿ ವಾಸವಾಗಿದ್ದ. ನಂತರ ಆಂಜನೇಯ ಶ್ರೀರಾಮ ಚಂದ್ರನನ್ನು ಇಲ್ಲಿಂದ ಮುಂದೆ ಕಿಷ್ಕಿಂದೆಗೆ ಕೊಂಡೊಯ್ಯುತ್ತಾನೆ ಎಂದು, ಹೋಗುವಾಗ ರಾಮ ತಾನು ಬಂದ ಕುರುಹಾಗಿ ಈ ಗಡ್ಡೆಯಲ್ಲಿ ಒಂದು ಲಿಂಗವನ್ನು ಪ್ರತಿಷ್ಠಾಪನೆ ಮಾಡಿ ರಾಮಲಿಂಗೇಶ್ವರ ಎಂದು ನಾಮಕರಣ ಮಾಡಿದನೆಂದು, ಅಂದಿನಿಂದ ರಾಮಗಡ್ಡೆ ಎಂಬ ಹೆಸರಿನಿಂದ ಆ ಗಡ್ಡೆ ಪ್ರಖ್ಯಾತಿ ಪಡೆಯಿತು ಎಂದು ಸ್ಥಳ, ಪುರಾಣಗಳ ಮೂಲಕ ಮಾಹಿತಿ ದೊರೆಯುತ್ತದೆ.

### ಚೋಳೇಂದ್ರ ಸ್ವಾಮಿಯವರ ಆಗಮನ

ಇವರು ಕಾಶ್ಮೀರ ದೇಶದಿಂದ ಅಲೆಯುತ್ತ ತಪಸ್ಸಿಗೆ ಬೇಕಾದ ಸೂಕ್ತವಾದ ಸ್ಥಳವನ್ನು ಹುಡುಕುತ್ತ ಕೊನೆಗೆ ರಾಮಗಡ್ಡೆಗೆ ತನ್ನ ಹೆಗಲ ಮೇಲಿದ್ದ ಬಿಳಿ ಕಂಬಳಿಯನ್ನು ನೀರಿನ ಮೇಲೆ ಹಾಸಿ ಅದರ ಮೇಲೆ ಕುಳಿತುಕೊಂಡು ನದಿಯನ್ನು ದಾಟಿ ಪ್ರಶಾಂತವಾದ ರಾಮಗಡ್ಡೆಗೆ ಬಂದ. ಅಲ್ಲಿ ತನ್ನ ತಪಸ್ಸಿನ ಮೂಲಕ ಸುತ್ತಮುತ್ತ ಸ್ಥಳಗಳಲ್ಲಿ ಖ್ಯಾತಿಯನ್ನು ಗಳಿಸಿದರು. ಗುರುವಿನ ಪವಾಡ ಮತ್ತು ಭಕ್ತಿ ಕಂಡ ಜನರು ರಾಮಗಡ್ಡೆಗೆ ಬಂದರು. ಕೆಲವರು ಈ ಗಡ್ಡೆಯಲ್ಲಿ ನೆಲೆಸಿದರು.

ಚೋಳೇಂದ್ರಸ್ವಾಮಿಗಳು ಈ ಗಡ್ಡೆಯಲ್ಲಿ ನೆಲೆಸಿ, ಒಂದು ಮಠವನ್ನು ಕಟ್ಟಿ ಅತಿಹೆಚ್ಚಿನ ಸಂಖ್ಯೆಯಲ್ಲಿ ಭಕ್ತರನ್ನು ಗಳಿಸಿದರು. ತಮ್ಮ ಪೂರ್ತಿ ಜೀವನವನ್ನು ಇದೇ ಗಡ್ಡೆಯಲ್ಲಿ ಕಳೆದು ಐಕ್ಯರಾದರು. ಅವರ ನಂತರ ಮಠದ ಪೀಠಧಿಕಾರಿಗಳಾಗಿ ಶ್ರೀ ಸಿದ್ಧಲಿಂಗಸ್ವಾಮಿಗಳು ನೇಮಕಗೊಂಡರು. ಈಗ ಪ್ರಸ್ತುತ ಇವರೆ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಚೋಳೇಂದ್ರ ಸ್ವಾಮಿಯನ್ನು ಮಠದೊಳಗೆ ಸಮಾಧಿ ಮಾಡಲಾಗಿದೆ. ಮಠದೊಳಗೆ ಅವರ ಮೂರ್ತಿಯನ್ನು ಇಟ್ಟು ಪೂಜೆ ಮಾಡಲಾಗುತ್ತದೆ. ಸಿದ್ದಲಿಂಗ ಸ್ವಾಮಿಗಳು ಚೋಳೇಂದ್ರ ಸ್ವಾಮಿಯ ಪೂಜೆ ಮಾಡುತ್ತ ಭಕ್ತರ ಮೆಚ್ಚುಗೆಯನ್ನು ಪಡೆಯುತ್ತ ಅನೇಕ ಜನಪರ ಕಾರ್ಯಗಳನ್ನು ಕೈಗೊಳ್ಳುತ್ತ ವಿಶೇಷವಾಗಿ ಸಾಹಿತ್ಯದಲ್ಲಿ ಅನೇಕ ಗ್ರಂಥಗಳನ್ನು ಹೊರತಂದಿದ್ದಾರೆ. ಗರತಿಯರ "ಗುಡುಗು", "ವಿವೇಚನೆಯ ವಚನಗಳು" ಈಗ ಒಟ್ಟು ೧೮ ಕೃತಿಗಳನ್ನು ಬರೆದು ರಾಜ್ಯ ಪ್ರಶಸ್ತಿಯನ್ನು ಪಡೆದಿದ್ದಾರೆ. ಈ ಗಡ್ಡೆ ಆಲದ ಮರದ ಎಲೆಯ ಆಕಾರ ರೂಪದಿಂದ ಕೂಡಿದೆ. ಈ ಗಡ್ಡೆ ೧೨೦ ಎಕರೆ ಭೂ ವಿಸ್ತೀರ್ಣ ಹೊಂದಿದೆ. ಈ ಭೂಮಿ ಒಳ್ಳೆಯ, ಕಪ್ಪು ಮಣ್ಣಿನಿಂದ ಕೂಡಿದೆ. ಇಡೀ ೧೨೦ ಎಕರೆ ಭೂಮಿ ಸಿದ್ಧಲಿಂಗಸ್ವಾಮಿಗಳ ಹೆಸರಿನಲ್ಲಿದೆ. ಇಲ್ಲಿ ಈಗ ಯಾವ ಜನರು ನೆಲೆಸಿರುವುದಿಲ್ಲ. ಮೊದಲು ೮೦ ಕುಟುಂಬಗಳು ವಾಸವಾಗಿದ್ದವು. ನಂತರ ಪಕ್ಕದ ಕುರ್ತಕೊಂಡಕ್ಕೆ ಸ್ಥಳಾಂತರಗೊಂಡಿವೆ. ಈಗ ಸಿದ್ದಲಿಂಗಸ್ವಾಮಿಗಳ ಮಠದಲ್ಲಿ ದುಡಿಯುವ ಕೆಲವರಿಗೆ ಭೂಮಿಯನ್ನು ಅವರ ಹೆಸರಿಗೆ ಎರಡು ಎಕರೆ, ಮೂರು ಎಕರೆ ನೀಡಿದ್ದಾರೆ. ಉಳಿದ ಭೂಮಿಯನ್ನು ತಾವು ಕೃಷಿ ಮಾಡಿ ಬೆಳೆದ ಧಾನ್ಯಗಳನ್ನು ಮಠಕ್ಕೆ ಉಪಯೋಗಿಸಿ, ಉಳಿದುದನ್ನು ಮಾರಿ ಮಠವನ್ನು ಅಭಿವೃದ್ಧಿಗೊಳಿಸುವಲ್ಲಿ ಪ್ರಯತ್ನ ಪಡುತ್ತಿದ್ದಾರೆ.

**ಈ ನಡುಗಡ್ಡೆ ಈಗ ಪ್ರವಾಸೋದ್ಯಮ ತಾಣವಾಗಿದೆ.**

ಶ್ರೀಸಿದ್ದಲಿಂಗ ಮಹಾಸ್ವಾಮಿಗಳ ಶ್ರಮದಿಂದ ನಬಾರ್ಡ್ ಯೋಜನೆಯಡಿಯಲ್ಲಿ ಪ್ರವಾಸೋದ್ಯಮ ಇಲಾಖೆಯಿಂದ ಪ್ರವಾಸೋದ್ಯಮ ತಾಣವನ್ನಾಗಿ ಮಾರ್ಪಡಿಸಿದ್ದಾರೆ. ಇಲ್ಲಿಗೆ ಭೇಟಿ ಮಾಡುವ ಪ್ರವಾಸಿಗರ ಸಂಖ್ಯೆ ಹೆಚ್ಚಾಗಿದೆ. ದಿನಕ್ಕೆ ೧೫-೨೦ ಜನರು, ಅಮವಾಸ್ಯೆಯಲ್ಲಿ ೨೦೦ ರಿಂದ ೨೫೦ ಜನರು, ಸಂಕ್ರಮಣದ ಜಾತ್ರೆಯಲ್ಲಿ ಸುಮಾರು ೫೦೦೦ ಜನಸಂಖ್ಯೆ ಸೇರುತ್ತಾರೆ.

## ನಾರದಗಡ್ಡೆ ಕ್ಷೇತ್ರ

ನಾರದಗಡ್ಡೆ ಕ್ಷೇತ್ರವು ಒಂದು ಪುರಾತನ ಪ್ರಶಾಂತ ಪವಿತ್ರ ಪುಣ್ಯ ತೀರ್ಥ ದ್ವೀಪ ಕ್ಷೇತ್ರವಾಗಿದೆ. ಇದು ರಾಯಚೂರು ಗದ್ವಾಲ ಮಾರ್ಗದಲ್ಲಿ ರಾಯಚೂರಿನಿಂದ ಸುಮಾರು ಹದಿನೈದು ಕಿ.ಮೀ.ಗಳ ದೂರದಲ್ಲಿ, ಬೂರ್ದಿಪಾಡುವಿನಿಂದ ೧೦ ಕಿ.ಮೀ. ಸಮೀಪದಲ್ಲಿ ದಿವ್ಯ ನಿಸರ್ಗ ಸೌಂದರ್ಯದ ಮಧ್ಯೆ ಕೃಷ್ಣಾನದಿಯಿಂದ ಆವೃತ್ತವಾಗಿ ಪರಿಶೋಭಿಸುತ್ತಿದೆ. ಈ ಕ್ಷೇತ್ರವು ಸುಮಾರು ೧೫೫ ಎಕರೆಗಳಷ್ಟು ಪ್ರದೇಶವನ್ನು ಒಳಗೊಂಡು ಪಶ್ಚಿಮ-ಪೂರ್ವವಾಗಿ ಒಂದು ಮೈಲಿ ಉದ್ದವಾಗಿ ಮಾವಿನ ಎಲೆಯ ಆಕಾರದಲ್ಲಿ ಕಂಗೊಳಿಸುತ್ತಿದೆ.

ಈ ದ್ವೀಪ ಕ್ಷೇತ್ರದ ಪೂರ್ವ ಭಾಗದಲ್ಲಿ ನಾರದ ಮುನೀಶ್ವರನ ದೇವಸ್ಥಾನವೂ ಕರ್ತೃ ಶ್ರೀ ವೈರಾಗ್ಯ ಚೆನ್ನಬಸವಸ್ವಾಮಿಗಳ ಗದ್ದುಗೆ ಹಾಗೂ ಶಿವಯೋಗ ಪೀಠಗಳೂ, ದಕ್ಷಿಣ ಭಾಗದಲ್ಲಿ ದಾಸೋಹ ಮಠವೂ, ಮಂಟಪಗಳೂ ಮತ್ತು ಗೋಶಾಲೆಯೂ ಉತ್ತರ ಭಾಗದಲ್ಲಿ ಸ್ವಾಮಿಗಳ ದರ್ಶನ ಮಂಟಪವೂ, ಯಾತ್ರಿಕರ ವಸತಿ ಗೃಹಗಳೂ ಮತ್ತು ಪಶ್ಚಿಮ ಭಾಗದಲ್ಲಿ ಮಠದ ಶಿವಪೂಜಾ ಗೃಹ, ಪಾಕಶಾಲೆ ಮತ್ತು ಮಹಾದ್ವಾರವೂ, ಮಹಾದ್ವಾರದ ಮುಂದೆ ಪಶ್ಚಿಮಾಭಿಮುಖವಾಗಿ ರಥದ ಬೀದಿಯೂ, ರಥದ ಬೀದಿಯ ಕೊನೆಯಲ್ಲಿ 'ಎದುರು ಬಸವ' ಎಂದು ಕರೆಯಲಾಗುವ ಬಸವಣ್ಣನ ಗುಡಿಯೂ ಇರುತ್ತದೆ. ಮೇಲೆ ಹೇಳಿದ ಗೋಶಾಲೆಯ ಹತ್ತಿರ ಶಿವಯೋಗ ಪೀಠಕ್ಕೆ ಹಿಂಬದಿಯಲ್ಲಿ ಎರಡು ಶಿಲಾ ಶಾಸನಗಳು ಇರುತ್ತವೆ. ಇವುಗಳಲ್ಲಿ ಒಂದು ನಾಗರಲಿಪಿಯಲ್ಲೂ ಇನ್ನೊಂದು ಕನ್ನಡ ಲಿಪಿಯಲ್ಲೂ ಇರುತ್ತದೆ. ಇವುಗಳ ಭಾಷೆ, ಪಾಠ ಮತ್ತು ವಿಷಯಗಳನ್ನು ಸಂಶೋಧಿಸಬೇಕಾಗಿದೆ. ಹಿಂದೆ ಈ ಕ್ಷೇತ್ರದಲ್ಲಿ ನಾರದ ಮಹರ್ಷಿಯು ತಪಸ್ಸು ಮಾಡಿದ ದೆಸೆಯಿಂದ ಈ ಕ್ಷೇತ್ರಕ್ಕೆ ನಾರದಗಡ್ಡೆ ಕ್ಷೇತ್ರವೆಂಬ ಹೆಸರು ಬಂದಿರುತ್ತದೆ.

ಶ್ರೀ ನಾರದಗಡ್ಡೆ ಕ್ಷೇತ್ರಕ್ಕೂ ಎರವಕೊಂಡ ಗವಿಮಠದ ಸಂಸ್ಥಾನಕ್ಕೂ ಪುರಾತನ ಸಂಬಂಧವಿದೆ. ಈ ಎರಡು ಸ್ಥಳಗಳಿಗೆ ಮೂಲ ಯಾದವಗಿರಿ ಶೂನ್ಯ ಪೀಠದವರು.

ಉರವಕೊಂಡ ಶೂನ್ಯ ಪೀಠಕ್ಕೆ ಅಧಿಪತಿಗಳಾಗುವವರು ಶ್ರೀ ನಾರದಗಡ್ಡೆ ಕ್ಷೇತ್ರದ ಮಠದಿಂದಲೇ ಹೋಗಬೇಕೆಂದು ಸಂಪ್ರದಾಯವಿದೆ. ಫಾಲ್ಗುಣ ಪಂಚಮಿಗೆ ನಾರದಗಡ್ಡೆ ಜಾತ್ರೆ, ಇಲ್ಲಿಯ ತೇರಿನ ಧ್ವಜಗಳನ್ನು ಒಯ್ದು ಫಾಲ್ಗುಣ ಶುದ್ಧ ದಶಮಿಯೆಂದು ನಡೆಯುವ ಉರವಕೊಂಡದ ಜಾತ್ರೆಯಲ್ಲಿ ಎಳೆಯುವ ತೇರಿಗೆ ಹಚ್ಚುತ್ತಾರೆ. ಈ ಸಂಪ್ರದಾಯಗಳು ಇಂದಿಗೂ ಜೀವಂತವಾಗಿವೆ. ಪ್ರಕೃತ ಉರವಕೊಂಡ ಸಂಸ್ಥಾನಾಧಿಪತಿಗಳಾದ ಶ್ರೀ ಶ್ರೀ ಕರಿಬಸವರಾಜೇಂದ್ರ ಮಹಾಸ್ವಾಮಿಗಳು ಕರುಣೆಗಳು, ದಯಾಪರರು, ಕನ್ನಡ ನಾಡಿನ ಏಕೀಕರಣಕ್ಕಾಗಿ ದುಡಿದ ಮಹಾ ಮಹಿಮರು. ಅವರು ಕೃಪೆಯಿಟ್ಟು ಶ್ರೀ ನಾರದಗಡ್ಡೆ ಕ್ಷೇತ್ರಕ್ಕೆ ಎರಡು ವರುಷಗಳ ಹಿಂದೆ ಶ್ರೀ ಚೆನ್ನಬಸವಸ್ವಾಮಿಗಳನ್ನು ಅಧಿಪತಿಗಳನ್ನಾಗಿ ಮಾಡಿ ಕಳಿಸಿದರು. ಶ್ರೀ ಚೆನ್ನಬಸವಸ್ವಾಮಿಗಳು ಬಂದಂದಿನಿಂದ ನಾರದಗಡ್ಡೆಯ ಹೆಸರು ಅಖಿಲ ಕರ್ನಾಟಕದ ತುಂಬ ಹರಡಿದೆ.

ಶ್ರೀ ನಾರದಗಡ್ಡೆ ಕ್ಷೇತ್ರಕ್ಕೆ ಸಂಬಂಧಿಸಿದ ಮಠವೊಂದು ರಾಯಚೂರಿನಲ್ಲಿದೆ. ಇದಕ್ಕೆ ನಾರದಗಡ್ಡೆ ಮಠವೆಂದೂ ಕರೆಯುತ್ತಾರೆ.

"ನಾರದ ಮಹಾಋಷಿ ಕೃಷ್ಣವೇಣಿಯ ನಡುವೆ
ರಾರಾಜಿಸುವ ಕುರುವದಲ್ಲುಗ್ರ ತಪಗೆಯ್ದು
ಮಾರನೊಲವ ಪಡೆದಾ ಕ್ಷೇತ್ರವೆಸೆದುದುಂನಾರದ ಗಡ್ಡೆಯು ಮೆನುತಲಿ

ಚಾರು ಜಂಗಮ ಮೂರ್ತಿಯಲ್ಲೋರ್ವ ನೆಲೆಸಿಸಲೆ
ಭೂರಿಜನರಿಂ ಪೂಜೆಗೊಳುತಿರುತಲೊಂದು
ಧೀರ ವ್ಯಾಘ್ರಾಸನದ ಮೇಳೆ ಕುಳಿತಾನದಿಯ ದಾಂಟದಂ ಜಗಪೊಳಗಲೂ

(ನಾ.ಕ್ಷೆ.ದ.ಸ್ವಮಾ.ರಾ., ಪು.೮)

೧೨ನೇ ಶತಮಾನದಲ್ಲಿ ಸಕಲ ಜೀವರಾಶಿಗಳಿಗೆ ಲೇಸನ್ನೇ ಬಯಸುವ ಕಲ್ಯಾಣದ ಬಸವಾದಿ ಶರಣರ ಧಾರ್ಮಿಕ ಕ್ರಾಂತಿಯು ಜನಮನವನ್ನು ಆಕರ್ಷಿಸಿತು; ಕಲಚೂರರು ಪತನವಾದ ನಂತರ ಓರಂಗಲ್ಲು ಕಾಕತೀಯ ಅರಸರನ್ನು ಆಶ್ರಯಿಸಿತು; ಮುಂದೆ ಒಂದೆರಡು ಶತಮಾನ ಬೂದಿಮುಚ್ಚಿದ ಕೆಂಡದೋಪಾದಿಯಲ್ಲಿದ್ದು, ಈ ಧಾರ್ಮಿಕ ಆಂದೋಲನವು ವಿಜಯನಗರದ ಸಂಗಮವಂಶದವರ ಕಾಲಕ್ಕೆ ಸುವರ್ಣ ಯುಗವನ್ನು ಕಂಡಿತು. ೧೫ನೆಯ ಶತಮಾನದ ಕೊನೆಯ ಭಾಗದಲ್ಲಿ ಅವತರಿಸಿದ ಮಹಾಮಹಿಮರಾದ ಎಡೆಯೂರ ಶ್ರೀ ಮನ್ನಿರಂಜನ ಜಗದ್ಗುರು ಶಿದ್ದಲಿಂಗೇಶ್ವರರ ಶಿವಯೋಗ ತಪಸ್ಸಾಮ್ರಾಜ್ಯದಲ್ಲಿ ನಿರಕ್ಷರದ ಬೋಳ ಬಸವೇಶ್ವರ ಸ್ವಾಮಿಗಳವರ ಸಂಚಾರ ಪ್ರಚಾರದ ಪ್ರಭಾವದಲ್ಲಿ ಕರ್ನಾಟಕ, ಆಂದ್ರ, ದ್ರಾವಿಡ(ತಮಿಳುನಾಡು) ಪ್ರದೇಶದಲ್ಲಿ ವೀರಶೈವ ಧರ್ಮವು ವಿಜಯನಗರ ಸಾಮ್ರಾಜ್ಯ ಹಾಗೂ ಕೆಳದಿ, ಇಕ್ಕೇರಿ, ಬಿದನೂರು ಅರಸರ ನಾಡಿನಲ್ಲಿ ತಲೆಯೆತ್ತಿ ನಿಂತಿತು. ವೀರಶೈವ ಧರ್ಮ ಪ್ರಚಾರದ ಫಲವಾಗಿ ಭಾರತದ ಪ್ರಜೆಗಳು ಧಾರ್ಮಿಕ ಸ್ವಾತಂತ್ರ್ಯ ಪಡೆದು, ಸಾಮಾಜಿಕ ಅನ್ಯಾಯಗಳಿಂದ ಪಾರಾಗಿ ಕಾರ್ಯನಿರತರಾಗಿ ರಾಷ್ಟ್ರದ ಉತ್ಪಾದನ ಶಕ್ತಿಯನ್ನು ಅಧಿಕಗೊಳಿಸಲು ಸನ್ನದ್ಧರಾದರು. ದಕ್ಷಿಣ ಭಾರತದಂತೆ ಉತ್ತರ ಭಾರತದಲ್ಲಿಯೂ ಸಹ ಕೆಳದಿ, ಬಿದನೂರು ಮಠಮಾನ್ಯಗಳು ನಿರ್ಮಾಣವಾದುದು ಕಂಡುಬರುತ್ತಿದೆ. ಆಧ್ಯಾತ್ಮ ವಿದ್ಯಾ ಶಿವಾನುಭವ ಶಾಸ್ತ್ರಾಭ್ಯಾಸದ ಕೇಂದ್ರಗಳಾಗಿ ಮಠಗಳೂ ಅನೇಕ ಕಡೆಗಳಲ್ಲಿ ಪ್ರಸಿದ್ಧಿಗೆ ಬಂದವು. ಬರಬರುತ್ತಾ ನ್ಯಾಯ ನಿರ್ಣಯಿಸುವ ಸ್ಥಾನಮಾನಗಳನ್ನು ಹೊಂದಿದವು. ಅದರಿಂದಲೇ ಮಠಾಧಿಪತಿಗಳಿಗೆ ಈ ನಾಡು ಅಷ್ಟೊಂದು ಘನತೆ, ಗೌರವ, ರಾಜಮನ್ನಣೆ ಉಂಬಳಿಗಳನ್ನು ಕೊಟ್ಟಿರುವುದು ಐತಿಹಾಸಿಕದ ಪುಟಗಳೂ ಹೇಳುತ್ತಿವೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ನಾರದಗಡ್ಡೆಯ ಕ್ಷೇತ್ರವನ್ನು ಮತ್ತು ಅದಕ್ಕೆ ಅಭಿನ್ನಾತ್ಮವಾಗಿರುವ ಯಾದವಗಿರಿ ಶೂನ್ಯಪೀಠಾಧಿಪರಾದ ಶಿವಾನುಭವ ಚರ ಚಕ್ರವರ್ತಿ ಉರುಗಾದ್ರಿ ಗವಿಮಠ ಮಹಾ ಸಂಸ್ಥಾನಾಧಿಪರ ನಿರಂಜನ ವಂಶಾವಳಿಯನ್ನು ಹಾಸುಹೊಕ್ಕಾಗಿ ಗಮನಿಸದೆ ಹೋದರೆ, ಸುಕ್ಷೇತ್ರ ನಾರದಗಡ್ಡೆಯ ಇತಿಹಾಸ ಸಂಪೂರ್ಣವಾಗಲಾರದು. ಒಂದು ಕಡೆ ನಿಜಾಮ ಶಾಹಿ, ಅದರ ಜೊತೆಗೆ ಇಂಗ್ಲೀಷ್ ದೊರೆಗಳ ವಿನೂತನ ಪ್ರಭಾವ, ಕಳೆಗುಂದುತ್ತಿದ್ದ ವಿಜಯನಗರದ ಸಂಸ್ಕೃತಿ–ಇವುಗಳ ಮಧ್ಯದಲ್ಲಿ ವಿರಾಜಮಾನವಾಗಿ ಅಭ್ಯುದಯ ಹೊಂದುತ್ತಿದ್ದ ಯಾದವಗಿರಿ

ಪೀಠಾಧಿಪರ ಧಾರ್ಮಿಕ ಧೋರಣೆಯಿಂದ ಈ ಮಠದ ಪ್ರಭಾವಕ್ಕೊಳಗಾದ ಜನತೆಯು ಧೈರ್ಯವಾಗಿ ಮುಂದುವರಿಯಲು ರಾಜಕೀಯವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಈ ಮಠವು ಯಾವಾವ ಕೊಡಿಗೆಯನ್ನಿತ್ತಿರುವುದೆಂಬುದನ್ನು ಇಲ್ಲಿ ಅತಿ ಸಂಕ್ಷಿಪ್ತವಾಗಿ ವಿವೇಚಿಸುತ್ತೇನೆ.

**ಯಾದವಗಿರಿ ಶೂನ್ಯ ಪೀಠಾಧಿಪರು.**

ಕಲ್ಯಾಣ ಪಟ್ಟಣದ ಮಹಾಮನೆಯಲ್ಲಿ ಸ್ಥಾಪಿಸಿದ ಶೂನ್ಯ ಸಿಂಹಾಸನದ ನಿರಂಜನವಂಶ ರತ್ನ ಮಾಲಿಕೆಯಲ್ಲಿ ಎಡೆಯೂರು ಶ್ರೀಮನ್ನಿರಂಜನ ತೋಂಟದ ಸಿದ್ಧಲಿಂಗೇಶ್ವರ ಶಿವಯೋಗಿಗಳ ಬಳಿವಿಡಿದು, ಶಿವಾನುಭವದ ಚರವರ್ಯ ಶ್ರೀ ಗುರುಸಿದ್ಧ ಸ್ವಾಮಿಗಳು ಈಗಿನ ಕರ್ನೂಲು ಜಿಲ್ಲೆಯಲ್ಲಿ ಪ್ರಸಿದ್ಧ ಪಟ್ಟಣವೂ ವ್ಯಾಪಾರೀ ಕೇಂದ್ರವೂ ಆಗಿರುವ ಆದವಾನಿಯಲ್ಲಿ ದೇಶಪಾಲಕರಾದ ಯದುವೀರರ ಇಚ್ಛೆಯಂತೆ ಒಂದು ಮಠವನ್ನು ನಿರ್ಮಿಸಿ ಅದನ್ನು ಕೇಂದ್ರವನ್ನು ಮಾಡಿಕೊಂಡು "ಯಾದವ ಗಿರಿ ಶೂನ್ಯ ಪೀಠ" ಸ್ಥಾಪನೆಗೆ ಕಾರಣ ಕರ್ತೃಗಳಾದರು. ಅವರು ಗದಗ ತಾಲೂಕು ಡಂಬಳ ಸಂಸ್ಥಾನ ಮಠಾಧೀಶರಾದ ಶ್ರೀ ಅರ್ಧನಾರೀಶ್ವರ ಸ್ವಾಮಿಗಳ(ಕ್ರಿ.ಶ.೧೬೭೫–೧೭೨೫) ಸಮಕಾಲೀನರು. ಯಾದವಗಿರಿ ಮುಕ್ತಿಗದ್ದಿಗೆ ಅಲಂಕರಿಸಿದ ಪ್ರಥಮರು ಅವರ ಕರಕಮಲ ಸಂಜಾತರಾದ ನಿರ್ಮಾಯ ಚೆನ್ನಬಸವೇಶ್ವರ ಸ್ವಾಮಿಗಳು ಮಹಾಮಹಿಮಾನ್ವಿತರಾಗಿ ಸಂಚಾರ ಮಾಡುತ್ತಾ ನಾರದ ಕ್ಷೇತ್ರವೆನಿಸಿದ ಕರ್ನಿಕಾಕುಂಡಕ್ಕೆ ಆಗಮಿಸಿ ತುಂಬಿ ಹರಿಯುತ್ತಿದ್ದ ಕೃಷ್ಣವೇಣಿ ನದಿಯನ್ನು ವ್ಯಾಘ್ರಾಸನದ ಮೇಲಿನಿಂದ ದಾಟಲು ಅವರನ್ನು ಭಕ್ತಿ ಕೋಟಿಯು "ಗೆಡ್ಡೆ ಸ್ವಾಮಿ" ಎಂದು ಕರೆಯಲು ಪ್ರಾರಂಭಿಸಿದರು. ಅವರನ್ನೇ ಕುರಿತು ಗುರುರಾಜ ಚಾರಿತ್ರಕಾರ ಹೂಲಿಯ ಪಂಚವಣ್ಣಿಗೆ ಸಿದ್ಧನಂಜೇಶನು ತನ್ನ ಕಾವ್ಯದಲ್ಲಿ ಉಲ್ಲೇಖಿಸಿ "ಶಿವಯೋಗಿ ಸುಸಮಾಧಿಯೊಳು ಶಿವನು ಬೆರಸಿದನೆನುತಲಿ ಖ್ಯಾತಿವಡೆದಿರ್ದು" (ನಾ.ಕ್ಷೆ.ಸ್ವಮಾ.ರಾ., ಪು.೧೦)ಎಂದು ಸ್ಮರಿಸಿರುವುದು ಇತಿಹಾಸಕ್ಕೆ ಗಣನೀಯವಾಗಿದೆ.

**ಆಧ್ಯಾತ್ಮ ತತ್ವಬೋಧ ಮೂರ್ತಿ ಬೋಳಬಸವಸ್ವಾಮಿಗಳು**

ಶ್ರೀ ಮನ್ನಿರಂಜನ ಗುರುಸಿದ್ಧ ಸ್ವಾಮಿಗಳವರ ಪರಂಪರೆಯನ್ನು ಪ್ರಬಲವಾಗಿ ಮುಂದುವರಿಸಿದ ವರೆಂದರೆ ಉಭಯ ಭಾಷಾ ಪಂಡಿತರಾದ ಶಿವಾನುಭಾವ ತರವರ್ಯ ಬೋಳ ಬಸವೇಶ್ವರ ಸ್ವಾಮಿಗಳು, ಬಸವ ಪುರಾಣಕ್ಕೆ ಮತ್ತು ಗುಬ್ಬಿ ಮಲ್ಲಣಾರ್ಯರ ಭಾವ ಚಿಂತಾರತ್ನಾ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆದು ಯಾದವಗಿರಿ ಶೂನ್ಯಪೀಠದ ಕೀರ್ತಿಯನ್ನು ಹೆಚ್ಚಿಸಿದರು.

**ಶ್ರೀ ಹಿರಿಯ ರಾಯಚೋಟ ಸ್ವಾಮಿಗಳು**

ಇವರು ಮಹಾಮಹಿಮರು. ಸುಮಾರು ಎಂಭತ್ತು ಜನ ಶಿವಾನುಭವ ಪ್ರೇಮಿಗಳಾದ ಶಿಷ್ಯರೊಡನೆ ಮಹಾಗೋಷ್ಠಿಯಲ್ಲಿದ್ದು, ಈ ತತ್ತ್ವ ಪ್ರಸಾರಕ್ಕಾಗಿ ಹನ್ನೊಂದು ಜನ ತಮ್ಮ ಪೀಠದ ಶಾಖಾ ಚರವರೇಣ್ಯರನ್ನು ಸ್ಥಾಪಿಸಿದರು. ಆದ್ದರಿಂದ "ಯಾದವಗಿರಿ ಶಿವಾನುಭವ ಚರ ಪೀಠಾಧಿಪ"

ಎಂಬ ಬಿರುದು ಹಿರಿಯ ರಾಯಚೋಟ ಸ್ವಾಮಿಗಳಿಗೆ ಬಂದಿತು. ತಮ್ಮ ತಪಸ್ಸಿನ ಪ್ರಭಾವದಿಂದ ಆದವಾನಿಯ ಖಾಜಾಮನೆತನದ ಪೀರ್ ಪೈಗಂಬರ್ ಸಾಹೇಬರಿಂದ ಪೂಜ್ಯತೆ ಪಡೆದರು. ಅವರ ನಂತರ ಪೀಠವನ್ನೇರಿದ ಶಿವಾನುಭವ ಚರವರ್ಯ ಶಿದ್ಧಲಿಂಗ ಸ್ವಾಮಿಗಳು ತಮ್ಮ ಗುರುಗಳ ಮಾರ್ಗನುವರ್ತಿಗಳಾಗಿ ಬೂದಗವಿಯಲ್ಲಿ ತಪವನ್ನು ಮಾಡಿದರು.

**ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿದ ರಾಘವಾಂಕ ಸ್ವಾಮಿಗಳು**

ಶ್ರೀ ರಾಘವಾಂಕ ಸ್ವಾಮಿಗಳು ಬಿದರುಕೋಟೆ(ಬೀದರ್)ಯಿಂದ ಆಗಮಿಸಿ ಶ್ರೀ ಸಿದ್ಧಲಿಂಗಸ್ವಾಮಿಗಳ ಕರಸಂಜಾತರಾಗಿ, ಹನ್ನೊಂದು ಜನ ಚರವರೇಣ್ಯರೊಡನೆ ದೇಶ ಸಂಚಾರವನ್ನು ಕೈಕೊಂಡು, ಶಿವಾನುಭವ ಪರತತ್ತ್ವ ಬೋಧಾಪ್ರಭಾವ ಮೂರ್ತಿಗಳಾಗಿ ಬಳ್ಳಾರಿಯ ಶ್ರೀ ಬಳ್ಳೇಶ್ವರ ದೇವಾಲಯದ ದಕ್ಷಿಣಕ್ಕೆ ಇರುವ ಮಠದಲ್ಲಿ ನೆಲೆಸಿದರು ಎಂದು ಹೇಳಲಾಗಿದೆ. ಅವರ ಶಿಷ್ಯರಾದ ಕಿರಿಯ ರಾಯಚೋಟ ಸ್ವಾಮಿಗಳವರು ತಮ್ಮ ಗುರುಗಳಿಂದ ವೈರಾಗ್ಯ ಭಾವವನ್ನು ಅಳವಡಿಸಿಕೊಂಡು, ಮಹಾಜ್ಞಾನಿಗಳಾಗಿ ಶಿಷ್ಯ ಮಂಡಳಿಗೆ ಶಿವಾನುಭವ ಶಾಸ್ತ್ರವನ್ನು ಬೋಧಿಸುತ್ತಾ, ತತ್ತ್ವ ವಿಚಾರಗಳನ್ನು ವಿಮರ್ಶೆಯ ಮೂಲಕ ತಿಳಿಸುತ್ತಾ ಇದ್ದರು ಎಂದು ಹೇಳುತ್ತಾರೆ. ಆಗ ತಮ್ಮ ಭಕ್ತ ಮಂಡಳಿಯಲ್ಲಿ ಅಗ್ರಗಣ್ಯರಾಗಿಯೂ ಭಕ್ತಿ, ಜ್ಞಾನ, ವೈರಾಗ್ಯ ದುರಂಧರರಾಗಿಯೂ ಇದ್ದ ಚೆನ್ನಬಸವ ಸ್ವಾಮಿಗಳ ಮೇಲೆ ಇವರ ಕೃಪಾ ದೃಷ್ಟಿ ಹರಿಯಿತು ಎನ್ನಬಹುದು.

**ವೈರಾಗ್ಯದ ಚೆನ್ನಬಸವ ಸ್ವಾಮಿಗಳು(ಗಡ್ಡೆತಾತ)**

ಶ್ರೀ ರಾಘವೇಂದ್ರ ಸ್ವಾಮಿಗಳು ವಿಧಾನೋಕ್ತ ಶ್ರೀ ಮನ್ನಿರಂಜನನಿರಾಭಾರಿ ಚರ ಪಟ್ಟಾಧಿಕಾರವನ್ನು ಕರುಣಿಸಿ, ಈ ತಾತನವರೇ ಗಡ್ಡೆ ತಾತನವರೆಂದೂ ಸುವಿಖ್ಯಾತರಾದರು. ತಮ್ಮ ವಿರಕ್ತತ್ವವನ್ನು ಸಾರ್ಥಕಗೊಳಿಸಿಕೊಂಡರು. ನಾರದಗಡ್ಡೆ ಕ್ಷೇತ್ರ ಪಾಲಕರಾಗಿ ಉತ್ತರೋತ್ತರ ಅಭಿವೃದ್ಧಿಗೆ ಕಾರಣಕತೃಗಳಾದರು. ಶಿವಾನುಭವ ಧರ್ಮ ರಕ್ಷಕರಾಗಿ ನಾರದಗಡ್ಡೆಯ ಉದ್ಧಾರಕ್ಕೆ ದೀಕ್ಷಾ ಬದ್ಧರಾದರು. ಮರ್ಚೇಡು ನಾಗನಾಥರಾಯರಿಗೆ, ವಿರೂಪಾಕ್ಷ ರಾಜರಿಗೆ ನಿಜಾಂ ಪ್ರಭುಗಳಿಂದ ರಾಜಕೀಯ ಮನ್ನಣೆ ದೊರಕಿಸಿಕೊಟ್ಟರು. ಇಷ್ಟ ಲಿಂಗಾಪೇಕ್ಷಿಗಳಾದ ರಾಯಚೂರು ಜಿಲ್ಲೆಯ ಅನೇಕ ಭಕ್ತಾದಿಗಳಿಗೆ ಧರ್ಮದೀಕ್ಷೆಯಿಂದ ಊರನ್ನು ಆಯಾ ಮನೆತನಗಳನ್ನು ಉದ್ಧರಿಸಿದರು. ಈ ರೀತಿಯಲ್ಲಿ ಲಿಂಗದೀಕ್ಷೆ ಪಡೆದ ಭಕ್ತಾದಿಗಳಲ್ಲಿ ಲಿಂಗದ ನಡೆ, ನುಡಿ, ನೋಟ, ಆಚಾರ, ವಿಚಾರ, ಬರಲು, ಆಯಾಯ ಊರಿನಲ್ಲಿ ಗುರುಸ್ಥಲದ ಮಠಸ್ಥರನ್ನು ವಿದ್ವಾಂಸರನ್ನು ನಿಯಮಿಸಿದರು ಎಂದು ಹೇಳಲಾಗುತ್ತಿದೆ.

ಕಲ್ಯಾಣದ ಶರಣರ ಸ್ಥಾನಗಳಾದ ಪ್ರಭುದೇವರು ಸಂಚರಿಸಿದ ಗೂಗಲ್ಲಿಗೂ, ಅಜಗಣ್ಣ ಮುಕ್ತಾಯಕ್ಕಗಳ ಸ್ಥಾನವಾದ ದೇವದುರ್ಗದ ಬಳಿಯಲ್ಲಿರುವ ಮಸರಕಲ್ಲುಗೆ ಪ್ರವಾಸ ಮಾಡಿ ಅನೇಕ ಭಕ್ತರನ್ನು ಉದ್ಧಾರ ಮಾಡಿದರು. ಹಾಗೆ ಮಾನ್ವಿ ತಾಲೂಕಿನಲ್ಲಿ ಅನೇಕ ಗೌಡರ ಮನೆತನದಲ್ಲಿ

ಮಾರ್ಗದರ್ಶನ ಮಾಡಿ ರಕ್ಷಿಸಿದರು. ಕಲ್ಲೂಗ್ಗಿರು ಪೊಲೀಸ್ ಪಾಟೀಲ ವಿರೂಪಾಕ್ಷ ಗೌಡರ ಮನೆತನವು ಬಹುಮುಖ್ಯವಾಗಿದೆ. ಅವರು ತೆರುಗ ಕರ್ನೂಲು ಜಿಲ್ಲೆಯಲ್ಲಿರುವ ಗಟ್ಟು, ಗದ್ವಾಲ, ಅಲ್ಲಮಪುರ ಮುಂತಾದ ಊರುಗಳ ಭಾಗದ ಭಕ್ತರು ಲಿಂಗದೀಕ್ಷಾ ಸಂಪನ್ನರಾಗಿ ಗಡ್ಡೆ ತಾತನವರ ಅನುಗ್ರಹದಿಂದ ಉದ್ಧಾರವಾದರು ಎಂದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ಶ್ರೀಶೈಲ ಕ್ಷೇತ್ರಕ್ಕೆ ಹೋಗಿ ತಪಸ್ಸನ್ನಾಚರಿಸಿದರು. ಹಳ್ಳಿಗೆ ಏಕರಾತ್ರಿ ಪಟ್ಟಣಕ್ಕೆ ಪಂಚರಾತ್ರಿಯ ನಿಯಮದಂತೆ ಪ್ರವಾಸ ಕೈಗೊಂಡು ಭಕ್ತರ ಭಕ್ತಿಯನ್ನು ಸ್ವೀಕರಿಸುತ್ತ ದೇಶ ಮಧ್ಯದಲ್ಲಿ ಇರುವ ಅನೇಕ ಪುಣ್ಯಕ್ಷೇತ್ರಗಳನ್ನು ಹೊಕ್ಕು, ನದಿಗಳಲ್ಲಿ ಸ್ನಾನ ಮಾಡಿ ಲಿಂಗಾರ್ಚನೆ ದಾಸೋಹ ನಡೆಸಿದರು. ಕೌಂಡಿನ್ಯಪುರದಲ್ಲಿ ಜನ್ಮವೆತ್ತಿದ ಕಾರಣಿಕ ಮಗುವನ್ನು ಕಂಡು ಸಂತೋಷಗೊಂಡು, ಆ ಬಾಲಕನ ತಾಯಿ–ತಂದೆಯರಿಗೆ ಅರುಹಿ, ಅವರಿಂದ ಒಪ್ಪಿಸಲ್ಪಟ್ಟ ಬಾಲಕನನ್ನು ಆದವಾನಿಗೆ ಕರೆತಂದು, ವಿದ್ಯಾಭ್ಯಾಸ ಮಾಡಿಸಿ ಶಿವಾನುಭವ ಶಾಸ್ತ್ರದಲ್ಲಿ ಬಲ್ಲವರನ್ನಾಗಿ ಮಾಡಿ ತಮ್ಮ ಅಧಿಕಾರವನ್ನು ವಹಿಸಿಕೊಟ್ಟು ನಾರದಗಡ್ಡೆಗೆ ಆಗಮಿಸಿ, ಹೇವಿಳಂಬಿ ಸಂವತ್ಸರದ ಕಾರ್ತಿಕ ಶು ೬ ಮಂಗಳವಾರ ಪವಾಡ ಪುರುಷರಾದರಂತೆ.

## ಸಂತೇಕೆಲ್ಲೂರಿನಲ್ಲಿ ಪುರಾಣದ ಪ್ರಭಾವ

ರಾಯಚೂರಿನ ಲಿಂಗಸೂರು ತಾಲ್ಲೂಕಿನಿಂದ ನೇರಡಗುಂಭ ೧೫ ಕಿ.ಮೀ.ದೂರದಲ್ಲಿದೆ. ನೇರಡಗುಂಭದಲ್ಲಿ ಪುರಾಣ ಸಾಂಗವಾಗಿತ್ತು. ಆ ಕಾಲಕ್ಕೆ ಶಾಂತವೀರ ಸ್ವಾಮಿಗಳ ಆಮಂತ್ರಣವನ್ನು ಸ್ವೀಕರಿಸಿ ವೈರಾಗ್ಯದ ಚೆನ್ನಬಸವ ಸ್ವಾಮಿಗಳು, ನಾಗಭೂಷಣ ಘನಮಠ ಶಿವಯೋಗಿಗಳೂ ಅನೇಕ ಹರಗುರುಚರ ಭಕ್ತ ಮಾಹೇಶ್ವರರೂ ಆಗಮಿಸಿದ್ದರು. ಒಂದು ಮಹತ್ವದ ಶಿವಾನುಭವ ತತ್ತ್ವದ ವಿವೇಚನೆ ಬಗೆಗೆ ಚರ್ಚೆ ನಡೆಯಿತು. "ಘನಮಠದಪ್ಪನವರಿಗೆ ಅಶೀರ್ವಾದ ಆಗಲಿ" ಎಂದು ಶಾಂತವೀರ ಸ್ವಾಮಿಗಳು ವೈರಾಗ್ಯದ ಗಡ್ಡೆ ತಾತನವರನ್ನು ಪ್ರಾರ್ಥಿಸಿದರಂತೆ. ಮಾತಿಗೆ ಮಾತು ಬಂದು, "ಇದರ ಇತ್ಯರ್ಥ ಪರಮಾತ್ಮನಲ್ಲಿ ಆದೀತು ಶಾಂತ ನಿರಪ್ಪಾ, ಇದಕ್ಕೆ ನೀನೇ ಸಾಕ್ಷಿ" ಎಂದು ಗಡ್ಡೆತಾತನವರು ಅಪ್ಪಣೆ ಮಾಡಿದರು. ಮುಂದೆ ಸಂತೇಕೆಲ್ಲೂರಿನಲ್ಲಿ ಪುರಾಣ ನಡೆದ ಪ್ರಸಂಗದಲ್ಲಿ ವೈರಾಗ್ಯದ ಚೆನ್ನಬಸವತಾತರೂ ನಾರದಗಡ್ಡೆಯಲ್ಲಿ ಲಿಂಗದೊಳಗಾದರಂತೆ ಎಂಬ ವಾರ್ತೆ ತಿಳಿದ ಕೂಡಲೇ ನೇರಡಗುಂಭದಲ್ಲಿ ಶಾಂತವೀರಸ್ವಾಮಿಗಳು, ಲಿಂಗದೊಳು ಬೆರೆತರಂತೆ. ಈ ಘಟನೆಯನ್ನು ಕೇಳುತ್ತಲೇ ಘನಮಠದ ಶಿವಯೋಗಿಗಳು ಸಂತೇಕೆಲ್ಲೂರಿನಲ್ಲಿ ಲಿಂಗದೊಳು ಬೆರೆತರಂತೆ. ಈ ಮೂವರು ತಾತನವರು ಕೈಲಾಸದಲ್ಲಿ ಸೇರಿ ಶಿವಾನುಭವತತ್ತ್ವದ ನಿರ್ಣಯವನ್ನು ಪರಮಾತ್ಮನ ಸನ್ನಿಧಿಯಲ್ಲಿ ಮಾಡಿದರೆಂದು ಇಂದಿಗೂ ಹಿರಿಯರಾಡುವ ವಾಡಿಕೆ ಮಾತಾಗಿದೆ. "ಮುಂದೆ ಕವೀಶ್ವರರು ಕಲೆತು, ಎಂದು ಕಾಂಜಿ ಘನವಿರಕ್ತ ಶ್ರೀ ನಾರದಗಡ್ಡೆ ಮಂದಿರದ ಪರಮಮುಕ್ತರ"

ಎಂಬ ಪದಕಟ್ಟಿ ಗುಣಸ್ತೋತ್ರವನ್ನು ಪಾಡಿದರು. ವೈರಾಗ್ಯದ ಚೆನ್ನಬಸವತಾತನವರ ವ್ಯಕ್ತಿತ್ವ ಅಸಾಧಾರಣವಾದದ್ದು. ಅವರ ಶಿವಯೋಗ ಸಿದ್ಧಿ ನಾಡಿಗೆ ಫಲದಾಯಕವಾದದ್ದು ಎಂದು ಹೇಳಲಾಗಿದೆ.

**ಕರ್ತವ್ಯದ ಕರಿಬಸವ ಸ್ವಾಮಿಗಳು**

ಗುತ್ತಿ ಸೀಮೆಯಲ್ಲಿ ಮಹಾ ಕರ್ತವ್ಯಶಾಲಿ ಅವತರಿಸುವರೆಂಬ ಕಾಲಜ್ಞಾನ ವಚನದ ಹೇಳಿಕೆಯಂತೆ ವೈರಾಗ್ಯದ ತಾತನವರಿಂದ ಅನುಗ್ರಹ ಪಡೆದ ಕರಿಬಸವ ಸ್ವಾಮಿಗಳು ಸಂಚಾರ ಕೈಗೊಂಡರು. ಸಮಸ್ತ ಭಕ್ತರಿಂದ ಕಪ್ಪಕಾಣಿಕೆಗಳನ್ನು ಕೈಗೊಳ್ಳುತ್ತ ನೈಜಾಂ, ಕುಂಪಣಿ ಹಾಗೂ ಮೈಸೂರು ಇಲಾಖೆಗಳಲ್ಲಿ ಹಲವಾರು ನೂರು ಮಠಗಳನ್ನು ಸ್ಥಾಪಿಸಿ ಅವಕ್ಕೆ ತಕ್ಕ ಮಾನ್ಯಗಳನ್ನು ಏರ್ಪಡಿಸಿದರಂತೆ. ಪಂಪಾಕ್ಷೇತ್ರಕ್ಕೆ ಬಂದು ತೇರು ಸಾಗಿದುದನ್ನು ನೋಡಿದರು ಎಂಬ ವಾಡಿಕೆ ಇದೆ. ಫಾಲ್ಗುಣ ಶುದ್ಧ ಪಂಚಮಿ ಮಿತಿಗೆ ನಾರದಗಡ್ಡೆಯಲ್ಲಿ ತಮ್ಮ ಗುರುಗಳ ತೇರು ಸಾಗಿದ್ದುದನ್ನು ಕಂಡರು. ಆ ಬಳಿಕ ಊರವಕೊಂಡಗೆ ಹೋದರು. ಪಾಲ್ಗುಣ ಶುದ್ಧ ದಶಮಿ ಮಿತಿಗೆ ಉರುವಕೊಂಡ ಗವಿಮಠದಲ್ಲಿ ಚಂದ್ರಮೌಳೀಶ್ವರ ಉಮಾದೇವಿಯರ ರಥೋತ್ಸವವನ್ನು ಸಾಂಗಗೊಳಿಸಲು ಪ್ರಾರಂಭಿಸಿ, ಕೈವಲ್ಯ ಕಲ್ಪವಲ್ಲರಿ ಆಧ್ಯಾತ್ಮ ಸುಖ ಪ್ರಬೋಧ ಗ್ರಂಥದ ಕರ್ತೃಗಳಾದ ಬೆಂಗಳೂರು ಸರ್ಪಭೂಷಣ ಶಿವಯೋಗಿಗಳಿಗೆ ಆಶ್ರಯದಾತರಾದರು ಎಂದು ತಿಳಿಯಲಾಗಿದೆ.

ಅವರನ್ನು ಶ್ರೀಶೈಲಕ್ಕೆ ಕರೆದುಕೊಂಡು ಹೋಗಿದ್ದರು. ಮೈಸೂರು ಅರಮನೆಗೆ ಚಿತ್ತೈಸಿ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಪೂಜೆ ಕೈಗೊಂಡರು. ಮೈಸೂರಲ್ಲಿ ಅದರ ಸ್ಮಾರಕವಾಗಿ ಕಾರಂಜಿಮಠ ಸ್ಥಾಪಿಸಿದರು ಎನ್ನಲಾಗಿದೆ. ತುಮಕೂರಿನಲ್ಲಿ ಉರವಕೊಂಡ ಕರಿಬಸವ ಸ್ವಾಮಿ ಮಠ ಸ್ಥಾಪಿಸಿದರು. ಶ್ರೀ ಕರಿಬಸವಸ್ವಾಮಿಗಳವರ ನಿತ್ಯ ಲಿಂಗಾರ್ಚನೆಗಾಗಿ ಮೈಸೂರು ಮಹಾರಾಜರು ಮೊಳಕಾಲ್ಮೂರು ತಾಲೂಕು ರಾಂಪುರದ ಹೋಬಳಿಯಲ್ಲಿರುವ ಬುಡ್ಡೇನಹಳ್ಳಿ ಎಂಬ ಗ್ರಾಮವನ್ನು ಜಹಗೀರಿಯಾಗಿ ಸಲ್ಲಿಸಿದರು ಎನ್ನಲಾಗಿದೆ. ಅವರ ನಂತರ ಚೆನ್ನಬಸವ ಸ್ವಾಮಿಗಳು ಪಟ್ಟಕ್ಕೆ ಬಂದರು. ಅವರು ಕ್ರಿ.ಶ.೧೮೪೪ರಲ್ಲಿ ಲಿಂಗೈಕ್ಯರಾದರು. ಅವರ ಅನಂತರ ನಾರದ ಗಡ್ಡೆಯಲ್ಲಿದ್ದ ಕರಿಬಸವ ದೇವರಿಗೆ ನಿರಾಭಾರಿ ಚರ ಪಟ್ಟಾಧಿಕಾರ ವಹಿಸಲಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರವರ ೬೦ನೆಯ ವರ್ಧಂತಿಗೆ ಮೈಸೂರಿಗೆ ಚಿತ್ತೈಸಿ ರಾಜೋಪಚಾರ ಹೊಂದಿ ಬಂದು, ಬಳ್ಳಾರಿ ಸಕ್ಕರಿ ಕರೆಡೆಪ್ಪನವರ ಭಕ್ತಿಯನ್ನು ಸ್ವೀಕರಿಸಿದರು ಎಂದು ತಿಳಿಯಲಾಗಿದೆ.

ಇಮ್ಮಡಿ ಕರಿಬಸವ ಸ್ವಾಮಿಗಳು ಪ್ರಮೋದಾತ ಸಂವತ್ಸರದ ಜೇಷ್ಠ ಶುದ್ಧ ೧೨ ದಿನಾಂಕ ೧೦-೬-೧೮೭೦ರಲ್ಲಿ ಲಿಂಗೈಕ್ಯರಾಗಲು ಅವರ ಅಪ್ಪಣೆ ಪ್ರಕಾರ ವಿಡಸನಕಲ್ಲು ದೇಸಾಯಿ ಮಲ್ಲಪ್ಪ ದೊರೆಗಳು ಮಠ ಮಹತ್ತು ಶೆಟ್ಟಿಯ ಜವಾನ ಮುಂತಾದ ಹತ್ತು ದೈವದವರು ಶ್ರೀಮಾನ್ ನಿರಂಜನ ಶಿವಾನುಭಾವಿಗಳ ಸಹಿತ ದಿನಾಂಕ ೨೬-೬-೧೮೭೦ರಲ್ಲಿ ಯಾದವಗಿರಿ ಶೂನ್ಯ ಪೀಠದ ಉರುಗಾದ್ರಿ

ಗವಿಮಠದ ಮಹಾಸಂಸ್ಥಾನದ ಶಿವಾನುಭವ ಸೂತ್ರಾಧಿಕಾರವನ್ನು ನಾರದಗಡ್ಡೆಯ ಮಠದಲ್ಲಿ ದಾಸೋಹ ಮೂರ್ತಿಗಳಾಗಿದ್ದ ಚೆನ್ನಬಸವ ಮರಿದೇವರಿಗೆ ವಹಿಸಿಕೊಟ್ಟು, ಆದವಾನಿಯಲ್ಲಿ ಸಂತೆಕೂಡ್ಲೂರು ಎಲೆ ಮಲ್ಲಪ್ಪನವರ ಸಹಾಯದಿಂದ ಹಾಲ್ವಿಯಲ್ಲಿ ಶ್ರೀ ಮಹಾಂತ ಸ್ವಾಮಿಗಳವರಿಂದ ನೆರವೇರಿದ ಬಸವ ಪುರಾಣದ ಮುಕ್ತಾಯ ಸಮಾರಂಭದಲ್ಲಿ ಭಾಗಹಿಸಿ, ಅಲ್ಲಿಂದ ನಡೆದು ಸೊಲ್ಲಾಪುರದ ಶ್ರೀಮಂತವಾರದ ಅಪ್ಪಾಸಾಹೇಬರ ಭಕ್ತಿಯನ್ನು ಕೈಗೊಂಡು ಚಿತ್ತೈಸಿ ಕಿರೀಟಮಠದಲ್ಲಿ ಬಿಡಾರ ಮಾಡಿ, ಮುಂದೆ ಉರವಕೊಂಡಗೆ ದೇಹಾಲಸ್ಯದಿಂದ ಬಂದು ಕೆಲವು ಕಾಲದಲ್ಲಿ ಕೆಂಪು ಕಣ್ಣಿನ ಕರಿಬಸವ ಸ್ವಾಮಿಗಳೆಂಬುವರಿಗೆ ತಮ್ಮ ಅಧಿಕಾರವನ್ನು ದಯಪಾಲಿಸಿದರು. ಅವರು ಉರುಗಾದ್ರಿ ಗವಿಮಠ ಮಹಾ ಸಂಸ್ಥಾನದ ಅಂತಃಸ್ತನ್ನು ಕಾಪಾಡಲು ಅನೇಕ ಮಹತ್ವದ ಮಾರ್ಪಾಟುಗಳನ್ನು ಮಾಡಿ ಬೆಳ್ಳಿ ಬಂಗಾರದ ಆಭರಣಗಳನ್ನು ಮಾಡಿಸಿದರು ಎಂದು ಹೇಳಲಾಗಿದೆ. ಮಹಾ ಶಾಂತಿ ಸಂಪನ್ನರಾದ ಚೆನ್ನಬಸವ ಸ್ವಾಮಿಗಳಿಗೆ ಅಧಿಕಾರ ಕೊಟ್ಟು ಬಯಲಾದರು. ೨೮ ವರ್ಷಗಳ ಕಾಲ ಅಧಿಕಾರ ನಡೆಯಿಸಿ ಮುಂದೆ ಕರಿಬಸವ ಸ್ವಾಮಿಗಳಿಗೆ ಪಟ್ಟ ಕಟ್ಟಿ ಶ್ರಾವಣ ಮಾಸದ ಪೂಜೆ, ರಥೋತ್ಸವ, ಮಠ ಮಾನ್ಯಗಳಿಗೆ ವ್ಯವಸ್ಥೆ ನೋಡಿಕೊಳ್ಳುತ್ತಾ ಮುಂದೆ ಈ ಮಠಾಧಿಕಾರಕ್ಕೆ ನಾರದಗಡ್ಡೆ ವೈರಾಗ್ಯ ಚೆನ್ನಬಸವ ತಾತನವರಂತೆ ವೈರಾಗ್ಯ ಶೀಲರಾಗಿ ದಾಸೋಹ ಸೇವೆ ಸಲ್ಲಿಸುತ್ತಿರುವ ಚೆನ್ನಬಸವ ಸ್ವಾಮಿಗಳವರನ್ನು ಕರೆತಂದು, ವಿಶ್ವಾವಾಸು ಸಂವತ್ಸರದ ಜೇಷ್ಠ ಮಾಸದಲ್ಲಿ ಉರುಗಾದ್ರಿ ಗವಿಮಠ ಮಹಾಸಂಸ್ಥಾನಾಧಿಕಾರವನ್ನು ಅವರಿಗೆ ವಹಿಸಿಕೊಟ್ಟರು. ಅವರು ಪರಮ ದಾಸೋಹ ಮೂರ್ತಿಗಳಾಗಿ ಸಮಸ್ತ ಮತಧರ್ಮದವರನ್ನು ಪ್ರೀತಿಯಿಂದ ಕಾಪಾಡುತ್ತಾ ವಿದ್ಯಾಪ್ರಸಾರಕ್ಕಾಗಿ ಸರಕಾರಕ್ಕೆ ಧನಸಹಾಯ ಮಾಡಿ ಯಾದವಗಿರಿ ಶೂನ್ಯ ಪೀಠಾಧಿಪರ ನಿರಂಜನ ಪರಂಪರೆಯಲ್ಲಿ ಭೂಷಣ ಪ್ರಾಯರಾದವರು. ಅವರೇ ಉರವಕೊಂಡ ಗವಿಮಠ ಮಹಾಸಂಸ್ಥಾನದ ಕೀರ್ತಿ ಪತಾಕೆಯನ್ನು ಹಾರಿಸಿದವರು, ಜಗದ್ಗುರು ಪೀಠದಲ್ಲಿ ಪರಿಶೋಧಿಸುವ ಕೊಡಗಿನ ವೀರರಾಜೇಂದ್ರ ಸ್ವಾಮಿಗಳೆಂಬು ವವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಚುನಾಯಿಸಿಕೊಂಡು ಕರಿಬಸವ ರಾಜೇಂದ್ರರೆಂಬ ನಾಮಾಂಕಿತವಿಟ್ಟು ಅನುಗ್ರಹಿಸಿದರು.

ಯುಗಧರ್ಮಕ್ಕನುಸಾರವಾಗಿ ನಿತ್ಯ ನೈಮಿತ್ತಿಕ ವಿಧಿವಿಧಾನಗಳು ನಿರಾಂತಕವಾಗಿ ನೆರವೇರಲು ಏರ್ಪಡಿಸಿ ಬೆಂಗಳೂರು ಕುಮಾರ ಪಾರ್ಕಿನಲ್ಲಿ ತಮ್ಮದೇ ಆದ(Socio spiritual center) ವಿಶ್ವವಿಖ್ಯಾತ ಆಧ್ಯಾತ್ಮಿಕ ಕೇಂದ್ರವನ್ನು ಸ್ಥಾಪಿಸಿ ಆಂಧ್ರ, ಕರ್ನಾಟಕ, ತಮಿಳು ನಾಡಿನವರಿಗಷ್ಟೇ ಅಲ್ಲದೆ ಮಹಾರಾಷ್ಟ್ರದ ಭಕ್ತಾದಿಗಳಿಗೂ ಬಹುಪ್ರಿಯರಾಗಿದ್ದಾರೆ. ಸತತೋತ್ಸಾಹಿಗಳಾದ ಕರಿಬಸವ ರಾಜೇಂದ್ರ ತಾತನವರು ಕವಿ, ಗಮಕಿವಾದಿ, ವಾಗ್ಮಿಗಳಿಗೆ ಪೋಷಕರಾಗಿಯೂ ಕಾಲೋಚಿತವರಿತು ರಾಜಕಾರ್ಯ ಧ್ಯೇಯ ಧೋರಣೆಗಳನ್ನು ಸಮರ್ಥ ರೀತಿ ನಿರೂಪಿಸಬಲ್ಲ ಜಗದ್ಗುರುಗಳಾಗಿ ಹೋಗಿದ್ದಾರೆ. ಭಕ್ತಾದಿಗಳ ಉತ್ಕಟ ಅಪೇಕ್ಷೆಯನ್ನು ಬಲ್ಲವರಾಗಿ ಮುಂಧೋರಣೆಯಿಂದ ನಾರದಗಡ್ಡೆಯ ಮಹಾಕ್ಷೇತ್ರಕ್ಕೆ ನಿರಂತರ

ಒಪ್ಪುವ ಶಿವಾನುಭವ ಚರ ಮೂರ್ತಿಗಳನ್ನು ಸರ್ವ ಸಮ್ಮತವಾಗಿ ಚುನಾಯಿಸಿದರು. ಬಳ್ಳಾರಿ ತಾಲೂಕು ಕೊರ್ಲಗುಂದಿ ದೊರೆಮಠದ ಶ್ರೀ ಬಸವರಾಜ ದೇವರ ಮಹಾಮಹಿಮಾ ಕಟ್ಟಿ ಬಸವೇಶ್ವರನ ಕಾರುಣ್ಯದ ಶಿಶು, ಅವರೇ ತಮ್ಮ ಉತ್ತರಾಧಿಕಾರಿಗಳೆಂದು ಘೋಷಣೆ ಪತ್ರಿಕೆಗಳ ಮೂಲಕ ಮಾಡಿದರು ಎನ್ನಲಾಗಿದೆ.

ಶ್ರೀ ಬಸವರಾಜ ದೇವರು ಬೆಳಗಾವಿ ಜಿಲ್ಲಾ ಸಾವಳಗಿ ಸಂಸ್ಥಾನ ಮಠಧಿಪತಿಗಳಾದ ಶ್ರೀ ನಿ.ಸ.ಸಿದ್ಧರಾಮಸ್ವಾಮಿಗಳವರ ಮಾರ್ಗದರ್ಶನದಲ್ಲಿ ಉರುಗಾದ್ರಿ ಜಗದ್ಗುರು ಮಹಾಸನ್ನಿಧಿಯವರ ಸಮ್ಮತಿ ಪಡೆದು, ತ್ರಿವಿಧ ದಾಸೋಹ ಮೂರ್ತಿಗಳಾದ ಶ್ರೀ ನಿ.ಪಾ.ಮೃತ್ಯುಂಜಯ ಅಪ್ಪಗಳವರ ಕಾರಣ್ಯದ ಶಿಶು ಪರಮಪೂಜ್ಯ ಮಹಾಂತ ಶಿವಯೋಗಿಗಳವರ ಅನುಗ್ರಹ ಪಡೆದರು. ಅವರ ಕರಕಮಲ ಸಂಜಾತರೆನಿಸಿ ಧಾರವಾಡದಲ್ಲಿ ವೈಭವ ಪೂರ್ಣವಾಗಿ ಸಮಾರಂಭ ನೆರವೇರಿಸಿದರು. ದಿನಾಂಕ ೨೫-೨-೧೯೬೬ ನೆಯ ಶುಕ್ರವಾರದ ಶಾಲಿವಾಹನ ಶಕೆ ೧೮೮೭ನೆಯ ವಿಶ್ವಾವಾಸು ಸಂವತ್ಸರದ ಫಾಲ್ಗುಣ ಶುದ್ಧ ಪಂಚಮಿಯ ದಿನ ನಾರದಗಡ್ಡೆಯ ಗದ್ದಿಗೆಯ ಪರಂಪರೆಯಂತೆ ಉರವಕೊಂಡ ಗವಿಮಠದ ಪ್ರತಿನಿಧಿಯಾಗಿ ಶಿವಾನುಭವ ಚರಮೂರ್ತಿ ಶ್ರೀ ಚೆನ್ನಬಸವ ಸ್ವಾಮಿಗಳೆಂಬ ನಾಮಾಂಕಿತದಿಂದ ಅಧಿಕಾರ ಅನುಗ್ರಹ ಪಡೆದದ್ದು ಚಿರಸ್ಮರಣೀಯವಾಗಿದೆ. ಇವರೇ ಕೊನೆಯ ಪೀಠಧಿಪತಿಗಳು ಎಂದು ಹೇಳಲಾಗಿದೆ. ಈಗ ಸರಿಯಾದ ಸ್ವಾಮಿಗಳು ಸಿಗದ ಕಾರಣದಿಂದ ಸರಕಾರವೇ ಒಬ್ಬ ಪೂಜಾರಿಯನ್ನು ನೇಮಸಿ, ಅವರಿಗೆ ವಾರ್ಷಿಕ ತಲಾ ಆದಾಯವನ್ನು ನೀಡುತ್ತದೆ ಎಂದು ಅಲ್ಲಿನ ಹಿರಿಯ ವ್ಯಕ್ತಿಗಳಿಂದ ತಿಳಿದುಬರುತ್ತದೆ.

**ಶ್ರೀ ಚೆನ್ನಬಸವ ಸ್ವಾಮಿಗಳ ಪವಾಡಗಳು**

ಇಂದಿಗೆ ನಾಲ್ಕು ನೂರು ವರ್ಷಗಳ ಹಿಂದೆ ವೈರಾಗ್ಯನಿಧಿ ಕರ್ತೃ ಶ್ರೀ ಚೆನ್ನಬಸವಸ್ವಾಮಿಗಳು ಯಾದವಗಿರಿ ಶೂನ್ಯ ಪೀಠದ ಅಧಿಕಾರವನ್ನು ಕರ್ತೃ ಶ್ರೀ ಕರಿಬಸವ ಸ್ವಾಮಿಗಳಿಗೆ ವಹಿಸಿಕೊಟ್ಟು ತಾವು ದೇಶ ಸಂಚಾರವನ್ನು ಕೈಗೊಂಡು ಅನೇಕ ದೇಶಗಳಲ್ಲಿ ಸಂಚರಿಸಿ ಕೊನೆಗೆ ಈ ನಾರದಗಡ್ಡೆ ಕ್ಷೇತ್ರಕ್ಕೆ ಬಂದು ಇಲ್ಲಿ ನೆಲಸಿದರು.

ಶ್ರೀಗಳ ತಪಃ ಪ್ರಭಾವವನ್ನು, ಅವರ ಕೃಪಾ ಕರುಣೆಯನ್ನು ಅರಿತು ಈ ಕ್ಷೇತ್ರದ ಸುತ್ತಮುತ್ತಣ ಆಂಧ್ರ ಹಾಗೂ ಕರ್ನಾಟಕ ರಾಜ್ಯಗಳ ಜನತೆ ಮೇಲಿಂದ ಮೇಲೆ ಈ ಕ್ಷೇತ್ರಕ್ಕೆ ಬಂದು ಸ್ವಾಮಿಗಳ ದರ್ಶನಾಶೀರ್ವಾದಗಳನ್ನು ಪಡೆಯಲು ಪ್ರಾರಂಭಿಸಿದರು. ಶ್ರೀ ಚೆನ್ನಬಸವಸ್ವಾಮಿಗಳು ನಡೆಸಿದ ಅನೇಕ ಪವಾಡಗಳು ಇಂದಿಗೂ ಜನರ ಸವಿ ನೆನಪಿನಲ್ಲಿ ಇದ್ದು ಈ ಕ್ಷೇತ್ರದ ಪಾವಿತ್ರತೆಯನ್ನು ಪ್ರಸನ್ನತೆಯನ್ನು ಪ್ರಖ್ಯಾತಿಯನ್ನು ಹೆಚ್ಚಿಸಿರುತ್ತದೆ. ಶ್ರೀಗಳು ನಡೆಸಿದ ಪವಾಡಗಳಲ್ಲಿ ಕೆಲವನ್ನು ಇಲ್ಲಿ ತಿಳಿಯಲಾಗಿದೆ.

### ಕಂಬಳಿಯೇ ಹರಿಗೋಲು

ಒಮ್ಮೆ ಶ್ರೀ ಸ್ವಾಮಿಗಳು ಈ ಕ್ಷೇತ್ರದಿಂದ ಹೊರಗೆ ಸಂಚಾರ ಹೊರಟು, ಮರಳಿ ಈ ಕ್ಷೇತ್ರಕ್ಕೆ ಬರುವಾಗ ಕೃಷ್ಣಾ–ನದಿಯು ತುಂಬಿ ಹರಿಯುತ್ತಿತ್ತು. ಸ್ವಾಮಿಗಳು ನದಿಯನ್ನು ದಾಟಲು ಹರಿಗೋಲನ್ನು ಹಾಕಿದರೆಂದು ಶ್ರೀ ಸ್ವಾಮಿಗಳು ಬೆಸ್ತರಿಗೆ ಹೇಳಲು ಅವರು ನದಿಯ ನೀರು ಬಹಳವಾಗಿ ಹೆಚ್ಚಿರುವುದರಿಂದ ನದಿಯನ್ನು ದಾಟಲು ಈ ದಿನ ಸಾಧ್ಯವಿಲ್ಲವೆಂದೂ ಮರುದಿನ ಸಾಧ್ಯವಾಗ ಬಹುದೆಂದು ಉತ್ತರವೀಯಲು ಶ್ರೀ ಸ್ವಾಮಿಗಳು ನಕ್ಕು ಅವರ ಎದುರಿನಲ್ಲಿಯೇ ತಮ್ಮ ಕಂಬಳಿಯನ್ನು ಹರಿಯುವ ಕೃಷ್ಣ ನದಿಯ ನೀರಿನ ಮೇಲೆ ಹಾಸಿ ಅದರ ಮೇಲೆ ಕುಳಿತು ನದಿಯನ್ನು ದಾಟಿ ಶ್ರೀಕ್ಷೇತ್ರವನ್ನು ಸುರಕ್ಷಿತವಾಗಿ ಸೇರಿದರು.

ಇದನ್ನು ಕಣ್ಣಾರೆ ಕಂಡ ಬೆಸ್ತರು ಶ್ರೀ ಸ್ವಾಮಿಗಳ ಮಹಿಮೆಯನ್ನು ಕೊಂಡಾಡಿ ಅಂದಿನಿಂದ ಶ್ರೀ ಸ್ವಾಮಿಗಳ ಪರಮ ಶಿಷ್ಯರಾಗಿ ಇಂದಿಗೂ ನದಿ ಎಷ್ಟೇ ತುಂಬಿ ಹರಿದರೂ ನದಿಯನ್ನು ಯಾರೇ ದಾಟಲು ಕೇಳಿದರೂ ಮರು ಮಾತಾಡದೆ ಹರಿಗೋಲು ಹಾಕಿ ಶ್ರೀ ಕ್ಷೇತ್ರವನ್ನು ಮುಟ್ಟಿಸುವುದು ವಾಡಿಕೆಯಾಗಿದೆ.

### ಉಪ್ಪು ನೀರು ಸಿಹಿನೀರಾಗಿ ಮಾಡಿದ್ದು

ಮತ್ತೊಮ್ಮೆ ತಮ್ಮ ಸಂಚಾರದಲ್ಲಿ ಮಾನ್ವಿ ತಾಲ್ಲೂಕು ಕಸಬಾ ಕಲ್ಲೂರು ಗ್ರಾಮದಲ್ಲಿ ಬಾವಿ ನೀರು ಉಪ್ಪಾಗಿದ್ದು, ಕುಡಿಯಲು ಬಾರದಂತೆ ಆಯಿತು. ಶ್ರೀ ಸ್ವಾಮಿಗಳು ತಮ್ಮ ಅಮೃತ ಹಸ್ತದಿಂದ ಆ ಬಾವಿಯ ನೀರನ್ನು ಮುಟ್ಟಲು, ಆ ಬಾವಿಯ ನೀರು ಸಿಹಿ ನೀರಾಗಿ ಪರಿಣಮಿಸಿ ಮುಂದೆ ಆ ಹಳ್ಳಿಯ ಜನ ಆ ಬಾವಿಯ ನೀರನ್ನು ಕುಡಿಯಲು ಪ್ರಾರಂಭಿಸಿದ ಪವಾಡವೂ ಸಹ ಪ್ರಸಿದ್ಧವಾಗಿದೆ. ಈಗಲೂ ಈ ಪವಾಡದ ಬಾವಿಯನ್ನು ಜನರು ಗುರ್ತಿಸುತ್ತಾರೆ.

### ಸತ್ತ ಕಂಬಲಿ ಎತ್ತನ್ನು ಮತ್ತೆ ಬದುಕಿಸಿದರು

ತಮ್ಮ ಸಂಚಾರದಲ್ಲಿ ಹೈದರಾಬಾದನ್ನು ತಲುಪಿದಾಗ, ಸ್ವಾಮಿಗಳ ಪೂಜಾ ಸಾಮಗ್ರಿಗಳನ್ನು ಹೊತ್ತುಕೊಂಡು ಬರುತ್ತಿದ್ದ ಕಂಬಲಿ ಎತ್ತು ಸತ್ತಿತ್ತು. ಈ ವಾರ್ತೆಯನ್ನು ಕೇಳಿ ಹೈದರಾಬಾದಿನ ನವಾಬ್ ಮಹಮುದ್ದೌಲನು ಸ್ವಾಮಿಗಳ ಬಳಿಗೆ ಬಂದು ಸ್ವಾಮಿಗಳು ಪವಾಡ ಪುರುಷರೆಂದು ಕೇಳಿದ್ದೇನೆ. ತಾವು ತಮ್ಮ ಎತ್ತನ್ನೇಕೆ ಬದುಕಿಸಬಾರದು? ಎಂದು ಕಟಕಿಯನ್ನು ನುಡಿದನು. ಇದನ್ನು ಕೇಳಿ ಸ್ವಾಮಿಗಳು ತಮ್ಮ ಸತ್ತ ಎತ್ತಿನ ಶರೀರಕ್ಕೆ ಭಸ್ಮವನ್ನು ಲೇಪಿಸಿ 'ಬಸವಣ್ಣಾ ಏಳಪ್ಪ' ಎನ್ನಲು ತತ್‌ಕ್ಷಣವೇ ಎತ್ತು ಗುಟುರೆಯನ್ನು ಹಾಕಿ ಎದ್ದು ನಿಂತು ಸ್ವಾಮಿಗಳ ಸೇವೆಗೆ ಸಿದ್ಧವಾಯಿತು. ಇದನ್ನು ಕಣ್ಣಾರೆ ಕಂಡ ನವಾಬನಿಗೆ ಸ್ವಾಮಿಗಳಲ್ಲಿ ಅಪಾರ ಭಕ್ತಿ ಉಂಟಾಗಿ ಸ್ವಾಮಿಗಳನ್ನು ತನ್ನ

ಅರಮನೆಗೆ ಕರೆದುಕೊಂಡು ಹೋಗಿ ಉಪಚರಿಸಿ ಸ್ವಾಮಿಗಳ ದಾಸೋಹ ಕಾರ್ಯಕ್ಕೆ ತನ್ನ ರಾಜ್ಯದ ೪೨ ಹಳ್ಳಿಗಳಲ್ಲಿ ಉತ್ತಮವಾದ ಜಮೀನುಗಳನ್ನು ಉಂಬಳಿಯಾಗಿ ಒಪ್ಪಿಸಿದನು. ನಾರದಗಡ್ಡೆ ಮಠದ ಹೆಸರಿನಲ್ಲಿ ಹಲವಾರು ಸ್ಥಳಗಳಲ್ಲಿ ಈಗಲೂ ಇರುವ ಉಂಬಳಿ ಜಮೀನುಗಳು ಈ ಪವಾಡಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದೆ.

**ಹನುಮಂತ ದೇವರ ಕೈಂಕರ್ಯವನ್ನು ಸ್ವೀಕರಿಸಿ ಲಿಂಗಾರ್ಚನೆಯನ್ನು ಮಾಡಿದ ಪವಾಡ**

ಇನ್ನೊಂದು ಸಲ ಶ್ರೀ ಸ್ವಾಮಿಗಳು ಸಂಚಾರದಲ್ಲಿರುವಾಗ ಹಳ್ಳಿಯೊಂದರಲ್ಲಿ, ಹನುಮಂತನ ಗುಡಿಯಲ್ಲಿ ತಂಗಬೇಕಾಗಿ ಬಂತು. ಅಲ್ಲಿ ಶ್ರೀಸ್ವಾಮಿಗಳ ಲಿಂಗಪೂಜೆಗೆ ಅನುಕೂಲವಿಲ್ಲದಿರಲು, ಶ್ರೀ ಹನುಮಂತ ದೇವರೇ ಪ್ರತ್ಯಕ್ಷ ರೂಪಿನಲ್ಲಿ ಬಂದು ಶ್ರೀ ಸ್ವಾಮಿಗಳಿಗೆ ಪೂಜಾ ಸಾಮಗ್ರಿಗಳನ್ನೆಲ್ಲ ಒದಗಿಸಿಕೊಟ್ಟು, ಲಿಂಗಪೂಜೆಗೆ ಅನುವು ಮಾಡಿ, ಶ್ರೀ ಸ್ವಾಮಿಗಳಲ್ಲಿ ತನ್ನ ಕೈಂಕಾರ್ಯವನ್ನು ಸಲ್ಲಿಸಿದ ಪವಾಡವು ಇಂದಿಗೂ ಜನರಲ್ಲಿ ಮನೆ ಮಾತಾಗಿ ಪ್ರಸಿದ್ಧವಾಗಿದೆ.

**ಯೋಗ ಸಮಾಧಿ**

ಶ್ರೀ ಸ್ವಾಮಿಗಳು ಅನೇಕ ಪವಾಡಗಳನ್ನು ನಡೆಸುತ್ತ ಮುಂದೆ ಕಲ್ಯಾಣ, ಉಳಿವಿ, ಎಡೆಯೂರು, ಮಹದೇಶ್ವರ ಬೆಟ್ಟ, ಹಂಪಿ ಮೊದಲಾದ ಪುಣ್ಯಕ್ಷೇತ್ರಗಳನ್ನು ನೋಡಿಕೊಂಡು, ಮತ್ತೆ ಶ್ರೀನಾರದಗಡ್ಡೆ ಕ್ಷೇತ್ರಕ್ಕೆ ಬಂದು, ಕೆಲವು ದಿವಸಗಳ ನಂತರ ತಮ್ಮ ಇಚ್ಛೆಯಂತೆ ಕಾರ್ತಿಕ ಶುದ್ಧ ಷಷ್ಠಿ ಮಂಗಳವಾರ ಶಿವಯೋಗ ಸಮಾಧಿಯನ್ನು ಪ್ರವೇಶಿಸಲು ಸಂಕಲ್ಪಿಸಿ ಸಮಾಧಿಯನ್ನು ರಚಿಸಿ, ಸಮಾಧಿಯನ್ನು ಪ್ರವೇಶಿಸುವುದಕ್ಕೆ ಮುನ್ನ ನೆರೆದಿದ್ದ ರಾಯಚೂರು, ಗದ್ವಾಲ ಮತ್ತು ಸುತ್ತಮುತ್ತಲ ಪ್ರದೇಶಗಳ ಭಕ್ತ ಮಂಡಲಿಯನ್ನು ಉದ್ದೇಶಿಸಿ ತಾವು ಐದು ದಿವಸಗಳವರೆಗೆ ಸಮಾಧಿಯಲ್ಲಿರುವುದಾಗಿಯೂ ಅಪ್ಪರವರೆಗೆ ಯಾರು ಸಮಾಧಿಯ ಬಾಗಿಲನ್ನು ತೆರೆಯಬಾರದೆಂದೂ, ಐದು ದಿನಗಳು ಕಳೆದ ಮೇಲೆ ಕರ್ತೃ ಶ್ರೀ ಕರಿಬಸವ ಸ್ವಾಮಿಗಳು ಬಂದು ತಮಗೆ ದರ್ಶನ ಕೊಡುವರೆಂದೂ ಹೇಳಿ ಯೋಗ ಸಮಾಧಿಯಲ್ಲಿ ಕುಳಿತರು. ಆದರೆ ಭಕ್ತರು ಕುತೂಹಲದಿಂದ ಮೂರು ದಿನಗಳ ಒಳಗಾಗಿಯೇ ಸಮಾಧಿಯ ಬಾಗಿಲನ್ನು ತೆರೆದು ನೋಡಲು ನೆಲವನ್ನು ಬಿಟ್ಟು ಮೂರು ಅಡಿಗಳ ಎತ್ತರದಲ್ಲಿ ಯೋಗ ಸಮಾಧಿಯಲ್ಲಿದ್ದ ಶ್ರೀಸ್ವಾಮಿಗಳು ನೆಲಕ್ಕೆ ಕುಸಿದು ಲಿಂಗೈಕ್ಯರಾದರು ಎಂದು ಹೇಳಲಾಗುತ್ತದೆ. ಭಕ್ತರು ಪಶ್ಚಾತ್ತಾಪದಿಂದ ಶ್ರೀ ಸ್ವಾಮಿಗಳ ಲಿಂಗ ಶರೀರವನ್ನು ಸಮಾಧಿ ಮಾಡಿದರು. ಶ್ರೀಸ್ವಾಮಿಗಳು ತಿಳಿಸಿದ್ದಂತೆ ಐದು ದಿನಗಳ ಮೇಲೆ ಕರ್ತೃ ಶ್ರೀ ಕರಿಬಸವ ಸ್ವಾಮಿಗಳು ಬಂದು ನಿಜ ವೃತ್ತಾಂತವನ್ನು ತಿಳಿದು ದುಃಖಿತರಾಗಿ ಸಮಾಧಿಯ ಬಾಗಿಲನ್ನು ತೆರೆದು ಲಿಂಗ ಕಳೇಬರವನ್ನು ಮುಟ್ಟಿ, ಸಮಾಧಿಯನ್ನು ಮತ್ತೆ ರಚಿಸಿದರು.

ಈ ರೀತಿಯಲ್ಲಿ ಸಮಾಧಿಸ್ಥರಾದ ವೈರಾಗ್ಯನಿಧಿ ಕರ್ತೃ ಶ್ರೀ ಚೆನ್ನಬಸವ ಸ್ವಾಮಿಗಳ ಲಿಂಗ ಶರೀರ ನಿಕ್ಷೇಪಕ್ಕೆ ಭಕ್ತರಲೊಬ್ಬರಾದ ಶ್ರೀ ಮರ್ಚೇಡು ರಾಜಾ ವಿರೂಪಾಕ್ಷರಾಯರು ಗದ್ದುಗೆಯನ್ನು ರಚಿಸಿ ಮಠವನ್ನು ನಿರ್ಮಿಸಿ ಶಾಶ್ವತವಾದ ಕೀರ್ತಿಯನ್ನು ಗಳಿಸಿದರು.

## ೨.೪. ಗಡ್ಡೆಗಳ ಭೌಗೋಳಿಕ ಪರಿಸರ

### ಅರಣ್ಯಗಳು

ದೇವರಗಡ್ಡೆ, ಜಲದುರ್ಗ, ಹಂಚಿನಾಳ, ಯರಗೋಡಿ, ಯಳಗುಂದ, ಕಡದರಗಡ್ಡೆ, ನೀಲಕಂಠರಾಯನಗಡ್ಡೆ ಈ ಎಲ್ಲ ನಡುಗಡ್ಡೆಗಳು, ಭೂ ವಿಸ್ತೀರ್ಣದಲ್ಲಿ ಅತಿ ಹೆಚ್ಚಿನ ಅರಣ್ಯಗಳನ್ನು ಹೊಂದಿವೆ. ಕೃಷಿ ಭೂಮಿಗಿಂತ, ಅರಣ್ಯ ಪ್ರದೇಶವನ್ನು ಗೋಮಾಳ ಗುಡ್ಡ ಬೆಟ್ಟಗಳನ್ನು ಈ ಎಲ್ಲ ನಡುಗಡ್ಡೆಗಳು ಸಾಕಷ್ಟು ಪ್ರಮಾಣದಲ್ಲಿ ಹೊಂದಿವೆ. ಉದಾಹರಣೆಗೆ ಜಲದುರ್ಗದಲ್ಲಿ ಅನೇಕ ಗಿಡಮೂಲಿಕೆಗಳು ಸಿಗುತ್ತಿದ್ದವು. ಸೈನಿಕರಿಗೆ ಗಾಯಗಳಾದರೆ, ಅನೇಕ ರಾಜ ವೈದ್ಯರು ಇಲ್ಲಿಗೆ ಬಂದು ಗಿಡಮೂಲಿಕೆಗಳನ್ನು ಒಯ್ಯುತ್ತಿದ್ದರು. ಗಿಡ ಮೂಲಿಕೆಗಾಗಿ ಬೇರೆ ಬೇರೆ ರಾಜ್ಯಗಳಿಂದ ವೈದ್ಯರು ಬಂದು ಹೋಗುತ್ತಿದ್ದರು. ಈಗಲೂ ಇಲ್ಲಿಗೆ ಗಿಡಮೂಲಿಕೆಗಾಗಿ ಬೇರೆ ಬೇರೆ ರಾಜ್ಯಗಳಿಂದ ಜನ ಬರುತ್ತಾರೆ. ಈ ಪ್ರದೇಶವನ್ನು ವನಸ್ಪತಿ ವನವನ್ನಾಗಿ ಮಾಡಬಹುದಾಗಿದೆ. ಇನ್ನುಳಿದ ಎಲ್ಲ ಗಡ್ಡೆಗಳ ಅರಣ್ಯದಲ್ಲಿ ಬೇರೆ ಬೇರೆ ತರಹದ ಮರಗಳನ್ನು ಕಾಣಬಹುದು. ಬಿಟ್ಟಲಗಿಡ, ನೇರಳೆಗಿಡ, ಆಲದಮರ, ಜಾತಿಮರ, ಬೇವಿನ ಮರ, ಬನ್ನಿಮರ, ಗೋರವಂಟಿಗಿಡ, ಭಂಡರಿಗಿಡ, ಡೋಣಿಸಿನಮರ, ಹುಣಿಸೆ ಮರ ಮುಂತಾದ ಬೇರೆ ಬೇರೆ ಮರಗಳನ್ನು ಕಾಣಬಹುದು. ಇನ್ನು ಕವಳಿ ಹಣ್ಣಿನ ಗಿಡ, ಕಾರೆಹಣ್ಣಿನ ಗಿಡ, ಜೋಳದ ಹಣ್ಣಿನ ಗಿಡಗಳು ಎಥೇಚ್ಛವಾಗಿದ್ದು, ಹಲವಾರು ಗಿಡಮರಗಳಿಂದ ಕೂಡಿದ ದುರ್ಗಮವಾದ ಕಾಡಿನಿಂದ ಕೂಡಿವೆ.

ನಾರದಗಡ್ಡೆ, ರಾಮಗಡ್ಡೆ, ಕುರವಪುರಗಡ್ಡೆ ನಡುಗಡ್ಡೆಗಳು ಭೂವಿಸ್ತೀರ್ಣದಲ್ಲಿ ಅತಿ ಕಡಿಮೆ ಭೂಮಿಯನ್ನು ಹೊಂದಿದ್ದು, ಈ ಗಡ್ಡೆಗಳಲ್ಲಿ ಅರಣ್ಯಪ್ರದೇಶ ಇಲ್ಲ. ಮತ್ತು ಬೆಟ್ಟಗುಡ್ಡಗಳು ಕೂಡ ಇಲ್ಲ. ಕೃಷಿ ಮಾಡಲಿಕ್ಕೆ ಮತ್ತು ತಾವು ವಾಸ ಮಾಡುವುದಕ್ಕೆ ಭೂಮಿ ಇರುವುದು. ಇನ್ನುಳಿದ ಅಲ್ಪಸ್ವಲ್ಪ ಭೂಮಿ ಗಡ್ಡೆ ಸುತ್ತಮುತ್ತ ದನಕರಗಳನ್ನು ಮೇಯಿಸುವುದಕ್ಕೆ ಇದೆ. ಆದರೆ ಗಡ್ಡೆಗಳಲ್ಲಿ ಬೆಳೆದ ಮತ್ತು ನದಿಯ ದಂಡೆಗೆ ಗಿಡ ಮರಗಳನ್ನು ಕಾಣಬಹುದು. ಕಣಗಿಲಿ ಗಿಡ, ಅತಿಹೆಚ್ಚು ನದಿ ದಂಡೆಯನ್ನು ನೋಡಬಹುದು. ಗಡ್ಡೆಯೊಳಗಡೆ ಬೇವಿನಮರ, ಬನ್ನಿಮರ, ಜಾಲಿ ಮರವನ್ನು ಕಾಣಬಹುದು. ರಾಮಗಡ್ಡೆ ಪ್ರವಾಸೋದ್ಯಮ ತಾಣವಾದ ಕಾರಣ ಸರ್ಕಾರ ಅನೇಕ ವಿಧದ ಮರಗಳನ್ನು ಗಡ್ಡೆಯಲ್ಲಿ ಹಾಕಿದೆ. ಇಲ್ಲಿ ಜನವಾಸ ಇಲ್ಲದ ಕಾರಣ ವನವನ್ನಾಗಿ ಮಾಡಿದೆ. ನಾರದಗಡ್ಡೆಯಲ್ಲಿ ಅತಿಹೆಚ್ಚು ಸರ್ಕಾರಿ ಜಾಲಿಮರಗಳನ್ನು ಕಾಣಬಹುದು. ಇಲ್ಲಿ ಕೂಡ ಜನವಸತಿ ಇಲ್ಲದ ಕಾರಣ ಈ ಮರಗಳು ಬೆಳೆದಿವೆ.

### ಹವಾಗುಣ

ಪ್ರಸ್ತುತ ಅಧ್ಯಯನದ ಸ್ಥಳಗಳು ಎನಿಸಿರುವ ಅಧ್ಯಯನಕ್ಕೆ ಒಳಪಡಿಸಿರುವ ಎಲ್ಲ ನಡುಗಡ್ಡೆಗಳಲ್ಲಿ ಒಂದೇ ರೀತಿಯ ಹವಾಗುಣವನ್ನು ಕಾಣಬಹುದು. ರಾಯಚೂರಿನ ದೋಅಬ್ ನಾಡಿನಲ್ಲಿ ಕೇಂದ್ರೀಕೃತವಾಗಿರುವುದರಿಂದ ಹವಾಗುಣದಲ್ಲಿ ಭಿನ್ನತೆ ಕಾಣುವುದಿಲ್ಲ. ಕರ್ನಾಟಕದಲ್ಲಿ ಬಿಸಿಲಿನ ನಾಡೆಂದೇ ಪ್ರಸಿದ್ಧಿ ಪಡೆದಿರುವ ರಾಯಚೂರು ಜಿಲ್ಲೆ ಕೃಷ್ಣಾನದಿ ಆವೃತ್ತವಾಗಿರುವ ಈ ಗಡ್ಡೆಗಳು ಬಿಸಿಲು ಒಣಹವೆ, ಶಕೆಯಿಂದ ಕೂಡಿರುತ್ತವೆ. ಚಳಿಗಾಲದಲ್ಲಿ ನದಿ ಇರುವುದರಿಂದ ಸಮ ಪ್ರಮಾಣದಲ್ಲಿ ಚಳಿ ಆವರಿಸುತ್ತದೆ. ಮಳೆಗಾಲದಲ್ಲಿ ಸಾಧಾರಣ ಮಳೆ ಹಾಗೂ ನದಿ ತುಂಬಿ ಹರಿಯುತ್ತಿದೆ. ಬೇಸಿಗೆ ಕಾಲದಲ್ಲಿ ೧೦ ಮಿ.ಮೀ. ಮಳೆ ಬೀಳುತ್ತದೆ. ಶೇಕಡಾ ಇಂಗುವಿಕೆ–೮. ಪುನರ್ ಭರ್ತಿಯ ಪ್ರಮಾಣ(ಕೋಟಿ ಘನ.ಮೀ) ೬೭೦೧, ಬರಿದಾಗುವ ಪ್ರಮಾಣ(ಕೋಟಿ ಘನ.ಮೀ) ೧೨.೦ ಲಭ್ಯ ಸಮರ್ಥ್ಯ(ಕೋಟಿ ಘನ ಮೀ.) ೫೫.೧. ಸಮುದ್ರ ಮಟ್ಟದಿಂದ ೬೧೦ ಮೀಟರ್ ಎತ್ತರದಲ್ಲಿ ಕೃಷ್ಣಾ ನದಿ ಬರುತ್ತದೆ.

### ಭೂಮಿ ಮತ್ತು ಬೆಳೆಗಳು

ಮೇಲಿನಗಡ್ಡೆ, ದೇವರಗಡ್ಡೆ, ಜಲದುರ್ಗ, ಹಂಚಿನಾಳ, ಯರಗೋಡೆ, ಯಳಗುಂದ, ಕಡದರಗಡೆ, ನೀಲಕಂಠರಾಯನಗಡ್ಡೆ ಈ ಎಲ್ಲ ನಡುಗಡ್ಡೆಗಳಲ್ಲಿ ಮಣ್ಣು ಕೆಂಪು ಮತ್ತು ಕಪ್ಪು ಮಿಶ್ರಿತ ಇರುವುದರಿಂದ ಸಾಮಾನ್ಯವಾಗಿ ಫಲವತ್ತು ಹೊಂದಿದ ಭೂಮಿಗಳಾಗಿವೆ. ಜಲದುರ್ಗ ಗಡ್ಡೆಯ ಪೂರ್ವಕ್ಕೆ ಭೂಮಿ ಇರುವುದು ಕಂಡುಬರುತ್ತದೆ. ಉಳಿದ ಮೂರು ಭಾಗ ನದಿಯಿಂದ ಆವೃತವಾಗಿದೆ. ಇನ್ನುಳಿದ ಗಡ್ಡೆಗಳಲ್ಲಿ ಸುತ್ತಮುತ್ತ ಭೂಮಿ ಇರುವುದನ್ನು ಕಾಣಬಹುದು. ನಾರದಗಡ್ಡೆಯಲ್ಲಿ ಬೆಳೆಯನ್ನೆ ಬೆಳೆಯುವುದಿಲ್ಲ. ತಪಸ್ವಿಗಳ ಭೂಮಿಯೆಂದು ಅಲ್ಲಿ ಯಾರು ಕೃಷಿ ಮಾಡುವುದಿಲ್ಲ. ಈ ಎಲ್ಲ ಗಡ್ಡೆಗಳಲ್ಲಿ ಒಂದೇ ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ. ಬಹು ಭಾಗ ಕೆಂಪು ಅಂದರೆ ಮಸಾರಿ ಭೂಮಿ ಇದೆ. ವಿದ್ಯುತ್ ಸಂಪರ್ಕ ಇರುವುದರಿಂದ ಸಮಪ್ರಮಾಣದ ಭೂಮಿಗೆ ಪಂಪ್‌ಸೆಟ್‌ಗಳ ಮೂಲಕ ನೀರಾವರಿ ಸೌಲಭ್ಯವನ್ನು ಕಂಡುಕೊಂಡಿವೆ. ಕಡಲೆ, ಶೇಂಗಾ, ಹತ್ತಿ, ಉಳ್ಳಾಗಡ್ಡಿ, ಗೋಧಿ, ಜೋಳ, ಭತ್ತ, ಸೂರ್ಯಕಾಂತಿ, ವಿವಿಧ ರೀತಿಯ ತರಕಾರಿಗಳನ್ನು ಸ್ವಲ್ಪ ಮಟ್ಟಿಗೆ ಬೆಳೆಯುತ್ತಾರೆ. ಇನ್ನು ಸಮಪ್ರಮಾಣದ ಒಣಭೂಮಿಯಲ್ಲಿ ಮಳೆಯಾಶ್ರಿತವಾಗಿ ಸಜ್ಜೆ, ತೊಗರಿ, ಹುರುಳಿ, ಹೆಸರು ಬೆಳೆಯುತ್ತಾರೆ. ಕುರುವಪುರ ಹಾಗೂ ರಾಮಗಡ್ಡೆ ಸಂಪೂರ್ಣ ಕಪ್ಪು ಮಣ್ಣಿನಿಂದ ಕೂಡಿದ ಭೂಮಿ. ಇವರು ಹತ್ತಿ, ಜೋಳ, ತೊಗರಿ, ಭತ್ತವನ್ನು ಬೆಳೆಯುತ್ತಾರೆ.

### ೨.೫. ಪ್ರಾಣಿಸಂಕುಲ

ಅಧ್ಯಯನಕ್ಕೆ ಒಳಪಡಿಸಿರುವ ಎಲ್ಲ ನಡುಗಡ್ಡೆಗಳಲ್ಲಿ ಒಂದೇ ರೀತಿಯ ಪ್ರಾಣಿ, ಪಕ್ಷಿಗಳಿವೆ. ಎಲ್ಲ ನಡುಗಡ್ಡೆಗಳು ನದಿಯಿಂದ ಸುತ್ತುವರಿಯಲ್ಪಟ್ಟ ಕಾರಣದಿಂದ ಭಿನ್ನತೆಯನ್ನು ಕಾಣುವುದಿಲ್ಲ.

ಪ್ರಾಣಿ, ಪಕ್ಷಿ ಸಂಕುಲಕ್ಕೂ ಆದ್ಯತೆ ನೀಡಿದ್ದಾನೆ. ನಿಸರ್ಗದ ಕೃಪೆಯಿಂದ ಇವು ಕೂಡ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಈ ನಡುಗಡ್ಡೆಗಳಲ್ಲಿ ಅತಿಹೆಚ್ಚಿನ ಪ್ರಾಣಿ ಪಕ್ಷಿಗಳನ್ನು ನಾವು ಕಣ್ಮುಂದೆ ಕಾಣಬಹುದಾಗಿದೆ. ಇಲ್ಲಿನ ಜನರು ಅತಿ ಹೆಚ್ಚು ಕೃಷಿ ಚಟುವಟಿಕೆಗೆ ಎತ್ತುಗಳನ್ನು, ಹೈನುಗಾರಿಕೆಗೆ ಆಕಳು, ಎಮ್ಮೆ, ಆಡು, ಕುರಿ ಹಾಗೂ ಸಾಕುವುದಕ್ಕೆ ಕೋಳಿ, ಪಾರಿವಾಳಗಳನ್ನು ಬಳಸಿಕೊಂಡಿದ್ದಾರೆ. ಈ ಗಡ್ಡೆಯಲ್ಲಿ ಪಶುಪಾಲನೆ ಅತಿಹೆಚ್ಚು, ಮೀನುಗಾರಿಕೆ ವ್ಯವಹಾರ ಕೂಡ ಕಾಣಬಹುದು. ನಾಯಿಯನ್ನು ಮನೆಯಲ್ಲಿ ದೊಡ್ಡಿಗಳಲ್ಲಿ ಅಂದರೆ ದನದ ಕೊಟ್ಟಿಗೆ, ಕುರಿ ಹಟ್ಟಿ, ಕಾವಲಿಗೆ ಪ್ರತಿಯೊಬ್ಬರು ಬಳಸಿಕೊಳ್ಳುತ್ತಾರೆ.

ಅರಣ್ಯಗಳಲ್ಲಿ ಗಿಡ, ಮರಗಳಲ್ಲಿ ಪ್ರಾಣಿ, ಪಕ್ಷಿಗಳು ಈ ರೀತಿಯಾಗಿವೆ. ಪಾರಿವಾಳ, ಗಿಳಿ, ಗೊರವಂಕ, ಬುರಿಲಿ, ಹಂಸ, ಗುಬ್ಬಚ್ಚಿ, ಗೂಬೆ, ಕಾಗೆ, ಬೆಳವು, ನವಿಲುಗಳನ್ನು ಕಾಣಬಹುದು.

ಪ್ರಾಣಿಗಳಲ್ಲಿ ಕಾಡುಹಂದಿ, ಮೊಲ, ನರಿ, ತೋಳ, ಕೋತಿ, ಜಿಂಕೆ, ಕತ್ತೆಕಿರುಬ, ಮುಳ್ಳಹಂದಿ ಇತ್ಯಾದಿ ಪ್ರಾಣಿಗಳನ್ನು ಕಾಣಬಹುದು. ಜಲದುರ್ಗದಲ್ಲಿ ಕೆಲವು ವರ್ಷಗಳ ಹಿಂದೆ ಚಿರತೆಗಳಿದ್ದವು ಎಂದು ಸ್ಥಳೀಯರು ಹೇಳುತ್ತಾರೆ. ಆಗಾಗ, ಕೂಡ ಚಿರತೆ ಕಾಣಿಸಿಕೊಳ್ಳುತ್ತದೆ ಎನ್ನುತ್ತಾರೆ. ನಾರದಗಡ್ಡೆಯಲ್ಲಿ ಅತಿಹೆಚ್ಚು, ಗೂಳಿಗಳನ್ನು ಕಾಣಬಹುದು. ಇವುಗಳು ಭಕ್ತರು ದೇವರಿಗೆ ಹರಕೆ ಮಾಡಿಕೊಂಡಿರುತ್ತಾರೆ. ಹರಸಿಕೊಂಡವರು ಬಿಟ್ಟು ಹೋಗುವುದನ್ನು ಕಾಣಬಹುದು ಮತ್ತು ಕುದುರೆಗಳನ್ನು ಕೂಡ ಕಾಣಬಹುದು. ಈ ಗಡ್ಡೆಯಲ್ಲಿ ದಿನನಿತ್ಯದ ಬೇಟೆ ರೂಢಿಯಿಂದ ಮಾನವನ ದುರಾಸೆಯ ಫಲವಾಗಿ ವಿನಾಶದತ್ತ ಸಾಗಿದೆ.

## ೨.೬. ಜಲದುರ್ಗ ಕೋಟೆಯ ಸಂಕ್ಷಿಪ್ತ ಪರಿಚಯ

ಕೌಟಿಲ್ಯನು ತನ್ನ ಅರ್ಥಶಾಸ್ತ್ರ ಗ್ರಂಥದಲ್ಲಿ ಮೂರು ದುರ್ಗಗಳ ಬಗ್ಗೆ ಪ್ರಸ್ತಾಪಿಸಿದ್ದಾನೆ. ಅವುಗಳು ೧. ವನದುರ್ಗ, ೨. ಗಿರಿದುರ್ಗ, ೩. ಜಲದುರ್ಗ. ಈ ದುರ್ಗಗಳು ರಾಷ್ಟ್ರ ಮತ್ತು ರಾಜ್ಯ ರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಇವುಗಳ ರಕ್ಷಣೆ ಇಲ್ಲದ ರಾಜ್ಯ ಬಹುಬೇಗ ಶತ್ರುವಿನ ವಶವಾಗುತ್ತದೆ ಮತ್ತು ಹಾಗೆಯೇ ನಾಶವನ್ನು ಹೊಂದುತ್ತದೆ ಎಂಬುದನ್ನು ಒತ್ತಿ ಹೇಳಿದ್ದಾನೆ.

ಜಲದುರ್ಗವು ತನ್ನದೇ ಆದ ವಿಶೇಷತೆಯನ್ನು ಹೊಂದಿದೆ. ರಾಜಧಾನಿ ನಗರವು ಸುತ್ತು ನೀರಿನ ಕಂದಕದಿಂದ ಆವೃತವಾಗಿದ್ದು, ನಡುವೆ ಅಂದರೆ ಕೇಂದ್ರಭಾಗದಲ್ಲಿ ಕೋಟೆ ನಿರ್ಮಾಣ ವಾಗಿರುತ್ತದೆ. ಅದರ ಒಳಗೆ ನಗರ ಅಥವಾ ರಾಜ್ಯ ನಿರ್ಮಾಣವಾಗಿರುತ್ತದೆ.

ಸುರಪುರ ತಾಲೂಕು ನಗರದಿಂದ ಸುಮಾರು ೪೦ ಕಿ.ಮೀ. ದೂರದಲ್ಲಿರುವ ನಾರಾಯಣ ಪುರದಲ್ಲಿ ಕೃಷ್ಣಾ ನದಿಗೆ ಅಣೆಕಟ್ಟು ನಿರ್ಮಾಣ ಮಾಡಲಾಗಿದೆ. ಈ ನದಿ ಕಕ್ಕೇರಿಯ ಸಮೀಪದಲ್ಲಿ

ಹರಡಿದ್ದು, ಎತ್ತರದ ಭೂಭಾಗದಿಂದ ಪ್ರವಾಹವು ತಡೆಯಲ್ಪಟ್ಟು ಚಿಕ್ಕ ಚಿಕ್ಕ ನಡುಗಡ್ಡೆ ಅಥವಾ ದ್ವೀಪಗಳಾಗಿವೆ. ಅಂತವುಗಳಲ್ಲಿ ಪ್ರಮುಖವಾದವುಗಳೆಂದರೆ, ಜಂಗಿನಗಡ್ಡಿ, ಮೇಲಿನಗಡ್ಡೆ, ನೀಲಕಂಠರಾಯನ ಗಡ್ಡೆ, ಬೆಣಚಿನಗಡ್ಡೆ, ನೀರದೇವರಗಡ್ಡೆ, ದೇವರಗಡ್ಡೆ ಎಂದು ಕರೆಯಲಾಗುತ್ತದೆ. ಕೃಷ್ಣಾ ನದಿ ಟಿಸಿಲೊಡೆದು ಹರಿಯುವುದರಿಂದ ಆವರಿಸಿರುವ ನಡುಗಡ್ಡೆಯ ಪ್ರದೇಶದಲ್ಲಿ ಇರುವುದರಿಂದಲೇ ಇದನ್ನು ಗಡ್ಡೆ ಪ್ರದೇಶವೆಂತಲೂ ಕರೆಯುತ್ತಾರೆ.

ಜಲದುರ್ಗವನ್ನು ಈ ಹಿಂದೆ ವಿಕ್ರಮಾದಿತ್ಯನ ಶಾಸನಗಳಲ್ಲಿ ಕುಡುಗುಂದೆ ಎಂದು ಪ್ರಸ್ತಾಪವಿದ್ದದ್ದು ಕಂಡುಬಂದಿದೆ. ಸ್ಥಳೀಯರು ಸಹ ಇದನ್ನು ಕುಡುಗುಂದೆ ಎಂದು ಕರೆಯುತ್ತಿದ್ದರು. ಜಲದುರ್ಗವನ್ನು ಅಮರ ಕಲ್ಯಾಣವೆಂದು ಕರೆಯುತ್ತಿದ್ದರು. ಕಾರಣ, ಕೊಡೇಕಲ್ಲನ ಕಾಲಜ್ಞಾನಿ ಶರಣರಾದ ಬಸವಣ್ಣನವರು ಕ್ರಿ.ಶ.೧೪೪೯ರಲ್ಲಿ ತಮ್ಮ ಶರಣಗಣದವರೊಂದಿಗೆ ಜಲದುರ್ಗಕ್ಕೆ ಆಗಮಿಸಿ, ತನ್ನ ಅಮರ ಕಲ್ಯಾಣ ಸಂಘಟನೆಯನ್ನು ಮುಂದುವರಿಸುವುದರ ಮೂಲಕ ಆರೂಢ, ಸಂಘಮನಾಥ, ಪರಮಾನಂದ ಪ್ರಭು, ತಿಂತಣಿ ಮೋನಪ್ಪಯ್ಯ, ಚನ್ನಬಸವ ಹಾಗೂ ಸಂಗಯ್ಯ ಮೊದಲಾದವರೊಂದಿಗೆ ಇಷ್ಟಲಿಂಗ ತೋರಿದ ಆರೂಢನಾಗಿ ಬದುಕುತ್ತಾ ಸಾಂಕೇತಿಕ ಲಿಪಿಯಲ್ಲಿ ಆತ್ಮಜ್ಞಾನದ ಸಾಹಿತ್ಯ ರಚಿಸುತ್ತಾ ಕಾಲಜ್ಞಾನವನ್ನು ಸಾರುತ್ತಾ ಜಲದುರ್ಗದತ್ತ ಸಾಗಿಬಂದು, ಇದನ್ನು ಅಮರ ಕಲ್ಯಾಣವನ್ನಾಗಿಸುವ ಪ್ರಯತ್ನ ಮಾಡುತ್ತಾನೆ ಎಂದು ಚರಿತ್ರೆ ದಾಖಲೆಗಳು ಸ್ಪಷ್ಟಪಡಿಸುತ್ತವೆ.

ಜಲದುರ್ಗದ ಸಂಗಮೇಶ್ವರ ಗದ್ದುಗೆಯ ಮುಂಭಾಗದಲ್ಲಿರುವ ಜಲದುರ್ಗ ಶಾಸನ ಹೇಳುವಂತೆ; ಈ ಜಲದುರ್ಗವು ಕಲ್ಯಾಣಿ ಚಾಲುಕ್ಯರ ಆಡಳಿತದ ಆಳ್ವಿಕೆಗೆ ಒಳಪಟ್ಟಿತ್ತು. ಕೃಷ್ಣಾನದಿ ಹರಿದು ಮುಂದೆ ಟಿಸಿಲೊಡೆದು ನಡುಗಡ್ಡೆ ನಿರ್ಮಾಣವಾಗಿ ಅದುವೇ ಜಲದುರ್ಗವಾಗಿ ನಿರ್ಮಾಣಗೊಂಡಿದೆ. ಶಾಸನಗಳು ಉಲ್ಲೇಖಿಸುವಂತೆ; "ಈ ಜಲದುರ್ಗ ಬಿಜಾಪುರದ ಆದಿಲ್‌ಶಾಹಿಗಳಿಗೆ ಮಹತ್ವದ ಸ್ಥಳವಾಗಿತ್ತು. ಮುಂದೆ ಇದು ಗುಂತಗೊಳ ಅರಸ ನರಸಿಂಹ ನಾಯಕನ ಆಳ್ವಿಕೆಗೆ ಬಂದಿತು. ನಾಗರಿ, ಹಿಂದಿ ಮತ್ತು ಪರ್ಶಿಯನ್ ಭಾಷೆಯ ಶಾಸನವಿದ್ದು, ಇದು ಆಲಂಗೀರ್ ಬಾದಶಹ ಮೊಗಲ್ ಸಾಮ್ರಾಟನಾದ ಔರಂಗಜೇಬನ ಸೇನಾಪತಿಯಾದ ಕಾಂಜಾದ್ ಒಡೆಯನ ಮನೆಯಲ್ಲಿ ಹುಟ್ಟಿ ಗುಲಾಮನಾದ ತಕುಬ್‌ಸಿಂಗ್‌ನನ್ನು ಕುರಿತು ಉಲ್ಲೇಖಿಸುತ್ತದೆ.

ಈ ಜಲದುರ್ಗ ಗಡ್ಡೆ ಪಶ್ಚಿಮಕ್ಕೆ ಇರುವ ಬೆಟ್ಟದಲ್ಲಿ ಕೋಟೆ ಇರುವುದರಿಂದ ಗಡ್ಡೆಯನ್ನು ದುರ್ಗವೆಂತಲೂ ಕರೆಯುತ್ತಾರೆ. ಇದನ್ನು ಶಾಸನದಲ್ಲಿ ಕುಡುಗುಂದೆ ಎಂದು ಉಲ್ಲೇಖಿತವಾಗಿದೆ.

ಕ್ರಿ.ಶ.೨ನೇ ಶತಮಾನದಲ್ಲಿ ದೇವಗಿರಿ ಯಾದವರ ಆಳ್ವಿಕೆಗೆ ಒಳಪಟ್ಟಿದ್ದು, ನಂತರ ವಿಜಯನಗರ ಅರಸರ (ಕ್ರಿ.ಶ.೧೩೩೬ ರಿಂದ ೧೫೬೫) ಹಾಗೂ ಬಿಜಾಪುರದ ಆದಿಲ್‌ಶಾಹಿಗಳ ಆಡಳಿತಕ್ಕೆ ಒಳಪಟ್ಟಿತ್ತು(೧೪೪೯ ರಿಂದ ೧೬೮೬). ಈ ಅವಧಿಯಲ್ಲಿ ನಡೆದ ಈ ಎರಡೂ ಮನೆತನಗಳ

ನಡುವಿನ ಯುದ್ಧದಲ್ಲಿ ಈ ಜಲದುರ್ಗ ಪ್ರಮುಖ ಪಾತ್ರವನ್ನು ವಹಿಸಿತ್ತು. ಈ ಜಲದುರ್ಗದ ಕೋಟೆಯು ಏಳುಸುತ್ತಿನ ಕೋಟೆಯಾಗಿದ್ದು, ವಿಜಯನಗರದ ಅರಸು ಇಲ್ಲಿಗೆ ಕೆಲವೊಮ್ಮೆ ವಿಹಾರಾರ್ಥವಾಗಿ ಬರುತ್ತಿದ್ದರು ಎಂದು ಶಾಸನಗಳು ಉಲ್ಲೇಖಿಸುತ್ತವೆ. ಅಲ್ಲದೆ ಈ ದುರ್ಗವು ಬಿಜಾಪುರ ಸುಲ್ತಾನರ ಕಾಲದಲ್ಲಿ ಇದು ಶಿಕ್ಷೆ ನೀಡುವ ಸ್ಥಳವಾಗಿತ್ತು ಎಂದು ಹೇಳಲಾಗಿದೆ. ಅಂದರೆ ಸುಲ್ತಾನರು ಅಪರಾಧಿಯನ್ನು ಪರೀಕ್ಷಿಸಲು ಕೋಟೆಯ ಮೇಲಿಂದ ಬಲವಾಗಿ ತಳ್ಳುತ್ತಿದ್ದರು. ಒಂದು ವೇಳೆ ಅವನು(ಅಪರಾಧಿ) ನೀರಿನಲ್ಲಿ ಕೊಚ್ಚಿ ಹೋದರೆ ಅವನು ಅಪರಾಧಿ ಎಂದು ನಿರ್ಧಾರಕ್ಕೆ ಬರುತ್ತಿದ್ದರು. ಹಾಗೊಂದು ವೇಳೆ ಕೋಟೆಯ ಮೇಲಿಂದ ಬೀಳುವಾಗ ತೆಪ್ಪವನ್ನೇನಾದರು ಹಿಡಿದುಕೊಂಡು ಬದುಕುಳಿದರೆ ಅವನನ್ನು ನಿರಪರಾಧಿ ಎಂದು ಪರಿಗಣಿಸಲಾಗುತ್ತಿತ್ತು.

### ಜಲದುರ್ಗದ ಭೌಗೋಳಿಕ ಲಕ್ಷಣ

ಜಲದುರ್ಗವು ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನಲ್ಲಿದೆ. ಈ ತಾಲೂಕಿನ ವಾಯುವ್ಯ ದಿಕ್ಕಿಗೆ ೨೭ ಕಿ.ಮೀ. ದೂರದಲ್ಲಿ ಜಲದುರ್ಗವಿದೆ. ಕೃಷ್ಣೆ ಟಿಸಿಲೊಡೆದು ನಿರ್ಮಿತವಾದ ಈ ನಡುಗಡ್ಡೆ(ಜಲದುರ್ಗ). ಇದೊಂದು ಪ್ರತ್ಯೇಕವಾದ ನಿಸರ್ಗ ರಮಣೀಯ ತಾಣವಾಗಿದೆ. ಇದರ ಈ ಹಿಂದಿನ ಹೆಸರನ್ನು ನೋಡಿದರೆ ಅಂದರೆ; ಕುಡುಗುಂಡೆ. ಕೂಡು ಎಂದರೆ ಬಾಗಿರುವುದು; ಗುಂಡೆ ಎಂದರೆ ಬೆಟ್ಟ, ಗುಡ್ಡ ಎಂಬರ್ಥ ಬರುತ್ತದೆ. ಕಂದಕ ಅಥವಾ ಕಣಿವೆಯನ್ನು ಹೊಂದಿರುವ ಬೆಟ್ಟ ಎಂತಲೂ ಅರ್ಥಕೊಡುತ್ತದೆ. ಅಂದರೆ ಬಾಗಿದ ಗುಡ್ಡ; ಬೆಟ್ಟವೆಂದು ಅದರಿಂದ ಸ್ವಲ್ಪ ದೂರದಿಂದ ನಿಂತು ನೋಡಿದರೆ ಅದು ಬಾಗಿದ ಕುಡುಗೋಲಿನಂತೆ ಕಾಣುತ್ತದೆ. ಆದ್ದರಿಂದ ಇದನ್ನು ಜನಪದರು ಕುಡುಗುಂದೆ ಎಂದು ಕರೆಯುತ್ತಾರೆ.

ಈ ನಡುಗಡ್ಡೆಯ ಪೂರ್ವಕ್ಕೆ ಯರಗೋಡೆ, ಹಂಚಿನಾಳ ಗ್ರಾಮ ೮ ಕಿ.ಮೀ. ದೂರದಲ್ಲಿದೆ. ಉತ್ತರಕ್ಕೆ ಹಾಲಭಾಮಿ ೬ ಕಿ.ಮೀ. ದೂರದಲ್ಲಿದೆ. ಐತಿಹಾಸಿಕವಾಗಿ, ಚಾರಿತ್ರಿಕವಾಗಿ ತನ್ನದೇ ಛಾಪನ್ನು ಮೂಡಿಸಿರುವ ಈ ಜಲದುರ್ಗ ಪ್ರವಾಸಿಗರ ಕಣ್ಮನ ಸೆಳೆಯುತ್ತದೆ. ನಡುಗಡ್ಡೆ ಹಿಂದೂ-ಮುಸ್ಲಿಂರ ಭಾವೈಕ್ಯತೆ ಸಾರುವ ಸಮನ್ವಯದ ಐತಿಹಾಸಿಕ ಹಾಗೂ ಧಾರ್ಮಿಕ ಕೇಂದ್ರವಾಗಿದೆ.

ಈ ಕೋಟೆಯೊಳಗಡೆ ಎರಡು ಮಠಗಳಿವೆ. ಒಂದು ಮೇಲಿನದ್ದು. ೭ನೆಯ ಕೋಟೆಯ ಮಹಾದ್ವಾರ ಬಾಗಿಲ ಮುಂದೆ ಇದೆ. ಕೋಟೆ ಏಳುಸುತ್ತಿನದ್ದಾಗಿದ್ದು ಹೊರಗಡೆ ಊರಿನ ಜನರು ವಾಸವಾಗಿದ್ದಾರೆ. ಇವರಾರೂ ಇಲ್ಲಿಯ ಮೂಲ ನಿವಾಸಿಗಳಲ್ಲ. ಬೇರೆ ಎಲ್ಲಿಂದಲೋ ಬಂದು ಇಲ್ಲಿ ನೆಲೆ ಕಂಡುಕೊಂಡಿದ್ದಾರೆ. ಠಕ್ಕಳಿಕೆ, ಹಾಲಭಾವಿ, ಉಪ್ಪೇರಿ ಗ್ರಾಮದಿಂದ ಬಂದು ಸ್ವಂತ ಜಮೀನನ್ನು ಹೊಂದಿದ್ದಾರೆ.

ಈ ನಡುಗಡ್ಡೆಯ ದುರ್ಗದಲ್ಲಿ ಅನೇಕ ಸಮುದಾಯಗಳು ತಮ್ಮದೇ ಆದ ಬದುಕನ್ನು ಕಟ್ಟಿಕೊಂಡಿವೆ. ಬೇಡರು ಅಥವಾ ನಾಯಕ ಸಮುದಾಯದವರು ಹೆಚ್ಚು ಜನಸಂಖ್ಯೆಯಲ್ಲಿ ವಾಸವಾಗಿದ್ದಾರೆ. ನಂತರ ಮಾದಿಗ, ಕಬ್ಬೇರರು, ಜಂಗಮರು, ಕಟಬರು, ಕುರುಬ, ಲಿಂಗಾಯಿತರು ಸೇರಿ ಒಟ್ಟು ಸುಮಾರು ನಲವತ್ತು ಕುಟುಂಬಗಳು ತಮ್ಮ ಬದುಕು ಕಟ್ಟಿಕೊಂಡಿವೆ. ಬಹುತೇಕ ಇಲ್ಲಿ ತಳಸಮುದಾಯದ ಜನಾಂಗಗಳೇ ಹೆಚ್ಚಾಗಿ ವಾಸವಾಗಿದ್ದು, ಸರಕಾರಿ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ತೀರಾ ಇತ್ತೀಚೆಗೆ ಸರಕಾರ ಜನತಾ ಮನೆಗಳನ್ನು ಕಡು ಬಡವರಿಗೆ ನಿರ್ಮಾಣ ಮಾಡಿ ಕೊಡುತ್ತಿದೆ. ವೈಶಿಷ್ಟ್ಯವೇನೆಂದರೆ ಈ ದುರ್ಗಗಳನ್ನು ಹೊಂದಿರುವ ಊರುಗಳು ಅಂದರೆ, ಗಿರಿದುರ್ಗ, ಜಲದುರ್ಗ, ದೇವದುರ್ಗ, ರಾಮದುರ್ಗ, ಗಡಿದುರ್ಗ, ಚಿತ್ರದುರ್ಗ, ಉಚ್ಚಂಗಿದುರ್ಗ ಇವುಗಳಲ್ಲಿ ಹೆಚ್ಚಾಗಿ ಬೇಡರು ಅಥವಾ ನಾಯಕ ಸಮುದಾಯದವರೇ ನೆಲೆಕಂಡು ಕೊಂಡಿದ್ದಾರೆ. ಈ ಗ್ರಾಮ, ನಗರ, ಪಟ್ಟಣಗಳು ಬಲಿಷ್ಠವಾದ ಕೋಟೆಯಿಂದ ರಕ್ಷಣೆ ಪಡೆದಿರುತ್ತವೆ. ಈ ಕಾರಣದಿಂದಲೇ ಅವುಗಳಿಗೆ ದುರ್ಗ ಎಂದು ಕರೆಯುತ್ತಾರೆ. ಜಲದುರ್ಗದ ನಂತರ ಇದರ ಮುಂದೆ ನೀಲಕಂಠರಾಯನ ಗಡ್ಡೆ ಇದೆ. ಇದು ಸುರಪುರ ಮತ್ತು ಗುಡಗುಂಟಿ ಸಂಸ್ಥಾನದ ಆಳ್ವಿಕೆಗೆ ಒಳಪಟ್ಟಿತ್ತು. ಶಿವನು ವಿಷವನ್ನು ತನ್ನ ಕಂಠದಲ್ಲಿ ಹಿಡಿದುಕೊಂಡಿದ್ದರಿಂದ ನೀಲಕಂಠ ಎಂದು ಹೇಳುತ್ತಾರೆ. ಈ ನಡುಗಡ್ಡೆಯಲ್ಲಿ ಪೂರ್ವ ಕಾಲದ ಶಿವಲಿಂಗವಿದ್ದು ಅದಕ್ಕೆ ನೀಲಕಂಠರಾಯ ಎಂದು ಸ್ಥಳೀಯ ಜನಪದರು ಹೇಳುತ್ತಾರೆ. ಈ ನಡುಗಡ್ಡೆಯಲ್ಲಿ ಬೇಡ ಸಮುದಾಯದವರೇ ಹೆಚ್ಚು ವಾಸವಾಗಿದ್ದಾರೆ.

**ಕೋಟೆ ವಿಶೇಷ**

ಜಲದುರ್ಗದ ಕೋಟೆಯನ್ನು ೧೨ನೇ ಶತಮಾನದಲ್ಲಿ ದೇವಗಿರಿಯ ಯಾದವರು ಕಟ್ಟಿಸಿದರೆಂದು ಕೆಲವು ಚರಿತ್ರೆಕಾರರ ಅಭಿಪ್ರಾಯವಾಗಿದೆ. ಏಳು ಸುತ್ತಿನ ಬೃಹತ್ ಕೋಟೆ ಇದಾಗಿದೆ. ವಿಶೇಷವೆಂದರೆ ಇದು ಆದಿಲ್‌ಶಾಹಿಗಳ ವಾಸ್ತುಶೈಲಿಯಲ್ಲಿದೆ. ಬೃಹತ್‌ಗಾತ್ರದ ಚೌಕಾಕಾರದ ಕಲ್ಲುಗಳನ್ನು ಬಳಸಿ ಇದನ್ನು ನಿರ್ಮಿಸಿದ್ದಾರೆ. ಕೋಟೆ ಒಳಗಡೆ ಚಿಕ್ಕ ಕಲ್ಲುಗಳನ್ನು ಬಳಸಿ ಸಣ್ಣ ಸಂದೂ ಇಲ್ಲದಂತೆ ನಿರ್ಮಿಸಿದ್ದಾರೆ. ಮೊದಲು ಇದು ಬಿಜಾಪುರ ಆದಿಲ್‌ಶಾಹಿಗಳ ಸೈನಿಕ ಠಾಣೆಯಾಗಿತ್ತು. ಅಪರಾಧಿಗಳನ್ನು ಬಂಧಿಸಿಡುವ ಕಾರಾಗೃಹವು ಆಗಿತ್ತು. ಅಲ್ಲಿನ ಮನೆಗಳ ವಾಸ್ತುಶೈಲಿಯನ್ನು ನೋಡಿದರೆ ಠಾಣೆಯ ಕುರುಹುಗಳು ಇಂದಿಗೂ ಕಂಡುಬರುತ್ತವೆ. ಈ ಕುರಿತು ಇನ್ನೂ ಆಳವಾದ ಸಂಶೋಧನೆ ನಡೆಯಬೇಕಿದೆ.

೧೬೫೮-೧೭೦೭ರಲ್ಲಿ ಜಲದುರ್ಗ ಕೋಟೆಯು ಮೊಗಲರ ಆಳ್ವಿಕೆಗೆ ಒಳಪಟ್ಟಿತ್ತು. ಸುರಪುರದ ಅರಸು ವಾಗಣಗೆ ಯುದ್ಧದಲ್ಲಿ ಮೊಗಲ್ ಬಾದಶಹನಾದ ಔರಂಗಜೇಬನನ್ನು ಸೋಲಿಸಿ ಕೋಟೆಯನ್ನು ವಶಪಡಿಸಿಕೊಂಡರು. ನಂತರ ಗುಡಗುಂಟಿ ನಾಯಕರ ಹಾಗೂ ಗುಂತಗೋಳ ನಾಯಕರ ವಶಕ್ಕೆ

ಬಂದಿತು ಎಂಬುದನ್ನು ಚಾರಿತ್ರಿಕ ದಾಖಲೆಗಳು ಸ್ಪಷ್ಟಪಡಿಸುತ್ತವೆ. ಅನಂತರದಲ್ಲಿ ವಿಜಾಪುರದ ಆದಿಲ್‌ಶಾಹಿ ಜಲದುರ್ಗದ ಕೋಟೆಯನ್ನು ದುರಸ್ತಿಗೊಳಿಸಿದನೆಂದು ಅಲ್ಲದೆ ಈ ದುರ್ಗದ ರಕ್ಷಣೆಯ ಸಲುವಾಗಿ ತನ್ನ ದಂಡನಾಯಕನಾದ ಆಲಂಖಾಸ್ ಖಾನ್ ಎಂಬುವನನ್ನು ನೇಮಕ ಮಾಡಿ ಸೈನ್ಯ ಅಲ್ಲಿ ಜಮಾವಣೆ ಮಾಡಿ ಇಟ್ಟಿದ್ದನೆಂದು ದಾಖಲೆಗಳು ಉಲ್ಲೇಖಿಸುತ್ತವೆ(ಅಮರೇಶ ಯತಗಲ್, ೨೦೦೭, ಪು.೧೪-೧೫).

ಈ ದುರ್ಗದ ಇನ್ನೊಂದು ವಿಶೇಷವೆಂದರೆ ಈ ಕೋಟೆಯ ತುತ್ತ ತುದಿಯಲ್ಲಿ ಸಂಗಮನಾಥನ ದೇವಸ್ಥಾನ ಇದೆ. ಹಿಂದು.... ಮುಸ್ಲಿಂ ಸಂಗಮದ ವಾಸ್ತುಶಿಲ್ಪಶೈಲಿಯಲ್ಲಿದೆ. ಎರಡು ಧರ್ಮಿಯರೂ ಕೂಡ ಪೂಜೆ-ಪುನಸ್ಕಾರ, ಹೋಮ-ಹವನಗಳನ್ನು ನಡೆಸುತ್ತಾರೆ. ಅಲ್ಲದೆ ಈ ಪ್ರದೇಶದಲ್ಲಿ ಎಲ್ಲಮ್ಮ ದೇವಿಯ ಗುಡಿ ಮತ್ತು ನೀಲಮ್ಮ ದೇವಾಲಯ, ಶಿವದೇವಾಲಯ, ಗಂಗಾಧರ ದೇವಾಲಯಗಳು ಮತ್ತು ಸಂಘಮೇಶ್ವರ ದೇವಾಲಯಗಳು ಪ್ರಮುಖವಾಗಿದೆ.

ಜಲದುರ್ಗದ ಕೋಟೆ ವಿಜಯನಗರ ಅರಸರ ಮತ್ತು ಆದಿಲ್‌ಶಾಹಿಗಳ ಕಾಲದಲ್ಲಿ ಇದೊಂದು ಸೈನಿಕರ ಠಾಣೆಯಾಗಿತ್ತು. ಅಪರಾಧಿಗಳನ್ನು ಬಂಧಿಸಿಡುವ ಸ್ಥಳವಾಗಿತ್ತು. ದುರ್ಗದ ತುದಿಗೆ ಏರಲು ಸುಂದರವಾದ ಮೆಟ್ಟಿಲುಗಳಿವೆ. ಮೇಲಕ್ಕೆ ಏರಿದಂತೆ ಮೆಟ್ಟಿಲು ದಾರಿ ಕಡಿಮೆಯಾಗುತ್ತ ಕೇವಲ ಒಬ್ಬರು ಹೋಗುವಷ್ಟು ದಾರಿ ಇಕ್ಕಟ್ಟಾಗಿದೆ. ಅಂತಿಮವಾಗಿ ತುದಿ ಮುಟ್ಟಿದಾಗ ದುರ್ಗದ ರಮ್ಯ ಪಕ್ಷಿನೋಟ ಪ್ರವಾಸಿಗರ ಕಣ್ಮನ ಸೆಳೆಯುತ್ತದೆ. ಒಟ್ಟಾರೆ ಈ ದುರ್ಗಕ್ಕೆ ಸಂಬಂಧಪಟ್ಟಂತೆ ಶಾಸನ ಚಾರಿತ್ರಿಕ ದಾಖಲೆಗಳೇ ತೀರ ವಿರಳವಾಗಿದ್ದರೂ ಈಗ ಲಭ್ಯವಿರುವ ದಾಖಲೆಗಳನ್ನು ಆಧಾರವಾಗಿಟ್ಟು ಕೊಂಡು ಈ ಜಲದುರ್ಗದ ಸಂಕ್ಷಿಪ್ತವಾಗಿ ಇದರ ಚಾರಿತ್ರಿಕ ಹಿನ್ನೆಲೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

### ೨.೭. ಗಡ್ಡೆಗಳ ಸಾರಿಗೆ

ಈ ಗಡ್ಡೆಗಳಿಗೆ ನೇರವಾಗಿ ಬಸ್ಸಿನ ಸೌಲಭ್ಯವಿರುವುದಿಲ್ಲ. ಈ ಎಲ್ಲಾ ತಾಲೂಕುಗಳಿಂದ ಜನರು ಕಾಲು ದಾರಿಯಲ್ಲಿ ಬರುತ್ತಾರೆ. ಸುತ್ತಲು ನದಿ ಇರುವುದರಿಂದ ವಾಹನಗಳ ಸೌಲಭ್ಯವಿಲ್ಲ.

ರೋಡಲಬಂಡಾ ಕ್ಯಾಂಪವರೆಗೆ ಬಂದು ಅಲ್ಲಿಂದ ಕಾಲ್ನಡಿಗೆಯಲ್ಲಿ ದೇವರಗಡ್ಡೆ ಮತ್ತು ಮೇಲಿನಗಡ್ಡೆ ತಲುಪಬೇಕಾಗುತ್ತದೆ. ಈ ಎರಡು ಗಡ್ಡೆಗಳು ಅಕ್ಕ ಪಕ್ಕ ಒಂದು ಕಿ.ಮೀ.ದಲ್ಲಿದೆ. ಜಾವೂರಿನಿಂದ ಹೊರಟರೆ ಉತ್ತರಾಭಿಮುಖವಾಗಿ ಮೇಲಿನ ಗಡ್ಡೆ ಮೂಲಕ ನಾಲ್ಕು ಕಿ.ಮೀ. ರೋಡಲಬಂಡಾ ಕ್ಯಾಂಪಗೆ ಬರಬೇಕು. ಸುರಪುರ ತಾಲೂಕಿನ ಹಾಗೂ ಮುದ್ದೇಬಿಹಾಳ ಭಾಗದ

ಭಕ್ತರು ಗದ್ದೆಮ್ಮನಿಗೆ ಬಸವಸಾಗರ ಮೇಲೆ ಬರುತ್ತಾರೆ. ಅದರ ಮೇಲೆ, ಸೇತುವೆಯ ಮೇಲೆ ಬಸ್ಸುಗಳ ಸಂಚಾರ ಇರುವುದಿಲ್ಲ. ಖಾಸಗಿ ವಾಹನಗಳಲ್ಲಿ ಮಾತ್ರ ಬರಬೇಕಾಗುತ್ತದೆ. ನವೆಂಬರ್‌ದಿಂದ ಮೇ ತಿಂಗಳವರೆಗೆ ಬಸವ ಸಾಗರದಿಂದ ಕೃಷ್ಣಾ ನದಿಗೆ ನೀರನ್ನು ಬಿಡುವುದಿಲ್ಲ. ಇದರಿಂದ ಕೆಲವು ಜನರು ನಾರಾಯಣಪುರದಿಂದ ನೇರವಾಗಿ ಕಾಲ್ನಡಿಗೆ ಆರಂಭಿಸಿ ನದಿ ದಾಟಿಕೊಂಡು ದೇವರಗಡ್ಡೆ ಮತ್ತು ಮೇಲಿನಗಡ್ಡೆ ತಲುಪುತ್ತಾರೆ.

## ಅಧ್ಯಾಯ ಮೂರು

# ನಡುಗಡ್ಡೆಗಳ ಜನಪದ ಬದುಕು

೩.೧. ಸಾಮಾಜಿಕ ಸ್ಥಿತಿಗತಿ

೩.೨. ಆರ್ಥಿಕ ಸ್ಥಿತಿಗತಿ

೩.೩. ಶೈಕ್ಷಣಿಕ ಸ್ಥಿತಿಗತಿ

೩.೪. ರಾಜಕೀಯ ಆಡಳಿತ

## ಅಧ್ಯಾಯ ಮೂರು

# ನಡುಗಡ್ಡೆಗಳ ಜನಪದ ಬದುಕು

### ೩.೧.ಸಾಮಾಜಿಕ ಸ್ಥಿತಿಗತಿ

ಮನುಷ್ಯ ಸಂಘಜೀವಿ ಅವನು ಸಮಾಜದಲ್ಲಿ ಬದುಕುವಾಗ ಸಮಾಜದ ರೀತಿ ನೀತಿಗಳನ್ನನುಸರಿಸಿ ಕೊಂಡು ಬದುಕುತ್ತಾನೆ. ತನ್ನ ಕುಟುಂಬದಲ್ಲೂ ಒಂದು ನಿಯಂತ್ರಣ ವ್ಯವಸ್ಥೆ. ಅಂದರೆ ತನ್ನದೇ ಆದ ವಿಧಿ–ನಿಷೇಧಗಳು, ಆಚಾರ, ವಿಚಾರಗಳು ಕಾನೂನು ಕಟ್ಟಳೆಗಳಲ್ಲಿ ವಾಸಿಸುವುದನ್ನು ಕಾಣ ಬಹುದು. ಇವೆಲ್ಲಾ ಅಂಶಗಳನ್ನು ನಡುಗಡ್ಡೆಗಳ ಸಮುದಾಯಗಳಲ್ಲಿ ನಾವು ಕಾಣಬಹುದು. ಹೀಗೆ ವ್ಯವಸ್ಥೆಯೊಳಗೆ ತನ್ನ ಸುಭದ್ರತೆಯನ್ನು ಕಾಯ್ದುಕೊಳ್ಳುವುದು ಸಹ ಒಂದೊಂದು ಸಮುದಾಯಕ್ಕೆ ಮುಖ್ಯವೇ ಆಗಿರುತ್ತದೆ. ಹಾಗಾಗಿ ಅವನು ಸಮಾಜದೊಂದಿಗೆ ಸಂಬಂಧವನ್ನು ಹೊಂದಿ ತನ್ನದೇ ಆದ ಒಂದು ಪ್ರತ್ಯೇಕ ನೀತಿ ನಿಯಮಗಳನ್ನು ಮೈಗೂಡಿಸಿಕೊಂಡು ಬದುಕುತ್ತಾನೆ.

ಸಾಮಾಜಿಕ ಜೀವನದಲ್ಲಿ ಲೋಕಾರೂಢಿಯಾಗಿ ಮಾನವರು ಸಂಪ್ರದಾಯಗಳನ್ನು ಅನುಸರಿಸುವರು. ಸಂಸ್ಥೆಗಳು ಹಾಕಿಕೊಟ್ಟ ರೀತಿಗಳನ್ನು ಅನುಸರಿಸಿದರು. ಸಾಮಾಜಿಕವಾಗಿ ಸೃಷ್ಟಿಯಾದ ಈ ರೂಪಗಳನ್ನೆಲ್ಲಾ ಒಳಗೊಳ್ಳುವಂಥ ಪದವೊಂದು ನಮಗೆ ಅಗತ್ಯ. ಅಂತೆಯೇ ಅದನ್ನು ಲೋಕಾರೂಢಿಗಳು ಇಲ್ಲವೇ ನೈತಿಕ ನಿಯಮಗಳು ಎಂದು ಕರೆಯಲಾಗುತ್ತಿದೆ. ಈ ಹೆಸರುಗಳನ್ನು ಡಬ್ಲ್ಯೂ.ಜೆ.ಸಮ್ನರ್ ತನ್ನ 'Folkways' ಗ್ರಂಥದ ಮೂಲಕ ಪರಿಚಯ ಮಾಡಿಕೊಟ್ಟಿದ್ದಾರೆ. ಅವರು ಲೋಕಾರೂಢಿಗಳು ಎಂಬ ಪದವನ್ನು ತುಂಬಾ ವ್ಯಾಪಕಾರ್ಥದಲ್ಲಿ ತಿಳಿಸಿದ್ದರು.

### ೩.೧.೧ ಸಮುದಾಯಗಳು

ಕರ್ನಾಟಕದ ಇತರೆ ಕಡೆಗಳಲ್ಲಿ ಇರುವಂತೆ ಹಲವು ಮತ, ಪಂಥಗಳು ವಿವಿಧ ವರ್ಗಗಳ ಜನರು ವಾಸವಾಗಿದ್ದಾರೆ. ಭಾರತೀಯ ಸಂದರ್ಭದಲ್ಲಿಯಂತೂ ಸಮುದಾಯ ಬಲಿಷ್ಠವಾದ ಒಂದು ಸಾಮಾಜಿಕ ಗುಣವಾಗಿದ್ದು, ಸಾಂಸ್ಕೃತಿಕವಾಗಿ ಹಲವು ಅಂಶಗಳನ್ನು ನಿಯಂತ್ರಿಸುವ ನಿರ್ಮಿಸುವ

ವಿಶೇಷತೆಯನ್ನು ಸಮುದಾಯವು ಹೊಂದಿರುತ್ತದೆ. ಅಲ್ಲದೆ ಯಾವುದೇ ಸಮುದಾಯದ ಬಗೆಗೆ ಈ ಕುರಿತ ಅಧ್ಯಯನಕ್ಕೆ ಪೂರಕವಾದ ಅಂಶಗಳೇ ಆಗಿರುತ್ತದೆ.

"ನಮ್ಮ ಪ್ರಾಥಮಿಕ ಕಲ್ಪನೆಗಳಲ್ಲಿ ಸಮುದಾಯ ಒಂದು. ಉದಾಹರಣೆ ಮೂಲಕ ನೋಡಿದಾಗ ಮೂಲನಿವೇಶನ, ಗ್ರಾಮ, ಬಗರ, ಬುಡಕಟ್ಟು ಇಲ್ಲವೇ ರಾಷ್ಟ್ರಕ್ಕೆ ಅನ್ವಯಿಸಿ ಈ ಪದವನ್ನು ಬಳಸುತ್ತೇವೆ. ಯಾವುದೇ ಒಂದು ಚಿಕ್ಕ ಅಥವಾ ದೊಡ್ಡ ಸಮೂಹದ ಸದಸ್ಯರು ಎಲ್ಲಿಯೇ ಇರಲಿ, ಎಲ್ಲರೂ ಒಂದು ಗೂಡಿ ಅದು ಇದು ಎಂದು ಯಾವುದೇ ಒಂದು ನಿರ್ದಿಷ್ಟ ಹಿತಾಸಕ್ತಿಯಲ್ಲಿ ಪಾಲ್ಗೊಳ್ಳದೇ ಸಾಮಾನ್ಯ ಜೀವನದ ಮೂಲಭೂತ ಅವಶ್ಯಕತೆಗಳಲ್ಲಿ ಪಾಲ್ಗೊಳ್ಳುವಂತೆ ಬಾಳುವರು. ಈ ಸಮೂಹವನ್ನೇ ನಾವು ಸಮುದಾಯವೆಂದು ಕರೆಯುತ್ತೇವೆ"(ಗುರುಪ್ರಸಾದ್ ಎಚ್.ಎಸ್., ೨೦೦೭, ಪು.೩೩)

ಒಬ್ಬನ ಜೀವನವು ಸಂಪೂರ್ಣವಾಗಿ ಅದರಲ್ಲಿ ಅಡಕವಾಗಿರುವುದೇ ಸಮುದಾಯದ ಸಂಕೇತವಾಗಿರುವುದು. ಒಬ್ಬನು ವ್ಯಾವಹಾರಿಕ ಸಂಸ್ಥೆಯಲ್ಲಿ ಇಲ್ಲವೇ ನಗರದಲ್ಲಿ ಪೂರ್ಣವಾಗಿ ಜೀವಿಸಬಹುದು. ಒಬ್ಬನ ಎಲ್ಲ ಸಾಮಾಜಿಕ ಸಂಬಂಧಗಳು ಸಮುದಾಯದಲ್ಲಿ ದೊರೆಯುವುದೇ ಅದರ ಮೂಲಭೂತ ಪ್ರಮಾಣವಾಗಿರುವುದು.

ಪ್ರಸ್ತುತದಲ್ಲಿ ಸಮುದಾಯ ಎಂಬ ಪದವನ್ನು ಜಾತಿಗೆ ಸಂವಾದಿಯಾಗಿ ಉಪಯೋಗಿಸಲಾಗಿದೆ. ಅಂದರೆ ಒಂದು ಸಮುದಾಯದಲ್ಲಿ ಆ ಸಮುದಾಯದ ಎಲ್ಲ ಜನರು ಒಳಗೊಂಡಿರುತ್ತಾರೆ. ಹೀಗೆ ಒಳಗೊಂಡಿರುವಂತೆ ಸಮುದಾಯ ತನ್ನದೇ ಆದ ಸಂಸ್ಕೃತಿಯನ್ನು ಒಳಗೊಂಡಿರುತ್ತದೆ. ಹೀಗಿರುವಂತಹ ಒಂದು ಸಮುದಾಯ ತನ್ನ ಸಮುದಾಯದ ಒಳಿತಿಗಾಗಿ, ಏಳಿಗೆಗಾಗಿ ಸದಾ ಒಬ್ಬರನ್ನೊಬ್ಬರು ಅವಲಂಬಿಸಿ ಬದುಕುತ್ತಿರುತ್ತಾರೆ. ಇಂತಹ ಹಲವಾರು ಸಮುದಾಯಗಳು ನಡುಗಡ್ಡೆಗಳಲ್ಲಿ ವಾಸವಾಗಿರುವುದನ್ನು ನಾವು ಕಾಣುತ್ತೇವೆ.

**ಬೇಡರು:** ನಡುಗಡ್ಡೆಗಳಲ್ಲಿ ಬೇಡ ಸಮುದಾಯವರೇ ಹೆಚ್ಚು ಜನಸಂಖ್ಯೆಯಲ್ಲಿ ಅಂದರೆ ಶೇಕಡ ೬೦% ರಷ್ಟು ಬೇಡರೇ ಇದ್ದಾರೆ. ಇವರಲ್ಲಿ ಬಳಿಗಳು ಇವೆ. ಗುಜ್ಜಲರ, ಮಿನುಗಲರ, ಮುಂಡಲರು, ಗೋಸಲರ್, ಮನ್ನಲರ ಮುಂತಾದ ಬೆಡಗುಗಳನ್ನು ಕಾಣುಬಹುದು. ಬಹುತೇಕರು ವ್ಯವಸಾಯ ಮತ್ತು ಪಶುಪಾಲನೆ ಮಾಡುತ್ತಾರೆ ಹಾಗೂ ಕೂಲಿ ಕೆಲಸ ಮಾಡಿ ಜೀವನ ಸಾಗಿಸುತ್ತಾರೆ. ಇದರ ಜೊತೆಗೆ ಬೇಟೆ ಪದ್ಧತಿಯನ್ನು ಸಾಂಪ್ರದಾಯಿಕವಾಗಿ ರೂಢಿಸಿಕೊಂಡು ಬಂದಿದ್ದಾರೆ.

**ಮಾದಿಗರು:** ಈ ಸಮುದಾಯದವರು ಬೇಡರಿಗಿಂತ ಕಡಿಮೆ ಪ್ರಮಾಣದಲ್ಲಿ ಇದ್ದಾರೆ. ಇವರಲ್ಲಿ ಕೂಡ ಬಳಿಗಳಿವೆ. ಕುರಿಯರು, ಮಾದುರರು, ಹೆಗಡೆಯವರು, ಸೇವಂತಿಗರನ್ನು ಕಾಣಬಹುದು. ಕೆಲವರು ವ್ಯವಸಾಯ ಮತ್ತು ಪಶುಸಂಗೋಪನೆ, ಕೂಲಿ, ಚರ್ಮದಿಂದ ಹಗ್ಗ, ಮಿಣಿ, ಬಾರಕೋಲು,

ಚಪ್ಪಲಿಗಳನ್ನು ತಯಾರಿಸುತ್ತಾರೆ. ಕೆಲವರು ರಾಸಿ ಕಣಗಳಿಗೆ ಹೋಗಿ ಜೋಳ, ಸಜ್ಜೆ, ಶೇಂಗಾ, ಕಾಯಿಪಲ್ಯಗಳನ್ನು ತೆಗೆದುಕೊಂಡು ಬಂದು ಜೀವನ ನಡೆಸುತ್ತಾರೆ.

**ಬ್ರಾಹ್ಮಣರು:** ಎಲ್ಲಾ ನಡುಗಡ್ಡೆಗಳಲ್ಲಿ ಬ್ರಾಹ್ಮಣರು ಇಲ್ಲ. ಕುರಪುರ ಗಡ್ಡೆಯಲ್ಲಿ ಮಾತ್ರ ಬ್ರಾಹ್ಮಣರ ೩ ಕುಟುಂಬಗಳಿವೆ. ಇವರು ನಡುಗಡ್ಡೆ ಜನರಿಂದ ಸ್ವಲ್ಪ ದೂರದಲ್ಲಿ ತಮ್ಮದೆ ಅಗ್ರಹಾರದಲ್ಲಿ ವಾಸವಾಗಿದ್ದಾರೆ. ಇವರು ದತ್ತಾತ್ರೇಯನ ಪ್ರತಿರೂಪವಾದ ಶ್ರೀಪಾದವಲ್ಲಭನ ದೇವಸ್ಥಾನ ಪೂಜಾರಿಗಳಾಗಿ ಪ್ರತಿವರ್ಷ ಒಂದು ಕುಟುಂಬ ಪೂಜಾರಿಕೆ ಮಾಡಬೇಕೆಂದು ಹಂಚಿಕೊಂಡು ಕಾರ್ಯನಿರ್ವಹಿಸುತ್ತ ಜೀವನ ನಡೆಸುತ್ತಾರೆ. ಇವರಲ್ಲಿ ಎರಡು ಪಂಗಡಗಳನ್ನು ಕಾಣಬಹುದು. ವೈಷ್ಣವರು ಮತ್ತು ಸ್ಮಾರ್ಥರು. ಇದೇ ಒಂದು ಕುಟುಂಬದಲ್ಲಿ ಜನಿಸಿದ ಮಹಿಳೆ ಕುರಪುರಗಡ್ಡೆಗೆ ಪ್ರಾಥಮಿಕ ಸ್ಕೂಲ್ ಟೀಚರಾಗಿ ಶ್ರೀಮತಿ ನಳಿನಿ ಪೂಜಾರ ಅವರು ಮತ್ತು ಇದೆ ಗಡ್ಡೆಗೆ ಅಂಗನವಾಡಿ ಟೀಚರಾಗಿ ರಜನಿ ಮೇಡಂ ಕಾರ್ಯನಿರ್ವಹಿಸುತ್ತಾರೆ.

**ವೀರಶೈವರು:** ಇವರಲ್ಲಿ ಜಂಗಮರು, ಪಂಚಮಸಾಲಿಗಳು, ಗೌಡರು, ಬಣಜಿಗರು, ಗಾಣಿಗರು ಎಂಬ ಪಂಗಡಗಳಿವೆ. ಕೆಲವರು ಕೃಷಿ ಮಾಡುತ್ತಾರೆ. ಕೆಲವರು ಕೆಲವು ದೇವರುಗಳಿಗೆ ಪೂಜಾರಿಗಳಾಗಿ ಕಾರ್ಯನಿರ್ವಹಿಸುತ್ತಾರೆ. ಇನ್ನು ಕೆಲವರು ಕೂಲಿ, ಕೆಲಸ ಮಾಡುತ್ತಾರೆ.

**ಅಗಸರು:** ಇವರು ಎಲ್ಲಾ ಸಮುದಾಯದವರ ಬಟ್ಟೆಯನ್ನು ಒಗೆಯುತ್ತಾರೆ. ತಮ್ಮ ಮೂಲ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಕೂಲಿ ಮಾಡುತ್ತಾರೆ, ವ್ಯವಸಾಯ ಮಾಡುತ್ತಾರೆ, ಬೇಟೆಯಾಡುತ್ತಾರೆ.

**ಕುಂಬಾರರು:** ಇವರು ತಮ್ಮ ಮೂಲ ವೃತ್ತಿಯನ್ನು ಮಾಡದೇ ಕೂಲಿ, ಪಶುಸಾಕಣೆಯನ್ನು ಮಾಡಿ ಜೀವನ ಮಾಡುತ್ತಾರೆ.

**ಉಪ್ಪಾರರು:** ಎಲ್ಲಾ ನಡುಗಡ್ಡೆಗಳಲ್ಲಿ ಉಪ್ಪಾರ ಸಮುದಾಯ ಇಲ್ಲ. ದೇವರ ಗಡ್ಡೆಯಲ್ಲಿ ಮಾತ್ರ ಉಪ್ಪಾರರ ಕುಟುಂಬಗಳಿವೆ. ವ್ಯವಸಾಯವನ್ನು ಮಾಡುತ್ತಾರೆ. ಪಶುಸಾಕಾಣಿಕೆ ಮತ್ತು ಕೂಲಿಕೆಲಸ ಮಾಡುತ್ತಾರೆ.

**ಕ್ಷೌರಿಕರು:** ಜಲದುರ್ಗ ನಡುಗಡ್ಡೆಯಲ್ಲಿ ಮಾತ್ರ ಇರುವರು. ೨ ಕುಟುಂಬಗಳಿದ್ದು, ಇವರು ತಮ್ಮ ಮೂಲ ವೃತ್ತಿಯನ್ನು ಮುಂದುವರಿಸಿಕೊಂಡು ಜೀವನ ಮಾಡುತ್ತಾರೆ. ಜೊತೆಗೆ ಪಶುಸಾಕಾಣಿಕೆ ಮಾಡುತ್ತಾರೆ.

**ಬಡಿಗೇರರು:** ಇವರು ತಮ್ಮ ಮೂಲ ವೃತ್ತಿಯೊಂದಿಗೆ ವ್ಯವಸಾಯ ಮತ್ತು ಪಶುಸಾಕಾಣಿಕೆ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ.

**ವಡ್ಡರು:** ಇವರು ಕಲ್ಲು ಒಡೆಯುವ ವೃತ್ತಿಯ ಜೊತೆಗೆ ವ್ಯವಸಾಯ ಮತ್ತು ಪಶುಸಾಕಾಣಿಕೆ ಮಾಡಿಕೊಂಡು ಕೂಲಿ ಕೆಲಸ ಮಾಡಿ ಜೀವನ ಮಾಡುತ್ತಾರೆ. ಜೊತೆಗೆ ಬೇಟೆಯಾಡುತ್ತಾರೆ.

**ಕುರುಬರು:** ನಡುಗಡ್ಡೆಗಳಲ್ಲಿ ಬೇಡ ಸಮುದಾಯದ ನಂತರ ಬರುವ ದೊಡ್ಡ ಸಮುದಾಯವೇ ಕುರುಬ ಸಮುದಾಯ. ಇವರ ಮೂಲ ಕಸಬು ಕುರಿಸಾಕಾಣಿಕೆ. ಇದರೊಂದಿಗೆ ವ್ಯವಸಾಯ ಮಾಡುತ್ತಾರೆ, ಬೇಟೆಯಾಡುತ್ತಾರೆ. ಕುರುಬರೆಂದರೆ ಪೂಜಾರಿಗಳು ಎಂದು ಕರೆಯುವುದುಂಟು. ಪೂರ್ವದಲ್ಲಿ ಒಂದೇ ಸಮುದಾಯವಾಗಿದ್ದು, ನಂತರದಲ್ಲಿ ಹಲವಾರು ಒಳಪಂಗಡಗಳಾಗಿ ವಿಭಜನೆಯಾಗಿರುವುದು ಕಂಡು ಬರುತ್ತದೆ. ಅವರಲ್ಲಿ ಪ್ರಮುಖವಾಗಿ ಹತ್ತಿ ಕಂಕಣದ ಕುರುಬರು, ಉಣ್ಣೆಕಂಕಣ ಕುರುಬರು, ಮಿಶ್ರ ಕಂಕಣದವರು, ಹಂಡೆ ಕುರುಬರು, ಒಡೆಯರು ಮುಂತಾದವುಗಳನ್ನು ಹೆಸರಿಸಬಹುದು. ಗೆಜ್ಜಿನವರು, ಮನ್ನೆನವರು, ಎಮ್ಮೆಲ್ಲವರು, ಪಾಲಿನವರು, ಹೂವಿನವರು, ಸಂಪಿಗೆ, ಅಮಗೊಂಡೆ ಇನ್ನು ಮುಂತಾದವುಗಳನ್ನು ಕಾಣಬಹುದು.

**ಕಬ್ಬಲಿಗರು:** ನಡುಗಡ್ಡೆಗಳಲ್ಲಿ ಕುರುಬರ ನಂತರ ಅತಿ ಪ್ರಮಾಣದಲ್ಲಿ ಬರುವವರು ಕಬ್ಬಲಿ ಸಮುದಾಯದವರು. 'ಬೇಟೆಯಾಡಿ ಬೇಡನಾದ ಬಲೆಬೀಸಿ ಬೆಸ್ತನಾದ' ಎನ್ನುವ ಹಾಗೆ ಬೆಸ್ತರು ಮೂಲ ವೃತ್ತಿ ದೋಣಿ ನಡೆಸುವ ಕಾರ್ಯ ಮತ್ತು ಮೀನುಗಾರಿಕೆ ಮಾಡುತ್ತಾರೆ. ಇದರೊಂದಿಗೆ ವ್ಯವಸಾಯ, ಪಶುಸಾಕಾಣಿಕೆ, ಕೂಲಿ, ಬೇಟೆ ಕೂಡ ಆಡುತ್ತಾರೆ. ಇವರಲ್ಲಿ ಒಳ ಪಂಗಡಗಳಿವೆ. ಬಾರಿಕ, ಮಡ್ಡೇರು, ಬೋಯಿ, ಇನ್ನು ಮುಂತಾದವು. ಇವರಲ್ಲಿ ಬೆಡಗುಗಳಿವೆ. ಹಗೂದವರು, ದಂಡಿನವರು, ಕೂಲಿನವರು, ಬನ್ನೇಲೆವರು, ಚೆಕ್ಕೆಲೇರು ಜಲದವರು, ಮೆಣಸಿಲರು, ಚುಟ್ಟಿಗರು, ಬಾರ್ಕೀರು, ಬಿಲ್ಲಿನವರು ಹೀಗೆ ಅನೇಕ ಬೆಡಗುಗಳನ್ನು ಹೊಂದಿದ್ದಾರೆ.

**ತಳವಾರ:** ತಳವಾರ ಎಂಬುದು ವೃತ್ತಿ ಸೂಚಕವಾದ ಹೆಸರು. ಇವರು ಬೇಡ ಸಮುದಾಯದವರೇ. ಇವರು ಊರಿನ ಕಾವಲುಗಾರ. ಹಿಂದೆ ಕಳ್ಳರನ್ನು ಹಿಡಿಯುವ ಕೆಲಸ ಮಾಡುತ್ತಿದ್ದರೆಂಬ ಬಗ್ಗೆ ಶಿವಕೋಟ್ಯಾಚಾರ್ಯನ ವಡ್ಡಾರಾಧನೆಯಲ್ಲಿದೆ. ಊರು ಕಾವಲು ಮಾತ್ರವಲ್ಲದೆ, ಊರಿನ ತೆರಿಗೆ ವಸೂಲಿ ಮಾಡುವುದು, ವಾಲಿಕಾರಿಕೆ ಮಾಡುವುದು ಇವರ ಕಾರ್ಯಗಳಾಗಿದ್ದವು. ಈಗಲೂ ನಡುಗಡ್ಡೆಗಳಲ್ಲಿ ಸುದ್ದಿಮುಟ್ಟಿಸುವುದಕ್ಕೆ ಇದೆ ಸಮುದಾಯದ ತಳವಾರ ಹೋಗುತ್ತಾನೆ ಮತ್ತು ಗಡ್ಡೆಯ ಪ್ರಮುಖ ವಿಷಯಗಳನ್ನು ಜನರಿಗೆ ಡಂಗುರ ಸಾರುವ ಮೂಲಕ ತಿಳಿಸುವವನು ತಳವಾರನೆ ಆಗಿರುತ್ತಾನೆ. ಈ ವೃತ್ತಿಯ ಜೊತೆಗೆ ವ್ಯವಸಾಯ ಮತ್ತು ಪಶುಸಾಕಾಣಿಕೆ ಮತ್ತು ಬೇಟೆ ಪದ್ಧತಿಯನ್ನು ಮಾಡಿಕೊಂಡು ಜೀವನ ಸಾಗಿಸುತ್ತಾರೆ ಮತ್ತು ಸುಗ್ಗಿಯಲ್ಲಿ ಗಡ್ಡೆಯ ಎಲ್ಲಾ ಜನರ ಹೊಲಗಳಿಗೆ ಹೋಗಿ ರಾಶಿಯಲ್ಲಿ ದಾನ್ಯಗಳನ್ನು ಸಂಗ್ರಹಿಸುತ್ತಾರೆ.

**ಮುಸ್ಲಿಂ:** ಮುಸ್ಲಿಂ ಸಮುದಾಯದವರು ಕೂಡಾ ಇಲ್ಲಿ ಬದುಕನ್ನು ಸಾಗಿಸುತ್ತಿದ್ದಾರೆ. ಇವರು ಕೂಡ ವ್ಯವಸಾಯ, ಪಶುಸಾಕಾಣಿಕೆ ಮತ್ತು ಬೇಟೆ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಇವರಲ್ಲಿ ಕೂಡ ಒಳ ಪಂಗಡಗಳಿವೆ. ಪಿಂಜಾರರು, ಶೇಖ್, ಸೈಯದ್, ಪಠಾಣ್, ಮುಲ್ಲಾ. ನಡುಗಡ್ಡೆಗಳಲ್ಲಿ ಹೆಚ್ಚು ತಮ್ಮ ಸಂಪ್ರದಾಯವನ್ನು ಅನುಸರಿಸಿದೇ ಹಿಂದೂಗಳಂತೆ ಉಡುಪು, ಭಾಷೆ ಬಾಂಧವ್ಯದಿಂದ ಕೂಡಿ ಬಾಳುತ್ತಿದ್ದಾರೆ. ಅತಿ ಹೆಚ್ಚು ಕನ್ನಡವನ್ನೇ ಮಾತನಾಡುತ್ತಾರೆ. ಬುರುಕ ಧರಿಸುವುದಿಲ್ಲ.

ಈ ಎಲ್ಲಾ ನಡುಗಡ್ಡೆಗಳಲ್ಲಿ ಎಲ್ಲಾ ಸಮುದಾಯಗಳ ಜನರು ಅಣ್ಣ ತಮ್ಮರಂತೆ ಜೀವನ ಮಾಡುತ್ತಾರೆ. ಎಲ್ಲರೂ ಪರಸ್ಪರರಾಗಿ ಒಂದು ಮನೆಯ ಕುಟುಂಬದ ಸದಸ್ಯರಂತೆ ಕೂಡಿಕೊಂಡು ಮತ್ತೆ ಒಂದಾಗಿ ಹಬ್ಬ ಹರಿದಿನಗಳಲ್ಲಿ ಭಾಗಿಯಾಗಿ ಸಮುದಾಯದಿಂದ ದೂರವಾಗಿ ಐಕ್ಯಮತ ಬಾಂಧವ್ಯದಿಂದ ಜೀವನ ಸಾಗಿಸುತ್ತಿದ್ದಾರೆ.

## ೩.೧.೨. ವೃತ್ತಿ



ನಡುಗಡ್ಡೆಗಳಲ್ಲಿ ಕೃಷಿ ವ್ಯವಸಾಯ ಮತ್ತು ಪಶುಸಂಗೋಪನೆ ಪ್ರಮುಖ ಉದ್ಯೋಗವಾಗಿದೆ. ಎಲ್ಲಾ ನಡುಗಡ್ಡೆಗಳಲ್ಲಿ ಎಲ್ಲಾ ಸಮುದಾಯಗಳು ಯಾವುದೇ ಸರ್ಕಾರಿ ಉದ್ಯೋಗವನ್ನು ಅವಲಂಬಿಸದೇ ಬದುಕುತ್ತಿದ್ದಾರೆ. ಗುಡಿಕೈಗಾರಿಕೆಗಳು ಕೂಡ ನಡುಗಡ್ಡೆಗಳಲ್ಲಿ ಕಾಣಬರುವುದಿಲ್ಲ. ವ್ಯವಸಾಯದಲ್ಲಿ ಜೋಳ, ಕಡಲೆ, ಸೂರ್ಯಕಾಂತಿ, ಸಜ್ಜೆ, ಹುರುಳಿ, ಶೇಂಗಾ, ಭತ್ತ, ತೊಗರಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ನಡುಗಡ್ಡೆಗಳಲ್ಲಿ ಬೇಡ, ಕುರುಬ, ಮಾದಿಗ, ಕಬ್ಬಲಿಗ ಸಮುದಾಯದವರು ಬಹುಸಂಖ್ಯಾತರಿದ್ದಾರೆ. ಇವರಲ್ಲಿ ಹೆಚ್ಚು ಜನರು ಬೇಸಾಯವನ್ನೆ ಅವಲಂಬಿಸಿದ್ದಾರೆ. ಉಳಿದ ಜನ ಮೀನುಗಾರಿಕೆ, ದೋಣಿ ನಡೆಸುವ ಕಾಯಕ, ಕೂಲಿ ಕೆಲಸ, ಪಶುಸಂಗೋಪನೆ ಮಾಡಿಕೊಂಡು ಉಪಜೀವನ ಮಾಡುತ್ತಾರೆ. ಇನ್ನು ಕೆಲವು ಸಮುದಾಯಗಳಾದ ಪಾಂಚಾಳ, ಬ್ರಾಹ್ಮಣ, ಲಿಂಗಾಯಿತರ ಗಡ್ಡೆಗಳಲ್ಲಿ ಒಂದು ಕುಟುಂಬ ಅಥವಾ ಎರಡು ಕುಟುಂಬಗಳು ಇವೆ. ಇವರು ಗಡ್ಡೆಯಲ್ಲಿರುವ ದೇವರುಗಳ ಪೂಜಾರಿಕೆ ಮತ್ತು ಕೃಷಿಯನ್ನು ಅವಲಂಬಿಸಿ ಜೀವನ ನಡೆಸುತ್ತಿದ್ದಾರೆ.

ದೇವರಗಡ್ಡೆಯಲ್ಲಿ ಪಾಂಚಾಳರ ೩ ಕುಟುಂಬಗಳಿವೆ. ಗದ್ದೆಮ್ಮದೇವಿಯ ಪೂಜಾರಿಕೆಯನ್ನು ಪ್ರತಿವರ್ಷ ಒಬ್ಬರಂತೆ ಕಾರ್ಯ ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ. ಅದೇ ರೀತಿ ಕುರುವಪುರಗಡ್ಡೆ ಯಲ್ಲಿ ಬ್ರಾಹ್ಮಣರ ೩ ಕುಟುಂಬಗಳಿದ್ದು, ಪ್ರತಿ ವರ್ಷ ಒಬ್ಬರಂತೆ ಶ್ರೀಪಾದವಲ್ಲಭ ದೇವರ ಪೂಜಾರಿಕೆಯನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ. ಅಂಬಿಗೇರರು ದೋಣಿ ಕಾಯಕ, ಮೀನುಗಾರಿಕೆ ಮತ್ತು ಕೃಷಿ ಕೂಡಮಾಡುತ್ತಾರೆ. ಜಲದುರ್ಗ ನಡುಗಡ್ಡೆಯಲ್ಲಿ ಒಂದು ಜಂಗಮ ಕುಟುಂಬವಿದ್ದು, ಇವರು ಸಂಗಮನಾಥನ ಪೂಜೆಯನ್ನು ನಿರ್ವಹಿಸುತ್ತಾ ಜೀವನಸಾಗಿಸುತ್ತಿದ್ದಾರೆ. ಎಲ್ಲಾ ನಡುಗಡ್ಡೆಗಳಲ್ಲಿ ಒಂದು ಸಮುದಾಯ ಅಂದರೇ ಕುಂಬಾರರು ಗಡಿಗೆ ಮಾಡುತ್ತಾರೆ.

ಪಾಂಚಾಳರು ಬಡಗಿತನ ಮಾಡುತ್ತಾರೆ. ಕಬ್ಬೇರ, ಬೇಡ, ಕುರುಬ, ಮಾದಿಗ ಈ ಎಲ್ಲಾ ಸಮುದಾಯಗಳು ಕೃಷಿಯೊಂದಿಗೆ ಮೀನುಗಾರಿಕೆ ಮಾಡುತ್ತಾರೆ. ಪಶುಸಂಗೋಪನೆಯಲ್ಲಿ ಕುರಿ, ಕೋಳಿ, ಮೇಕೆ, ಹಸುಗಳನ್ನು ಸಾಕಾಣಿಕೆ ಮಾಡುತ್ತಾರೆ. ಭಟ್ಟಿ ಸಾರಾಯಿ ಮಾಡಿ ಮಾರುವುದು ಸಹ ಇತ್ತಂತೆ. ಕಾನೂನು ನಿಷೇಧದಿಂದ ಕಡಿಮೆಯಾಗಿದೆ ಎಂದು ಹೇಳುತ್ತಾರೆ. ಈ ನಡುಗಡ್ಡೆಗಳಲ್ಲಿ ಈ ಸಮುದಾಯವು ಈ ವೃತ್ತಿ ಮಾಡಬೇಕೆಂಬ ನಿಯಮವಿಲ್ಲ. ಯಾವ ವೃತ್ತಿಯನ್ನು ಯಾರುಬೇಕಾದರೂ ಮಾಡುತ್ತಾರೆ. ಏಕೆಂದರೆ ನಡುಗಡ್ಡೆಯಲ್ಲಿ ಪಾಂಚಾಳರು ಇಲ್ಲ ಎಂದಾಗ ಬಡಗಿತನ ತಾವೇ ಮಾಡಿಕೊಳ್ಳುತ್ತಾರೆ. ಇಲ್ಲವೆ ಬೇರೊಂದು ಸಮುದಾಯ ಅದರಲ್ಲಿ ಅನುಭವವಿದ್ದರೆ ಅವರೆ ಮಾಡುತ್ತಾರೆ. ಹಾಗಾಗಿ ಈ ನಡುಗಡ್ಡೆಗಳಲ್ಲಿ ವೃತ್ತಿಗಳಿಗೆ ನಿಯಮವಿಲ್ಲ. ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳುವುದೇ ಹೆಚ್ಚು ಎಂದು ಕಾಣಬಹುದು. ಮಾದಿಗ ಸಮುದಾಯದವರು ಮಾತ್ರ ಚರ್ಮದಿಂದ ತಯಾರಿಸುವ ವಸ್ತುಗಳನ್ನು ತಯಾರಿಸುತ್ತಿದ್ದರು. ಮಿಣಿ, ಬಾರಕೋಲು, ಚಪ್ಪಲಿ ಈ ತರದ ವಸ್ತುಗಳನ್ನು ಮಾತ್ರ ಮಾದಿಗ ಸಮುದಾಯದವರಲ್ಲಿ ಎಲ್ಲ ಸಮುದಾಯಗಳು ಮಾಡಿಸಿಕೊಳ್ಳುತ್ತಿದ್ದರು. ಇಂದು ಆಧುನಿಕತೆಯಿಂದಾಗಿ ಮಾರಾಟವಾಗದೆ ಅವರು ಕೂಡ ಕೂಲಿ, ಕೃಷಿ, ಪಶುಸಾಕಾಣಿಕೆ ಮಾಡಿ ಜೀವನ ಮಾಡುತ್ತಿದ್ದಾರೆ.

ನೀಲಕಂಠರಾಯನ ನಡುಗಡ್ಡೆಯಲ್ಲಿ ಬೇಡ ಸಮುದಾಯ ಒಂದೇ ಇದೆ. ೪೦ ಕುಟುಂಬಗಳಿದ್ದು, ಈ ಎಲ್ಲಾ ಕುಟುಂಬಗಳು ಕೃಷಿಯನ್ನು ಅವಲಂಬಿಸಿ ಜೀವನ ಮಾಡುತ್ತಿದ್ದಾರೆ. ಕೆಲವರು ಪಶುಸಂಗೋಪನೆ, ಕುರಿ, ಕೋಳಿ, ಹಸುಗಳನ್ನು ಸಾಕಿ ಜೀವನ ನಡೆಸುತ್ತಿದ್ದಾರೆ. ಬೇರೆ ಗಡ್ಡೆಗಳ ತರ ಇಲ್ಲಿ ಯಾವುದೇ ವೃತ್ತಿಗಳು ಕಾಣಬರುವುದಿಲ್ಲ. ಆದರೆ ಬಡಗಿತನ, ಕುಂಬಾರಿಕೆ ಮುಂತಾದವುಗಳನ್ನು ಬೇಡ ಸಮುದಾಯದವರೇ ಮಾಡಿಕೊಳ್ಳುತ್ತಾರೆ. ಇಲ್ಲಿರುವ ನೀಲಕಂಠರಾಯನಿಗೆ ಬೇರೆ ಊರಿನ ಜಂಗಮ(ಗುಡಗುಂಟಿಯಿಂದ) ಬಂದು ಪೂಜೆ ಕಾರ್ಯವನ್ನು ನೆರವೇರಿಸಿ ಹೋಗುತ್ತಾನೆ. ಒಟ್ಟಾರೆ ಯಾಗಿ ನಡುಗಡ್ಡೆಗಳಲ್ಲಿ ಜನ ಅತಿಹೆಚ್ಚು ಅನಕ್ಷರಸ್ಥರಾಗಿದ್ದು, ತಮ್ಮ ನೆಲೆಗೆ ಹೊಂದಿಕೊಂಡು ವಿವಿಧ ಕೆಲಸ ವೃತ್ತಿಗಳಲ್ಲಿ ಪುರುಷರಷ್ಟೇ ಸ್ತ್ರೀಯರು ಸಬಲರಾಗಿ ತಮ್ಮ ಕೆಲಸಗಳನ್ನು ನಿರ್ವಹಿಸುತ್ತಾರೆ.

### ೩.೧.೩ ಕುಟುಂಬ ಪದ್ಧತಿ

ನಮ್ಮ ಸಾಮಾಜಿಕ ಜೀವನಕ್ಕೆ ನೆಲೆಯನ್ನು ಮತ್ತು ಸ್ಥಿರತೆಯನ್ನು ತಂದು ಕೊಡುವುದು ಕುಟುಂಬವೇ. ಉಳಿದೆಲ್ಲ ಸಂಸ್ಥೆಗಳಿಗಿಂತ ಇದು ಹೆಚ್ಚು ಶಾಶ್ವತವೂ ಪ್ರಭಾವಿಯೂ ಆಗಿರುತ್ತದೆ. ಮಾನವನ ವ್ಯಕ್ತಿತ್ವ ಬೆಳೆಸುವ ಮೊದಲ ಸಂಸ್ಥೆ ಎಂದರೆ ಕುಟುಂಬವೆನ್ನಬಹುದು. ಕುಟುಂಬ ಒಂದು ಸಾಮುದಾಯಿಕ ಚೌಕಟ್ಟಿನಲ್ಲಿ ರೂಪತಾಳುತ್ತದೆ. ಕುಟುಂಬವು ಚಿಕ್ಕದಾದ ಸಾಮಾಜಿಕ ಘಟಕವಾಗಿದ್ದು ತಂದೆ–ತಾಯಿ ಮತ್ತು ಮಕ್ಕಳಿಂದ ಕೇಂದ್ರೀಕೃತವಾಗಿರುತ್ತದೆ. ಮಗುವಿನ ಜನನಕ್ಕೆ

ಇದು ಪ್ರಥಮ ಸಾಮಾಜಿಕ ಪರಿಸರವಾಗುತ್ತದೆ. ಅನೇಕ ಸಮಾಜಶಾಸ್ತ್ರಜ್ಞರು ಕುಟುಂಬವನ್ನು ಕುರಿತು ವಿವಿಧ ವ್ಯಾಖ್ಯೆಗಳನ್ನು ಕೊಟ್ಟಿದ್ದಾರೆ. **ಸಮ್ನರ್ ಮತ್ತು ಕೆಲ್ಲರ್** ಪ್ರಕಾರ "ರಕ್ತ ಸಂಬಂಧಿಗಳಿಂದ ಕೂಡಿದ ಮತ್ತು ಕನಿಷ್ಠ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತಿಸೂಕ್ಷ್ಮ ಸಾಮಾಜಿಕ ಸಂಘಟನೆಯೇ ಕುಟುಂಬ" ಎಂದಿದ್ದಾರೆ.

**ಈಲಿಯಟ್ ಮತ್ತು ಮೆರಿಲ್** ಅವರು "ಕುಟುಂಬವು ಜೈವಿಕ ಘಟಕವಾಗಿದ್ದು, ಗಂಡ-ಹೆಂಡತಿ ಮತ್ತು ಮಕ್ಕಳನ್ನು ಒಳಗೊಂಡಿರುತ್ತ"ದೆ ಎಂದಿದ್ದಾರೆ.

**ಎಂ.ಎಫ್. ನಿಮ್‌ಕಾಫ್** ಅವರು "ಮಕ್ಕಳಿರುವ ಅಥವಾ ಇಲ್ಲದ ಗಂಡ-ಹೆಂಡತಿಯರ ಶಾಶ್ವತ ಸಂಗವೆಂದು ಅಥವಾ ಪುರುಷ ಅಥವಾ ಸ್ತ್ರೀಯು ಮಾತ್ರ ಮಕ್ಕಳೊಂದಿಗೆ ಇರುವ ಘಟಕವೆಂದು" ಹೇಳಿದ್ದಾರೆ.

"ಇದು ಜೈವಿಕ ಘಟಕವಾಗಿದ್ದು, ಸಾಂಸಾರಿಕ ರೂಪದಲ್ಲಿ ಗಂಡ-ಹೆಂಡತಿಯಲ್ಲಿ ಲೈಂಗಿಕ ಬಾಂಧವ್ಯವನ್ನು ರೂಪಿಸುವ ಗುಣ ಲಕ್ಷಣಗಳನ್ನು ಹೊಂದಿ ಸಮಾಜದ ಎಲ್ಲಾ ಪ್ರಕಾರಗಳಲ್ಲೂ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತದೆ" ಎಂದು **ಬರ್ಗೆಸ್ ಮತ್ತು ಲಾಕರ್** ಹೇಳಿದ್ದಾರೆ"(ಡಾ. ಗುರುಪ್ರಸಾದ್ ಎಚ್.ಎಸ್., ೨೦೦೮, ಪು. ೩೯). ನಡುಗಡ್ಡೆಗಳಲ್ಲಿ ಕುಟುಂಬ ಪದ್ಧತಿಯನ್ನು ನೋಡಿದಾಗ ಸಾಮಾನ್ಯವಾಗಿ ಪಿತೃಪ್ರಧಾನ ಕುಟುಂಬ ಮತ್ತು ಮಾತೃಪ್ರಧಾನ ಕುಟುಂಬ ಪದ್ಧತಿಯನ್ನು ಕಾಣಬಹುದಾಗಿದೆ.

ನಡುಗಡ್ಡೆಗಳಲ್ಲಿ ಹೆಚ್ಚಾಗಿ ಪಿತೃಪ್ರಧಾನ ಕುಟುಂಬ ಪದ್ಧತಿಯನ್ನು ಕಾಣುತ್ತೇವೆ. ಕೆಳವರ್ಗದವರಲ್ಲಿ ಮಾತೃಪ್ರಧಾನ ಕುಟುಂಬ ಪದ್ಧತಿ ಇದೆ. ಕಾರಣ ದೇವದಾಸಿ ಪದ್ಧತಿ. ಇದು ಕೆಳವರ್ಗದವರಲ್ಲಿ ಮಾತ್ರ ಮಾದಿಗರಲ್ಲಿ ಕಂಡುಬರುತ್ತದೆ.

ಪಿತೃಪ್ರಧಾನ ಕುಟುಂಬ ಪದ್ಧತಿ ಎಲ್ಲಾ ವರ್ಗಗಳಲ್ಲಿ ಕಂಡುಬರುತ್ತದೆ. ನಾಯಕರು, ಹರಿಜನರು, ನೇಕಾರರು, ಕುರುಬರು, ಅಂಬಿಗೇರ, ಬ್ರಾಹಣರು, ಲಿಂಗಾಯಿತರು. ಕುಟುಂಬದ ಹಿರಿಯನಿಂದಲೇ ಮನೆಯನ್ನು ಗುರುತಿಸಲ್ಪಡುತ್ತದೆ. ಕುಟುಂಬದ ನಿರ್ವಹಣೆಯಲ್ಲಿ ತಂದೆಗೆ ಪ್ರಧಾನ ಸ್ಥಾನವಿರುತ್ತದೆ. ಈತನ ನಂತರ ಹಿರಿಯ ಮಗ ಮನೆಯ ಜವಾಬ್ದಾರನಾಗಿರುತ್ತಾನೆ. ಮಾತೃ ಪ್ರಧಾನ ಕುಟುಂಬದಲ್ಲಿ ತಾಯಿಗೆ ಪ್ರಧಾನ ಸ್ಥಾನವಿರುತ್ತದೆ. ಕುಟುಂಬ ಪದ್ಧತಿಯ ಪ್ರಕಾರಗಳಾದ ಅವಿಭಕ್ತ ಕುಟುಂಬ ಮತ್ತು ವಿಭಕ್ತ ಕುಟುಂಬ ಪದ್ಧತಿಗಳನ್ನು ನಡುಗಡ್ಡೆಗಳಲ್ಲಿ ಕಾಣಬಹುದು. ಆದರೆ ಇಲ್ಲಿ ಅತಿ ಹೆಚ್ಚು ಅವಿಭಕ್ತ ಕುಟುಂಬಗಳೇ. ಕಾರಣ ನೀರಿನ ಮಧ್ಯೆ ಇರುವುದರಿಂದ ಸೌಲಭ್ಯಗಳು ಇಲ್ಲದ ಕಾರಣ ಮತ್ತು ಸಮಾಜದ ಜನರ ಮಧ್ಯೆ ಹೆಚ್ಚು ಸಂಪರ್ಕ ಇಲ್ಲದ ಕಾರಣ, ಈ ನಡುಗಡ್ಡೆಗಳಲ್ಲಿ ಅವಿಭಕ್ತ ಕುಟುಂಬಗಳನ್ನು ಹೆಚ್ಚಾಗಿ ಕಾಣಬಹುದು.

**ಅವಿಭಕ್ತಕುಟುಂಬ:** ಅವಿಭಕ್ತ ಕುಟುಂಬಗಳು ಇಂದು ಸಮಾಜದಲ್ಲಿ ಹೆಚ್ಚಾಗಿ ಕಂಡುಬರುತ್ತಿಲ್ಲ. ಆದರೆ ನಡುಗಡ್ಡೆಗಳಲ್ಲಿ ಅತಿ ಹೆಚ್ಚು ಅವಿಭಕ್ತ ಕುಟುಂಬಗಳನ್ನು ಕಾಣಬಹುದು. ಹೊರಗಿನ ಸಮಾಜದಲ್ಲಿ ಕುಟುಂಬದಲ್ಲಿ ತಂದೆ, ತಾಯಿ, ಮಕ್ಕಳು, ಅಣ್ಣ, ತಮ್ಮಂದಿರು, ಸಂಬಂಧಿಕರು ಹೀಗೆ ಪರಸ್ಪರ ವೈಮನಸ್ಸುಗಳಿಂದ ಅವರುಗಳೆಲ್ಲ ಚದುರಿ ವಿಭಕ್ತ ಕುಟುಂಬಗಳಾಗಿವೆ. ನಡುಗಡ್ಡೆಗಳಲ್ಲಿ ಕುಟುಂಬಗಳು ಪರಸ್ಪರವಾಗಿ ಹೊಂದಿಕೊಂಡು ಜೀವನ ಮಾಡುತ್ತಿದ್ದಾರೆ. ಎಲ್ಲೋ ಹತ್ತರಲ್ಲಿ ಒಂದು ಮಾತ್ರ ವಿಭಕ್ತಿ ಕುಟುಂಬ ಕಾಣಬಹದು.

ನಡುಗಡ್ಡೆಗಳಲ್ಲಿ ಎಲ್ಲಾ ಕುಟುಂಬಗಳಲ್ಲೂ ಪರಸ್ಪರ ಸಂಬಂಧ ಗುರುತಿಸುವಲ್ಲಿ ಕೆಲವು ಪಾರಿಭಾಷಿಕ ಪದಗಳನ್ನು ಬಳಸುತ್ತಾರೆ. ಅಜ್ಜ–ಅಜ್ಜಿ, ಅವ್ವ–ತಾತ, ತಂದೆ–ತಾಯಿರನ್ನು ಅಪ್ಪ–ಅವ್ವ ಎಂದು ಒಡಹುಟ್ಟಿದವರನ್ನು ಅಕ್ಕ–ತಂಗಿ, ಅಣ್ಣ–ತಮ್ಮ ಎಂದು ಕರೆಯುತ್ತಾರೆ. ಬೇರೆ ಕುಟುಂಬದ ಸದಸ್ಯರನ್ನು ಕೂಡ ನಡುಗಡ್ಡೆಗಳಲ್ಲಿ ಅಣ್ಣ, ತಮ್ಮ, ಅಕ್ಕ, ತಂಗಿ, ಸೊಸೆ, ಮಾವ ಎಂದು ಭಾವಿಸಿ ಕರೆಯುತ್ತಾರೆ. ಕುಟುಂಬದಲ್ಲಿ ಬರುವ ಆಸ್ತಿ ಹಕ್ಕಿನಲ್ಲಿ ಎರಡು ವಿಧ ೧ ಪಿತ್ರಾರ್ಜಿತ ಆಸ್ತಿ ೨ ಸ್ವಯಾರ್ಜಿತ ಆಸ್ತಿ. ವಂಶಪಾರಂಪರಿಕವಾಗಿ ಬರುವ ಆಸ್ತಿ ಪಿತ್ರಾರ್ಜಿತ ಸ್ವತ್ತು. ತಾನೆ ಸಂಪಾದಿಸಿದ ಆಸ್ತಿ ಸ್ವಯಾರ್ಜಿತ. ಪಿತ್ರಾರ್ಜಿತ ಆಸ್ತಿಯ ಮೇಲೆ ಮಕ್ಕಳಿಗೆ ಹಕ್ಕುಂಟು. ಆದರೆ ಸ್ವಯಾರ್ಜಿತ ಆಸ್ತಿಯ ಮೇಲೆ ಸ್ವತಃ ಮಕ್ಕಳಿಗೆ ಹಕ್ಕಿಲ್ಲ ಎಂಬುದು ರೂಢಿಯಲ್ಲಿದೆ. ಆದರೆ ಈ ಕೆಲವು ನಡುಗಡ್ಡೆಗಳ ಜನರಿಗೆ ಆಸ್ತಿ ಎನ್ನುವುದೇ ಇಲ್ಲ. ಏಕೆಂದರೆ ಅವರು ಇರುವ ನಡುಗಡ್ಡೆ ಗೋಸಾಯಿ ಭೂಮಿ ಮತ್ತು ಅವರ ಹೆಸರಿನಲ್ಲಿ ಇಲ್ಲದಿರುವುದು. ಉದಾಹರಣೆಗೆ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಕಕ್ಕರೆ ಗ್ರಾಮದಿಂದ ೧೦ ಕಿ.ಮೀ ದೂರದಲ್ಲಿರುವ ನಡುಗಡ್ಡೆಯಾದ ನೀಲಕಂಠರಾಯನ ಗಡ್ಡೆ. ಇಲ್ಲಿ ಯಾವ ತರದ ಪಿತ್ರಾರ್ಜಿತ ಆಸ್ತಿ ಇಲ್ಲ ಮತ್ತು ಅವರು ಮಾಡುವ ಕೃಷಿ ಭೂಮಿ, ವಾಸಿಸುವ ಮನೆ ಜಾಗ ಯಾವುದು ಅವರ ಹೆಸರಿನಲ್ಲಿ ಇಲ್ಲ ಎಂದು ಹೇಳಬಹುದು. ಇಲ್ಲಿ ವಾಸಿಸುವ ಸಮುದಾಯ ಒಂದೇ ಸಮುದಾಯ, ಅದು ಬೇಡ ಸಮುದಾಯದವರು. ಸಮಾಜದಲ್ಲಿ ಪ್ರತಿಯೊಬ್ಬರು ಒಂದಲ್ಲ ಒಂದು ಆಸ್ತಿ ಹೊಂದಿರುತ್ತಾರೆ. ಆದರೆ ಇವರು ಯಾವ ಆಸ್ತಿ ಹೊಂದದೆ ಇರುವುದು ಶೋಚನಿಯ ಸಂಗತಿ.

ಕಾನೂನಿನ ಪ್ರಕಾರ ಮನೆಯ ಹೆಣ್ಣು ಮಗಳಿಗೂ ಆಸ್ತಿ ಹಕ್ಕಿದೆ. ಹೆಂಗಸರು ತನ್ನ ಸಹೋದರರ ಸುಖ ಸಂತೋಷಕ್ಕಾಗಿ ತನಗೆ ಆಸ್ತಿ ಬೇಡ ಎಂದು ಹೇಳುತ್ತಾರೆ. ಈ ನಡುಗಡ್ಡೆ ಹೆಣ್ಣು ಮಕ್ಕಳಿಗೆ ತವರಿನ ಆಸ್ತಿ ಎನ್ನುವುದು ಕೂಡ ಇಲ್ಲ. ಮತ್ತೆ ಅಲ್ಲಿ ಮದುವೆಯಾದರೆ ಯಾವ ಆಸ್ತಿ ಇಲ್ಲ. ಉಳಿದ ನಡುಗಡ್ಡೆಗಳಲ್ಲಿ ಅವರ ಹೆಸರಿನಲ್ಲಿ ಇರುವುದನ್ನು ಕಾಣಬಹುದು. ಹೆಣ್ಣುಮಗಳಿಗೆ ಆಸ್ತಿ ಬೇಡ ಬೇಕು ಎಂದು ಕೇಳುವುದು ಇಲ್ಲಿ ರೂಢಿ ಇಲ್ಲ. ಅವರನ್ನು ಮದುವೆ ಮಾಡಿಕೊಟ್ಟ ಮೇಲೆ

ಸಹೋದರ ಆಸ್ತಿಯನ್ನು ಭಾಗಮಾಡಿಕೊಳ್ಳುತ್ತಾರೆ. ಆಸ್ತಿಯನ್ನು ಭಾಗ ಮಾಡಿಕೊಳ್ಳುವುದು ನಡುಗಡ್ಡೆಗಳಲ್ಲಿ ಅತಿ ಕಡಿಮೆ. ಏಕೆಂದರೆ ಅವಿಭಕ್ತ ಕುಟುಂಬಗಳು ಜಾಸ್ತಿ ಇರುವುದರಿಂದ.

### ೩.೧.೪ ಮನೆ ಕಟ್ಟಡ ಶೈಲಿ

ಒಂದು ಸಮುದಾಯವನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕವಾಗಿ ಅರ್ಥ ಮಾಡಿಕೊಳ್ಳಬೇಕಾದರೆ ಸಮಾಜದಲ್ಲಿ ಆ ಸಮುದಾಯಗಳ ಸ್ಥಾನಮಾನಗಳನ್ನು ಆ ಹಳ್ಳಿಯ ಯಾವ ವಲಯದಲ್ಲಿ ಹೇಗೆ ವಾಸಿಸುತ್ತಾರೆ ಎಂಬುದನ್ನು ಗಮನಿಸಬೇಕಾಗುತ್ತದೆ. ಅಲ್ಲಿ ಹೊಂದಿರುವ ಸ್ಥಾನಮಾನಗಳ ಆ ಸಮುದಾಯವು ಊರಿನಲ್ಲಿ ತನ್ನದೇ ಆದ ಸ್ಥಳ ಹಾಗೂ ರೂಪರೇಷೆಗಳನ್ನು ಹೊಂದಿರುತ್ತದೆ ಎಂದರೆ ತಪ್ಪಾಗಲಾರದು. ಊರಿನಲ್ಲಿ ಶ್ರೇಷ್ಠವಾಗಿರುವ ಸಮುದಾಯ ವ್ಯವಸ್ಥೆಯ ಮುಖಾಂತರ ಬ್ರಾಹಣರು, ವೈಶ್ಯರು, ಕ್ಷತ್ರಿಯರು, ಶೂದ್ರರು ಎಲ್ಲಿರಬೇಕು ಹಾಗೂ ತಳ ಸಮುದಾಯಗಳು ಎಲ್ಲಿರಬೇಕು ಎಂಬುದು ಪೂರ್ವ ನಿರ್ಧಾರಿತವಾಗಿವೆ. ಪರಂಪರಾಗತವಾಗಿ ವರ್ಷಾನುಗಟ್ಟಲೆ ಹಿಂದೆಯೇ ನಿರ್ಧರಿಸಲ್ಪಟ್ಟಿರುವಂತೆ ನಮ್ಮ ಸಮಾಜವನ್ನು ಪ್ರತಿಯೊಂದು ಹಳ್ಳಿಯಲ್ಲಿಯೂ ಸೂಕ್ಷ್ಮವಾಗಿ ಗಮನಿಸಿದರೆ ಗೊತ್ತಾಗುತ್ತದೆ.

ನಡುಗಡ್ಡೆಗಳಲ್ಲಿ ಮನೆಗಳು ಅಷ್ಟೊಂದು ಇಲ್ಲ. ಅತಿ ಹೆಚ್ಚು ಗುಡಿಸಲುಗಳನ್ನು ನಾವು ಕಾಣಬಹುದು. ಇತ್ತೀಚೆಗೆ ಕೆಲವು ಮನೆಗಳು ಎದ್ದು ಕಾಣುತ್ತವೆ. ಆಧುನಿಕ ಶೈಲಿಯ ಮನೆಗಳು ಅಲ್ಲ. ಸುಮ್ಮನೆ ಒಂದು ಕೋಣೆ ಮನೆ, ಎರಡು ಕೋಣೆ ಮನೆ, ದೇವರ ಮನೆ ಇಲ್ಲ, ಬಚ್ಚಲ ಮನೆ ಇಲ್ಲ. ಪ್ರತ್ಯೇಕ ಅಡುಗೆ ಕೋಣೆ ಇಲ್ಲ. ಎಲ್ಲವೂ ಒಂದೇ ಕೋಣೆಯಲ್ಲಿರುವುದು ಮತ್ತು ಮನೆಯ ಎಲ್ಲ ಸದಸ್ಯರು ಒಂದೇ ಮನೆಯಲ್ಲಿ ಇರುವುದು ಕಂಡುಬರುತ್ತದೆ.

ಕೆಲವು ನಡುಗಡ್ಡೆಗಳಲ್ಲಿ ಜಲದುರ್ಗ, ದೇವರಗಡ್ಡೆ, ಕುರುವಪೂರಗಡ್ಡೆ ಈ ಗಡ್ಡೆಗಳಲ್ಲಿ ಮನೆ ಕಟ್ಟಡಗಳನ್ನು ನೋಡಿದಾಗ ಅವು ಸುಮಾರು ನೂರಾರು ವರ್ಷಗಳ ಹಿಂದಿನವು. ಅವುಗಳಲ್ಲಿ ಹೆಚ್ಚಾಗಿ ಮಣ್ಣಿನಿಂದ ಮಾಡಿದ ಮನೆಗಳು ಹಾಗೂ ಕಲ್ಲಿನಿಂದ ಕಟ್ಟಿದ ಕಟ್ಟಡಗಳು ಕಂಡುಬರುತ್ತವೆ. ಮಣ್ಣು ಮತ್ತು ಕಲ್ಲುಗಳಿಂದ ಕಟ್ಟಿದ ಮನೆಗಳಿಗೆ ಕಂಬಿಗಳು ಮಾಳಿಗೆಗಳು. ಇಲ್ಲಿ ಕೆಲವರು ಮನೆಯ ಮುಂದೆ ದನ, ಎತ್ತು, ಕುರಿಗಳನ್ನು ಕಟ್ಟಲು ಚಪ್ಪರದ ಕೊಟ್ಟಿಗೆಗಳನ್ನು ಕಟ್ಟಿಸಿದ್ದಾರೆ. ಇವರ ಮನೆಗಳು ಕೆಲವು ಗಡ್ಡೆಗಳಲ್ಲಿ ಸಿಮೆಂಟಿನಿಂದ ನವೀಕರಣಗೊಳ್ಳುತ್ತಿವೆ ಮತ್ತು ಆರ್ಥಿಕವಾಗಿ ಪ್ರಬಲ ಹೊಂದಿದವರು ನವೀಕರಣ ಜೊತೆಗೆ ಅನುಕೂಲಕ್ಕೆ ತಕ್ಕಾಗಿ ಹೆಚ್ಚಾಗಿ ಕೋಣೆಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಮನೆಗಳ ನೆಲಮಟ್ಟದಿಂದ ನಾಲ್ಕು ಐದು ಅಡಿ ಎತ್ತರದಲ್ಲಿ ಮನೆಕಟ್ಟಿಸಿದ್ದಾರೆ. ಇಲ್ಲಿ ಎಲ್ಲಾ ಸಮುದಾಯಗಳಲ್ಲಿ ಒಂದೇ ರೀತಿಯ ಮನೆಗಳು ಮತ್ತು ಗುಡಿಸಲುಗಳನ್ನು ಕಾಣಬಹುದು. ಅತಿ ಹೆಚ್ಚಾಗಿ ನೋಡುವುದಾದರೆ ಸರ್ಕಾರದ ಆಶ್ರಯದ ಯೋಜನೆಯ ಮನೆಗಳಲ್ಲಿ ವಾಸವಾಗಿದ್ದಾರೆ. ಕೆಲವು ಗಡ್ಡೆಗಳಲ್ಲಿ ಆಶ್ರಯ

ಮನೆಗಳು ಕೂಡ ಇಲ್ಲ. ಇಲ್ಲಿ ನಿರ್ಮಿಸಿರುವ ಎಲ್ಲ ಮನೆಗಳು ಜಂತಿಗಳಿಂದ ಕೂಡಿದ ಮನೆಗಳು. ನಡುಗಡ್ಡೆಗಳ ಯಾವುದೇ ಮನೆಗೆ ಶೌಚಾಲಯವಿಲ್ಲ. ಮತ್ತು ಬಚ್ಚಲು ಕೋಣೆ ಇರುವುದಿಲ್ಲ. ಮನೆ ಹಿಂದುಗಡೆ ಅಥವಾ ಮುಂದುಗಡೆ ಮಣ್ಣಿನಿಂದ ಅಥವಾ ಕಲ್ಲಿನಿಂದ ಅಥವಾ ಗಿಡಗಳ ತಪ್ಪಲಿನಿಂದ ಎರಡು ಅಡಿ ಮರೆ ಮಾಡಿಕೊಂಡಿರುತ್ತಾರೆ. ಇಲ್ಲವಾದರೆ ಕೆಲವರು ಮನೆಯ ಮುಂದೆ ಅಥವಾ ಗುಡಿಸಲು ಮುಂದೆ ಬಯಲಿಗೆ ಒಂದು ಕಲ್ಲು ಬಂಡಿ ಹಾಕಿ ಅದರ ಮೇಲೆ ಕುಳಿತು ಜಳಕ ಮಾಡುತ್ತಾರೆ. ಅತಿ ಹೆಚ್ಚಾಗಿ ನಡುಗಡ್ಡೆಗಳಲ್ಲಿ ಇದನ್ನು ಕಾಣಬಹುದು. ಈ ವಿಷಯವನ್ನು ಕ್ಷೇತ್ರಕಾರ್ಯದಿಂದ ತಿಳಿದಿರುತ್ತೇನೆ.

### ೩.೧.೫. ಆಹಾರ ಪದ್ಧತಿ

ನಮ್ಮ ದೇಹದ ಪ್ರತಿಯೊಂದು ಚಟುವಟಿಕೆಗಳಿಗೆ ಆಹಾರವೇ ಮೂಲ ಶಕ್ತಿ. ನೀರು, ಗಾಳಿ, ಆಹಾರ ಈ ಮೂರು ಇರದಿದ್ದರೆ ಮನುಷ್ಯ ಬದುಕುತ್ತಲೇ ಇರಲಿಲ್ಲ. ಮನುಷ್ಯ ಬರೆಯಬೇಕಾದರೆ, ಓದಬೇಕಾದರೆ, ಆಡುವುದು, ಓಡುವುದು, ಕೆಲಸಮಾಡುವುದು, ದೈಹಿಕ ಪ್ರಕ್ರಿಯೆಗಳಿಗೂ ಪಚನಕ್ರಿಯೆ, ಉಸಿರಾಟ, ಹೀಗೆ ಪ್ರತಿಯೊಂದಕ್ಕೂ ಕೂಡ ಆಹಾರವೇ ಮೂಲ ಶಕ್ತಿಯನ್ನು ಒದಗಿಸುವಂತದ್ದು. ಯಾವುದೇ ಪ್ರದೇಶದ ಆಹಾರ ಪದ್ಧತಿಯು ಅಲ್ಲಿಯ ಪರಿಸರಗಳಾದ ವಾಯುಗುಣ, ಭೂಗುಣ, ನೀರಿನ ಸೌಕರ್ಯಗಳಿಗೆ ತಕ್ಕಂತೆ, ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಗೆ ತಕ್ಕಂತೆ ನಿರ್ಮಾಣ ವಾಗಿರುತ್ತದೆ. ಅದರಂತೆ ನಡುಗಡ್ಡೆಗಳಲ್ಲಿ ಆಹಾರ ಪದ್ಧತಿಯನ್ನು ಈ ಕೆಳಗಿನಂತೆ ತಿಳಿಯಬಹುದಾಗಿದೆ. ಇಲ್ಲಿಯ ಎಲ್ಲಾ ನಡುಗಡ್ಡೆಗಳ ಅಡುಗೆ ಪದ್ಧತಿ ಒಂದೇ, ಒಂದೇ ರೀತಿಯ ಅಡುಗೆ ಬಗೆಗಳನ್ನು ಗುರುತಿಸಬಹುದು.

೧. ಸಸ್ಯಾಹಾರ

೨. ಮಾಂಸಾಹಾರ

೩. ರುಚಿಗಳು

೪. ಪಾನೀಯಗಳು

**ಸಸ್ಯಾಹಾರ:** ಇಲ್ಲಿ ವಿವಿಧ ರೀತಿಯ ಆಹಾರದ ಬಗೆಯನ್ನು ಕಾಣಬಹುದು. ಸಾಮಾನ್ಯವಾಗಿ ಪರಿಸರದಲ್ಲಿ ಬೆಳೆಯುವ ಸಸ್ಯವರ್ಗದಿಂದ ತಯಾರುಮಾಡುತ್ತಾರೆ. ಹೆಸರು ಕಾಳು, ಹುರುಳಿ. ಕಡಲೆ, ತೊಗರಿ, ಗಜ್ಜರಿ, ಬದನೆಕಾಯಿ, ಸೌತೆಕಾಯಿ, ಕುಂಬಳಕಾಯಿ, ಬೆಂಡೆಕಾಯಿ, ಕಾಳುಗಳಲ್ಲಿ ಹಾಲಿಪಲ್ಯ, ಸಬ್ಬಕ್ಕಿಪಲ್ಯ ಹಾಕಿ ಅಡುಗೆ ತಯಾರು ಮಾಡುತ್ತಾರೆ.

**ರೊಟ್ಟಿ :** ಜೋಳ ಮತ್ತು ಸಜ್ಜೆಯಿಂದ ಬೀಸಿದ ಹಿಟ್ಟಿನಿಂದ ರೊಟ್ಟಿಯನ್ನು ತಯಾರು ಮಾಡುತ್ತಾರೆ. ಹಿಟ್ಟಿಗೆ ಬಿಸಿ ನೀರನ್ನು ಸೇರಿಸಿ ಹದವಾಗಿ ಮಿದ್ದಬೇಕು. ಮಿದ್ದ ಹಿಟ್ಟನ್ನು ಕೈಗಳಿಂದ ಸಣ್ಣ ಉಂಡೆಮಾಡಿ

ಕೈಯಿಂದ ಅಗಲವಾಗಿ ಮತ್ತು ತೆಳ್ಳಗೆ ತಟ್ಟಿ ಕಾದ ಹೆಂಚಿನ ಮೇಲೆ ಹಾಕಿ ಬೇಯಿಸಬೇಕು. ಎರಡು ಕಡೆ ಬೆಂದ ಮೇಲೆ ರೊಟ್ಟಿ ಸಿದ್ಧವಾಗುತ್ತದೆ. ಅತಿ ಹೆಚ್ಚಾಗಿ ಸಜ್ಜೆ ರೊಟ್ಟಿಯನ್ನು ಇಲ್ಲಿ ಬಳಸುತ್ತಾರೆ.

**ಪಲ್ಯ:** ರೊಟ್ಟಿ ಪಲ್ಯವನ್ನು ಕಾಳುಗಳಿಂದ ಮಾಡಲಾಗುತ್ತದೆ. ಹೆಸರುಕಾಳು, ಅಲಸಂದಿಕಾಳು, ಮಡಿಕೆ ಕಾಳು, ತೊಗರಿಕಾಳು, ಕಡಲೆಕಾಳುಗಳನ್ನು ಬಳಸುತ್ತಾರೆ. ಗೋರಜಿಪಲ್ಯ, ತಿರಸುಪಲ್ಯ, ಅಣ್ಣಿಪಲ್ಯ, ಅಕ್ಕರಿಕೆಪಲ್ಯ, ತೊಟ್ಟಲಿಕಾಯಿ ಇದಕ್ಕೆ ಖಾರ, ಉಪ್ಪು, ಕರಿಬೇವು, ಕೊತ್ತಂಬರಿ, ಜೀರಿಗೆ, ಬೆಳ್ಳುಳ್ಳಿ ಹಾಕಿ ಒಗ್ಗರಣೆ ಹಾಕಿ ತಯಾರಿಸುತ್ತಾರೆ.

**ಅನ್ನ:** ಗಡ್ಡೆಗಳಲ್ಲಿ ಹೆಚ್ಚಾಗಿ ಜೋಳದ ಅನ್ನ, ಸಜ್ಜೆ ಅನ್ನ, ನವಣೆ ಅನ್ನ, ಅಕ್ಕಿ ಅನ್ನ ಮಾಡುತ್ತಾರೆ. ಜೋಳ, ಸಜ್ಜೆಗಳಿಂದ ಬೀಸಿ ನುಚ್ಚನ್ನು ಮಾಡುತ್ತಾರೆ. ಒಂದು ಗಡಿಗೆಗೆ ನೀರು ಹಾಕಿ ಕಾಯಿಸಿ ಅದರಲ್ಲಿ ಉಪ್ಪುಹಾಕಿ ಹುಳಿಮಜ್ಜಿಗೆ ಹಾಕಿ ನುಚ್ಚು ಹಾಕಿ ಚೆನ್ನಾಗಿ ಹದವಾಗಿ ಕಲಕಿ ಬೆಂದ ಮೇಲೆ ಊಟ ಮಾಡುತ್ತಾರೆ. ಇದರಲ್ಲಿ ಮಜ್ಜಿಗೆ, ಹಾಲು ಹಾಕಿಕೊಂಡು ರುಚಿಯಾಗಿ ಕಲಿಸಿ ಉಣ್ಣುತ್ತಾರೆ. ಆರ್ಥಿಕವಾಗಿ ಇದ್ದವರು ಅನ್ನವನ್ನು ಮಾಡುತ್ತಾರೆ. ಮಾಡುವಾಗ ಮೊದಲು ಅಕ್ಕಿಯನ್ನು ತೊಳೆಯು ತ್ತಾರೆ. ನಂತರ ಪಾತ್ರೆಯಲ್ಲಿ ಅಕ್ಕಿ ತೊಳೆದ ಮೇಲೆ ನಾಲ್ಕು ಬೆರಳಿನಷ್ಟು ನೀರು ಹಾಕಿ ಸ್ವಲ್ಪ ರುಚಿಗೆ ತಕ್ಕಂತೆ ಉಪ್ಪುಹಾಕಿ ಬೇಯಿಸಿ ಅನ್ನವನ್ನು ಮಾಡುತ್ತಾರೆ.

**ಮಾಂಸಾಹಾರ:** ನಡುಗಡ್ಡೆಗಳಲ್ಲಿ ಜನರು ಹೆಚ್ಚಾಗಿ ಮಾಂಸಾಹಾರವನ್ನು ಸೇವಿಸುತ್ತಾರೆ. ವಾಲ್ಮೀಕಿ, ಮುಸ್ಲಿಂರು, ಕುರುಬರು, ಕಬ್ಬೇರ, ಹರಿಜನರು ಮುಂತಾದ ಸಮುದಾಯದವರು ಮಾಂಸಾಹಾರವನ್ನು ಬಳಸುತ್ತಾರೆ. ಈ ರೀತಿಯ ಮಾಂಸಾಹಾರಗಳಲ್ಲಿ ಮೀನು, ಕುರಿಮಾಂಸ, ಕೋಳಿ ಮಾಂಸ, ಮೊಟ್ಟೆ, ಮೊಲ, ಉಡ, ಮೇಕೆ ಮುಂತಾದ ಪ್ರಾಣಿಗಳನ್ನು ಬಳಸಿ ಮಾಂಸಾಹಾರವನ್ನು ತಯಾರಿಸಿ ತಿನ್ನುತ್ತಾರೆ. ಮೀನಿನಿಂದ ಮೀನಿನ ಹುಳಿ ಮಾಡಿ ಸೇವಿಸುತ್ತಾರೆ.

**ರುಚಿಗಳು:** ಊಟದ ಜೊತೆಯಲ್ಲಿ ಈ ರೀತಿಯ ರುಚಿಯನ್ನು ಬಳಸುವುದು ಉಂಟು. ಇಲ್ಲಿ ರುಚಿ ಎಂದರೆ ಚಟ್ನಿಪಲ್ಯ, ಉಪ್ಪಿನಕಾಯಿ ಚಟ್ನಿ, ಹುಣಿಸಿಹಿಂಡಿ, ಪುಂಡಿಹಿಂಡಿ, ಹಸಿಮೆಣಸಿನಕಾಯಿ ಹಿಂಡಿ, ಹಪ್ಪಳ ಸಂಡಿಗೆ, ಈರುಳ್ಳಿ, ಸೌವತೇಕಾಯಿ. ಹೀಗೆ ಇವುಗಳನ್ನು ಊಟದ ಜೊತೆಯಲ್ಲಿ ಬಳಸುವುದಂಟು. ಇದನ್ನು ಅತಿ ಹೆಚ್ಚಾಗಿ ಲಿಂಗಾಯಿತರು, ಬ್ರಾಹ್ಮಣರು, ಹಿಂದುಳಿದವರು, ಆರ್ಥಿಕ ವಾಗಿ ಪ್ರಬಲರಾಗಿದ್ದವರು ಬಳಸುತ್ತಾರೆ. ನಡುಗಡ್ಡೆಗಳಲ್ಲಿ ಅತಿಹೆಚ್ಚಾಗಿ ಬಳಕೆಯಾಗುವುದು ಹುಣಿಸಿ ಹಿಂಡಿ. ಇದನ್ನು ಪ್ರತಿಯೊಬ್ಬರೂ ಬಳಸುತ್ತಾರೆ.

**ಪಾನೀಯಗಳು:** ಪಾನೀಯಗಳಲ್ಲಿ ಸಿಹಿ ಪಾನೀಯಗಳು ಮತ್ತು ಮಾದಕ ಪಾನೀಯಗಳೆಂದು ಎರಡು ರೀತಿಯಾಗಿ ಗುರುತಿಸಬಹುದು. ಸಿಹಿ ಪಾನೀಯಗಳಲ್ಲಿ ಷರಬತ್ತುಗಳು. ಇಲ್ಲಿ ಬಳಸುವ

ಪಾನೀಯ ನಿಂಬೆಹಣ್ಣು ಷರಬತ್ತು. ನೀರಿಗೆ ನಿಂಬೆಹಣ್ಣು ರಸ ಹಿಂಡಿ ಸಕ್ಕರೆ, ಏಲಕ್ಕಿ ಹಾಕಿ ಪಾನೀಯನ್ನು ತಯಾರಿಸಿಕೊಳ್ಳುತ್ತಾರೆ. ಮಾದಕ ಪಾನೀಯಗಳಲ್ಲಿ ಇಲ್ಲಿ ಮುಖ್ಯವಾಗಿ ಸಾರಾಯಿ, ಹೆಂಡ ಬಳಸುತ್ತಾರೆ. ಇಂದು ಮಾದಕ ಪಾನೀಯಗಳ ಅಂಗಡಿಗಳು ಮನೆ ಬಾಗಿಲಿಗೆ ಬಂದು ನಿಂತಿವೆ. ಆದರೆ ನಡುಗಡ್ಡೆಗಳಲ್ಲಿ ಸಾರಾಯಿ ಮತ್ತು ಹೆಂಡವನ್ನು ನಡುಗಡ್ಡೆಗಳ ಜನರೆ ತಯಾರಿಸಿಕೊಳ್ಳುತ್ತಾರೆ. ದಣಿವಾರಿಸಿಕೊಳ್ಳಲು ಚಿಂತೆ ಕಳೆಯಲು ಚಟಕ್ಕಾಗಿ ಇವುಗಳನ್ನು ಬಳಸುತ್ತೇವೆ ಎಂದು ಹಲವಾರು ಕಾರಣಗಳನ್ನು ಕೊಡುತ್ತಾರೆ.

**ದೈನಂದಿನ ತಿಂಡಿ ತಿನಿಸುಗಳು:** ನಡುಗಡ್ಡೆಗಳ ಪರಿಸರದಲ್ಲಿ ಸರಳವಾದ ಆಹಾರ ಪದ್ಧತಿ ಕಂಡುಬರುತ್ತದೆ. ಬೆಳಗ್ಗೆ ಮಾಡಿದ ಅಡುಗೆಯಲ್ಲಿ ಸಾಮಾನ್ಯವಾಗಿ ಚಟ್ನಿ, ರೊಟ್ಟಿ ಪಲ್ಯ, ಅನ್ನ, ಸಾರು ಇರುತ್ತದೆ. ಬೆಳಗ್ಗೆ, ಮಧ್ಯಾಹ್ನ ಉಳಿದರೆ ಅದನ್ನು ರಾತ್ರಿ ಬಳಸುತ್ತಾರೆ. ವಾರದಲ್ಲಿ ಒಂದು ಬಾರಿ ಅಥವ ಮನೆಗೆ ಯಾರಾದರೂ ಬೀಗರು ಹೊಸಬರು ಬಂದರೆ ಚಹ, ವಗ್ಗರಣೆ ಮಾಡುತ್ತಾರೆ. ಹೋಟೆಲ್‌ನಲ್ಲಿ ಸಾಯಂಕಾಲ ಸಿಗುವ ಮಿರ್ಚಿಖಾರ ಕೂಡ ಬಳಸುತ್ತಾರೆ. ಇದು ಕೆಲವು ಗಡ್ಡೆಗಳಲ್ಲಿ ಸಿಗುತ್ತದೆ. ಇನ್ನು ಕೆಲವು ಗಡ್ಡೆಗಳಲ್ಲಿ ಏನು ಸಿಗುವುದಿಲ್ಲ. ಮನೆಯಲ್ಲಿ ಮಾಡಿದ ಅಡುಗೆ ಅಷ್ಟೆ.

**ವಿಶೇಷ ಅಡುಗೆಗಳು:** ಜನನ, ನಾಮಕರಣ, ಮರಣ, ತಿಥಿ, ಬಾಣಂತಿ, ಬಸುರಿ, ಹಬ್ಬ, ಮದುವೆ, ಜಾತ್ರೆ ಸಂದರ್ಭಗಳಲ್ಲಿ ವಿಶೇಷವಾದ ಅಡುಗೆಯನ್ನು ಮಾಡುತ್ತಾರೆ. ಹೋಳಿಗೆ, ಸಾರು, ಅನ್ನ, ಮಾಂಸ, ಪಾಯಸ, ಸಿರಾ, ಲಡ್ಡು ಮುಂತಾದ ರೀತಿಯ ಆಹಾರವನ್ನು ತಯಾರಿಸುತ್ತಾರೆ.

**ಹೋಳಿಗೆ:** ಹೋಳಿಗೆಯನ್ನು ಕಡಲೆ ಬೇಳೆ, ತೊಗರಿ ಬೇಳೆ, ಹೆಸರು ಬೇಳೆ ಯಾವುದಾದರು ಒಂದು ಬೇಳೆಯನ್ನು ಚೆನ್ನಾಗಿ ಕುದಿಯುವ ನೀರಿನಲ್ಲಿ ಬೇಯಿಸಿಕೊಂಡು ನೀರನ್ನು ಬಸಿದು ಅದಕ್ಕೆ ಬೆಲ್ಲ, ಏಲಕ್ಕಿ ಹಾಕಿ ಚೆನ್ನಾಗಿ ಒಳಕಲ್ಲಿನಲ್ಲಿ ಅಥವಾ ಬಂಡೆಯ ಮೇಲೆ ರುಬ್ಬಿಕೊಳ್ಳುತ್ತಾರೆ. ನಂತರ ಮೈದಾಹಿಟ್ಟು ನಾದಿಕೊಂಡು ಎಲೆ ತರಮಾಡಿ ಎಣ್ಣೆಹಚ್ಚಿ ಅದರಲ್ಲಿ ರುಬ್ಬಿದ ಹೂರಣ ಮುದ್ದೆಮಾಡಿ ಇಟ್ಟು ಅಗಲವಾಗಿ ತಟ್ಟಿ ರೊಟ್ಟಿಯಾಕಾರ ಮಾಡಿ ಹೆಂಚಿನ ಮೇಲೆ ಸುಡುತ್ತಾರೆ.

**ಶ್ಯಾವಿಗೆ:** ಶ್ಯಾವಿಗೆಯನ್ನು ಗೋಧಿಹಿಟ್ಟಿನಿಂದ ಮಾಡುತ್ತಾರೆ. ಹಿಟ್ಟನ್ನು ಹದವಾಗಿ ಮೆದ್ದು ನೆನೆಹಾಕಿ ನಂತರ ಸಣ್ಣ ಸಣ್ಣ ಉಂಡಿಗಳನ್ನು ಮಾಡಿ ಅಗಲ ಮತ್ತು ಉದ್ದವಾದ ಕಟ್ಟಿಗೆ ಮಣೆಯ ಮೇಲೆ ಒಬ್ಬರು ಕುಳಿತು ಉಂಡಿಗಳನ್ನು ತೆಗೆದುಕೊಂಡು ಎರಡು ಕೈಗಳಿಂದ ಹಿಂದಕ್ಕೆ ಮುಂದಕ್ಕೆ ಬಸಿಯುತ್ತಾರೆ. ಇನ್ನೊಬ್ಬರು ಹಗ್ಗತರ ಅಥವಾ ದಾರವಾಗಿ ಬರುವ ಶ್ಯಾವಿಗೆಯನ್ನು ಮರನೋ ಅಥವಾ ರೊಟ್ಟಿಯಬುಟ್ಟಿಯನ್ನು ಬಾರಲು ಹಾಕಿ ಅದರ ಮೇಲೆ ಶ್ಯಾವಿಗೆ ಹೊಂದಿಸುತ್ತಾ ಹೋಗುತ್ತಾರೆ. ನಂತರ ಅದನ್ನು ಬಿಸಿಲಿನಲ್ಲಿ ಒಣಗಿಸಿ ಮನೆಯಲ್ಲಿ ಗಡಿಗೆಗಳಲ್ಲಿ ತುಂಬಿಬಿಡುತ್ತಾರೆ. ಊಟ

ಮಾಡಬೇಕಾದ ಶ್ಯಾವಿಗೆಯನ್ನು ತೆಗೆದು ಒಂದು ಪಾತ್ರೆಯಲ್ಲಿ ಬಿಸಿಬೀರು ಕಾಸಿ ಅದರಲ್ಲಿ ಶ್ಯಾವಿಗೆ ಹಾಕಿ ನೀರನ್ನು ಬಸಿದು ಬೆಲ್ಲ ತುಪ್ಪ ಕಲಿಸಿ ಊಟ ಮಾಡುತ್ತಾರೆ.

**ಗಿಣ್ಣು:** ನಡುಗಡ್ಡೆಗಳಲ್ಲಿ ಅತಿ ಹೆಚ್ಚಾಗಿ ಗಿಣ್ಣು ರೊಟ್ಟಿ ಬಳಸುತ್ತಾರೆ. ಏಕೆಂದರೆ ಪಶುಸಂಗೋಪನೆ ಅತಿ ಇರುವುದರಿಂದ. ಹಸುವಿನ ಹಾಲಿನಲ್ಲಿ ಮಾಡುವ ಈ ಗಿಣ್ಣು ಇಲ್ಲಿ ಅಮೃತಕ್ಕೆ ಸಮಾನವೇ ಸರಿ. ಹಸು ಕರು ಹಾಕಿದ ಮೇಲೆ ಸುಮಾರು ಒಂದು ವಾರದವರೆಗೂ ಗಿಣ್ಣಾಲುಕೊಡುತ್ತದೆ. ಆ ಹಾಲನ್ನು ಕರೆದು ಒಂದು ಪಾತ್ರೆಗೆ ತುಂಬಿಟ್ಟು, ಇದನ್ನು ಮೊದಲು ಮನೆ ದೇವರ ಪೂಜಾರಿಗಳಿಗೆ ಕೊಡುತ್ತಾರೆ. ಮತ್ತು ಮನೆಯ ಸುತ್ತಮುತ್ತಲ ಜನರಿಗೆ ಒಂದೊಂದು ತಂಬಿಗೆ ಹಾಲು ಕೊಡುತ್ತಾರೆ. ಆ ತಂಬಿಗೆಗೆ ಅವರು ಅಕ್ಕಿನೋ ಗೋಧಿನೋ ಹಾಕಿ ಕೊಡುತ್ತಾರೆ. ಗಿಣ್ಣವನ್ನು ಮಾಡಿದಾಗ ಇದನ್ನು ಬಿಸಿ ತಿಂದರೆ ಅಷ್ಟುರುಚಿಸುವುದಿಲ್ಲ. ರಾತ್ರಿ ಮಾಡಿಟ್ಟು ಬೆಳಗ್ಗೆ ತಿಂದರೆ ತುಂಬ ರುಚಿಯಾಗಿರುತ್ತದೆ.

### ೩.೧.೬ ನ್ಯಾಯ ಪದ್ಧತಿ

ಸಮಾಜದಲ್ಲಿ ಇರುವ ಪ್ರತಿಯೊಬ್ಬ ವ್ಯಕ್ತಿಯು ಆಯಾ ಸಮಾಜದ ರೀತಿ ನೀತಿ ನಿಯಮಗಳಿಗೆ ಕಟ್ಟುಪಾಡುಗಳಿಗೆ ಒಳಗಾಗಿರಬೇಕಾಗುತ್ತದೆ. ನ್ಯಾಯ ವ್ಯವಸ್ಥೆಯು ಇದು ತಪ್ಪು, ಇದು ಸರಿ, ಹೀಗೆ ಮಾಡಬಾರದು, ಹೀಗೆ ಮಾಡಬೇಕು, ಅನ್ಯಾಯ, ನ್ಯಾಯ, ಒಳ್ಳೆಯದು, ಕೆಟ್ಟದು, ಹೀಗೆ ಅದರದೇ ಆದಂತಹ ಕೆಲವು ವ್ಯವಸ್ಥೆಗಳಿರುತ್ತವೆ. ಮಾಡಿರುವ ಅಪರಾಧವನ್ನು ಕ್ಷಮಿಸುತ್ತಾ ಇಲ್ಲವೇ ಶಿಕ್ಷೆಯನ್ನು ನೀಡುವುದರ ಮೂಲಕ ಜನರಿಗೆ ತಿಳುವಳಿಕೆಯನ್ನು ನೀಡುವುದರ ಮೂಲಕ ಕೆಟ್ಟದ್ದನ್ನು ಒಳ್ಳೆಯದನ್ನಾಗಿ ಪರಿವರ್ತಿಸುತ್ತಾ ನ್ಯಾಯ ತೀರ್ಮಾನವನ್ನು ನೀಡಿಕೊಂಡು ಬರಲಾಗುತ್ತದೆ.

ಕುಟುಂಬದಲ್ಲಿ ಸಣ್ಣ ಪುಟ್ಟ ಜಗಳಗಳಿದ್ದರೆ ಮನೆಯ ಯಜಮಾನ ಇಲ್ಲವೇ ಅಣ್ಣ ತಮ್ಮಂದಿರು ಕೂಡಿ ಬಗೆಹರಿಸುತ್ತಾರೆ. ಗಂಡ, ಹೆಂಡತಿ, ಅತ್ತೆ, ಸೊಸೆ, ಅತ್ತಿಗೆ, ಮೈದುನ ಮುಂತಾದವರ ನಡುವೆ ಜಗಳ ನಡೆದರೆ ಕುಟುಂಬದ ಯಜಮಾನ ಜಗಳವನ್ನು ಬಗೆಹರಿಸುತ್ತಾನೆ. ಕುಟುಂಬದಲ್ಲಿ ಬಗೆಹರಿಯದ ಜಗಳವನ್ನು ಬಗೆಹರಿಸಲು ಬೀಗರು, ನೆಂಟರು ಪ್ರಯತ್ನಿಸುತ್ತಾರೆ. ಅವಾಗಲೂ ಸಾಧ್ಯವಾಗದಿದ್ದಾಗ ಆ ಸಮುದಾಯದ ಹಿರಿಯ ಅನುಭವಸ್ಥ ವ್ಯಕ್ತಿ ತಿಳಿಹೇಳಿ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನಿಸುತ್ತಾರೆ. ನ್ಯಾಯದ ವಿಷಯಗಳೆಂದರೆ ಆಸ್ತಿ ಹಂಚಿಕೆ, ರಕ್ತ ಸಂಬಂಧದ ಮನಸ್ತಾಪ, ಭೂಮಿ ಮತ್ತು ಗಡಿಗಳ ಬಗ್ಗೆ ತಕರಾರು, ಸಾಲ ಮರುಪಾವತಿ ವಿಷಯ, ಬಲತ್ಕಾರದ ಪ್ರಕರಣಗಳು, ಮೋಸ, ವಂಚನೆ, ಕಳ್ಳತನ ಪ್ರಕರಣಗಳು, ಜಾತ್ರೆ ತೇರು, ದನಕರಗಳ ಬಗ್ಗೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ನ್ಯಾಯ ತೀರ್ಮಾನ ಮಾಡುತ್ತಾರೆ. ಎಲ್ಲ ನಡುಗಡ್ಡೆಗಳಲ್ಲಿ ಒಂದು ತರದ ನ್ಯಾಯ ಪದ್ಧತಿ ಒಳಗೊಂಡಿದೆ. ಏಕೆಂದರೆ ಸಣ್ಣ ಪ್ರಮಾಣದ ಜನಸಮೂಹ ಇರುವುದರಿಂದ ಎಲ್ಲ

ಸಮುದಾಯಗಳು ಒಂದೇ ಮನೆಯ ಸದಸ್ಯರಂತೆ ಮತ್ತು ಸಮುದಾಯದಲ್ಲಿ ಬೇರೆಯಿದ್ದರು ಭಾವನೆಯಲ್ಲಿ ಒಂದೇ ಸಮುದಾಯದವರಂತೆ ನಡೆದುಕೊಂಡು ಹೋಗುತ್ತಾರೆ. ಆದರೆ ದೇವರಗಡ್ಡೆ ಮತ್ತು ಕುರವಮರಗಡ್ಡೆಯಲ್ಲಿ ಮಾತ್ರ ಮಾದಿಗರ ಸಮುದಾಯವನ್ನು ಏಕವಚನದಲ್ಲಿ ಸಂಭಾಷಣೆ ಮಾಡುವುದನ್ನು ಕ್ಷೇತ್ರಕಾರ್ಯಕ್ಕೆ ಹೋದಾಗ ತಿಳಿಯಲಾಯಿತು.

ಜನ ಸಾಮಾನ್ಯವಾಗಿ ತಮ್ಮದೇ ಆದ ಗಡ್ಡೆಯಲ್ಲಿ ಒಂದೇ ನ್ಯಾಯ ವ್ಯವಸ್ಥೆ ಕಂಡುಕೊಂಡಿದ್ದಾರೆ ಎಂದು ಹೇಳಬಹುದು. ತಮ್ಮ ಸಮಾಜದ ಯಾವುದೇ ಬಗೆಯ ಆಂತರಿಕ ವ್ಯವಹಾರಗಳನ್ನು ಹೊರ ಬಿಡದೆ ತಮ್ಮ ಗಡ್ಡೆಯಲ್ಲಿ ಅವುಗಳನ್ನು ಪರಿಹರಿಸಿಕೊಳ್ಳುತ್ತಾರೆ. ಪ್ರತಿಯೊಬ್ಬರು ತಮ್ಮ ಗಡ್ಡೆಗಳ ಕಟ್ಟುಪಾಡುಗಳನ್ನು ಪಾಲಿಸಿಕೊಂಡು ಹೋಗುವ ಮನೋಭಾವವನ್ನು ತಾಳಿರುತ್ತಾರೆ. ಅವರ ಬದುಕು ಅಸ್ತವ್ಯಸ್ಥವಾದರೂ ಅವರು ತಮ್ಮ ಸಾಮಾಜಿಕ ವ್ಯವಸ್ಥೆ ಹಾಗೂ ಕಟ್ಟುಪಾಡುಗಳನ್ನು ತುಂಬಾ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಾರೆ. ಅವರಿಗೆ ಪ್ರಾಣಕ್ಕಿಂತ ಮಾನವೇ ಹೆಚ್ಚು ಮುಖ್ಯವಾಗಿದೆ.

ನಡುಗಡ್ಡೆಗಳಲ್ಲಿ ಇರುವವರೆಲ್ಲಾ ನ್ಯಾಯದ ವಿಷಯಗಳಿಗೆ ಸಂಬಂಧಿಸಿದಂತೆ ಒಂದು ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ತಮ್ಮದೇ ಆದಂತಹ ನ್ಯಾಯದ ಕಟ್ಟೆಯನ್ನು ಮಾಡಿಕೊಂಡಿದ್ದಾರೆ. ಆ ನ್ಯಾಯದ ಕಟ್ಟೆಯಲ್ಲಿ ಆಯಾ ಸಮುದಾಯದ ಹಿರಿಯ ಅನುಭಸ್ಥರು ಸೇರಿರುತ್ತಾರೆ. ಅವರೇ ಬಂದಿರುವ ಜಗಳವನ್ನು ಬಗೆಹರಿಸುತ್ತಾರೆ. ಹೀಗೆ ಹಿರಿಯರ ಕೈಯಲ್ಲಿ ಬಗೆಹರಿಯದ ಜಗಳಗಳು ಪಂಚಾಯಿತಿ ಕಟ್ಟೆಗೆ ಹೋಗುತ್ತಿವೆ. ಅಲ್ಲಿಯು ಬಗೆಹರಿಯದಿದ್ದರೆ ಪೊಲೀಸ್ ಠಾಣೆಗೆ, ಕೋರ್ಟಿಗೆ ಹೋಗುತ್ತವೆ. ಆದರೆ ನಡುಗಡ್ಡೆಗಳಲ್ಲಿ ಪೊಲೀಸ್ ಠಾಣೆಗೆ ಹೋಗುವುದಿಲ್ಲ. ಅತಿ ಹೆಚ್ಚಾಗಿ ಪಂಚಾಯಿತಿ ಕಟ್ಟೆಯಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಅಷ್ಟಕ್ಕೂ ಅಲ್ಲಿ ಹೆಚ್ಚು ಜಗಳಗಳು ನಡೆಯುವುದಿಲ್ಲ. ಎಲ್ಲ ಸಮುದಾಯಗಳು ಒಬ್ಬರಿಗೊಬ್ಬರು ಪರಸ್ಪರ ಅಣ್ಣ ತಮ್ಮಂದಿರಂತೆ, ಬಂಧು ಬಳಗದಂತೆ ಒಂದೇ ಮನೆಯ ಸದಸ್ಯರಂತೆ ಜೀವನ ನಡೆಸುತ್ತಾರೆ. ಸಣ್ಣ ಪುಟ್ಟ ಮನಸ್ತಾಪಗಳು ಬಂದರೆ ತಾವೇ ಅವುಗಳನ್ನು ಹಿರಿಯರ ಮೂಲಕ ಬಗೆಹರಿಸಿಕೊಳ್ಳುತ್ತಾರೆ. ಇವತ್ತಿಗೂ ನಡುಗಡ್ಡೆಗಳಲ್ಲಿ ಪೊಲೀಸರು ಅಂದರೆನೆ ಭಯ ಪಡುತ್ತಾರೆ. ತಮ್ಮ ಜಗಳವನ್ನು ಬಗೆಹರಿಸಿಕೊಳ್ಳಲು ನೇರವಾಗಿ ಯಾರು ಪೋಲಿಸ್ ಠಾಣೆಗೆ ಹೋಗುವುದಿಲ್ಲ. ಪಂಚಾಯಿತಿ ಕಟ್ಟೆಯಲ್ಲಿ ಬುದ್ಧಿವಂತ, ಪ್ರಭಾವಶಾಲಿ ವ್ಯಕ್ತಿಗಳು ಸ್ಥಾನವನ್ನು ಪಡೆದಿರುತ್ತಾರೆ. ಹೀಗೆ ಅಪರಾಧಿಯು ಅಥವಾ ವ್ಯಕ್ತಿಯ ದೂರು ಸಲ್ಲಿಸಿದ ಮೇಲೆ ಗಡ್ಡೆಗಳ ಹಿರಿಯರು ಕೂಡಿ ಸಂಪ್ರದಾಯಕ್ಕನುಸಾರವಾಗಿ ನ್ಯಾಯ ತೀರ್ಮಾನ ಮಾಡುತ್ತಾರೆ. ಹೀಗೆ ಕುಟುಂಬದ ಯಜಮಾನ, ನಾಲ್ಕು ಜನರಿಗೆ ಬೇಕಾದ ವ್ಯಕ್ತಿ ನ್ಯಾಯ ತೀರ್ಮಾನ ಮಾಡುತ್ತಾನೆ.

ಈ ರೀತಿಯ ನ್ಯಾಯ ತೀರ್ಮಾನದಲ್ಲಿ ಅಪರಾಧಿಯು ತಪ್ಪುಮಾಡಿದ್ದರೆ ಅವನಿಗೆ ಅರಿವನ್ನು ಮೂಡಿಸಿ ತಪ್ಪು ದಂಡ ಎಂದು ದೈವಕ್ಕೆ ಹಣದ ರೂಪದಲ್ಲಿ ದಂಡವನ್ನು ವಿಧಿಸಲಾಗುತ್ತದೆ.

ನಡುಗಡ್ಡೆಗಳಲ್ಲಿ ಹೆಚ್ಚು ದೈವಗಳನ್ನು ನಂಬಿ ಬದುಕುವುದರಿಂದ ಅಪರಾಧಿಯು ತಪ್ಪು ಮಾಡಿದ್ದರೂ ತಪ್ಪು ಮಾಡಿಲ್ಲ ಎಂದರೆ ದೇವರನ್ನು ಮುಟ್ಟಿ ಆಣೆ ಮಾಡಿಸುವುದು ಮತ್ತು ದೇವರ ಮುಂದೆ ದೀಪ ಹಚ್ಚಿಸುವುದು, ಆತನ ಮಕ್ಕಳ ತಲೆ ಮೇಲೆ ಕೈಯಿಟ್ಟು ಆಣೆ ಮಾಡಿಸುವುದು ಮುಂತಾದವನ್ನು ಮಾಡಲಾಗುತ್ತದೆ. ಹಿರಿಯರು ಹೇಳಿದಂತೆ ಕೇಳುತ್ತಾರೆ. ನ್ಯಾಯ ಹೇಳುವುದಕ್ಕೆ ದೈವದ ಕಟ್ಟೆ ಅಥವಾ ದೇವರ ಗುಡಿ ಹಾಗೂ ಯಾವುದಾದರೊಂದು ಗಿಡದ ಕೆಳಗೆ ಮಾಡಿಕೊಂಡಿರುತ್ತಾರೆ ಇಲ್ಲಿಯೂ ಕೂಡ ಒಂದೊಂದು ಸಲ ಮೋಸ ವಂಚನೆ ನಡೆಯುತ್ತಿರುತ್ತದೆ.

### ೪.೧.೭ ಜನಪದ ವೈದ್ಯ

ಖಾಯಿಲೆಗಳು ಮನುಷ್ಯನಷ್ಟೇ ಪುರಾತನವಾದವು. ಸಂಧಿವಾತ ರೋಗ ಐದು ಸಾವಿರ ವರ್ಷಗಳ ಹಿಂದೆಯೂ ಮನುಷ್ಯರನ್ನು ಕಾಡುತ್ತಿತ್ತು ಎಂಬುದನ್ನು ಆಲ್ಪ್ಸ್ ಪರ್ವತದ ಹಿಮದಡಿ ದೊರೆತ ಒಂದು ದೇಹದ ಪರೀಕ್ಷೆಯ ಮೂಲಕ ವೈದ್ಯರು ಪತ್ತೆಹಚ್ಚಿದ್ದಾರೆ. ಕೆಲವೊಂದು ಖಾಯಿಲೆಗಳ ಹೆಸರುಗಳು ಬದಲಾಗಿರುವ ಸಾಧ್ಯತೆಯೂ ಉಂಟು. ಬಹುಹಿಂದಿನ "ಮಹೇಶ್ವರ ಜ್ವರ" ಈಗಿನ ವಿಷಮಶೀತ ಜ್ವರವೂ "ಮಹೇಶ್ವರಿ ಉಪದ್ರ"(ಮ.ನೆ.ಮ.ಸ., ಪು.೪೮). ಈಗಿನ "ಕಾಲರ"ವು ಆಗಿರುವ ಸಾಧ್ಯತೆ ಬಗ್ಗೆ ಸಂಶೋಧಕರಾದ ಡಾ.ಎಂ.ಚಿದಾನಂದಮೂರ್ತಿಯವರು ಗಮನ ಸೆಳೆದಿದ್ದಾರೆ (ಗುರುಪ್ರಸಾದ್ ಎಚ್.ಎಸ್., ೨೦೦೭, ಪು.೪೮)

ಮನುಷ್ಯನಿಗೆ ಬರದೇ ಮರಕ್ಕೆ ಬರುತ್ತದೆಯೇ ಕಾಯ್ಲೆ? ಎಂಬುದಾಗಿ ಜನಪದರು ಗಾದೆ ಮಾಡಿರುವುದುಂಟು. ಬರಿ ಮರಕ್ಕೆ ಏನು ಎಲ್ಲಾ ಜೀವಿಗಳಿಗೂ ಈ ಖಾಯಿಲೆಯ ಉಪದ್ರವ ತಪ್ಪಿದ್ದಲ್ಲ. ಆದರೂ ನಿಸರ್ಗ ಸಹಜವಾದ ರೀತಿಯಲ್ಲಿ ಪ್ರಾಣಿ, ಪಕ್ಷಿ, ಮರ, ಕೀಟಗಳಿಗಿಂತಲೂ ಮನುಷ್ಯನಿಗೆ ಬರುವ ಖಾಯಿಲೆಗಳ ಸಂಖ್ಯೆ ಹೆಚ್ಚು. ಆತನ ಆಜನ್ಮ ಸಂಗಾತಿಗಳು. ಅವು ನಿಸರ್ಗ ತತ್ವಕ್ಕೆ ವಿರುದ್ಧವಾದ ರೀತಿಯ ಆಹಾರ ಸೇವನೆ ಜೀವನ ಕ್ರಮಗಳನ್ನು ಆತ ಅತಿಯಾಗಿ ಅವಲಂಬಿಸಿದ್ದು, ಇದಕ್ಕೆ ಮುಖ್ಯ ಕಾರಣ. 'ಕೋಣೆ ಮಕ್ಕಳು ಕೊಳೆತೊ, ಬೀದಿ ಮಕ್ಕಳೂ ಬೆಳೆದೋ' ಎಂಬ ನಾಣ್ಣುಡಿಯಂತೆ ಪ್ರಕೃತಿಯ ಎಲ್ಲಾ ವಿದ್ಯಮಾನಗಳಿಗೆ ಮೈಯೊಡ್ಡಿ ಬೆಳೆದವರಿಗಿಂತ ಅತಿ ನಾಜೂಕಿನ ಜೀವನ ಶೈಲಿಗೆ ಕಟ್ಟು ಬಿದ್ದವರು, ನಿತ್ಯ ನೂರೊಂದು ರೋಗ ಪೀಡನೆಯಿಂದ ಬಳಲುವುದನ್ನು ನೋಡುತ್ತೇವೆ.

ಹುಟ್ಟಿದ ಜೀವಿಯನ್ನು ಬದುಕಿರುವ ತನಕ ನೆಗಡಿ, ಕೆಮ್ಮು, ಜ್ವರ, ತಲೆ ನೋವು, ಆಮಶಂಕೆ, ವಾಂತಿ, ಭೇದಿ, ಕಾಮಾಲೆ, ಗಾಯ ಹೀಗೆ ಹತ್ತು ಹಲವು ರೀತಿಯ ಶಾರೀರಿಕ ತೊಂದರೆಗಳು ಸ್ವಾಭಾವಿಕವಾಗಿ ಕಾಡುತ್ತವೆ. ಜನಪದರು ದಿನನಿತ್ಯದ ಜೀವನದಲ್ಲಿ ಇಂಥ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತಿತ್ತು. ಆಸ್ಪತ್ರೆ ಸೌಕರ್ಯಗಳು ದೊರೆಯದಿದ್ದ ಸಂದರ್ಭಗಳಲ್ಲಿ ರೋಗಗಳಿಗೆ

ಪರಿಹಾರಗಳನ್ನು ಜನಪದರೇ ಕಂಡುಕೊಳ್ಳಬೇಕಾಗಿತ್ತು. ಜನಪದರು ಅಪಾರ ಅನುಭವದಿಂದ ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಸುಲಭವಾಗಿ ದೊರೆಯುವ ನಾರುಬೇರುಗಳಿಂದ ಗಿಡಮೂಲಿಕೆಗಳಿಂದ ಸಣ್ಣಮಟ್ಟ ರೋಗಗಳಿಗೆ ಮನೆಯಲ್ಲಿ ಔಷಧಿಯನ್ನು ತಯಾರು ಮಾಡಿಕೊಂಡು ರೋಗವನ್ನು ವಾಸಿಮಾಡಿಕೊಳ್ಳುತ್ತಿದ್ದರು. ಒಂದೊಂದು ಕಾಯಿಲೆಯನ್ನು ಗುಣಪಡಿಸಿ ಒಂದೊಂದು ಔಷಧಿ ಬಳಸಬೇಕೆಂಬುದನ್ನು ಅನುಭವದಿಂದ ಅರಿತರು. ತಲೆಮಾರಿನಿಂದ ತಲೆಮಾರಿಗೆ ಗುರುವಿನಿಂದ ಶಿಷ್ಯನಿಗೆ, ತಂದೆಯಿಂದ ಮಗನಿಗೆ ಈ ವಿದ್ಯೆ ಪ್ರಸಾರವಾಯಿತು. ಈ ವಿದ್ಯೆಯಲ್ಲಿ ಪಾರಂಪರಗತರಾದವರು ಆಯಾ ಪರಿಸರದಲ್ಲಿ ಗೌರವವನ್ನು ಪಡೆದರು. ಇವರನ್ನು ನಮ್ಮ ಗ್ರಾಮೀಣ ಜನರು ಜನಪದ ವೈದ್ಯರೆಂದು ಅಥವಾ ಪಂಡಿತರೆಂದೂ ಕರೆಯುವುದು ವಾಡಿಕೆ. ತಾವು ಕೊಟ್ಟ ಔಷಧಿಗಳಿಗೆ ಯಾವ ಪ್ರತಿಫಲವನ್ನು ಅವರು ಅಪೇಕ್ಷೆ ಪಡದೇ ಎಲ್ಲರಿಗೂ ಹೇಳಿದರೆ ಅದರ ಮಹತ್ವ ಕಡಿಮೆಯಾಗಬಹುದು ಅಥವಾ ವಿದ್ಯೆ ಎಲ್ಲ ಅವಿವೇಕಿಗಳ ಕೈಸೇರಿ ಜನರಿಗೆ ಕೆಡುಕಾಗಬಹುದು ಎಂಬ ದೃಷ್ಟಿಯಿಂದ ಈ ವೈದ್ಯರು ಔಷಧಿಗಳ ಮತ್ತು ಗಿಡಮೂಲಿಕೆಗಳ ಹೆಸರುಗಳನ್ನು ಗುಪ್ತವಾಗಿಡುತ್ತಾರೆ.

ಜನಪದ ವೈದ್ಯರ ಇತಿಹಾಸ ದೊಡ್ಡದಾಗಿದ್ದರೂ ಸ್ಪಷ್ಟವಾಗಿ ಗುರುತಿಸುವುದು ಬಹಳ ಕಷ್ಟವಾದ ಕೆಲಸ. ಏಕೆಂದರೆ ಅದು ಮಾನವನ ಇತಿಹಾಸದೊಂದಿಗೆ ಹಾಸುಹೊಕ್ಕಾಗಿ ಬಂದಿದೆ. ಅದರ ಉಗಮ ಮತ್ತು ವಿಕಾಸ ಎಲ್ಲಿಯೂ ಸ್ಪಷ್ಟವಾಗಿ ದಾಖಲಾಗಿಲ್ಲ. ಜನಪದ ವೈದ್ಯಾಧ್ಯಯನ ಇತಿಹಾಸ ಜಾನಪದ ಇತರ ರೂಪಗಳ ಅಧ್ಯಯನದಿಂದ ಬೇರೆಯಾದುದಲ್ಲ. ಎಲ್ಲಾ ಅಧ್ಯಯನಗಳಂತೆ ಇಲ್ಲಿಯೂ ಮೊದಲಿಗೆ ಸಾಹಿತ್ಯಿಕ ಅಥವಾ ಭಾಷಾ ವೈಜ್ಞಾನಿಕ ದೃಷ್ಟಿಯಿದ್ದು ಅನಂತರ ಸಾಮಾಜಿಕ ಮತ್ತು ಕ್ರಿಯಾತ್ಮಕ ದೃಷ್ಟಿಗೆ ಹೊರಳಿರುವುದು ಕಂಡು ಬರುತ್ತದೆ. ಜಾನಪದದ ತಾತ್ವಿಕ ಅಧ್ಯಯನದ ಸೆಳೆತಕ್ಕೊಳಗಾದ ಯುರೋಪಿಯನ್ ಜಾನಪದ ಅಧ್ಯಯನಕಾರರು ಹತ್ತೊಂಬತ್ತನೆಯ ಶತಮಾನದಲ್ಲೇ ಮಂತ್ರಗಳ (Charms) ಸಂಗ್ರಹಕ್ಕೆ ತೊಡಗಿ ಅವುಗಳ ಪರಂಪರೆ ಹಾಗೂ ಭಾಷಾ ವೈಜ್ಞಾನಿಕ ಅಧ್ಯಯನಕ್ಕೆ ಒತ್ತು ಕೊಟ್ಟಿರುವುದು ಕಂಡುಬರುತ್ತದೆ. ಫ್ರೇಜರ್ ಅವರಿಂದ ತೊಡಗಿ ಮಲಿನೋಸ್ಕಿ ಅವರವರೆಗೆ ನಡೆದ ಮಂತ್ರ ವಿದ್ಯೆಯ ಅಧ್ಯಯನ, ನಾನಾ ಮುಖಗಳಿಂದ ಜನಪದ ವೈದ್ಯವನ್ನು ಅರಿತುಕೊಳ್ಳುವ ಅವಕಾಶವನ್ನು ವಿಸ್ತರಿಸಿದೆ. ಅದರಲ್ಲೂ ಅನುಕರಣಾತ್ಮಕ ಹಾಗೂ ಸೋಂಕು ಮಂತ್ರವಿದ್ಯೆಯ ಬಗೆಗಿನ ಸಾಮಗ್ರಿ ಉಪಯುಕ್ತವಾದುದು(ಡಾ.ಗುರುಪ್ರಸಾದ್ ಎಚ್.ಎಸ್., ೨೦೦೭, ಪು.೫೦)

ಜನಪದ ವೈದ್ಯವನ್ನು ಅದರ ಕ್ರಮಬದ್ಧ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗಿ ಮಾನವ ವೈದ್ಯ ಮತ್ತು ಪ್ರಾಣಿ ವೈದ್ಯ ಎಂದು ವಿಭಜಿಸಿಕೊಳ್ಳಬಹುದು. ನಡುಗಡ್ಡೆಗಳಲ್ಲಿ ಮಾನವ ವೈದ್ಯಪದ್ಧತಿ ಮತ್ತು ಪ್ರಾಣಿ ವೈದ್ಯಪದ್ಧತಿ ರೂಢಿಯಲ್ಲಿದೆ ಎಂದು ಹೇಳಬಹುದು. ಇವತ್ತಿಗೂ ನಡುಗಡ್ಡೆಗಳಲ್ಲಿ

ವೈದ್ಯಪದ ಅತಿಹೆಚ್ಚು ಬಳಕೆಯಲ್ಲಿದೆ. ಪ್ರಪಂಚ ವಿಜ್ಞಾನ ಕ್ಷೇತ್ರದಲ್ಲಿ ಮುಂದುವರೆದರು ನಡುಗಡ್ಡೆಗಳ ಜನರು ಆಧುನಿಕತೆಯಿಂದ ದೂರ ಉಳಿದು ಆಸ್ಪತ್ರೆಗಳನ್ನು ಅವಲಂಬಿಸದೆ ಪಾರಂಪರಿಕವಾಗಿ ನಡೆದುಬಂದ ವೈದ್ಯ ಪದ್ಧತಿಯನ್ನು ಇಲ್ಲಿನ ಜನರು ಅತಿಹೆಚ್ಚು ಉಪಯೋಗಿಸುತ್ತಾರೆ. ಸರಿಯಾದ ಸಮಯಕ್ಕೆ ಅವರಿಗೆ ಸರ್ಕಾರಿ ವೈದ್ಯಕೀಯ ಸೌಲಭ್ಯಗಳು ಇಲ್ಲದಿರುವ ಕಾರಣ ಇದನ್ನೇ ನಂಬಿ ಬದುಕುತ್ತಿದ್ದಾರೆ.

**ಮಾನವ ವೈದ್ಯ:** ವಾಂತಿ-ಬೇಧಿಯಾದರೆ ನಿಂಬೆಹಣ್ಣಿನ ರಸ ಮತ್ತು ಜೇನುತುಪ್ಪ ಕಲಸಿಕೊಟ್ಟರೆ ಕಡಿಮೆಯಾಗುತ್ತದೆ. ನಿಂಬೆಹಣ್ಣಿನ ರಸ ಸಕ್ಕರೆ ಮತ್ತು ಉಪ್ಪು ಹಾಕಿ ಕಲಸಿಕುಡಿದರೆ ಕಡಿಮೆಯಾಗುತ್ತದೆ. ಸಾಬ್ದಾನ್(ಸಬ್ಬಕ್ಕಿ) ಅಕ್ಕಿಯಿಂದ ಪಾಯಸ ಮಾಡಿ ಕುಡಿದರೆ ನಿವಾರಣೆಯಾಗುತ್ತದೆ ಎಂದು ಹೇಳುವರು.

**ಜ್ವರ :** ಐಡಲ ಎಲೆಗಳನ್ನು ತಲೆಗೆ ಹಾಕಿ ಕಟ್ಟಿಕೊಂಡರೆ ಜ್ವರ ನಿಲ್ಲುತ್ತದೆ. ನಿಂಬೆ ಹಣ್ಣಿನಿಂದ ಇಳಿತೆಗೆದು ಹಾಕುವರು. ತಲೆ ಹಣೆಮೇಲೇ ಬಟ್ಟೆಗೆ ನೀರು ಅದ್ದಿ ತಗ್ಗಲ ಬಟ್ಟೆಯನ್ನು ಹಾಕಿದರೆ ಜ್ವರ ನಿಲ್ಲುತ್ತದೆ.

**ಕಣ್ಣು ದೃಷ್ಟಿಯಾದರೆ:** ಒಂದು ಅಗಲವಾದ ಪಾತ್ರೆ ತೆಗೆದುಕೊಂಡು ಅದರಲ್ಲಿ ಅವರು ಉಂಡ ಮುಸರೆ ನೀರನ್ನು ಹಾಕಿ ಮತ್ತೊಂದು ಪಾತ್ರೆ ತೆಗೆದುಕೊಂಡು ಬೆಂಕಿ ಹಾಕಿ ದೃಷ್ಟಿಯಾದವರಿಗೆ ಮೂರು ಸಾರಿ ಇಳೆತೆಗೆದು ಬೆಂಕಿ ಹಾಕಿದ ಪಾತ್ರೆಯನ್ನು ಮುಸುರಿನ ನೀರಿನ ಪಾತ್ರೆಯಲ್ಲಿ ಮುಚ್ಚಬೇಕು. ಹಾಗೆ ಮುಚ್ಚಿದಾಗ ಮುಸುರೆ ನೀರೆಲ್ಲಾ ಪಾತ್ರೆ ಒಳಗಡೆಹೋಗುತ್ತದೆ. ಕಾಲ್ದುಳಿ ಕಡಿಮೆಯಾಗುತ್ತದೆ.

**ಹೊಟ್ಟೆನೋವು:** ಕೊಬ್ಬರಿ ಎಣ್ಣೆ ಕಾಯಿಸಿ ಹೊಕ್ಕಳ ಸುತ್ತ ಹಾಗೂ ಕಾಲಿನ ಪಾದಗಳ ಹಿಂಬದಿಗಳಲ್ಲಿ ಮೃದುವಾಗಿ ನೇವುತ್ತಾರೆ ಮತ್ತು ಬೆರಳುಗಳನ್ನು ಹಿಡಿದು ಎಳೆಯುತ್ತಾರೆ.

**ತಲೆನೋವು:** ಬೆಳ್ಳುಳ್ಳಿ ಅರೆದು ಹಣೆಯ ಬಲಗಡೆಯ ಭಾಗ ಹಾಗೂ ಎಡಗಡೆ ಭಾಗಕ್ಕೂ ಹಚ್ಚಿಕೊಳ್ಳಬೇಕು.

**ಮೂರ್ಚೆರೋಗ:** ಮೂರ್ಚೆರೋಗ ಇದ್ದರೆ ಅಂತಹ ವ್ಯಕ್ತಿಯನ್ನು ಪಂಡಿತರ ಹತ್ತಿರ ಕರೆದುಕೊಂಡು ಹೋಗಿ ನರಗಳನ್ನು ನೋಡಿ ಬೇವಿನಕಡ್ಡಿಯಿಂದ ಸುಟ್ಟರೆ ಅದರಿಂದ ಮೂರ್ಚೆರೋಗ ವಾಸಿ ಯಾಗುತ್ತದೆ ಎಂದು ಸ್ಥಳಿಯ ಪರಾಂಪರಿಕ ಪಂಡಿತರ ಅಭಿಪ್ರಾಯವಾಗಿದೆ.

**ಸೊಂಟ ನೋವು:** ಸೊಂಟದ ನೋವಿಗೆ ಉಡುವಿನ ತುಪ್ಪವನ್ನು ಜೋಡಿಸಿ ಕಟ್ಟಲಾಗುತ್ತದೆ. ಅಲ್ಲದೆ ತಪ್ಪಲು ಔಷಧಿಯನ್ನು ಆಡಿನ ಹಾಲಿನಲ್ಲಿ ಹಾಕಿ ಕುಡಿಯಲು ತಿಳಿಸುತ್ತಾರೆ. ಇದರಿಂದ ಕೈಕಾಲು ಬೇಗನೆ ಕೂಡುತ್ತದೆ.

**ನಾಯಿ ಕಚ್ಚಿದರೆ:** ಕಚ್ಚಿಸಿಕೊಂಡ ವ್ಯಕ್ತಿ ಕನಿಷ್ಠ ೩ ತಿಂಗಳವರೆಗೆ ಕೆಲವು ನಿಯಮಗಳಲ್ಲಿ ಆಹಾರ ಪದಾರ್ಥಗಳ ಸೇವನೆ ಮಾಡುವುದನ್ನು ಬಿಡಿಸಿ, ಕೊರಳಿಗೆ ಅಥವಾ ಕಾಲಿಗೆ ದಾರವನ್ನು ಕಟ್ಟುತ್ತಾರೆ. ಕಚ್ಚಿಸಿಕೊಂಡ ವ್ಯಕ್ತಿ ಕನ್ನಡಿಯಲ್ಲಿ ಮುಖ ನೋಡಿಕೊಳ್ಳಬಾರದು, ನೀರಿನಲ್ಲಿ ಸಹ ಮುಖನೋಡಿಕೊಳ್ಳ ಬಾರದು, ಕ್ಷೌರ ಮಾಡಿಸಿಕೊಳ್ಳಬಾರದು, ತಲೆ ಕೂದಲಿಗೆ ಕೊಬ್ಬರಿ ಎಣ್ಣೆಹಚ್ಚ ಬಾರದು, ತಲೆ ಮೇಲೆ ನೀರು ಹಾಕಿಕೊಳ್ಳಬಾರದು. ಮಳೆಯಲ್ಲಿ ನೆನಸಿಕೊಳ್ಳಬಾರದು ಮತ್ತು ಕಚ್ಚಿದ ಗಾಯಕ್ಕೆ ಕರಿಜಾಲಿ ತಪ್ಪಲ ಅಥವಾ ಗುಳದಕಾಯಿಗಳನ್ನು ಅರೆದು ಹಚ್ಚುತ್ತಾರೆ. ನಂಜು ಬರುವುದಿಲ್ಲ. ಗಾಯ ಬೇಗನೆ ವಾಸಿಯಾಗುತ್ತದೆ.

**ಹಾವು ಕಚ್ಚಿದರೆ:** ಬೇರಿನ ಅಥವಾ ತಪ್ಪಲ ಔಷಧಿಯನ್ನು ನೀಡುತ್ತಾರೆ. ಮೊದಲು ಇವರು ಹಾವೇ ಕಚ್ಚಿದೇ ಎಂದು ಕಂಡುಹಿಡಿಯಲು ಬೇವಿನ ತಪ್ಪಲ ತಿನ್ನಿಸುತ್ತಾರೆ. ಅದು ಸಿಹಿ ಆದರೆ ಹಾವು ಕಚ್ಚಿದೆ ಎಂದರ್ಥ. ಮೆಣಸಿನ ಕಾಯಿ ಅಥವಾ ಖಾರದ ಪುಡಿಯನ್ನು ತಿನ್ನಿಸುತ್ತಾರೆ. ಅದು ಸಪ್ಪೆ ಆದರೆ ಹಾವು ಕಚ್ಚಿದೆ ಎಂದರ್ಥ. ಮಂತ್ರ ಕಲಿತವರು ಹಾವು ಕಚ್ಚಿದವರಿಗೆ ಮಂತ್ರದ ಮೂಲಕ ವಾಸಿ ಮಾಡುತ್ತಾರೆ. ಮಂತ್ರವನ್ನು ಹಾವು ಕಚ್ಚದೆ ಇರುವ ವ್ಯಕ್ತಿ ಪಂಡಿತರ ಹತ್ತಿರ ಬಂದು ಹೇಳಿದಾಗ ಪಂಡಿತರು ಈ ವ್ಯಕ್ತಿಯ ಕಿವಿಯಲ್ಲಿ ಮಂತ್ರ ಓದಿ ಮತ್ತು ಬೆನ್ನು ಬಡಿದು ಕೈಯಲ್ಲಿ ಒಂದು ತಂಬಿಗೆ ನೀರು ಕೊಟ್ಟು ಪಂಡಿತ ಕಳಿಸುತ್ತಾನೆ. ಈ ವ್ಯಕ್ತಿ ಮಾತನಾಡದೆ, ಹಾವು ಕಚ್ಚಿದ ವ್ಯಕ್ತಿಯಲ್ಲಿಗೆ ಓಡಿ ಬಂದು ಆತನ ಬೆನ್ನು ಬಡಿದು ಪಂಡಿತ ಹೇಳಿದ ಮಂತ್ರವನ್ನು ಹಾವು ಕಚ್ಚಿದ ವ್ಯಕ್ತಿಯ ಕಿವಿಯಲ್ಲಿ ಹೇಳುತ್ತಾನೆ ಮತ್ತು ತಂದ ನೀರನ್ನು ಕುಡಿಸುತ್ತಾನೆ. ಇದರಿಂದ ಆತನ ವಿಷ ಇಳಿದುಹೋಗುತ್ತದೆ. ಹಾವು ಕಚ್ಚಿದ ವ್ಯಕ್ತಿಯನ್ನು ಆ ರಾತ್ರಿ ನಿದ್ದೆ ಮಾಡಲು ಬಿಡುವುದಿಲ್ಲ. ಗುಡಿಯಲ್ಲಿ ಮನೆಯಲ್ಲಿ ಭಜನೆ ಮತ್ತು ಮನರಂಜನೆ ಮೂಲಕ ಆತನನ್ನು ಎಚ್ಚರಗೊಳಿಸುತ್ತಾರೆ. ಕೆಲವೊಂದು ಗಡ್ಡೆಗಳಲ್ಲಿ ತಲೆಯ ಮೇಲೆ ಕಲ್ಲುಹೊರಿಸಿ ಕುಳ್ಳಿರಿಸುತ್ತಾರೆ. ಏಕೆಂದರೆ ವಿಷ ನೆತ್ತಿಗೆ ಬರಬಾರದೆಂದು

**ಚೇಳು ಕಚ್ಚಿದರೆ:** ಚೇಳು ಕಚ್ಚಿದರೆ ಕರಿಮದ್ದುಗುಣಿಕೆ ಔಷಧಿ ಬಳಸುತ್ತಾರೆ ಮತ್ತು ಹುಣಿಸಿ ಬೀಜಗಳನ್ನು ತಿಕ್ಕಿ ಕಡಿದ ಜಾಗಕ್ಕೆ ಇಡುತ್ತಾರೆ. ಮಂತ್ರದ ಮೂಲಕ ಇಳಿಸುತ್ತಾರೆ. ಮಂತ್ರ ಕಲಿತವರು ಒಂದು ಕಡ್ಡಿ ಅಥವಾ ಜೋಳದ ಸಜ್ಜೆ ದೊಂಟ ತೆಗೆದುಕೊಂಡು ಒಂದು ಚರಿಗೆ ನೀರು ತೆಗೆದುಕೊಂಡು ಚೇಳು ಕಚ್ಚಿದವರನ್ನು ಎದುರಗಡೆ ನಿಲ್ಲಿಸಿಕೊಂಡು ಕಡ್ಡಿಯನ್ನು ಸೂರ್ಯನಿಗೆ ೩ ಬಾರಿ ನಿವಾಳಿಸಿ ಮಂತ್ರ ಹೇಳುತ್ತಾ ಕಚ್ಚಿದ ಜಾಗಕ್ಕೆ ಮುಟ್ಟಿಸುತ್ತಾರೆ. ವಿಷ ಇಳಿದುಹೋಗುತ್ತದೆ.

**ಜೀರ್ಣಶಕ್ತಿ:** ನಡುಗಡ್ಡೆಗಳಲ್ಲಿನ ಸಮುದಾಯಗಳು ಹೆಚ್ಚು ಮಾಂಸಹಾರಿಗಳು ಆಗಿರುವುದರಿಂದ ಜೀರ್ಣಶಕ್ತಿ ಹೆಚ್ಚಿಸಲು ಉಳ್ಳಗಡ್ಡಿಯನ್ನು ಊಟದ ಜೊತೆಯಲ್ಲಿ ತಿನ್ನುತ್ತಾರೆ. ಊಟ ಆದ ನಂತರ ಮಜ್ಜಿಗೆ ಸೇವನೆ ಮಾಡುತ್ತಾರೆ. ಜೀರಿಗೆ ಪುಡಿ ಮಾಡಿ ನೀರಿನೊಂದಿಗೆ ಕುಡಿಯುತ್ತಾರೆ.

**ಒಸಡು ಗಟ್ಟಿಗೆ:** ಹಲ್ಲು ಒಸಡು ದವಡೆಗಳು ಗಟ್ಟಿಯಾಗಲು ನೆಲ್ಲಿಕಾಯಿಯನ್ನು ತಿಂದರೆ ಅದರಲ್ಲೂ ಹಸಿದಾಗ ನೆಲ್ಲಿಕಾಯಿ ತಿನ್ನುವುದರ ಮೂಲಕ ಹಲ್ಲಿನ ಒಸಡುಗಳು ಗಟ್ಟಿಯಾಗುತ್ತವೆ.

**ರಕ್ತ ಶುದ್ಧಿ:** ನಡುಗಡ್ಡೆಗಳಲ್ಲಿ ಹೊಲದಲ್ಲಿ ಬೆಳೆಯುವ ಅಕ್ಕರಿಕೆ ಪಲ್ಯವನ್ನು ಪ್ರತಿನಿತ್ಯಸೇವನೆ ಮಾಡುವುದರಿಂದ ರಕ್ತಶುದ್ಧಿಯಾಗುತ್ತದೆ.

**ಉಬ್ಬಸ:** ಬೆಚ್ಚಗಿನ ನೀರಿನಲ್ಲಿ ಜೀರಿಗೆ ಪುಡಿ ಹಾಕಿ ಅದರಿಂದ ತಯಾರಿಸುವ ಕಷಾಯವನ್ನು ಸೇವಿಸಿದರೆ, ಉಬ್ಬಸರೋಗ, ಉಬ್ಬಸ ಮತ್ತು ಎದೆ ಉರಿತ ನಿವಾರಣೆಯಾಗುತ್ತದೆ.

**ಸಣ್ಣ ಮಕ್ಕಳ ಜೊಲ್ಲು ಸುರಿಸುವಿಕೆ:** ಬದುಕಿದ ಸಣ್ಣ ಮೀನನ್ನು ಹಿಡಿದು ತಂದು ಮಕ್ಕಳ ಬಾಯಿಲ್ಲಿಟ್ಟು ಚೀಪಿಸುತ್ತಾರೆ. ಇದರಿಂದ ಜೊಲ್ಲು ಸುರಿಯುವುದು ಕಡಿಮೆಯಾಗುತ್ತದೆ ಎಂದು ಹೇಳುತಾರೆ.

**ಮೂಲವ್ಯಾಧಿ ಸಮಸ್ಯೆ:** ಹುಲಿ ಪ್ರಾಣಿಯ ಉಂಗುರವನ್ನಾಗಿ ಮಾಡಿಕೊಂಡು ಅಮಾವಾಸ್ಯೆ ದಿನ ಹಾಕಿಕೊಂಡರೆ ಮೂಲವ್ಯಾಧಿ ವಾಸಿಯಾಗುತ್ತದೆ ಎನ್ನುತ್ತಾರೆ.

**ಮೈತುಂಬ ಬಕ್ಕೆಗಳು (ತಟ್ಟು):** ಮೈತುಂಬ ಬಕ್ಕೆಗಳಾದರೆ ಅದು ಹೆಣ್ಣು ದೇವತೆ ಪಾಲಕಮ್ಮ ಬಂದಿದ್ದಾಳೆ ಎಂದು ತಿಳಿದು ಬೇವಿನ ತಪ್ಪಲವನ್ನು ನೀರಿನಲ್ಲಿ ಹಾಕಿ ನೀರನ್ನು ಕುದಿಸಿ ಸ್ವಲ್ಪ ಸಮಯ ನೀರನ್ನು ಆರಿಸಿ ಬಕ್ಕೆಗಳಾದ ವ್ಯಕ್ತಿಗೆ ಸ್ನಾನ ಮಾಡಿಸಿದರೆ ವಾಸಿಯಾಗುತ್ತವೆ. ೫ ದಿನ, ೧೧ ದಿನ ಆದ ಮೇಲೆ ಮನೆಯ ಹೆಣ್ಣು ಮಗಳು ತಾಯಿ, ಅಕ್ಕನೊ ಯಾರಾದರೂ ಎರಡು ಚರಿಗೆ ನೀರು, ಎರಡು ಕೊಲ್ಲೆ ಬೇವಿನ ತಪ್ಪಲ ಹಿಡಿದು ಗಡ್ಡೆಯ ಎಲ್ಲ ದೇವರಿಗೆ ಹಾಕಿಬರುತ್ತಾರೆ. ನಂತರ ಪಾಲಕಮ್ಮನಿಗೆ ಹೋಗಿ ಹೋಳಿಗೆ ಎಡಿ, ಬೇವಿನಕೊಲ್ಲೆ ನೀರು ಹಾಕಿ ಕೋಳಿ ಹಾರಿಸಿ ಬರುತ್ತಾರೆ. ಆಗ ಬಕ್ಕೆಗಳಾದ ವ್ಯಕ್ತಿ ಹೊರಗಡೆ ಓಡಾಡಬಹುದು ಮತ್ತು ಯಾರಾನ್ನಾದರು ಮುಟ್ಟಬಹುದು ಅಲ್ಲಿಯವರಿಗೆ ಯಾರನ್ನು ಮುಟ್ಟಿಸಿಕೊಳ್ಳುವುದಿಲ್ಲ. ಅಮ್ಮ ಬಂದಾಳ ಎಂದು ಯಾರು ಕೂಡ ಆ ವ್ಯಕ್ತಿಯನ್ನು ಮುಟ್ಟುವುದಿಲ್ಲ.

**ಮಕ್ಕಳಿಗೆ ವಿಪರೀತ ಕೆಮ್ಮು:** ಒಂದು ಲವಂಗ, ಒಂದು ಎಲೆ, ಒಂದು ಮೆಣಸನ್ನು ತೆಗೆದುಕೊಂಡು ಸಾಣೆಕಲ್ಲಿನ ಮೇಲೆ ತೇದು ತಾಯಿಯ ಎದೆ ಹಾಲಿನಲ್ಲಿ ಹಾಕಿಕುಡಿಸಿದರೆ ವಿಪರೀತ ಕೆಮ್ಮು ನಿಲ್ಲುತ್ತದೆ.

**ಕಾಲಿನ ಕೀಲು ನೋವು:** ತಾಮ್ರದ ಉಂಗುರವನ್ನು ಕಾಲಿನ ಬೆರಳಿಗೆ ಹಾಕಿದರೆ ಕೀಲು ನೋವಿನ ಸಮಸ್ಯೆ ಪರಿಹಾರವಾಗುತ್ತದೆ.

**ಹುಟ್ಟಿದ ಮಕ್ಕಳಿಗೆ ಚುಟಕೆ ಹಾಕುವುದು:** ಮಗು ಹುಟ್ಟಿದ ದಿನಕ್ಕೋ ಅಥವಾ ೧೧ ದಿನಕ್ಕೋ, ೨೧ ದಿನಕ್ಕೋ ಸೂಜಿಯನ್ನು ಕಾಯಿಸಿ ನವಜಾತ ಶಿಶುವಿನ ಹೊಟ್ಟೆಗೆ ಚುಟುಕೆಯನ್ನು ಹಾಕುತ್ತಾರೆ. ಇದರಿಂದ ಮುಂದೆ ಮಗುವಿನ ಆರೋಗ್ಯ ಚೆನ್ನಾಗಿರುತ್ತದೆ ಎಂದು ಹೇಳುತ್ತಾರೆ.

**ಹೊಟ್ಟೆ ಒಳಗಿನ ಜಂತು:** ಬೇವಿನ ಸೊಪ್ಪು, ಉಪ್ಪು, ಹುಣಸೆಹಣ್ಣನ್ನು ಬೆರೆಸಿ ಅದನ್ನು ವಾರಕ್ಕೊಮ್ಮೆ ಬಿಸಿ ಅನ್ನದ ಮೂಲಕ ತಿನ್ನುತ್ತಾ ಬಂದರೆ ಜಂತುವಿನ ಸಮಸ್ಯೆ ನಿವಾರಣೆಯಾಗುತ್ತದೆ.

**ಮರುವಿನ ಸಮಸ್ಯೆ:** ನೆನಪಿನ ಶಕ್ತಿಯನ್ನು ವೃದ್ಧಿಸಲು ಬೇವಿನ ಹಣ್ಣನ್ನು ಪ್ರತಿ ದಿನ ಬೆಳಿಗ್ಗೆ ತಿಂದರೆ ಅವರಿಗೆ ಸ್ಮರಣೆ ಶಕ್ತಿ ಹೆಚ್ಚಾಗುತ್ತದೆ ಮತ್ತು ಶೇಂಗಾ ಬೀಜವನ್ನು ಪ್ರತಿ ದಿನ ಬೆಳಗ್ಗೆ ನೆನಸಿ ತಿಂದರೆ, ಸ್ಮರಣೆ ಶಕ್ತಿ ಬರುತ್ತದೆ.

**ಮಗುವಿಗೆ ದೃಷ್ಟಿಯಾದರೆ:** ಬೇರೆಯವರ ಕೆಟ್ಟ ಕಣ್ಣುಬಿದ್ದರೆ, ಆ ಮಗುವಿನ ತಾಯಿ ಕಸಬರಿಗೆ ಕಡ್ಡಿ ಮೆಣಸಿನ ಕಾಯಿ ತೆಗೆದುಕೊಂಡು ಆ ಮಗುವಿಗೆ ನಿವಾಳಿಸಿ ತೆಗೆದು ಬೆಂಕಿಗೆ ಹಾಕುತ್ತಾರೆ ಮತ್ತು ತಮ್ಮ ತಲೆಯ ಕೂದಲನ್ನು ಮಗುವಿನ ಮುಖದ ಮೇಲೆ ನಿವಾಳಿಸುತ್ತಾರೆ. ದೃಷ್ಟಿ ತೊಲಗುತ್ತದೆ.

**ಮಗುವಿಗೆ ಮುಟ್ಟುದೋಷ:** ಮಕ್ಕಳು ಅಳುತ್ತಿದ್ದರೆ, ಸೊರಗಿ ಜ್ವರ ಹಿಡಿದರೆ, ತೆಳು ಬೇದಿಯಾದರೆ ಮುಟ್ಟುದೋಷ ಎಂದು ತಿಳಿದು ಆ ಮಗುವಿಗೆ ಮುಟ್ಟುದೋಷ ಧಾರವನ್ನು ಕೊರಳಲ್ಲಿ ಕಟ್ಟಿಸಿಕೊಂಡು ಬರುತ್ತಾರೆ. ಗಡ್ಡೆಗಳಲ್ಲಿ ಚೇಳು ಕಚ್ಚಿದರೆ ಮತ್ತು ಹಾವು ಕಚ್ಚಿದರೆ ಇದಕ್ಕಿಂತ ವಿಶೇಷವಾಗಿ ಪ್ರಾಣಿ ವೈದ್ಯ ಪದ್ಧತಿಯಲ್ಲಿ ತುಂಬ ಪರಿಣಿತರು. ದನಗಳು ಕರು ಹಾಕುವಾಗ ತೊಂದರೆಯಾದರೆ ತಮ್ಮ ಕೈಯಿಂದಲೇ ಕರುವನ್ನು ಸುರಕ್ಷಿತವಾಗಿ ಹೊರ ತೆಗೆಯುತ್ತಾರೆ. ಇದನ್ನು ಪ್ರತಿಯೊಂದು ಗಡ್ಡೆಯಲ್ಲಿ ಇಬ್ಬರು ಅಥವಾ ಮೂರು ಜನ ಅನುಭವಸ್ಥರು ಇದ್ದಾರೆ. ಸುತ್ತಮುತ್ತಲ ಹಳ್ಳಿಗಳಲ್ಲಿ ಜನರು ಇವರನ್ನೇ ನಂಬಿದ್ದಾರೆ. ಇದು ಅಲ್ಲದೇ ಆಕಳು ಹಾಲು ಕೊಡದೇ ಇದ್ದಾಗ ಸುತ್ತಮುತ್ತಲ ಗ್ರಾಮದವರು ಬಂದು ಔಷಧಿಯನ್ನು ತೆಗೆದುಕೊಂಡು ಹೋಗುತ್ತಾರೆ. ತಲೆನೋವನ್ನು ಕಡಿಮೆ ಮಾಡುವಲ್ಲಿ ವಿಶೇಷ ಪರಿಣಿತಿಯನ್ನು ಜಲದುರ್ಗದ ನಡುಗಡ್ಡೆಯ ಸಂಗಪ್ಪ ಎನ್ನುವ ವ್ಯಕ್ತಿ ಅತ್ಯಂತ ಪರಿಣಿತಿಯನ್ನು ಹೊಂದಿದ್ದಾನೆ. ಇದಕ್ಕೆ ಆತ ಔಷಧಿ ಕೊಡುವುದಿಲ್ಲ. ಸೂಜಿಯನ್ನು ಬೆಂಕಿಯಲ್ಲಿ ಕಾಯಿಸಿ ತಲೆ ಭಾಗದ ನರಗಳಿಗೆ ಸುಡುತ್ತಾನೆ. ಆಗ ತಲೆ ನೋವು ವಾಸಿಯಾಗುತ್ತದೆ ಮತ್ತು ಜ್ವರ ಅಥವಾ ಕಾಮಲೆ ರೋಗಗಳಿಗೆ ಕೂಡ ಸೂಜಿಯಿಂದಲೇ ಕುತ್ತಿಗೆಯ ಭಾಗದಲ್ಲಿ ಸುಡುತ್ತಾರೇ, ಕಾಮಾಲೇ ಬಂದರೇ ಕೈ ಹಸ್ತದ ಗುಣಿಕೆ ಮೇಲೆ ಅರಿಶಿಣ ಕೊಂಬನ್ನು ಬೆಂಕಿಯ ಕಿಚ್ಚಿನಲ್ಲಿ ಕಾಯಿಸಿ ಸುಡುತ್ತಾರೆ. ಇದರಿಂದ ಸಂಪೂರ್ಣ ಕಾಮಲೆ ವಾಸಿಯಾಗುತ್ತದೆ. ಇದರ ಅನುಭವ ನನಗೂ ಆಗಿದೆ. ನಾನು ಇದೇ ವೈದ್ಯನಲ್ಲಿ ಔಷಧಿ ಪಡೆದು ಕಾಮಲೆ ರೋಗವನ್ನು ಗುಣಪಡಿಸಿಕೊಂಡಿದ್ದೇನೆ.

## ಪ್ರಾಣಿ ವೈದ್ಯ ಪದ್ಧತಿ

ಮನುಷ್ಯ ವೈದ್ಯಕ್ಕಿಂತ ಹೆಚ್ಚು ಕಷ್ಟಕರ. ಪ್ರಾಣಿಗಳಿಗೆ ಮಾತಿನ ಶಕ್ತಿಯಿಲ್ಲದಿರುವುದರಿಂದ ಅವು ತಮಗಾಗುವ ಬಾಧೆಗಳನ್ನು ಮಾತಿನ ಮೂಲಕ ವ್ಯಕ್ತಪಡಿಸಲು ಸಾಧ್ಯವಾಗದಿರುವುದರಿಂದ ಅವುಗಳ ರೋಗದ ಲಕ್ಷಣವನ್ನು ಕಂಡುಕೊಳ್ಳುವುದು ತುಂಬ ಕಷ್ಟವೇ ಎಂದು ಹೇಳಬಹುದು. ಕೃಷಿ ಸಂಸ್ಕೃತಿಯಲ್ಲಿ ಸಾಕು ಪ್ರಾಣಿಗಳಿಗೆ ಮಹತ್ವದ ಸ್ಥಾನವಿದೆ. ಪ್ರಾಣಿಗಳಿಲ್ಲದ ಕೃಷಿಕನ ಮನೆ ಆತ್ಮವಿಲ್ಲದ ದೇಹದಂತೆ. ತಮ್ಮ ಕೃಷಿ ಕಾರ್ಯಗಳಿಗಾಗಿ ಎತ್ತುಗಳನ್ನು ಸಾಕುವ ಕೃಷಿಕ ಹಾಲು ಹಯನಾದಿಗಳಿಗಾಗಿ ಹಸು ಎಮ್ಮೆಗಳನ್ನು, ಆಹಾರಕ್ಕಾಗಿ ಕುರಿ, ಕೋಳಿ, ಹಂದಿಗಳನ್ನು ರಕ್ಷಣೆಗಾಗಿ ನಾಯಿ, ಬೆಕ್ಕನ್ನು ಸಾಕುವುದು ಸಾಮಾನ್ಯ. ಒಟ್ಟಿನಲ್ಲಿ ಕೃಷಿಕ ಜೀವನದ ಬಂಡವಾಳವೇ ಈ ಸಾಕುಪ್ರಾಣಿಗಳ ಸಮೂಹ. ಅಂತೆಯೇ ಕೃಷಿಕರು ತಮ್ಮ ದೇಹಾರೋಗ್ಯಕ್ಕಿಂತ ಸಾಕು ಪ್ರಾಣಿಗಳ ಬಗೆಗೆ ಹೆಚ್ಚು ಕಾಳಜಿ ತೋರುವುದು ಸಹಜ.

ಪ್ರಾಣಿ ವೈದ್ಯ ನಿನ್ನೆ ಮೊನ್ನೆಯದಲ್ಲ. ಅದಕ್ಕೆ ಅದರದೇ ಆದ ಒಂದು ಸುದೀರ್ಘ ಇತಿಹಾಸ ಮತ್ತು ಪರಂಪರೆಯಿದೆ. ಅಲ್ಲದೆ ಇತರೆ ಜಾನಪದ ರೂಪಗಳಂತೆ ಪ್ರಾಣಿ ವೈದ್ಯದ ಉಗಮ ವಿಕಾಸಗಳು ಸ್ವರೂಪ ಲಕ್ಷಣಗಳು ಮತ್ತು ತಂತ್ರ ವಿಧಾನಗಳು ಪ್ರಪಂಚದಾದ್ಯಂತ ಒಂದೇ ರೀತಿಯಾಗಿವೆ. ತಮ್ಮ ಮೊದಲ ರೋಗ ಹಸಿವನ್ನು ನಿವಾರಿಸಿಕೊಳ್ಳಲು ಪ್ರಾಣಿಗಳು ತಮಗೆ ನೂರಾರು ಬಗೆಯ ಸೊಪ್ಪುಸದೆ, ಹಣ್ಣು ಹಂಪಲುಗಳನ್ನು, ಗೆಡ್ಡೆ ಗೆಣಸು, ಮಾಂಸಮಡ್ಡಿಗಳನ್ನು ತಿಂದಿರಬೇಕು. ಇವುಗಳಲ್ಲಿ ಕೆಲವುಗಳಿಂದ ಪ್ರತಿಕೂಲ ಪರಿಣಾಮಗಳಾಗಿರಬೇಕು. ಕಾಲಕಳೆದಂತೆ ಅವು ತಮ್ಮ ಅನುಭವದಿಂದ ಇದು ಆಹಾರ ಯೋಗ್ಯ ಇದು ಅಲ್ಲ ಎಂಬುದನ್ನು ಕಂಡು ಕೊಂಡಂತೆ, ವಿಷ ಜಂತುಗಳು ಕಚ್ಚಿದಾಗ ಗಾಯ, ಹುಣ್ಣುಗಳಾದಾಗ ಔಷಧಿಗಳನ್ನು ಗುರುತಿಸಿಕೊಂಡಿರಬೇಕು. ಉದಾಹರಣೆಗೆ ನಾಯಿ ತನಗೆ ಅಜೀರ್ಣವಾದಾಗ ಇಬ್ಬನಿಯ ಹನಿಗಳಿರುವ ಗರಿಕೆ ಹುಲ್ಲನ್ನು ಕಿತ್ತು ತಿಂದು ವಾಂತಿಮಾಡುವುದು. ಪಕ್ಷಿಯೊಂದು ಕಾಲು ಮುರಿದುಕೊಂಡಿದ್ದರೆ ಉಳಿದವು ಅದಕ್ಕೆ ವಿಶಿಷ್ಟ ಬಗೆಯ ಮಣ್ಣನ್ನು ಲೇಪಿಸಿ ಗಾಯದಲ್ಲಿರಬಹುದಾದ ಹುಳುಗಳನ್ನು ತಿನ್ನುವುದರಿಂದ ಅದು ವಾಸಿಯಾಗುವುದು. ತನ್ನ ಮರಿಗಳಿಗೆ ಗಾಯವಾಗಿದ್ದರೆ ತಾಯಿ ನಾಲಿಗೆಯಿಂದ ನೆಕ್ಕಿ ವಾಸಿ ಮಾಡುವುದು. ನಾಗರ ಹಾವಿನೊಡನೆ ಸೆಣಸಿದ ಮುಂಗುಸಿ ತನ್ನ ದೇಹವನ್ನೆಲ್ಲಾ ಆವರಿಸಿದ ವಿಷದಿಂದ ಮುಕ್ತವಾಗಲು ಸರ್ಪಗಂಧಿ ಎಲೆಗಳನ್ನು ತಿನ್ನುವುದು. ಇವೆ ಮುಂತಾದವುಗಳನ್ನು ಕಾಣಬಹುದು. ಸ್ವಯಂ ಪ್ರಾಣಿಗಳು ತಮಗಾಗಿ ತಾವೇ ಕಂಡುಕೊಂಡ ವೈದ್ಯ ವಿಧಾನಗಳೆಂಬುದನ್ನು ಮನಗಂಡ ಪ್ರಾಣಿ ವೈದ್ಯ ಪರಂಪರೆ ಪ್ರಾಚೀನತೆಯ ಅರಿವಾಗುತ್ತದೆ. ಅದು ಪ್ರಾಣಿ ಜೀವಿಗಳಷ್ಟೇ ಹಳೆಯದು ಎಂಬುದು ದೃಢವಾಗುತ್ತದೆ.

ಪ್ರಪಂಚದ ಇಂದಿನ ವೈದ್ಯ ಪದ್ಧತಿಗಳಿಗೆ ತಾಯಿ ಬೇರು ಜನಪದ ವೈದ್ಯ. ಈ ಜನಪದ ವೈದ್ಯವು ಆಯಾ ಪರಿಸರ, ಗುಂಪು, ಬುಡಕಟ್ಟು ಸಮುದಾಯಗಳಲ್ಲಿ ಭಿನ್ನ ಭಿನ್ನವಾದ ರೀತಿಯಲ್ಲಿಯೇ ಇದೆ. ಈ ಎಲ್ಲ ಸಮುದಾಯ ಗುಂಪುಗಳ ವೈದ್ಯ ಪದ್ಧತಿ ಮೂಲ ಉದ್ದೇಶ ಮಾತ್ರ ಅದರೊಳಗಿನ ರೋಗ ರುಜಿನಗಳನ್ನು ಹೊಡೆದೋಡಿಸುವುದಾಗಿದೆ.

ಮಾನವ ಇತರೆ ಪ್ರಾಣಿಗಳಿಗಿಂತ ತುಂಬಾ ಮುಂದುವರೆದಿದ್ದಾನೆ. ಅವನ ಯೋಚನಾ ಲಹರಿ ಇತರ ಪ್ರಾಣಿಗಳಿಗಿಂತ ಸಾವಿರ ಪಾಲು ಮುಂದಿದೆ. ಇವನ ನಿರಂತರ ಹುಡುಕಾಟ ಜೀವನದ ಕುರಿತು ಇವನಿಗಿರುವ ಕಾಳಜಿ ಇವನನ್ನು ನಿರಂತರವಾದ ಹೊಸ ಹೊಸ ಅವಿಷ್ಕಾರಗಳಿಗೆ ತೊಡಗುವಂತೆ ಮಾಡಿದೆ. ಮನುಷ್ಯ ಅತಿ ಪ್ರಾಚೀನ ಕಾಲದಿಂದಲೂ ಮಾಂಸಾಹಾರಿಯಾಗಿದ್ದು, ನಂತರ ಸಸ್ಯಾಹಾರಕ್ಕೆ ತಿರುಗಿ ಮಾಂಸ ಮತ್ತು ಸಸ್ಯವನ್ನು ಏಕಿ ಭಾವವಾಗಿ ಉಪೋಗಿಸಿದ ಆಹಾರವನ್ನು  ಬೇಯಿಸಿಕೊಂಡು ತಿನ್ನುವ ಪರಿಪಾಟಕ್ಕೆ ಇಳಿದುದು ಹೊಸ ಆಹಾರ ಕ್ರಮವನ್ನು ಕಂಡುಕೊಂಡುದ್ದು ನಿರಂತರ ಸಂಶೋದನೆಯ ಫಲವಾಗಿದೆ.

ನಡುಗಡ್ಡೆಗಳಲ್ಲಿ ಪಶುಗಳಿಗೆ ಗಿಡಮೂಲಿಕೆಯಿಂದ ಔಷಧಿಗಳನ್ನು ಕೊಡುವ ಪದ್ಧತಿ ಇಂದಿಗೂ ಕಂಡುಬರುತ್ತದೆ. ಇಲ್ಲಿ ರೈತರು ಪಶು ಸಾಕಾಣಿಕೆಗಾರರು ಗಿಡಮೂಲಕೆಗಳನ್ನು ಪಶುಗಳಿಗೆ ಕೊಡುವುದನ್ನು ನೋಡಬಹುದಾಗಿದೆ.

**ಎತ್ತುಗಳಿಗೆ ಜ್ವರ ಬಂದರೆ:** ನಂಜುನಾರಾಯಿಣಿ ಗಿಡದ ಎಲೆಗಳನ್ನು ತೆಗೆದುಕೊಂಡು ಅದರ ಜೊತೆ ಮೆಣಸು, ಬೆಳ್ಳುಳ್ಳಿ ಸೇರಿಸಿ ಎತ್ತುಗಳಿಗೆ ಕೊಟ್ಟರೆ ಜ್ವರ ಕಡಿಮೆ ಆಗುತ್ತದೆ. ಎತ್ತುಗಳ ಮೇವು ತಿನ್ನದೆ ಇದ್ದರೆ ಅದಕ್ಕೆ ಜ್ವರ ಬಂದಿದೆ ಎಂದರ್ಥ.

**ಪಶುಗಳಿಗೆ ಕುನ್ನು ರೋಗ:** ಈ ರೋಗ ಬಂದರೆ ಪಶುಗಳ ಕಾಲುಗಳಲ್ಲಿ ಉಸಿರು ಇಲ್ಲದ ಹಾಗೆ ಆಗಿ ಅವುಗಳು ಹಾಗೆ ನಿಂತುಕೊಳ್ಳುತ್ತವೆ. ಅದಕ್ಕೆ ಬೇವಿನ ಮರದ ಚಕ್ಕೆಗಳನ್ನು ತೆಗೆದುಕೊಂಡು ಪುಡಿ ಮಾಡಿಕುಡಿಸಿದರೆ ಇದು ಹೋಗುತ್ತದೆ.

**ಪಶುಗಳಿಗೆ ಹಾವು , ಚೇಳು ಕಡಿದರೆ:** ಹುಳ ಮುಟ್ಟಿದ ಹಸುವಿನ ಕಿವಿಯನ್ನು ಅರ್ಧಭಾಗ ಕತ್ತರಿಸುತ್ತಾರೆ. ಇದರಿಂದ ವಾಸಿಯಾಗುತ್ತದೆ. ಅಥವಾ ಹುಳು ಗಿಡದ ಕಾಂಡವನ್ನು ತೆಗೆದುಕೊಂಡು ಅದನ್ನು ಬಿಸಿಲಿಗೆ ಒಣಗಿಸಿ ಅದಕ್ಕೆ ಮೆಣಸು, ಬೆಳ್ಳುಳ್ಳಿ ಸೇರಿಸಿ ಹುಳ ಮುಟ್ಟಿದ ಜಾಗಕ್ಕೆ ಹಚ್ಚಿದರೆ ಬೇಗ ಗುಣವಾಗುತ್ತದೆ. ಹಸು ಹುಳು ಮುಟ್ಟಿದರೆ ಸುಂದು ಇರುತ್ತದೆ ಮತ್ತು ಜೋಲಿ ಹೊಡೆಯುವುದು ಕಂಡರೆ ಹುಳ ಮುಟ್ಟಿದೇ ಎಂದು ತಿಳಿಯಬೇಕು ಎಂದು ಹೇಳುತ್ತಾರೆ.

**ಪಶುಗಳಿಗೆ ನಿಶಕ್ತಿಯಾದರೆ:** ಉಂಟಿಗೆ ತಪ್ಪಲ ಕಟ್ಟಿ ಸೊಪ್ಪು ಹಾಕಿ ಪಶುಗಳಿಗೆ ತಿನ್ನಿಸುತ್ತಾರೆ ಇದನ್ನು ಮೂರು ದಿನ ತಿನ್ನಿಸಿದರೆ ನಿಶಕ್ತಿ ಹೋಗುತ್ತದೆ.

**ದನಗಳ ಕರವು ಈಯುವಾಗ ತೊಂದರೆಯಾದರೆ:** ಆಗ ತಮ್ಮ ಕೈಯಿಂದಲೇ ಕರುವನ್ನು ಹೊರ ತೆಗೆದು ಔಷಧ ಕೊಡುತ್ತಾರೆ. ಇದನ್ನು ಎಲ್ಲ ವ್ಯಕ್ತಿಗಳು ಮಾಡುವುದಿಲ್ಲ. ಕರುತೆಗೆಯುವುದನ್ನು ಅನುಭವ ಪಂಡಿತನಿಂದ ತೆಗೆಸುತ್ತಾರೆ.

**ಪಶುಗಳಿಗೆ ರಥಗುಂದ ರೋಗ:** ಈ ರೋಗ ಬಂದರೆ ಇವುಗಳು ಮುಂದಕ್ಕೆ ಚಲಿಸುವುದಿಲ್ಲ. ಸೆಟೆದು ನಿಂತು ಬಿಡುತ್ತವೆ. ಅಗ ಕಾದ ಕಬ್ಬಿಣದಿಂದ ಬರೆಹಾಕುತ್ತಾರೆ. ಬರೆ ಹಾಕಿದ ಜಾಗಕ್ಕೆ ಪಶುಗಳ ದೇಹದಲ್ಲಿ ಶೇಖರಣೆಯಾದ ಕೆಟ್ಟ ರಕ್ತವು ಹೊರಬರುತ್ತದೆ.

**ಎತ್ತು, ದನ, ಎಮ್ಮೆ, ಮೇಕೆಗಳಿಗೆ ಕೋಡು ಮುರಿದಾಗ:** ರಂಜಕ ತಪ್ಪಲು ತೆಗೆದುಕೊಂಡು ಅದನ್ನು ಸಣ್ಣಗೆ ರುಬ್ಬಿ ಅದರ ಜೊತೆ ಸುಣ್ಣ ಕಲಿಸಿ ಕೊಂಬು ಮುರಿದ ಜಾಗಕ್ಕೆ ಕಟ್ಟಿದರೆ ಆ ಗಾಯ ವಾಸಿಯಾಗಿ ಕೊಂಬು ಮತ್ತೆ ಬೆಳೆಯುತ್ತದೆ.

**ಹಾಲು ಕೊಡುವ ಆಕಳುಗಳಿಗೆ ಕಣ್ಮಂಜು ಆದರೆ:** ಲೋಬಾನವನ್ನು ಮಂತ್ರಿಸಿಕೊಡುತ್ತಾರೆ. ಆ ಲೋಬಾನ ಹಾಕಿದರೆ ಹಾಲು ಕೊಡುತ್ತದೆ ಎಂಬ ನಂಬಿಕೆ. ಹಾಲು ಕಡಿಮೆ ಕೊಡುವಂತಹ ಪಶುಗಳಿಗೆ ಮರುಳು ಮಾತಂಗಿ ತಪ್ಪಲು ಅನ್ನು ತಿನ್ನಿಸಿದರೆ ಮೂರು ದಿನ ಸುಮ್ಮನೆ ಇದ್ದು, ಮರು ದಿನದಿಂದ ಜಾಸ್ತಿ ಹಾಲು ಕೊಡುತ್ತದೆ.

**ಪಶುಗಳಿಗೆ ತುರುಕೆ ಉಂಟಾಗಿ ಕೂದಲು ಉದುರಿದಾಗ:** ನಂಜು ನಾರಾಯಿಣಿ ತಪ್ಪಲನ್ನು ಕರ್ಪೂರದ ಜೊತೆಗೆ ಪುಡಿಮಾಡಿ ಅದನ್ನು ಕೊಬ್ಬರಿಎಣ್ಣೆಯಲ್ಲಿ ಹಾಕಿ ಕಲಸಿ ಅದನ್ನು ಪಶುಗಳ ಮೈಗೆ ಹಚ್ಚಿದರೆ ತುರಕೆ ಕೂದಲು ಉದುರುವುದು ಕಡಿಮೆಯಾಗುತ್ತದೆ.

**ಪಶುಗಳ ಸರ್ವ ರೋಗಕ್ಕೆ ಔಷಧಿ:** ಹಿಂಡಿರಸ, ಸಕ್ಕವರಿ ತಪ್ಪಲು, ತೊಂಡಿ ತಪ್ಪಲು, ಹಿರೇಮದ್ದಿನ ಬೇರನ್ನು ಸಣ್ಣಗೆ ತುಂಡು ಮಾಡಿ, ಇವುಗಳನ್ನು ಒಂದು ಗಡಿಗೆಯಲ್ಲಿ ಹಾಕಿ ಇದರ ಜೊತೆಗೆ ಅರಿಶಿಣ ಉಪ್ಪು ಹಾಕಿ ಸೆಗಣಿಯ ತಿಪ್ಪೆಯಲ್ಲಿ ೨೧ ದಿನಗಳವರೆಗೆ ಮುಚ್ಚಿಡಬೇಕು. ಸೆಗಣಿಯ ಶಾಖಕ್ಕೆ ಒಳಗಡ್ಡೆ ಕುದಿಯುತ್ತ ರಸ ಆಗುತ್ತದೆ. ಇದನ್ನು ಪಶುಗಳ ಸರ್ವರೋಗಕ್ಕೆ ಬಳಸುತ್ತಾರೆ. ಇದನ್ನು ಮೂರು ದಿನ, ಐದು ದಿನ ನೀಡಿದರೆ ನಂಜಿನ ಕಾಯಿಲೆ, ನಿಶಕ್ತಿ, ಸಣ್ಣ ವಯಸ್ಸಿಗೆ ಕರುಗಳನ್ನು ಹಾಕಿದರೆ, ಗರ್ಭಕಟ್ಟಲು ಈ ಔಷಧಿ ಕೊಟ್ಟರೆ ಮತ್ತೆ ಗರ್ಭ ಕಟ್ಟುತ್ತದೆ ಎಂದು ಹೇಳುತ್ತಾರೆ.

ಈ ಎಲ್ಲ ವಿಷಯಗಳನ್ನು ಗಡ್ಡೆಯ ಹಿರಿಯ ಮತ್ತು ಅನುಭವ ವಕ್ತೃಗಳ ಮತ್ತು ನಾಟಿ ಔಷಧಿ ಕೊಡುವ ವ್ಯಕ್ತಿಗಳಿಂದ ಮಾಹಿತಿಗಳನ್ನು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ. ಇವರುಗಳು ಹಣದ ಅಪೇಕ್ಷೆ ಮಾಡುವುದಿಲ್ಲ. ತಮ್ಮ ತಲೆಮಾರಿನಿಂದ ಬಂದಂತಹ ಜ್ಞಾನವನ್ನು ಬಳಸಿ ಔಷಧಿ

ನೀಡುತ್ತಾರೆ. ದನ ಕರುಗಳ ಚಿಕಿತ್ಸೆಗೆ ಹೋಗಿ ಬರುವವರಿಗೆ ಬಸ್ಸಿನ ಪ್ರಯಾಣ ವೆಚ್ಚ ಜೊತೆಗೆ ಊಟದ ವೆಚ್ಚವನ್ನು ಕೊಡುತ್ತಾರೆ. ಸ್ಥಳೀಯವಾಗಿ ನೋಡಲು ಹೋದರೆ ಯಾವುದೇ ವೆಚ್ಚವನ್ನು ಕೇಳುವುದಿಲ್ಲ. ಕೊಡುವವರು ತಮ್ಮ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಕೊಡುತ್ತಾರೆ.

**೩.೧.೮. ಬೇಟೆ**

ಈ ಭೂಮಿಯ ಮೇಲೆ ಮನುಷ್ಯನ ಹುಟ್ಟು ಎಂದು ಪ್ರಾರಂಭವಾಯಿತೋ ಅಂದಿನಿಂದಲೇ ಬೇಟೆಯ ಹುಟ್ಟನ್ನು ನಾವು ಕಾಣುತ್ತೇವೆ. ಅಂದೇ ಬೇಟೆ ಪ್ರಾರಂಭವಾಗಿರುವ ಸಾಧ್ಯತೆ ಉಂಟು. ಮೂಲ ಮಾನವನ ಚರಿತ್ರೆಯನ್ನು ಗಮನಿಸಿದಾಗ ಬೇಟೆ ಅವನ ಎಲ್ಲಾ ಜೀವನದ ಸರ್ವಸ್ವವಾಗಿತ್ತು. ಅಂದರೆ ತನ್ನ ಹಸಿವೆಗಾಗಿ ಬೇಟೆಯನ್ನು ತನ್ನ ಮೂಲ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾನೆ. ಅದೇ ಪ್ರವೃತ್ತಿ ಗುಂಪು ಜೀವನ, ಬುಡಕಟ್ಟು ಜೀವನ, ಗ್ರಾಮ ಜೀವನ, ನಗರ ಜೀವನಗಳಲ್ಲಿಯೂ ಸಹ ಮುಂದುವರೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

ಆದಿಮಾನವ ಆಹಾರಕ್ಕಾಗಿ ಬೇಟೆಯಾಡುತ್ತಿದ್ದ ಅವಧಿಯ ನಂತರ ಕೃಷಿ ಹಂತಕ್ಕೆ ತಲುಪಿದನು. ಕೃಷಿ ಹಂತಕ್ಕೆ ತಲುಪಿದಾಗ ಆತ್ಮ ರಕ್ಷಣೆಗಾಗಿಯೂ, ಸಾಮ್ರಾಜ್ಯ ಕಾಲದಲ್ಲಿ ಮೋಜು ಜೂಜು ಗಳಿಗಾಗಿಯೂ ಅಂತಿಮವಾಗಿ ಸಂಪ್ರದಾಯಕ್ಕಾಗಿಯೂ, ಇಂದು ಬೇಟೆಯನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಕಾಣಬಹುದು. ಬೇಟೆಯ ಕಾರಣಗಳು ಬದಲಾದಂತೆ ಆಯುಧಗಳ ಬಳಕೆಯ ಬದಲಾವಣೆ ಹೊಂದಿದೆ. ಪ್ರಾಚೀನ ಕಾಲದ ಮಾನವ ಕಲ್ಲಿನ ಮತ್ತು ಮರದ ಆಯುಧಗಳನ್ನು ಬಳಸಿ ಬೇಟೆಯಾಡುತ್ತಿದ್ದರೆ, ಶಿಲಾಯುಗದ ನಂತರದಲ್ಲಿ ಕಬ್ಬಿಣದ ಆಯುಧಗಳನ್ನು ಬಳಸತೊಡಗಿದ ಭರ್ಜಿ, ಈಟಿ, ಕುಡುಗೋಲು, ಮಚ್ಚು, ಬಲೆ, ಕೋವಿ, ಮದ್ದು, ಸಿಡಿ, ಕತ್ತರಿ, ಗಾಳ, ಪಾಚಿ ಜೊತೆಗೆ ಸಾಕಿದ ನಾಯಿಗಳ ಮೂಲಕವೂ ಬೇಟೆಯಾಡತೊಡಗಿದುದನ್ನು ಕಾಣಬಹುದು.

ಮಾನವ ಆಹಾರಕ್ಕಾಗಿ ಮೊಲ, ಜಿಂಕೆ, ಕಾಡು ಹಂದಿ, ಉಡ ಮುಂತಾದವುಗಳನ್ನು ಬೇಟೆಯಾಡುತ್ತಿದ್ದನು. ತನ್ನ ರಕ್ಷಣೆಗಾಗಿ, ತಾನು ಸಾಕಿದ ಪ್ರಾಣಿಗಳ ರಕ್ಷಣೆ ಮತ್ತು ಬೆಳೆಗಳ ರಕ್ಷಣೆಗಾಗಿ ಆನೆ, ಹುಲಿ, ಸಿಂಹ, ಕರಡಿಗಳನ್ನು ಬೇಟೆಯಾಡುತ್ತಿದ್ದನು. ಪ್ರತಿಷ್ಠೆಯ ಸಂಕೇತವಾಗಿ ಮತ್ತು ಅರಸೊತ್ತಿಗೆಯ ಹಾಗೂ ಮನರಂಜನೆ ನೀಡುತ್ತ ಜೀವನ ನಡೆಸುತ್ತಾ ಕೆಲವರು ಪ್ರಾಣಿಗಳನ್ನು ಸಾಯಿಸದೇ ಅವುಗಳನ್ನು ಪಳಗಿಸಿ ಮನರಂಜನೆ ಭಾಗವಾಗಿ ಬಳಸುತ್ತಿದ್ದರು. ಇಂದಿಗೂ ಈ ವರ್ಗಗಳು ಜೀವಂತವಾಗಿವೆ. ಕರಡಿಕಲಂದರ್ ಮತ್ತು ಮಾನ್‌ಗಾರುಡಿ ಸಮುದಾಯಗಳು.

ಬೇಟೆ ನಿಷೇಧ, ಪ್ರಾಣಿವಧೆ ತಡೆ ಕಾಯ್ದೆಗಳನ್ನು ಮೀರಿ ಸಂಪ್ರದಾಯದ ಕಾರಣದಿಂದ ಬೇಟೆ ಅಸ್ತಿತ್ವದಲ್ಲಿದೆ. ಪೂರ್ವಿಕರ ಆಶಯಗಳನ್ನು ಮುಂದುವರೆಸುವ ಸಲುವಾಗಿ ಬೇಟೆ ಸಂಪ್ರದಾಯ

## ಬೇಟೆಯ ತಂತ್ರಗಾರಿಕೆಗಳು

**ಮೊಲದ ಬೇಟೆ:** ಮೊಲವು ಅತ್ಯಂತ ಚುರುಕಾದ ಪ್ರಾಣಿಯಾಗಿದ್ದು, ಮಾನವ ಮತ್ತು ಪ್ರಾಣಿಗಳ ದೂರದ ಶಬ್ದ ಮತ್ತು ವಾಸನೆಯನ್ನು ಅತಿಸೂಕ್ಷ್ಮವಾಗಿ ಗ್ರಹಿಸಬಲ್ಲದು. ಇದನ್ನು ಹಿಡಿಯುವ ಬೇಟೆಗಾರನಿಗೆ ಮೊಲಕ್ಕಿಂತ ಹೆಚ್ಚಿನ ಜಾಣ್ಮೆ ಮತ್ತು ಚುರುಕುತನ ಬೇಕಾಗುವುದು. ತಾವೇ ತಯಾರಿಸಿದ ಮೊಲದ ಬಲೆಯನ್ನು ಬಳಸುವರು. ಮೊಲಗಳು ನೆಲೆಸುವ ಸ್ಥಳ ಅವುಗಳ ಓಡಾಟ ಮತ್ತು ಹಿಕ್ಕೆಗಳನ್ನು ಗಮನಿಸಿ ಬಲೆಯನ್ನು ಬಿಡಲಾಗುವುದು. ಸುಮಾರು ನಾಲ್ಕರಿಂದ ಐದು ಬಲೆಗಳನ್ನು ಉದ್ದುದ್ದವಾಗಿ ಬಿಡುವರು. ಕೊನೆಯ ಎರಡು ಕಡೆ ಬಗರಿಯಲ್ಲಿ ಇಬ್ಬರು ಅವಿತುಕೊಳ್ಳವರು. ಬಲೆಗಳಿಗೆ ಊದುಕಡ್ಡಿಗಳನ್ನು ಸೂಕ್ಷ್ಮವಾಗಿ ನಿಲ್ಲಿಸಿ ಒಂದು ಚಿಕ್ಕ ಪ್ರಾಣಿ ಸ್ಪರ್ಷಿಸಿದರೂ ಬಲೆ ಸುತ್ತಿಕೊಳ್ಳುವಂತೆ ಚತುರತೆಯಿಂದ ಬಲೆ ಬಿಡವರು. ಅಂಚಿನಲ್ಲಿರುವ ಇಬ್ಬರನ್ನು ಹೊರತು ಪಡಿಸಿ ಉಳಿದವರು ಬಲೆಗೆ ಅಭಿಮುಖವಾಗಿ ಅನತಿ ದೂರದಿಂದ ಕೋಲು ಕಲ್ಲುಗಳಿಂದ ಶಬ್ದ ಮಾಡುತ್ತಾ ಸೋವಿಕೊಳ್ಳುತ್ತಾ ಬರುವಾಗ ಮೊಲ ಇದ್ದರೆ ಅದನ್ನು ಬಲೆ ಕಡೆಗೆ ಓಡಿಸಲಾಗುವುದು. ಅದು ಬಿದ್ದಾಗ ಅಂಚಿನಲ್ಲಿರುವ ವ್ಯಕ್ತಿಗಳು ಚೆಂಡು ಮುರಿದು ಬಲೆಯಿಂದ ಬಿಡಿಸಿಕೊಳ್ಳುವರು. ಕೆಲವು ಸಲ ಬರಿನಾಯಿಯೊಂದಿಗೆ ಕೈಯಲ್ಲಿ ಬಡಿಗೆ, ಬೆತ್ತ ಹಿಡಿದು ಬೇಟೆಯಾಡುವರು. ಮೊಲ ಕಂಡಾಗ ನಾಯಿ ಚೂ ಬಿಡುವರು. ನಾಯಿ ಅದರ ಬೆನ್ನು ಹತ್ತಿ ಓಡಿ ಮೊಲವನ್ನು ಹಿಡಿದಾಗ ಓಡಿಹೋಗಿ ಬಿಡಿಸಿಕೊಳ್ಳುವರು.

ಈಗೀಗ ಕೆಲವು ನಡುಗಡ್ಡೆಗಳಲ್ಲಿ ಮೊಲದ ಬೇಟೆಗೆ ಹಣೆ ಬ್ಯಾಟರಿಯನ್ನು ಬಳಸುತ್ತಿದ್ದಾರೆ. ಬೇಟೆ ನಿಷೇಧದ ಫಲವಾಗಿ ಬಲೆಯನ್ನು ಬಳಸಿ ಆಡುವ ಮೊಲದ ಬೇಟೆ ಅಂಚಿಗೆ ತಳ್ಳಲ್ಪಟ್ಟರೆ ನಡುಗಡ್ಡೆಗಳಲ್ಲಿ ನಿರಂತರವಾಗಿ ನಡೆಯುತ್ತದೆ. ಆಧುನಿಕ ಉಪಕರಣಗಳನ್ನು ತಮಗೆ ಗೊತ್ತಿಲ್ಲದಿದ್ದರೂ ಬೇರೆ ಊರಿನ ಜನರ ಜತೆ ತರಿಸಿಕೊಂಡು ಅದರ ಬಳಕೆ ತಿಳಿದುಕೊಂಡು ಹಣೆ ಬ್ಯಾಟರಿ ಬೇಟೆಯನ್ನು ಆಡುವರು. ರಾತ್ರಿಯ ಸಮಯದಲ್ಲಿ ಹಣೆಗೆ ಒಂದು ಹೈ ಬ್ಯಾಟರಿಯ ಕಟ್ಟನ್ನು ಹಾಕಿಕೊಂಡು ಹಗಲಿಗೆ ಚಾರ್ಜ್ ಮಾಡಿದ ಚಿಕ್ಕ ಆಟೋರಿಕ್ಷಾದ ಬ್ಯಾಟರಿಯನ್ನು ಹಾಕಿಕೊಂಡು ಬೇಟೆಗೆ ಹೋಗುವರು. ಇದು ಹೆಚ್ಚು ದೂರ ಪ್ರಕಾಶಿಸುವಂತೆ ವ್ಯವಸ್ಥೆ ಮಾಡಿಕೊಂಡಿರುತ್ತಾರೆ. ಕಾಲ ಸಪ್ಪಳ ಪ್ರಾಣಿಗಳಿಗೆ ಕೇಳಿಸದಂತೆ ಹಾರನ್ ಎಂಬ ಉಪಕರಣವನ್ನು ಹಾಕಿಕೊಂಡು ಹೋಗುವರು. ಪ್ರಾಣಿಗಳ ಕಣ್ಣುಗಳ ಬಣ್ಣದಿಂದಲೇ ಪ್ರಾಣಿಯನ್ನು ಗ್ರಹಿಸುವ ಕೌಶಲ್ಯತೆ ಇರಬೇಕು. ಬ್ಯಾಟರಿ ಬೆಳಕಿನಲ್ಲಿ ಮೊಲ, ಹಂದಿ ಕಂಡರೆ ಹಾರನ್ ಹಾಕಿಕೊಂಡು ಸಮೀಪ ಹೋಗಿ ದೊಣ್ಣೆಯಿಂದ ಹೊಡೆದು ಸಾಯಿಸುವರು. ಮರಿಗಳಾಗಿದ್ದರೆ ಮನೆಗೆ ತಂದು ಸಾಕುವರು. ಬೇಟೆಗಾರ ಬಹು ಎಚ್ಚರಿಕೆಯಿಂದ ಈ ಬೇಟೆಯನ್ನು ಆಡಬೇಕಾಗುವುದು. ಇಲ್ಲವಾದರೆ ಹಾವು, ಹುಲಿ, ಕರಡಿ

ಇತ್ಯಾದಿ ಪ್ರಾಣಿಗಳಿಂದ ಪ್ರಾಣಕ್ಕೆ ಆಪತ್ತು ತಂದುಕೊಳ್ಳಬೇಕಾಗುತ್ತದೆ. ಕಣ್ಣಿನ ಬಣ್ಣ ಗ್ರಹಿಸಿ ಮೊಲವಾದರೆ ಸಮೀಪ ಹೋಗಬೇಕು. ಬೇರೆ ಪ್ರಾಣಿಯಾದರೆ ಬದಲಿ ದಿಕ್ಕಿನೆಡೆಗೆ ಹೋಗುವುದು.

**ಮುಳ್ಳು ಹಂದಿ ಬೇಟೆ:** ಮುಳ್ಳು ಹಂದಿಯು ಹಂದಿ ಪ್ರಭೇದದಲ್ಲಿ ಒಂದಾಗಿದ್ದು, ಇದು ಮೈತುಂಬ ಗಟ್ಟಿಯಾದ ಮುಳ್ಳುಗಳನ್ನು ಹೊಂದಿದ್ದು ದೈವದತ್ತವಾಗಿ ಬಂದಿರುವಂತಹ ಮುಳ್ಳುಗಳಿಂದ ರಕ್ಷಣೆ ಮಾಡಿಕೊಳ್ಳುವವು. ತಲೆ ತುಂಬಾ ಸೂಕ್ಷ್ಮ ಮತ್ತು ಚಿಕ್ಕದಾಗಿದ್ದು, ಮುಳ್ಳಿನಿಂದ ಕೂಡಿದ ಗಟ್ಟಿಯಾದ ಚಿಪ್ಪಿನಲ್ಲಿ ತಲೆಯನ್ನು ಸೇರಿಸಿ ಕೊಂಡಾಗ ದೊಡ್ಡ ಕಲ್ಲನ್ನು ಅದರ ಮೇಲೆ ಹಾಕಿದರೂ ಸಾಯುವುದಿಲ್ಲ. ಉಸಿರು ಕಟ್ಟಿಕೊಳ್ಳುವ ಮೂಲಕ ರಕ್ಷಿಸಿಕೊಳ್ಳುವುದರ ಜೊತೆಗೆ ತನ್ನ ಗಟ್ಟಿಯಾದ ಮುಳ್ಳುಗಳನ್ನು ಬಾಣಗಳಂತೆ ಮನುಷ್ಯನ ಹಾಗೂ ಇತರ ಪ್ರಾಣಿಗಳಿಗೆ ಬಿಡುತ್ತಾ ತನಗೆ ಬಂದ ಆಪತ್ತಿನಿಂದ ಪಾರಾಗುತ್ತದೆ. ಈ ಜ್ಞಾನವನ್ನು ತಿಳಿದ ಬೇಟೆಗಾರ ತಲೆ ಹೊರಗಡೆ ಬಂದಾಗ ಮಾತ್ರ ಹೊಡೆದು ಸಾಯಿಸುವನು. ಇದು ಹತ್ತಿ ಮರದ ಕೆಳಗೆ ಹೋಗುವುದಿಲ್ಲ. ಕಾರಣ ಹತ್ತಿ ಹಣ್ಣು ತಲೆಗೆ ಬಿದ್ದರೆ ಅದು ಸಾಯುವುದು. ಇದನ್ನು ಹೊಡೆದಾಗ ಕಾಡಿನಲ್ಲಿಯೇ ಸುಟ್ಟು ಅದರ ಮಾಂಸವನ್ನು ಮಾತ್ರ ಮನೆಗೆ ತರುವರು. ಕಾರಣ ಇದರ ಮುಳ್ಳುಗಳನ್ನು ತಮಗಾಗದವರ ಮನೆಯ ಸೂರಕಟ್ಟಿಗೆ ತಂದು ಇಟ್ಟರೆ ಅವರ ಮನೆಯಲ್ಲಿ ಅದು ಇರುವವರಿಗೆ ಜಗಳ ನಡೆಯುವುದು ಮತ್ತು ಮಾಟ ಮಂತ್ರ ಮಾಡಲು ಇದರ ಮುಳ್ಳುಗಳನ್ನು ಬಳಸುತ್ತಾರೆ ಎಂದು ಹೇಳುತ್ತಾರೆ.

**ಉಡದ ಬೇಟೆ:** ಹಗಲಿನ ಹೊತ್ತಿನಲ್ಲಿ ನಾಯಿಗಳ ಸಹಾಯದಿಂದ ಉಡದ ಬೇಟೆಯಾಡುವರು. ಮಳೆ ಬಂದ ನಂತರ ಭೂಮಿಯ ಮೇಲೆ ಶಾಖಹೆಚ್ಚಾಗಿರುತ್ತದೆ. ಉಡುವು ಗವಿ, ಹುತ್ತ, ನೆಲದ ಪೊಟರೆ ಹೊರಗೆ ಬರುತ್ತದೆ. ಆಗ ನಾಯಿ ಅದರ ವಾಸನೆಯನ್ನು ಹಿಡಿದು ಬೆನ್ನಟ್ಟಿ ಬೇಟೆಯಾಡುತ್ತದೆ. ಅಕಸ್ಮಾತ್ ಅದು ತಪ್ಪಿಸಿಕೊಳ್ಳಲು ಹುತ್ತ, ಬೋನು ಸೇರಿಕೊಂಡರೆ, ಆಗ ಬೇಟೆಗಾರ ಆಯುಧಗಳ ಸಹಾಯದಿಂದ ಅದು ಹೊಕ್ಕ ಸ್ಥಳವನ್ನು ಅಗೆಯುವನು. ಅದು ನೆಲಹಿಡಿದರೆ ಏಳು ಏಳು ಜೊತೆ ಎತ್ತು ಕಟ್ಟಿ ಎಳೆಸಿದರು ಬರುವುದಿಲ್ಲ ಎಂಬ ಮಾತಿದೆ. ಉಡದ ಉಗುರುಗಳು ಅಷ್ಟು ಬಲಿಷ್ಠವಾಗಿರುತ್ತವೆ. ಅದಕ್ಕಾಗಿ ಬೇಟೆಗಾರ ಅಂಚೆ ಕಡ್ಡಿಯನ್ನು ಅದರ ಮರ್ಮಾಂಗಕ್ಕೆ ಚುಚ್ಚಿದಾಗ ಅದು ನೆಲವನ್ನು ಬಿಡುತ್ತದೆ. ಆಗ ಬಾಲವನ್ನು ಅದರ ಬಾಯಿಗೆ ಸೇರಿಸಿ ಕಾಲು ಕಟ್ಟಿ ಹಿಡಿಯುವನು. ಉಡದ ಬೇಟೆ ಆಕಸ್ಮಿಕವಾಗಿ ಆಗುವುದಲ್ಲದೇ ಅದು ಸಿಕ್ಕರೆ ಆ ದಿನ ಸಂತೋಷದಾಯಕವಾಗುವುದು. ಇದರ ಚರ್ಮ ಸುಲಿದು ಸಂಗೀತ ವಾದ್ಯಗಳನ್ನು ಮಾಡುತ್ತಾರೆ. ಇದು ಮೈ, ಕೈ, ಮಂಡಿನೋವು ಮತ್ತು ಉಳುಕುಗಳಿಗೆ ಔಷಧಿಯಾಗಿ ಬಳಕೆಯಾಗುವುದು. ಕೇವಲ ಆಹಾರವಾಗದೆ ಔಷಧಿಯ ಕಾರಣದಿಂದಲೂ ಮಹತ್ವ ಪಡೆದುಕೊಂಡಿದೆ. ನಡುಗಡ್ಡೆಗಳ ಜನರಲ್ಲಿ ಉಡದ ಎಣ್ಣೆ ಔಷಧಿಯಾಗಿ ಬಳಕೆಯಾಗುತ್ತದೆ. ಸಂಗ್ರಹಣೆ ಮಾಡಿ ಕೂಡ ಇಡುತ್ತಾರೆ.

**ಅಡವಿ ಹಂದಿ ಬೇಟೆ:** ನಡುಗಡ್ಡೆಗಳಲ್ಲಿ ಬೇಡ, ಕುರುಬ, ಕಬ್ಬಲಿಗ, ಮಾದಿಗ ಈ ಸಮುದಾಯಗಳವರು ಕಾಡುಹಂದಿಯನ್ನು ಬೇಟೆಯಾಡಿ ತಿನ್ನುತ್ತಾರೆ. ಆದರೆ ಸಂಪೂರ್ಣವಾಗಿ ಮನೆಯ ಎಲ್ಲ ಸದಸ್ಯರು ಅಲ್ಲ. ಒಂದು ಮನೆಯಲ್ಲಿ ಇನ್ನೊಂದು ಮನೆಯಲ್ಲಿ ಮಗನೋ, ತಂದೆಯೋ, ಗಂಡನೋ ಈ ಮಾಂಸವನ್ನು ಇಷ್ಟಪಡುವವರು ಮಾತ್ರ ತಿನ್ನುತ್ತಾರೆ. ಆದರೆ ಇದನ್ನು ಇವರ ಮನೆಯ ಒಳಗೆ ಅಡುಗೆ ಮಾಡುವುದಿಲ್ಲ. ಮನೆಯ ಸದಸ್ಯರಲ್ಲಿ ಯಾರು ತಿನ್ನುತ್ತಾರೆ ಅವರೇ ಇದನ್ನು ಮನೆಯ ಹೊರಗಡೆ ಒಲೆ ಹೂಡಿ ಅಡುಗೆ ಮಾಡಿಕೊಂಡು ತಿಂದು ಜಳಕ ಮಾಡಿ ಮನೆಯೊಳಗಡೆ ಬರುತ್ತಾರೆ.

ಹಂದಿ ಬೇಟೆ ಎದೆಗಾರಿಕೆಯಿಂದ ಕೂಡಿರುವಂತಾಗಿದೆ. ಹಿಂದೆ ಕಾಡು ಹಂದಿಯನ್ನು ಬೇಟೆಯಾಡಿ ಕೊಲ್ಲಲಾಗುತ್ತಿತ್ತೇ ಹೊರತು ತಿನ್ನಲಾಗುತ್ತಿರಲಿಲ್ಲ. ಹೈದ್ರಾಬಾದಿನ ನಿಜಾಮನ ಆಪ್ತವರ್ಗವಾಗಿ ರಜಾಕಾರರ ಮತಾಂತರ ನೀತಿಯಿಂದ ತಪ್ಪಿಸಿಕೊಳ್ಳಲು ಹಂದಿಯನ್ನು ತಿನ್ನಬೇಕಾಯಿತು. ಹಂದಿಯು ವಿಜಯನಗರ ಸಾಮ್ರಾಜ್ಯದ ಲಾಂಛನವಾಗಿದ್ದು, ವಿಷ್ಣುವಿನ ಅವತಾರಗಳಲ್ಲಿ ಒಂದಾಗಿದೆ. ವಿಷ್ಣು ಪುರಾಣದಲ್ಲಿ ಹಿರಣ್ಯಾಕ್ಷನನ್ನು(ಹಿರಣ್ಯಕಶ್ಯಪನ ಸಹೋದರ) ಸಂಹರಿಸಲು ವಿಷ್ಣು ದಶಾವಾತಾರಗಳಲ್ಲಿ ಒಂದಾದ ಮೂರನೇ ವರಹ ಅವತಾರವನ್ನು ತಾಳುತ್ತಾನೆ. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ವೈಷ್ಣವ ಪರಂಪರೆ ಉಚ್ಛ ಸ್ಥಿತಿಯಲ್ಲಿದ್ದಾಗ ವರಹಕ್ಕೆ ಲಾಂಛನದ ಸ್ಥಾನಮಾನ ನೀಡಲಾಯಿತು. ಬೇಡ ಸಮುದಾಯವು ಕಾಡುಹಂದಿಯನ್ನು ಬೇಟೆಯಾಡುತ್ತಾರೆಯೇ ಹೊರತು ಅದನ್ನು ತಿನ್ನುವುದು ಸಮುದಾಯದಲ್ಲಿ ನಿಷೇಧವಾಗಿದೆ. ಆದರೂ ನಡುಗಡ್ಡೆಗಳಲ್ಲಿ ಹೆಚ್ಚು ಜನರು ಕಾಡುಹಂದಿಯ ಬೇಟೆಯನ್ನು ಆಡುತ್ತಾರೆ ಮತ್ತು ಅದರಲ್ಲಿ ಕೆಲವರು ತಿನ್ನುತ್ತಾರೆ. ಕೆಲವರು ತಿನ್ನುವುದಿಲ್ಲ. ತುಳುವ ಸಂತತಿಯಿಂದ ವೈಷ್ಣವ ಪರಂಪರೆ ಶೈವ ಪರಂಪರೆಯನ್ನು ಹತ್ತಿಕ್ಕಲ್ಪಟ್ಟಾಗ ವಿಷ್ಣುವಿನ ರೂಪದ ಹಂದಿಯನ್ನು ಕೊಲ್ಲುವ ಮೂಲಕ ವೈಷ್ಣವರಿಗೆ ತಿರುಗೇಟು ನೀಡುವ ಪರಿಪಾಠವಾಗಿದೆ. ಹಂದಿ ಬೇಟೆ ಬೆಳೆದು ಬಂದಿರಬಹುದಾಗಿದೆ. ಹಂದಿ ಬೇಟೆ ವೈಷ್ಣವ ಮತ್ತು ಶೈವ ಧಾರ್ಮಿಕ ಸಂಘರ್ಷದ ಹಿನ್ನೆಲೆಯಲ್ಲಿ ಬಂದಿರಬಹುದಾಗಿದೆ.

ಹಂದಿ ಬಲೆಯನ್ನು ಬಲಿಷ್ಟವಾದ ದಾರಗಳಿಂದ ನೇಯ್ಯಲ್ಪಟ್ಟಿದ್ದು, ಅದನ್ನು ಕಾಡಿನ ಒಂದು ಸಂದಿಗ್ಧ ಸ್ಥಳದಲ್ಲಿ ಬಿಡುವರು. ಕಾಡಿನ ಇನ್ನೊಂದು ಪ್ರದೇಶದಿಂದ ಹಂದಿಗಳನ್ನು ಸೋವುಗಾರರು ಅಟ್ಟಿಸಿಕೊಂಡು ಬರುವರು. ಬಲೆಯ ಅಕ್ಕಪಕ್ಕದಲ್ಲಿ ಮರವೇರಿ ಕುಳಿತ ಬೇಟೆಗಾರರು ಹಂದಿ ಬಲೆಗೆ ಬಿದ್ದ ತಕ್ಷಣ ಭರ್ಚಿಯಿಂದ ತಿವಿದು ಕೊಲ್ಲುವರು. ನಂತರ ಅದನ್ನು ಮೆರವಣಿಗೆಯ ಮೂಲಕ ಗಡ್ಡೆಯೊಳಗೆ ತಂದು ಆಹಾರವಾಗಿ ಬಳಸುತ್ತಾರೆ. ಇನ್ನೊಂದು ವಿಧಾನದಲ್ಲಿ ಕಾಡುಹಂದಿಯನ್ನು ಕೊಲ್ಲುತ್ತಾರೆ. ಹಂದಿ ಓಡಾಡುವ ದಾರಿಯಲ್ಲಿ ಸಿಡಿ ಮದ್ದನ್ನು ಮಾಂಸದ ತುಂಡಿನಲ್ಲಿ ಅಥವಾ ಮಾವಿನ ವಾಟೆಯಲ್ಲಿ ಇಡಲಾಗುತ್ತದೆ. ಮಾಂಸದ ಅಥವಾ ಮಾವಿನ ಹಣ್ಣಿನ ವಾಸನೆಯನ್ನು ಹಿಡಿದು ಬಂದು ಅದನ್ನು ಕಡಿದಾಗ ಸಿಡಿಮದ್ದು ಸ್ಫೋಟಿಸುತ್ತಿತ್ತು. ಆಗ ಅದು ಸತ್ತ

ನಂತರ ಮರುದಿನ ಬೆಳಿಗ್ಗೆ ಅದನ್ನು ತರಲಾಗುತ್ತಿತ್ತು. ಒಂದು ವೇಳೆ ಹಂದಿ ಮದ್ದು ಕಡಿದು ಅಲ್ಲಿ ಸಾಯದೇ ಬೇರೆ ಕಡೆ ಹೋಗಿದ್ದರೆ ರಕ್ತಸ್ರಾವದ ಜಾಡು ಹಿಡಿದು ಹೋಗುವರು. ಒಂದು ವೇಳೆ ಅದು ಬದುಕಿದ್ದರೆ ಭರ್ಚಿಯಿಂದ ಇರಿದು ಕೊಂದು ತರುತ್ತಿದ್ದರು. ಆದರೆ ಈಗ ಸಿಡಿಮದ್ದನ್ನು ಬಳಸುತ್ತಿಲ್ಲ. ಈಟಿ, ಭರ್ಚಿ ಮತ್ತು ನಾಯಿಗಳನ್ನು ಉಪಯೋಗಿಸುತ್ತಾರೆ. ಈ ಕಾಡು ಹಂದಿಯ ಬೇಟೆಯಿಂದ ನಡುಗಡ್ಡೆಗಳಲ್ಲಿ ಕೆಲವು ಜನರು ಟೊಂಕ ಮುರಿದುಕೊಂಡರೆ, ಕೆಲವು ಜನರು ಕೈ ಕಾಲು ಮುರಿದುಕೊಂಡವರು ಇದ್ದಾರೆ. ಕಾಡುಹಂದಿ ತನ್ನ ಎರಡು ಬಲಿಷ್ಠ ಕೋರೆಗಳಿಂದ ನಾಯಿಗಳನ್ನು ಮತ್ತು ಮನುಷ್ಯರನ್ನು ಸಾಯಿಸುತ್ತದೆ. ಜನರಿಗೆ ಕಾಡುಹಂದಿಯ ಬೇಟೆ ಬಹಳ ಭಯಾನಕ. ಆದರೂ ಈ ಬೇಟೆ ಆಡುವುದನ್ನು ಬಿಡುತ್ತಿಲ್ಲ.

**ಕೌಜುಗ ಬೇಟೆ ಮತ್ತು ಬುರಲೆ ಬೇಟೆ:** ಕೌಜುಗದ ಮಾಂಸವು ಗಟ್ಟಿ ಹಾಗೂ ಸತ್ವಯುತವಾದ ಆಹಾರ ಎಂಬ ನಂಬಿಕೆಯಿದೆ. ಕೌಜುಗದ ಬೇಟೆಯನ್ನು ಬ್ರಾಹ್ಮಣ ಮತ್ತು ಲಿಂಗಾಯಿತ ಪಂಚಾಳ ಸಮುದಾಯ ಬಿಟ್ಟು ಉಳಿದ ಸಮುದಾಯಗಳವರು ಆಡುತ್ತಾರೆ. ಕೌಜುಗಗಳನ್ನು ಹಿಡಿಯಲು ಹಲವಾರು ವಿಧಾನಗಳನ್ನು ಬಳಸುವರು. ಪಂಜರದಲ್ಲಿ ಸಾಕಿದ ಕೌಜುಗಗಳ ಸಹಾಯದಿಂದ ಕಾಡು ಕೌಜುಗಗಳನ್ನು ಹಿಡಿಯಲಾಗುವುದು. ಬಲೆ ವಿಶೇಷ ಕುಣಿಕೆಗಳಿಂದ ಕೂಡಿರುವ ಬಿದಿರು ಕಡ್ಡಿ, ಎತ್ತಿನ ಅಥವಾ ಕುದುರೆ ಬಾಲದ ಕೂದಲಿನಿಂದ ಉರುಲುಗಳನ್ನು ಮಾಡಿ ಇದನ್ನು ಬೇಲಿ ಅಥವಾ ಪೊದೆಗಳ ಮಧ್ಯದಲ್ಲಿ ಬಿಡುವರು. ಅದರ ಹಿಂಭಾಗದಲ್ಲಿ ಸಾಕಿದ ಕೌಜುಗಗಳ ಪಂಜರವನ್ನು ಇಡಲಾಗುತ್ತಿತ್ತು. ಬಲಿ ಹಾಗೂ ಪಂಜರದ ಪಕ್ಷಿಗಳು ಕಾಡಿನ ಕೌಜುಗಗಳಿಗೆ ಕಾಣದಂತೆ ಇಡುವರು. ಸಾಕಿದ ಕೌಜುಗಗಳು ತಮ್ಮದೇ ಆದ ಶೈಲಿಯಲ್ಲಿ ಕೂಗುತ್ತಿರುವಾಗ ಆ ಧ್ವನಿಯನ್ನು ಗ್ರಹಿಸಿದ ಕಾಡು ಕೌಜುಗಗಳು ಧ್ವನಿಯ ಕಡೆ ಬರುತ್ತಿರುವಾಗ ಮಧ್ಯದಲ್ಲಿರುವ ಬಲಿಯ ಉರುಲಿಗೆ ಸಿಕ್ಕಿಕೊಂಡು ಒದ್ದಾಡಿ ಸಾಯುವವು. ಬಲೆಯಿಂದ ಬಿಡಿಸಿ ರೆಕ್ಕೆ ಕಟ್ಟಿ ಮತ್ತೊಂದೆಡೆಗೆ ಬಲೆ ಬಿಟ್ಟು ಮತ್ತೆ ಅದೇ ಕ್ರಮವನ್ನು ಅನುಸರಿಸಿ ಕೌಜುಗ ಬೇಟೆ ಆಡುವರು. ಕೌಜುಗ ಅಲ್ಲದೇ ಇದೇ ಜಾತಿಗೆ ಸೇರಿದ ಬುರುಲೆಯನ್ನು ಬೇಟೆಯಾಡುವರು. ಅದನ್ನು ಸಹ ಈ ತರಹದ ಬಲೆಯಿಂದಲೇ ಹಿಡಿಯುವರು. ಬುರುಲೆಯು ಕೂಡ ಕೌಜುಗ ಹಕ್ಕಿಯ ಜಾತಿಗೆ ಸೇರಿದ್ದು ಗಾತ್ರದಲ್ಲಿ ಚಿಕ್ಕದಾಗಿರುವುದು.

**ಮೀನು ಬೇಟೆ:** ನಡುಗಡ್ಡೆಗಳ ಸುತ್ತುಮುತ್ತಲು ನದಿ ಇರುವುದರಿಂದ ನಡುಗಡ್ಡೆ ಜನರು ಅತಿ ಹೆಚ್ಚು ಮೀನು ಬೇಟೆಯನ್ನು ಆಡುತ್ತಾರೆ. ಇದು ಗಂಗಾಮತಸ್ಥ ಸಮುದಾಯದಲ್ಲಿ ಪ್ರಧಾನ ವೃತ್ತಿಯಾಗಿ ಕಂಡು ಬರುವಂತಾಗಿದೆ. ಬ್ರಾಹ್ಮಣ, ಲಿಂಗಾಯತ, ಪಾಂಚಾಳರನ್ನು ಬಿಟ್ಟು ಉಳಿದೆಲ್ಲ ಸಮುದಾಯಗಳ ಜನರು ಪ್ರತಿನಿತ್ಯ ಮೀನು ಬೇಟೆಯನ್ನು ತಮ್ಮ ಆಹಾರಕ್ಕಾಗಿ ಆಡುತ್ತಾರೆ. ಋತುಮಾನಕ್ಕೆ ಅನುಗುಣವಾಗಿ ಮೀನುಗಳನ್ನು ಹಿಡಿದು ಮಾರುವುದು ಉಂಟು. ಇಲ್ಲಿ ಕೆಲವರು ಮೀನು ಬೇಟೆಯನ್ನೇ ವೃತ್ತಿ

ಯನ್ನಾಗಿಸಿಕೊಂಡು ಜೀವನ ಮಾಡುತ್ತಾರೆ. ಆದರೆ ನಡುಗಡ್ಡೆಗಳಲ್ಲಿ ಇದೆ ಸಮುದಾಯ ಮೀನುಗಾರಿಕೆ ಮಾಡುತ್ತಾರೆ ಎಂದು ಹೇಳುವುದಕ್ಕೆ ಆಗುವುದಿಲ್ಲ. ಹಲವಾರು ಸಮುದಾಯದವರು ಮೀನುಗಳನ್ನು ಹಿಡಿದು ಬೇರೆ ಸುತ್ತ ಮುತ್ತ ಹಳ್ಳಿಗರಿಗೆ ಮಾರುತ್ತಾರೆ. ಇವರೇ ಹಳ್ಳಿಗಳಿಗೆ ಹೋಗುವುದಿಲ್ಲ. ಹಳ್ಳಿಗರೇ ಇವರ ನಡುಗಡ್ಡೆಗಳಿಗೆ ಬರುತ್ತಾರೆ.

**ಗಾಳದ ಮೂಲಕ ಮೀನು ಹಿಡಿಯುವುದು:** ನದಿಗಳಲ್ಲಿ ಗಾಳದ ಮೂಲಕ ಮೀನನ್ನು ಬೇಟೆಯಾಡುವರು. ಮೀನಿನ ಕಿವಿರುಗಳಿಗೆ ಸಿಕ್ಕಿಕೊಳ್ಳುವಂತೆ ಕೊಕ್ಕೆಯಾಕಾರದ ಗಟ್ಟಿಯಾದ ತಂತಿಯಿಂದ ಗಾಳವನ್ನು ತಯಾರಿಸುವರು. ಆ ಗಾಳಕ್ಕೆ ಉದ್ದವಾಗಿ ಗಟ್ಟಿಯಾದ ದಾರವನ್ನು ಕಟ್ಟುವರು. ಗಾಳಕ್ಕೆ ಮಳೆ ಹುಳುಗಳನ್ನು ಅರ್ಧಕ್ಕೆ ಕತ್ತರಿಸಿ ಸಿಕ್ಕಿಸಿ ನೀರಿನೊಳಗೆ ಬಿಸಾಡುವರು. ಮಳೆ ಹುಳುಗಳನ್ನು ತಿನ್ನುತ್ತಾ ಮೀನು ಗಾಳಕ್ಕೆ ಸಿಕ್ಕಿಕೊಂಡು ಒದ್ದಾಡುವುದು. ಆಗ ದಡದಲ್ಲಿ ಕೋಲು ಹಿಡಿದ ಮೀನುಗಾರ ಅದನ್ನು ದಡಕ್ಕೆ ಎತ್ತಿಕೊಂಡು ಗಾಳದಿಂದ ಬಿಡಿಸಿಕೊಂಡು ಚೀಲಕ್ಕೆ ಹಾಕಿಕೊಳ್ಳುವನು. ಹೀಗೆ ತಮಗೆ ಬೇಕಾದಷ್ಟು ಮೀನುಗಳನ್ನು ಹಿಡಿಯುವರು.

**ಬೀಸೋ ಬಲೆಯಿಂದ ಮೀನು ಹಿಡಿಯುವುದು:** ವಿಶಾಲವಾದ ನದಿಯ ಜಲರಾಶಿಯಲ್ಲಿ ಬೀಸೋ ಬಲೆಯಿಂದ ಮೀನುಗಳನ್ನು ಹಿಡಿಯುವರು. ಮರದ ದಿನ್ನೆ ಅಥವಾ ಬಿದುರಿನಿಂದ ತಯಾರಿಸಿದ ತೆಪ್ಪಗಳಲ್ಲಿ ದೊಡ್ಡ ದೊಡ್ಡ ಮೀನುಗಳನ್ನು ಹಿಡಿಯುವರು. ಬಲೆಯನ್ನು ನೀರಿನಲ್ಲಿ ವಿಶಾಲವಾಗಿ ಬೀಸಿ ಸ್ವಲ್ಪ ಸಮಯದ ನಂತರ ಸುತ್ತಿಕೊಂಡು ಮೀನುಗಳನ್ನು ಹಿಡಿಯುವುದು. ಮಹಿಳೆಯರು ನದಿಯಲ್ಲಿ ನೀರು ಕಡಿಮೆಯಾದಾಗ(ಅಂದರೆ ಮಾರ್ಚ್ ಏಪ್ರಿಲ್‌ನಲ್ಲಿ ನೀರು ಬಹಳ ಕಡಿಮೆ). ತಮ್ಮ ಸೀರೆಗಳ ಮೂಲಕವು ಮೀನುಗಳನ್ನು ಹಿಡಿಯುವುದನ್ನು ಕಾಣಬಹುದು. ಈ ಸಮಯದಲ್ಲಿ ಸಣ್ಣ ಮಕ್ಕಳು ಕೂಡ ಸೊಳ್ಳೆ ಪರಧಿಯಿಂದ ಮೀನುಗಳನ್ನು ಹಿಡಿಯುತ್ತಾರೆ.

**ಸಿಡಿ ಮದ್ದುಗಳಿಂದ ಮೀನು ಹಿಡಿಯುವುದು:** ದೊಡ್ಡ ದೊಡ್ಡ ಮೀನುಗಳನ್ನು ಸಿಡಿಮದ್ದು ಬತ್ತಿಗಳನ್ನು ಹಚ್ಚಿ ನೀರಿನಲ್ಲಿ ಎಸೆಯುತ್ತಾರೆ. ಸಿಡಿ ಮದ್ದು ನೀರಿನಲ್ಲಿ ಸಿಡಿದು ನೀರಿನಲ್ಲಿರುವ ಮೀನುಗಳೆಲ್ಲ ಸತ್ತು ನೀರಿನ ಮೇಲೆ ತೇಲುತ್ತವೆ. ಆಗ ಅವುಗಳನ್ನು ಈಜುವುದರ ಮುಖಾಂತರ ಆರಿಸಿಕೊಳ್ಳುತ್ತಾರೆ ಇದನ್ನು ನದಿಯ ದೊಡ್ಡದಾದ ಮತ್ತು ಆಳವಾದ ನೀರು ಹರಿಯದಿದ್ದಲ್ಲಿ ಸಿಡಿಮದ್ದನ್ನು ಹಾಕುತ್ತಾರೆ. ಸಿಡಿ ಮದ್ದು ಬತ್ತಿಗೆ ಬೆಂಕಿ ಹಚ್ಚಿ ಹಾಕುವಾಗ ಬಹಳ ಎಚ್ಚರವಾಗಿ ಅದನ್ನು ಹಚ್ಚಿ ನೀರಿನಲ್ಲಿ ಎಸೆಯಬೇಕು. ಇಲ್ಲವಾದರೆ ಸ್ವಲ್ಪ ಎಚ್ಚರ ತಪ್ಪಿದರೆ ಕೈಯಲ್ಲಿ ಸಿಡಿದು ಹೋಗುತ್ತದೆ. ಆಗ ವ್ಯಕ್ತಿ ಸತ್ತು ಹೋಗುತ್ತಾನೆ. ಇಲ್ಲವಾದರೇ ಕೈ ಮತ್ತು ಬೆರಳು ಕತ್ತರಿಸಿ ಹೋಗುತ್ತವೆ. ಇದೆ ತರ ಆದ ಕೆಲವು ಉದಾಹರಣೆಗಳಿವೆ. ಕೈಬೆರಳುಗಳು ಹೋದ ಉದಾಹರಣೆಗಳಿವೆ. ಆದರೂ ಈಗಲೂ ಇದನ್ನು ಬಳಸಿ ಮೀನುಗಳನ್ನು ಬೇಟೆಯಾಡುತ್ತಾರೆ, ಆದರೆ ಅತಿ ಕಡಿಮೆ. ಯಾರೋ ಒಬ್ಬರು. ಏಕೆಂದರೆ ಸಿಡಿಮದ್ದು ಮೀನುಗಳಲ್ಲಿ ಸೇರಿ ಹೋಗುತ್ತದೆ. ಆ ಕಾರಣದಿಂದ ಇದನ್ನು ಹೆಚ್ಚು ಯಾರು

ಬೇಟೆಯಾಡುವುದಿಲ್ಲ. ಈಗ ನಡುಗಡ್ಡೆಗಳ ಹಲವಾರು ಬುಡಕಟ್ಟು ಸಮುದಾಯಗಳು ತಾವು ತಿನ್ನುವ ಆಹಾರದಿಂದ ರೋಗ ನಿರೋಧಕ ಶಕ್ತಿಯನ್ನು ಪಡೆಯದೇ ಇರುವುದರಿಂದ ಪದೇ ಪದೇ ಅನೇಕ ರೋಗಗಳಿಗೆ ತುತ್ತಾಗದೆ ಜೀವನ ಮಾಡುವವರು ಇದ್ದಾರೆ. ಕೆಲವು ಸಮುದಾಯಗಳು ಪೌಷ್ಠಿಕ ಆಹಾರದ ಕೊರತೆಯಿಂದ ಬಳಲುವವರು ಇದ್ದಾರೆ ಎಂದು ಹೇಳಬಹುದು.

ಈ ರೀತಿಯ ಬೇಟೆಯ ಪದ್ಧತಿ ಮತ್ತು ಬೇಟೆಯ ತಂತ್ರಗಾರಿಕೆಯನ್ನು ಎಲ್ಲಾ ನಡುಗಡ್ಡೆಗಳಲ್ಲಿ ಕಾಣಬಹುದಾಗಿದೆ. ಪ್ರಾಣಿ ಪಕ್ಷಿಗಳ, ಜಲಚರ ಪ್ರಾಣಿಯಾದ ಮೀನುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬೇಟೆಯಾಡುತ್ತಾರೆ. ಈ ನಡುಗಡ್ಡೆಗಳಿಗೆ ಹಬ್ಬ ಹರಿದಿನಗಳಲ್ಲಿ ಸುತ್ತಮುತ್ತ ಗ್ರಾಮದವರು ಬೇಟೆಗಾಗಿ ಬರುತ್ತಾ ಇರುತ್ತಾರೆ.

**೩.೧.೯. ಉಡುಗೆ ತೊಡುಗೆಗಳು**

ಪ್ರತಿಯೊಂದು ಸಮುದಾಯ ತನ್ನದೇ ಆದ ಪರಂಪರಾನುಗತವಾದ ಉಡುಗೆ ತೊಡುಗೆಗಳನ್ನು ಹೊಂದಿರುತ್ತದೆ. ಆ ಉಡುಗೆ ತೊಡುಗೆಗಳಲ್ಲಿ ವಿಶೇಷತೆಯೂ ಇರುತ್ತದೆ. ಒಂದು ಸಮುದಾಯದ ವೇಷಭೂಷಣಗಳು ಆ ಸಮುದಾಯದ ಸಂಸ್ಕೃತಿಯನ್ನು ತಿಳಿಸುವಂತೆ, ನಡುಗಡ್ಡೆಗಳಲ್ಲಿ ಎಲ್ಲಾ ಸಮುದಾಯಗಳ ಉಡುಗೆ ತೊಡುಗೆಗಳಲ್ಲಿ ಅಷ್ಟಾಗಿ ಆಡಂಬರ ಜೀವನ ಕಂಡುಬರುವುದಿಲ್ಲ. ಸರಳವಾದ ವೇಷಭೂಷಣ ಕಂಡುಬರುತ್ತವೆ. ಅವರುಗಳು ಧರಿಸುವ ಬಟ್ಟೆಗಳ ಮುಖಾಂತರ ಅವರ ಜೀವನ ಮಟ್ಟವನ್ನು ತಿಳಿದುಕೊಳ್ಳಬಹುದು.

**ಪುರುಷರು:** ನಡುಗಡ್ಡೆಗಳಲ್ಲಿ ವಾಸಿಸುವ ಇವರಲ್ಲಿ ವಿಶೇಷವಾದ ಉಡುಗೆಗಳು ಕಂಡುಬರುವುದಿಲ್ಲ. ಅತ್ಯಂತ ಸರಳವಾಗಿರುತ್ತವೆ. ಇವರು ಧರಿಸುವ ಬಟ್ಟೆ ಲಂಡಂಗಿ(ಅರ್ಧತೊಳು), ಮೊಣಕಾಲಿನ ಮೇಲೆ ಇರುವ ಹಾಗೆ ದೋತ್ರಾವನ್ನು ಉಟ್ಟುಕೊಂಡು ತಲೆಗೆ ವಸ್ತ್ರವನ್ನು ಸುತ್ತಿ ನಿಲುವಂಗಿ ಧರಿಸಿ, ಕಾಲಿಗೆ ಚರ್ಮದ ಪಾದರಕ್ಷೆಗಳನ್ನು ಹಾಕಿಕೊಳ್ಳುತ್ತಿದ್ದರು. ಇತ್ತೀಚಿಗೆ ಆಧುನಿಕತೆಯ ಪ್ರಭಾವದಿಂದಾಗಿ ಯುವಕರು ಪ್ಯಾಂಟು, ಶರ್ಟ್, ಟೀಶರ್ಟ್ ಮುಂತಾದವುಗಳನ್ನು ಧರಿಸುತ್ತಾರೆ. ಹಿರಿಯರು ತಲೆಗೆ ದೊಡ್ಡ ರುಮಾಲನ್ನು ಧರಿಸುತ್ತಾರೆ. ಮುಸ್ಲಿಂರಲ್ಲಿ ಸಾಮಾನ್ಯವಾಗಿ ಗಂಡಸರು ಪೈಜಾಮ, ಉದ್ದನೆಯ ನಿಲುವಂಗಿ ಹಾಗೂ ಟೋಪಿಯನ್ನು ಧರಿಸುವರು. ಆದರೆ ನಡುಗಡ್ಡೆಗಳಲ್ಲಿ ಹೆಚ್ಚು ಜನ ಮುಸ್ಲಿಂರು ಧೋತರವನ್ನು ಧರಿಸುತ್ತಾರೆ.

**ಸ್ತ್ರೀಯರು:** ನಡುಗಡ್ಡೆಗಳ ಮಹಿಳೆಯರು ಆಡಂಬರದ ಉಡುಗೆ ತೊಡುಗೆಗಳನ್ನು ಉಡುವುದಿಲ್ಲ. ಕುಬಸ ಸೀರೆಯನ್ನು ಧರಿಸುತ್ತಾರೆ. ಆಧುನಿಕತೆಯ ಪ್ರಭಾವದಿಂದ ನಗರಗಳಲ್ಲಿ ಸಿಗುವ ಆಧುನಿಕ ಮಾದರಿಯ ಸೀರೆ ಕುಬಸವನ್ನು ತೊಡುತ್ತಿರುವುದನ್ನು ಕಾಣಬಹುದಾಗಿದೆ. ಆದರೂ ಹಿರಿಯ ಸ್ತ್ರೀ ಹೆಣ್ಣು ಮಕ್ಕಳ ಹಳೆಯ ಕಾಲದ ಮಾದರಿ ಉಡುಪುಗಳನ್ನು ಧರಿಸುತ್ತಾರೆ. ಮುಸ್ಲಿಂ ಸ್ತ್ರೀಯರು

ಕೂಡ ಹಿಂದೂ ಸ್ತ್ರೀಯರ ಉಡುಪುಗಳನ್ನು ಧರಿಸುತ್ತಾರೆ. ಬುರಖಾವನ್ನು ಧರಿಸುವುದಿಲ್ಲ. ಇಲ್ಲಿ ಎಲ್ಲಾ ಸಮುದಾಯದವರು ಒಂದೇ ರೀತಿಯ ಉಡುಪುಗಳನ್ನು ಧರಿಸುತ್ತಾರೆ.

**ಆಭರಣಗಳು:** ಆಭರಣಗಳ ಮೋಹ ಹೆಚ್ಚಾಗಿದೆ. ನಡುಗಡ್ಡೆಗಳ ಜನರ ಸ್ತ್ರೀಯರು, ಪುರುಷರು, ಮಕ್ಕಳು ಸಹ ಹೊರತಾಗಿಲ್ಲ. ಅಂದರೆ ನಡುಗಡ್ಡೆಗಳ ಜನರು ಕೂಡಾ ಆಭರಣ ಪ್ರಿಯರಾಗಿದ್ದಾರೆ. ಆದರೆ ಆಭರಣದ ಬಳಕೆಯು ಬಹುಮಟ್ಟಿಗೆ ಜನರ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸಿದೆ.

**ಸ್ತ್ರೀಯರ ಆಭರಣಗಳು**

| ಆಭರಣಗಳು | | ತೊಡುವ ಸ್ಥಳ |
|---|---|---|
| ಬೋರಮಳಸರ | – | ಕೊರಳಿಗೆ |
| ಮೆಲುಗುಂಡ ಸರ | | |
| ಓಲೆ ಜುಮುಖಿ ಬುಗಡೆ | – | ಕಿವಿಗೆ |
| ಕಂಠಿಸರ, ಅವಲಕ್ಕಿ ಸರ | – | ಕೊರಳಿಗೆ |
| ಕಾಸಿನ ಸರ, ಟಿಕ್ಕೆಮಣಿ | | |
| ಮೂಗತಿ ನತ್ತು | – | ಮೂಗಿಗೆ |
| ಕಾಲುಂಗರ | – | ಕಾಲ ಬೆರಳಿಗೆ |
| ಕಾಲ, ಚೈನ, ಕಡಗ, ರುಳಿ | – | ಕಾಲಿಗೆ |
| ವಂಕಿ ಉಂಗುರ, ಸುತ್ತಿನುಂಗರ | – | ಕೈಬೆರಳಿಗೆ |
| ನಾಗಮುರಿ, ರಟ್ಟೆವಂಕಿ | – | ರಟ್ಟೆಗೆ |
| ಡಾಬು ಬೆಳ್ಳಿ | – | ಸೊಂಟಕ್ಕೆ |
| ಕೀ ಗೊಂಚು | | |
| ಬಳೆ, ಕಡಗತೊಡೆ | – | ಕೈಗೆ |

**ಪುರುಷರು**

| ಆಭರಣಗಳು | | ತೊಡುವ ಸ್ಥಳ |
|---|---|---|
| ಮುರುವು | – | ಕಿವಿಗೆ |

| | | |
|---|---|---|
| ಚೈನ್‌ಸರ | – | ಕೊರಳಿಗೆ |
| ರಟ್ಟೆಗಡಗ | – | ರಟ್ಟೆಗೆ |
| ಉಡುದಾರ | – | ಸೊಂಟಕ್ಕೆ |
| ತಾಯತಗಳ | – | ಕೊರಳಿಗೆ ಸೊಂಟಕ್ಕೆ |
| ಲಿಂಗದಕಾಯಿ | – | ಲಿಂಗ ಇಡುವಂಥ ಸೆಟ್ಟಿಗೆ ಕೊರಳಿಗೆ |
| ಉಂಗುರ | – | ಕೈ ಬೆರಳಿಗೆ |

**ಮಕ್ಕಳ ಆಭರಣಗಳು**

| **ಆಭರಣಗಳು** | | **ತೊಡುವ ಸ್ಥಳ** |
|---|---|---|
| ಕರಿಮಣಿಸರ | – | ಕೈಗೆ |
| ಗೆಜ್ಜೆ ಹಾಲ್ಗಡಗ | – | ಕಾಲಿಗೆ |
| ಉಂಗುರ | – | ಕೈಬೆರಳಿಗೆ |
| ಲಿಂಗದಕಾಯಿ | – | ಕೊರಳಿಗೆ |
| ಬೆಳ್ಳಿಉಡುದಾರ | – | ಸೊಂಟಕ್ಕೆ |
| ಕೈ ಕಟ್ಟು | – | ಕೈಗೆ |
| ಗೆಜ್ಜೆ ಚೈನ | – | ಕಾಲಿಗೆ |
| ಕೌಡಿಸರ | – | ಕೊರಳಿಗೆ |
| ಮುರುವು | – | ಕಿವಿಗೆ |
| ದೃಷ್ಟಿಸರ | – | ಕೊರಳಿಗೆ |

**ನಡುಗಡ್ಡೆಗಳಲ್ಲಿ ಪ್ರಾಣಿಗಳ ಆಭರಣಗಳು:** ಮನುಷ್ಯನು ತಾನು ವಿವಿಧ ಸೌಂದರ್ಯವರ್ಧಕಗಳನ್ನು ಬಳಸಿಕೊಂಡು ಸುಂದರವಾಗಿ ಕಾಣುತ್ತಾ ವಿವಿಧ ಆಭರಣಗಳನ್ನು ಧರಿಸಿಕೊಂಡು ತಾನೊಬ್ಬನೇ ಖುಷಿಪಡುವುದಲ್ಲದೆ, ತಾನು ಪ್ರೀತಿಸುತ್ತಿರುವ ತನ್ನ ಪ್ರೀತಿಯ ಸಾಕುಪ್ರಾಣಿಗಳಿಗೂ ಆಭರಣಗಳನ್ನು ತೊಡಿಸುವುದು ಒಂದು ವಿಶೇಷ ಮಾನವ ಹಬ್ಬ ಹರಿದಿನಗಳಲ್ಲಿ ಮಾತ್ರ ತಾನು ಆಭರಣ ಹಾಕಿಕೊಳ್ಳುವ ಹಾಗೆ ಪ್ರಾಣಿಗಳಿಗೂ ಅವುಗಳದೇ ಆದ ಹಬ್ಬ ಹರಿದಿನಗಳಲ್ಲಿ ಆಭರಣ ಹಾಕಿ ಸಂತಸಪಡುತ್ತಾನೆ.

**ಆಭರಣಗಳು, ಎತ್ತಿಗೆ:** ಕೊಂಬಣಸು, ಗೊಂಡೆ ಕೋಡಿಗೆ ಕಟ್ಟುತ್ತಾರೆ. ಗೆಜ್ಜೆಸರ, ಗಂಟೆ, ಗೆಜ್ಜೆಪಟ್ಟಿ ಕೊರಳಿಗೆ ಹಾಕುತ್ತಾರೆ. ಮುತ್ತಿನ ದಂಡೆ ಹಣೆಗೆ ಕಟ್ಟುತ್ತಾರೆ. ಕಸೂತಿ ಹೆಣಿಕೆಯಿಂದ ಹೆಣೆದ ಬಟ್ಟೆಯನ್ನು ದೇಹಕ್ಕೆ ಹಾಕುತ್ತಾರೆ. ಕಾರಹುಣ್ಣಿಮೆಯ ಕರಿಯ ಸಂದರ್ಭದಲ್ಲಿ ಶ್ರಾವಣದ ಕೊನೆಯ ಸೋಮವಾರದಂದು ಎತ್ತಿಗೆ ಹಾಕಿ, ಅಲಂಕಾರ ಮಾಡಿ ಅಗಸಿಯಲ್ಲಿ ಹೋಗಿ ಮೆರವಣಿಗೆ ಮಾಡುತ್ತಾರೆ ಮತ್ತು ಎತ್ತಿಗೆ ದೃಷ್ಟಿಯಾಗದಿರಲೆಂದು ಕಾಲಿಗೆ ಕರಿಯ ಹಗ್ಗದ ದಾರವನ್ನು ಕಟ್ಟುತ್ತಾರೆ. ಹಸು, ಮೇಕೆ, ಎತ್ತು ಈ ಎಲ್ಲಾ ಪ್ರಾಣಿಗಳಿಗೆ ಬಸವನ ಜಯಂತಿಗೆ ಕಾರಹುಣ್ಣಿಮೆಗೆ ಕೋಡುಗಳಲ್ಲಿ ಬಣ್ಣ ಹಚ್ಚಿ ಪೂಜಿಸುತ್ತಾರೆ. ನಾಯಿಗೂ ಕೂಡ ಕೊರಳಲ್ಲಿ ಗೆಜ್ಜೆ ಪಟ್ಟಿ ಕಟ್ಟುತ್ತಾರೆ. ಹೀಗೆ ಆಭರಣಗಳು ಸೌಂದರ್ಯ ವರ್ಧಕಗಳಷ್ಟೇ ಅಲ್ಲ. ಅವು ನಮ್ಮ ಅಪತ್ಕಾಲಕ್ಕೂ ನೆರವಾಗುತ್ತವೆ. ಹೇಗೆಂದರೆ ಜಮೀನು, ಮನೆ, ಸಾಲ ಸಣ್ಣಪುಟ್ಟ ಕಷ್ಟಗಳಿಗೆ ಹಣದ ಅಡಚಣೆಯಾದರೆ ಅವುಗಳನ್ನು ಮಾರಬಹುದು. ಅಥವಾ ಅಡಾ ಇಟ್ಟು ಹಣ ಪಡೆಯಬಹುದು. ನಂತರ ನಮಗೆ ಅನುಕೂಲವಾದಾಗ ಪಡೆದುಕೊಳ್ಳಬಹುದು. ಹೀಗಾಗಿ ಆಭರಣಗಳನ್ನು "ಆಪತ್ಕಾಲದ ನಂಟ" ಎಂದು ನಡುಗಡ್ಡೆಗಳ ಜನರ ನಂಬಿಕೆಯಾಗಿದೆ.

### ೩.೧.೧೦. ಜನಪದ ಕಲೆ

ಜನಪದ ಕಲೆ ಆದಿ ಮಾನವನಷ್ಟು ಹಳೆಯದು. ಎದೆಯಲ್ಲಿ ಹುದುಗಿದ ಕಲೆಯನ್ನು ಅದುಮಿಟ್ಟುಕೊಳ್ಳಲಾರದ ಮನುಷ್ಯ ತನ್ನ ಪರಿಸರದಲ್ಲೆಲ್ಲ ಕಲೆಯನ್ನು ಅಭಿವ್ಯಕ್ತಿಸಿದ. ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿದ್ದವ ತನಗೆ ಅವಕಾಶ ಸಿಕ್ಕಾಗಲೆಲ್ಲಾ ಚಿತ್ರಗಳನ್ನು ಬಿಡಿಸುತ್ತಿದ್ದನೆಂಬುದಕ್ಕೆ ಅನೇಕ ಸಾಕ್ಷಿಗಳು ದೊರೆಯುತ್ತದೆ. ಹಲವಾರು ವಿದ್ವಾಂಸರು ಕಲೆಯನ್ನು ಕುರಿತು ಈ ರೀತಿ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. "ಮಾನವನ ಕಲ್ಯಾಣಕ್ಕೆ ಹೇತುವಾದ ಕಲೆ" ಎಂದು **ಟಾಲ್‌ಸ್ಟಾಯ್,** "ಮಾನವನ ಚಿತ್ರ ರಂಗದರ್ಶನವೇ ಕಲೆ" ಎಂದು **ಹೆಬ್ಬೆಲ್,** "ಆತ್ಮದರ್ಶನ ಮಾಡಿಸುವುದೆ ಕಲೆ" ಎಂದು ಸಿ.ಇ. **ಜೋಡ್,** ಇನ್ನು ಕೆಲವರು ಕಲೆ ಎಂದರೆ "ಸೌಂದರ್ಯ ದರ್ಶನ" ಎಂದರು. ಹೀಗೆ ಹೇಳುವ ವ್ಯಾಖ್ಯಾನಗಳು" ಜನಪದ ಕಲೆಗೆ ಅನ್ವಯಿಸಿದವುಗಳಾಗಿವೆ"(ಶಾಂತವ್ವ ನಾಗಪ್ಪ ಲಕ್ಷ್ಮೀಶ್ವರ, ೨೦೧೩, ಪು.೫೩) ಜನಪದ ಕಲೆಗಳು ಇಂದು ನಿನ್ನೆಯವಲ್ಲ. ತಲೆತಲಾಂತರ ಗಳಿಂದ ಒಕ್ಕಲು ಮಕ್ಕಳ ಕೂಲಿಯಾಳುಗಳ ಅಂಗಳದಲ್ಲಿ ಹುಟ್ಟಿ ಕೊಂಡು ಬಂದವುಗಳಾಗಿವೆ.

ಹಾಗೆಯೇ ನಡುಗಡ್ಡೆಗಳಲ್ಲಿ ಹಲವಾರು ಕಲೆಗಳು ಇಲ್ಲ. ಗಡ್ಡೆಗಳಲ್ಲಿ ನೋಡುವುದಾದರೆ ಅಲ್ಪ ಪ್ರಮಾಣದ ಕಲೆಗಳನ್ನು ಕಾಣಬಹುದು. ಯಾಕೆಂದರೆ ಸಣ್ಣ ಸಣ್ಣ ನಡುಗಡ್ಡೆಗಳಿರುವುದರಿಂದ ಅಲ್ಪ ಪ್ರಮಾಣದ ಜನಸಂಖ್ಯೆ ವಾಸಮಾಡುವುದರಿಂದ ಕೆಲವೊಂದು ಕಲೆಗಳನ್ನು ಮಾತ್ರ ನೋಡಬಹುದು. ಕಲೆ ಕಲೆಗಾಗಿ ಎಂಬುದನ್ನು ಜನಪದ ಕಲಾವಿದರು ನಿರ್ದೇಶಿಸಿದರು. ಹಲವಾರು ಕಲೆಗಳು ಬರುಬರುತ್ತಾ ವೃತ್ತಿ ಕಲೆಗಳಾಗಿ ಪರಿವರ್ತಿತವಾಗಿರುವುದನ್ನು ಕಾಣಬಹುದು. ಇಲ್ಲಿ ಯಾವ ಕಲೆಗಳು

ವೃತ್ತಿ ಕಲೆಗಳಲ್ಲ. ಜಾತ್ರೆ, ಹಬ್ಬ, ಸುಗ್ಗಿ ಸಂದರ್ಭಗಳಲ್ಲಿ ಮಾತ್ರ ನೋಡುಬಹುದು. ಮನುಷ್ಯ ಮೊದ ಮೊದಲು ಕಲ್ಪನೆಯ ಚಿತ್ರಗಳಿಗಿಂತ ತಾನು ದಿನವೂ ನೋಡುವ ಚಿತ್ರಗಳನ್ನೇ ಚಿತ್ರಿಸಿದ. ಇಂದಿಗೂ ಅಷ್ಟೇ ಜನಪದರು ತಾವು ತಮ್ಮ ಪರಿಸರದಲ್ಲಿ ಪ್ರಕೃತಿಯಲ್ಲಿ ನೋಡುವ ವಸ್ತು ಪ್ರಾಣಿಗಳನ್ನು ತನ್ನ ಮನೆ ಬಟ್ಟೆಗಳ ಮೇಲೆ ಚಿತ್ರಗಳನ್ನು ತೆಗೆಯುವುದರ ಮೂಲಕ ಅನುಕರಿಸುತ್ತಾರೆ.

**ಭಜನೆ:** ದೇವರ ಸ್ತುತಿ ಮತ್ತು ಸ್ತೋತ್ರ ರೂಪವಾದ ಹಾಡುಗಳನ್ನು ಭಜನೆ ಎನ್ನಬಹುದು. ದೇವರನ್ನು ಗುಂಪಾಗಿ ಸ್ತುತಿಸುವ ಕ್ರಮವೇ ಭಜನೆ ಆಗಿದೆ. ಪ್ರತಿಯೊಂದು ಆರಾಧನಾ ಕಲೆಗೂ ಸಾಹಿತ್ಯ ಪರಂಪರೆ ಹೊಂದಿರುವಂತೆ ಭಜನೆ ಸಂಪ್ರದಾಯಕ್ಕೂ ಸಾಹಿತ್ಯ ಪರಂಪರೆಯಿದೆ. ಮಧ್ಯಕಾಲೀನ ಭಕ್ತಿ ಪರಂಪರೆಯೇ ಭಜನೆಗೆ ಹಿನ್ನೆಲೆಯಾಗಿದೆ. ಮೀರಾಬಾಯಿ ಭಜನೆ, ಸೂರ್‌ದಾಸ್‌ರ ಅಭಂಗಗಳು, ಕಬೀರ್ ದಾಸರ್ ದೋಹಾಗಳು ಇದೆ ಪರಂಪರೆಯಲ್ಲಿ ಬರುತ್ತವೆ. ಇತ್ತೀಚಿನ ದಿನಗಳಲ್ಲಿ ಭಜನೆಯನ್ನು ಜನಪದ ಪರಂಪರೆಗೆ ತಂದು ನಿಲ್ಲಿಸಿದ ಅನೇಕ ಹಿರಿಯ ಕವಿಗಳು ಇಲ್ಲಿ ಕಂಡು ಬರುತ್ತಾರೆ. ಗದುಗಿನ ಗಾನಯೋಗಿ ಪುಟ್ಟರಾಜ ಗವಾಯಿಗಳು, ಶಿಶುನಾಳ ಶರೀಫ್, ಕಡಕೋಳ ಮಡಿವಾಳಪ್ಪ ಇವರೆಲ್ಲ ಉತ್ತರ ಕರ್ನಾಟಕದಲ್ಲಿ ಭಜನೆ ಸಂಪ್ರದಾಯವನ್ನು ಹಿರಿದಾಗಿ ಬೆಳೆಸಿದರು.

ನಡುಗಡ್ಡೆಗಳಲ್ಲಿ ಜನಪದರಲ್ಲಿ ಭಜನೆಯ ಕಲೆ ಮೊದಲಿನಿಂದಲೂ ಇದೆ. ಅಮವಾಸೆ, ಹಬ್ಬ ಹರಿದಿನಗಳಲ್ಲಿ ಜಾತ್ರೆ, ಶ್ರಾವಣ, ಕಾರ್ತಿಕ ಮಾಸದಲ್ಲಿ, ಮಳೆ ಬಾರದ ಸಂದರ್ಭದಲ್ಲಿ ಮತ್ತು ಶಿವರಾತ್ರಿ ಜಾಗರಣೆಗೆ, ಯಾರಿಗಾದರೂ ಹಾವು ಕಚ್ಚಿದಾಗ, ಗಡ್ಡೆಯಲ್ಲಿ ಯಾರಾದರೂ ಸತ್ತಾಗ ನಾನಾ ಸಂದರ್ಭಗಳಲ್ಲಿ ಭಜನೆ ಮಾಡುವುದು ಕಂಡುಬರುತ್ತದೆ.

ಭಜನೆಯು ತಂಡದ ಹಿಮ್ಮೇಳದೊಂದಿಗೆ ಕೂಡಿರುತ್ತದೆ. ನಿಧಾನ ಗತಿಯಲ್ಲಿ ಆರಂಭವಾಗಿ ತ್ವರಿತಗತಿಯಲ್ಲಿ ಮುಕ್ತಾಯವಾಗುವುದು, ಭಜನೆಯ ಸಾಮಾನ್ಯ ಲಕ್ಷಣವಾಗಿದೆ. ತಾಳ, ದಂಬಡಿ, ತಬಲ, ಹಾರ್ಮೋನಿಯಂ ಇವು ಭಜನೆಗೆ ಸಂಗೀತ ಸಾಮಗ್ರಿಗಳಾಗಿವೆ. ದೇವಸ್ಥಾನಗಳ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಪದಗಳನ್ನು ಕಲಿತವರು, ಭಜನೆಗಳಲ್ಲಿ ಪಾಲ್ಗೊಳ್ಳುತ್ತಾರೆ. ಅನುಭವ ಪದಗಳು, ತತ್ವಪದಗಳು ಬರುವವರು ಹಾಡುತ್ತಾರೆ. ಬರದೆ ಇರುವವರು ಹಾಗೆ ಪಾಲ್ಗೊಳ್ಳುತ್ತಾರೆ. ನಡುಗಡ್ಡೆಗಳಲ್ಲಿ ಯಾವ ರೀತಿಯ ಭಜನೆ ಮಂಡಳಿಗಳು ಇಲ್ಲ. ಗಡ್ಡೆಗಳ ಜನರೆಲ್ಲ ಸೇರಿ ಹಣಹಾಕಿ ಸಾಮಗ್ರಿಗಳನ್ನು ತಂದು ದೇವರ ಗುಡಿಯಲ್ಲಿ ಇಡುತ್ತಾರೆ. ಎಲ್ಲ ಸಂದರ್ಭಗಳಿಗೆ ಉಪಯೋಗಿಸುತ್ತಾರೆ.

**ಭಜನೆ ಕಲಾವಿದರ ವಿನ್ಯಾಸ**

**ಮುಖ್ಯ ಗಾಯಕ** : ಈತನೇ ತಂಡದ ಮುಖ್ಯಸ್ಥ

**ಸಹಗಾಯಕ** : ಹಿನ್ನೆಲೆ ಹಾಡುವುದು ಈತನ ಕಾರ್ಯ

| | | |
|---|---|---|
| **ಹಾರ್ಮೋನಿಯಂ** | : | ಭಜನೆಯಲ್ಲಿ ಪ್ರಮುಖ ವಾದ್ಯ |
| **ತಪ್ಪಡಿ** | : | ಚರ್ಮದಿಂದ ಮಾಡಿದ ವಾದ್ಯ |
| **ತಾಳ** | : | ಭಜನೆಯಲ್ಲಿ ತಾಳಗಳು ಪ್ರಮುಖ |

ಇವುಗಳು ಹಿತ್ತಾಳೆಯದಾಗಿರುತ್ತವೆ.

**ಕೋಲಾಟ:** ಕೋಲಾಟವು ಭಾರತದಾದ್ಯಂತ ಜನಪ್ರಿಯವಾಗಿರುವ ಒಂದು ಜನಪದ ಕಲೆಯಾಗಿದೆ. "ವೈವಿಧ್ಯತೆಯಲ್ಲಿ ಏಕತೆ" ಎಂಬ ಸಿದ್ಧಾಂತಕ್ಕೆ ಇದೊಂದು ಉದಾಹರಣೆಯಾಗಿದೆ. ಈಗಲೂ ಕೂಡ ಜಾತ್ರೆ, ಉತ್ಸವಗಳಲ್ಲಿ ಸಾಮಾನ್ಯವಾಗಿರುತ್ತದೆ. ಕೋಲಾಟದ ಸಮೂಹ ಕುಣಿತ ಉತ್ಸವಕ್ಕೆ, ಜಾತ್ರೆಗೆ ಮೆರುಗು ತರು ವಂತಿರುತ್ತದೆ. ಮೊಹರಂ ಹಬ್ಬದಲ್ಲಿಯೂ ಸಹ ಕೋಲಾಟದ ದೃಶ್ಯ ಎಲ್ಲೆಡೆ ಕಂಡುಬರುತ್ತದೆ. ಕೋಲುಗಳಿಗೆ ಬಣ್ಣ ಹಚ್ಚಿ ಒಂದು ತುದಿಗೆ ರಿಬ್ಬನ್ ಅಥವಾ ಗೆಜ್ಜೆಕಟ್ಟಿ ಕೋಲುಗಳನ್ನು ಅಲಂಕರಿಸುತ್ತಾರೆ. ಕೋಲಾಡುವವರು ದೋತ್ರಾ, ಬನಿಯನ್, ನಡುವಿಗೆ ಶಲ್ಯಸುತ್ತಿಕೊಂಡು, ತಲೆಗೆ ರಿಬ್ಬನ್ ಕಟ್ಟಿಕೊಂಡು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೋಲಾಟ ಆರಂಭಿಸುತ್ತಾರೆ.

"ಮೌಲಾಲಿ, ನೆನದೇವು ಗಜಮುಖ ಧೈರ್ಯನ ಸೊಬಗಿನ ಸರಸ್ವತಿ ಬೆನಕನಾ" ಎಂಬ ಪ್ರಾರ್ಥನೆ ಪದ್ಯದೊಂದಿಗೆ ಆರಂಭವಾಗುತ್ತದೆ. ಕೋಲಿನ ಸದ್ದಿನ ಗತ್ತಿಗೆ ತಕ್ಕಂತೆ ಏಕಪ್ರಕಾರವಾಗಿ ವಿವಿಧ ಭಂಗಿಗಳಲ್ಲಿ ನೋಡುಗರ ಮನಸೂರೆಗೊಳ್ಳುವಂತೆ ಹೆಜ್ಜೆ ಹಾಕುತ್ತಾರೆ. ಇದು ಜನರ ಗುಂಪು ಇರುತ್ತದೆ. ಇಲ್ಲಿ ಕೋಲಾಟದ ತಂಡಗಳೇನು ಇಲ್ಲ. ಅನೇಕ ವಿಶೇಷ ಸಂದರ್ಭಗಳಲ್ಲಿ ಗಡ್ಡೆಗಳ ಯುವಕರು ಕೂಡಿ ಕೋಲಾಟ ಆಡುತ್ತಾರೆ.

**ಮೋಹರಂ ಕುಣಿತ (ಅಲಾಯಿ):** ಎಲ್ಲಾ ನಡುಗಡ್ಡೆಗಳಲ್ಲಿ ಈ ಹಬ್ಬವನ್ನು ಆಚರಿಸುವುದಿಲ್ಲ. ಏಕೆಂದರೆ ಕೆಲವೊಂದು ಗಡ್ಡೆಗಳಲ್ಲಿ ಮುಸ್ಲಿಂರು ಇಲ್ಲ. ಆ ಕಾರಣದಿಂದ ಮೋಹರಂ ಕುಣಿತವನ್ನು ದೇವರಗಡ್ಡೆ, ಕುರವಪುರಗಡೆಗಳಲ್ಲಿ ಕಾಣಬಹುದು. ಹಿಂದೂ ಮುಸ್ಲಿಂರೆನ್ನದೆ ಎಲ್ಲರೂ ಸೇರಿ ಆಚರಿಸುವ ಭಾವೈಕ್ಯತೆಯನ್ನು ಬಿಂಬಿಸುವ ಹಬ್ಬ ಇದಾಗಿದೆ. ರಾತ್ರಿ ಅಲಾಯಿ ದೇವರ ಮೆರವಣಿಗೆ ಹೊರಟ ಸಂದರ್ಭದಲ್ಲಿ, ಕತ್ತಲ ರಾತ್ರಿಯ ಮೆರವಣಿಗೆ ಸಂದರ್ಭದಲ್ಲಿ ಅಲಾಯಿ ಕುಣಿತ ಹಬ್ಬಕ್ಕೆ ವಿಶೇಷ ಮೆರುಗು ನೀಡುತ್ತದೆ. ಹಲಿಗೆ ಬಡಿಯುವವನ ತಾಳದ ಗತ್ತಿಗೆ ತಕ್ಕಂತೆ ಒಬ್ಬರಿಗೊಬ್ಬರು ಕೈ ಕೈ ಹಿಡಿದುಕೊಂಡು ಒಂದು ವೃತ್ತಾಕಾರವನ್ನು ನಿರ್ಮಿಸಿ ಆಕರ್ಷಿತವಾಗಿ ಕುಣಿಯುತ್ತ ತಿರುಗುವ ಒಂದು ಜನಪದ ಕಲೆಯಾಗಿದೆ. ಈ ಒಂದು ಹಬ್ಬದಲ್ಲಿ ಜನರಿಗೆ ನಂಬಿಕೆ ಹೆಚ್ಚಿರುತ್ತದೆ. ಗಡ್ಡೆಯ ಪ್ರತಿಯೊಬ್ಬ ಗಂಡಸರು ಈ ಕುಣಿತದಲ್ಲಿ ಭಾಗವಹಿಸುತ್ತಾರೆ. ಹೆಣ್ಣು ಮಕ್ಕಳು ಕುಣಿಯುವುದನ್ನು ರಾತ್ರಿಯಲ್ಲಿ ಕುಳಿತುಕೊಂಡು ನೋಡುತ್ತಾರೆ.

**ಡೊಳ್ಳು ಕುಣಿತ:** ಜಾತ್ರೆ ಉತ್ಸವಗಳಲ್ಲಿ ಗ್ರಾಮೀಣ ಜನಪದರ ಧಾರ್ಮಿಕ ಸಮಾರಂಭಗಳಲ್ಲಿ ಡೊಳ್ಳು ಕುಣಿತ ವಿಶೇಷವಾಗಿ ಕಂಡು ಬರುತ್ತದೆ. ಕುರುಬರಲ್ಲಿ ಹೆಚ್ಚಾಗಿ ಡೊಳ್ಳಿನ ಕುಣಿತ ಕಂಡುಬರುತ್ತದೆ ಮತ್ತು ವಿಶೇಷವಾಗಿ ಕುರುಬರು ಮದುವೆ ಸಮಾರಂಭದಲ್ಲಿಯೂ ಡೊಳ್ಳು ಬಾರಿಸುವುದು ಕಂಡುಬರುತ್ತದೆ. ಎಲ್ಲರೂ ಕಪ್ಪು ಬಣ್ಣದ ಕಂಬಳಿಯಿಂದ ಅಲಂಕಾರವಾಗಿರುವುದರ ಜೊತೆಗೆ ಹಣೆ ತುಂಬ ಬಂಢಾರ ಬಳಿದುಕೊಂಡಿರುತ್ತಾರೆ.

**ಹಲಗೆ ಬಡಿಯುವ ಕಲೆ:** ಹಲಿಗೆ ಬಡಿಯುವ ಕಲೆ ಎಲ್ಲಾ ನಡುಗಡ್ಡೆಗಳಲ್ಲಿದೆ. ರಾಮಗಡ್ಡೆಯಲ್ಲಿ ಮಾತ್ರ ಇಲ್ಲ. ಏಕೆಂದರೆ ಹಲಿಗೆ ಬಡಿಯುವ ಕಲೆ ಹರಿಜನ ಸಮುದಾಯದ ಸಾಂಪ್ರದಾಯಿಕ ಕಲೆಯಾಗಿರುತ್ತದೆ. ಒಂದು ಒಂದೂವರೆ ಅಡಿಯ ವೃತ್ತಾಕಾರದ ತಟ್ಟೆಯಾಕಾರದ ಚರ್ಮವಾದ್ಯ ಇದಾಗಿದೆ. ಮೊಹರಂ ಕುಣಿತಕ್ಕೆ ಡಂಗುರ ಸಾರಲು ಮತ್ತು ವಿಶೇಷವಾಗಿ ಸತ್ತಾಗ ಹಾಗೂ ಹೋಳಿಹಬ್ಬದಲ್ಲಿ ಮತ್ತು ನಡುಗಡ್ಡೆಗಳಲ್ಲಿ ಯಾರಾದರೂ ಸತ್ತಾಗ ಪ್ರತಿಯೊಬ್ಬರು ಬಳಸುತ್ತಾರೆ. ಸಾರಾಯಿ ಕುಡಿದು ಬಾರಿಸಿದರೆ, ವಾದ್ಯಕ್ಕೆ ವಿಶೇಷರಂಗು ಬರುತ್ತದೆ ಎನ್ನುತ್ತಾರೆ. ಯುಗಾದಿ ಹಬ್ಬದಲ್ಲಿ ಬೇಟೆ ಸಂದರ್ಭದಲ್ಲಿ ಹಲಗೆ ಬಳಸುತ್ತಾರೆ.

**ನಾಟಕ:** ಜಗವೇ ನಾಟಕ ರಂಗ ಎನ್ನುವ ಹಾಗೆ ಜಗತ್ತಿನಲ್ಲಿರುವುದೆಲ್ಲಾ ನಾಟಕದಲ್ಲಿದೆ. ನಾಟಕವು ಸಾಹಿತ್ಯ ಅಭಿನಯಗಳ ಮುಖಾಂತರ ರಸಚೇತನ ಕಾರ್ಯಗಳನ್ನು ಮಾಡುತ್ತದೆ. ಇಂತಹ ರಸಚೇತನ ಕಾಯಕ ಮಾಡುವ ನಾಟಕ ಮನುಷ್ಯ ಜೀವನದಲ್ಲಿ ಹಾಸುಹೊಕ್ಕಾಗಿದೆ. ನಾಟಕ ಎಲ್ಲ ಕಲೆಗಳನ್ನು ಒಳಗೊಂಡಿದೆ.

ದೇವರ ಗಡ್ಡೆಯಲ್ಲಿ ಊರಿನ ಜನ ಸೇರಿ ಪೌರಾಣಿಕ ನಾಟಕಗಳನ್ನು ಕಲೆತು ಗದ್ದೆಮ್ಮದೇವಿ ಜಾತ್ರೆ ಬಂದಾಗ ಆಡುತ್ತಾರೆ. ನಾಟಕ ನೋಡಲು ಜಾತ್ರೆಗೆ ಬಂದವರು ಗಡ್ಡೆಗಳಲ್ಲಿ ಇರುವ ಜನರ ಸಂಬಂಧಿಕರು ಆಗಿರುತ್ತಾರೆ. ನಾಟಕ ನೋಡಲು ತಮ್ಮ ಬಂಧು ಬಳಗದವರನ್ನು ಕರೆಸಿಕೊಳ್ಳುವ ಪದ್ಧತಿ ಇದೆ. ನಾಟಕ ನೋಡಲು ಬಂದ ಬಂಧು ಬಳಗವು ತಮಗೆ ಸಂಬಂಧಿಸಿದ ಕಲಾವಿದರಿಗೆ ೧೦೧, ೫೧, ೨೧ ರೂಪಾಯಿ, ಬಂಗಾರ, ವಸ್ತ್ರ, ಒಡವೆಗಳನ್ನು ಹೀಗೆ ಅವರವರ ಯೋಗ್ಯತಾನು ಸಾರವಾಗಿ ಮುಯ್ಯಿ ಹಾಕುವುದುಂಟು. ನಾಟಕವು ಬೆಳಗಾಗುವವರೆಗೂ ಪ್ರದರ್ಶನಗೊಳ್ಳುತ್ತದೆ.

**ಭಾರ ಎತ್ತುವದು:** ಜಾತ್ರೆಗಳಲ್ಲಿ ಮನರಂಜನೆಗಿಂತ ಭಿನ್ನವಾದ ಇತರ ಕೆಲವು ಪ್ರದರ್ಶನಗಳು ಕೆಲವೆಡೆ ನಡೆಯುತ್ತವೆ. ಅವುಗಳ ಮುಖ್ಯ ಗುರಿ ಶಕ್ತಿ ಪ್ರದರ್ಶನ. ನಮ್ಮ ಜನಪದರು ಎಷ್ಟು ಬಲಶಾಲಿಗಳಾಗಿದ್ದರು ಮತ್ತು ವಿವಿಧ ಬಗೆಯ ಶಕ್ತಿ ಸಾಧನೆ ಹೊಂದಿದ್ದರು ಎನ್ನುವುದಕ್ಕೆ ಇವು ನಿದರ್ಶನ. ಭಾರಿ ಗಾತ್ರದ ಕಲ್ಲು-ಗುಂಡುಗಳನ್ನು ಅನಾಮತ್ತಾಗಿ ಮೇಲೆತ್ತಿ ಹೆಗಲ ಮೇಲಿನಿಂದ

ಕೆಳಗೆ ಒಗೆಯುವರು. ಸಂಗ್ರಾಣಿ ಕಲ್ಲನ್ನು ಒಂದೇ ಕೈಯಿಂದ ಮೇಲೆತ್ತಿ ಹಿಡಿಯುವದು. ಹಳೇ ಬಂಡಿಯ ಕಬ್ಬಿಣದ ಇರುಸು, ಇರುಸು ಕಟ್ಟುಗಳನ್ನು ಮೇಲೆತ್ತುವುದು. ಭಾರಿ ಗಾತ್ರದ ತುಂಬಿದ ಕೊಡಗಳನ್ನು ಎತ್ತುವುದು. ಹೀಗೆ ಹತ್ತಾರು ಬಗೆಯ ಶಕ್ತಿ, ಶೌರ್ಯ ಪ್ರದರ್ಶನಗಳು ನಮ್ಮ ಜನಪದರ ಶಕ್ತಿ ಸಾಮರ್ಥ್ಯಗಳ ಅದ್ಭುತ ಸಾಧನೆಗೆ ಸಾಕ್ಷಿಗಳಾಗಿರುತ್ತವೆ. ನಡುಗಡ್ಡೆಗಳಲ್ಲಿರುವ ಯುವಕರು ಶಕ್ತಿಯುತರಾಗಿದ್ದು, ಭಾರಗಳನ್ನು ಎತ್ತುವಲ್ಲಿ ಕೂಡ ಕಾಣಬಹುದು.

**ಎತ್ತುಗಳಿಂದ ಭಾರ ಜಗ್ಗಿಸುವುದು:** ಜನಪದರು ತಮ್ಮ ಶೌರ್ಯದ ಕಲೆಗಳನ್ನು ಜಾತ್ರೆ ಸಂದರ್ಭದಲ್ಲಿ ಪ್ರದರ್ಶನ ಮಾಡಿದರೆ, ಅವರ ಸಾಕು ಪ್ರಾಣಿಗಳಾದ ಎತ್ತುಗಳನ್ನು ಪ್ರೀತಿಯಿಂದ ಸಾಕಿ ಅವುಗಳ ಮೂಲಕ ಜಾತ್ರೆ, ಹಬ್ಬ ಹರಿದಿನಗಳ ಸಂದರ್ಭದಲ್ಲಿ ಪ್ರದರ್ಶಿಸುವುದು ಒಂದು ವೈಶಿಷ್ಟ್ಯ. ಇದರ ಹಿನ್ನೆಲೆಯಾಗಿ ಭಾರ ಜಗ್ಗಿಸುವ ಸ್ಪರ್ಧೆಯಲ್ಲಿ ಭಾಗವಹಿಸುವ ಹೋರಿಗಳಿಗೆ ವರ್ಷದುದ್ದಕ್ಕೂ ಒಳ್ಳೆಯ ಮೇವು, ಹಿಂಡಿ, ಗುಗ್ಗರಿ ತಿನಿಸುವುದು ಮತ್ತು ಮೈ ತಿಕ್ಕುವುದಲ್ಲದೆ ಇದರ ಜೊತೆಗೆ ತರಬೇತಿ ನೀಡುತ್ತಾರೆ. ಇಂತಹ ತರಬೇತಿ ಹೊಂದಿದ ಜಾನುವಾರುಗಳಿಂದ ದೊಡ್ಡ ಬಂಡೆಗಲ್ಲುಗಳನ್ನು ಜಗ್ಗಿಸುತ್ತಾರೆ. ಸ್ಪರ್ಧೆಯಲ್ಲಿ ವಿಜೇತವಾದ ದನಗಳ ತಂಡದ ಮಾಲೀಕನಿಗೆ ಬಹುಮಾನ ಕೊಡುವುದು ಒಂದು ಪದ್ಧತಿ. ಜೂಜು ಕಟ್ಟಿ ಸ್ಪರ್ಧೆಕೂಡಮಾಡಿ ಎತ್ತುಗಳನ್ನು ಎಳೆಸುತ್ತಾರೆ. ಒಂದೊಂದು ಬಾರಿ ಮನರಂಜನೆ ಸಲುವಾಗಿ ಭಾರವಾದ ವಸ್ತುಗಳನ್ನು ಎಳೆಸುತ್ತಾರೆ ಅವುಗಳಿಂದ ಖುಷಿಪಡುತ್ತಾರೆ.

### ೩.೧.೧೧. ಜನಪದ ಆಟಗಳು

ಕ್ರಿಡೆಗಳು ಮಾನವನ ಜೀವನದಲ್ಲಿ ಬಹುಮಹತ್ತರವಾದ ಸ್ಥಾನವನ್ನು ಪಡೆದಿವೆ. ಈ ಕ್ರೀಡೆಗಳು ಮನುಷ್ಯನ ಹುಟ್ಟಿನೊಂದಿಗೆ ಹುಟ್ಟಿಕೊಂಡವು. ಏಕೆಂದರೆ ಅವನ ಬಾಲ್ಯಾವಸ್ಥೆಯಲ್ಲಿಯೇ ಗಿಡಗಳು ಚಿಗುರೊಡೆಯುವಂತೆ ಸಹಜವಾಗಿಯೇ ಹುಟ್ಟಿಕೊಂಡಿವೆ ಎಂದರೆ ತಪ್ಪಾಗಲಾರದು. ಅಂದರೆ ಪ್ರಕೃತಿಯಲ್ಲಿರುವ ಗಿಡ-ಮರ ಬಳ್ಳಿಗಳು ಗಾಳಿಗೆ 'ಸ್ಯೊಂ' ಎಂದು ಕುಲುಕಾಡುವುದು, ಸಮುದ್ರದಲ್ಲಿರುವ ಅಲೆಗಳ ಹೊಯ್ದಾಟ ಇವುಗಳನ್ನೆಲ್ಲ ಅವಲೋಕಿಸಿದಾಗ ಪ್ರಕೃತಿ ಸಂಪೂರ್ಣವಾಗಿ ಕ್ರೀಡೆಗಳಲ್ಲಿ ಸಮ್ಮಿಲನಗೊಂಡಿದೆ ಎನ್ನಬಹುದು. ಹೀಗಾಗಿ ನಿಸರ್ಗದ ಮಡಿಲಿನಲ್ಲಿ ಬದುಕುವ ಮಾನವ ಜೀವಿಗೆ ಈ ಆಟಗಳೆಲ್ಲ ನೈಸರ್ಗಿಕವಾಗಿ ಬಂದವೆನ್ನಬಹುದು.

ಮಾನವನಿಗೆ ತಾಯಿಯ ತುಂಬುಮಡಿಲೆ ಈ ಆಟಗಳಿಗೆ ನಾಂದಿ. ಅವಳ ವಾತ್ಸಲ್ಯದ ಬೆಸುಗೆ ಆಟಗಳಿಗೆ ಪ್ರೇರಕ ಶಕ್ತಿಯಾಗಿದೆ. ಆಕೆಯ ಪ್ರೀತಿ ವಾತ್ಸಲ್ಯಗಳಿಂದ ಪುಟಗೊಂಡ ಮನಸ್ಸು ರೆಕ್ಕೆ ಬಿಚ್ಚಿ, ಆಟ ಬಯಸಿ ತನ್ನ ಕೈ-ಕಾಲುಗಳನ್ನು ಆಡಿಸುವುದು, ಆಕೆಯ ಬಳೆಗಳೊಂದಿಗೆ ಆಡುವುದು ಅಂಗಾತ ಮಲಗಿ ತನ್ನ ಕಾಲುಗಳನ್ನು ಎತ್ತಿ ಅಲುಗಾಡಿಸಿ ಕೇಕೆಹಾಕುವುದು, ತನ್ನ ಕೈಗೆ

ಸಿಕ್ಕ ವಸ್ತುವನ್ನು ಆಚೆ– ಈಚೆ ಬಿಸಾಡಿ ಮತ್ತೆ ಮುಟ್ಟಿ ತೆಗೆದುಕೊಳ್ಳಲು ಪ್ರಯತ್ನಿಸುವುದು, ಹಾಗೆಯೇ ತಾಯಿ ತೊಡೆಯ ಮೇಲೆಯೇ ಮುಂಜೋಲಿ ಹಿಂಜೋಲಿ ಹೊಡೆದು ತಾಯಿಯನ್ನು ಆನೆಯಾಟಕ್ಕೆ ಪ್ರೇರೇಪಿಸುವುದು.

ಆನೆ ಬಂತೋಂದಾನೆ। ಯಾವುರಾನೆ। ಮೈಸೂರಾನೆ। ಇಲ್ಲಿಗ್ಯಾಕೆ ಬಂತು। ಹಾದಿತಪ್ಪಿಬಂತು। ಹಾದಿಗೊಂದು ದುಡ್ಡು। ಬೀದಿಗೊಂದು ದುಡ್ಡು। ಅದೇ ದುಡ್ಡ ಕೊಟ್ಟು । ಸೇರು ಕೊಬ್ಬರಿ ತಂದು। ಲಟ ಲಟ ಮುರಿದು। ಹುಡುಗರ ಕೈಗೆಕೊಟ್ಟು ತಾನಿಷ್ಟುತಿಂತು । ಓಡೋಡಿ ಬಂತು॥ ಎಂದು ಆಟವಾಡಿದಾಗ ಆ ಮಗುವಿಗೆ ಎಲ್ಲಿಲ್ಲದ ಖುಷಿ. ಸ್ವಲ್ಪ ಓಡಾಡಲು ಕಲಿತ ಮೇಲೆ ಬಚ್ಚಿಟ್ಟುಕೊಳ್ಳುವ ಆಟವಾಡಿ ತಾನು ಸಂತೋಷಪಟ್ಟು ಹಿರಿಯರನ್ನು ಸಂತೋಷದಿಂದ ತೇಲಿಸುವುದು. ಮಗುವನ್ನು ಎದುರಿಗೆ ಕುಳ್ಳಿರಿಸಿಕೊಂಡು ಮಗುವಿನ ಒಂದು ಕೈ ಬೆರಳನ್ನು ಅನ್ನ, ಸಾರು, ಹೋಳಿಗೆ, ತುಪ್ಪ ಎಂದು ಹೆಸರಿಸಿ ಒಂದೊಂದು ಬೆರಳನ್ನು ಎಣಿಸಿ ನೀವಿಷ್ಟು ಉಂಡು, ನಿಮ್ಮಪ್ಪ ಇಷ್ಟು ಉಂಡು ನಿಮ್ಮಮ್ಮ ಇಷ್ಟು ಉಂಡು, ನಾನಿಷ್ಟು ಉಂಡು ಉಳಿದಿದ್ದೆಲ್ಲ ಬುತ್ತಿಕಟ್ಟಿ ಮಗುವಿನ ಕೈ ಹಿಡಿದುಕೊಂಡು ಗದ್ದೆಮ್ಮ ಜಾತ್ರೆಗೆ ಹೋಗಿ ಕೊಂಕಳಲ್ಲಿ ಕಚಗುಳಿ ಇಟ್ಟರೆ, ಆ ಮಗು ನಗುವಿನ ಬುಗ್ಗೆಯನ್ನೇ ತೋರಿಸುತ್ತದೆ.

ಚಂದಪ್ಪ ಚಂದಪ್ಪ ಚಾರಿಕಾಯಿ ಬಟ್ಲು ತುಂಬ ಬಾರಿಕಾಯಿ ಮಗುಗೊಂದು ಬಟ್ಲು ಬಾರಿಕಾಯಿ ಕೊಡು ಚಂದಪ್ಪ ಚಾರಿಕಾಯಿ ಎಂದು ಅಂಗೈಯಿಂದ ಬಾರಿಕಾಯಿ ಹಿಡಿದ ಹಾಗೆ ಜೇಬಿನಲ್ಲಿ ಹಾಕಿದಂತೆ ಮಾಡಿ ಆಟದ ಮೂಲಕ ಊಟಮಾಡಿಸಿದರೆ, ಮಗು ಒಂದು ತುತ್ತು ಹೆಚ್ಚಿಗೆ ಊಟಮಾಡುತ್ತದೆ. ಹಾಗೆಯೇ ಮಗುವು ತನ್ನ ಮುಷ್ಠಿ ಬಿಗಿಯಾಗಿ ಹಿಡಿದುಕೊಂಡು ಇರುವುದು ಕಂಡು ತಾಯಿ, ತಾತಾ ಗುಬ್ಬಿ, ಪಾವನ ಗುಬ್ಬಿ ಮುಚ್ಚಾ ತೆಗೆದ ಮುನ್ನೂರು ಗುಬ್ಬಿ ಎಂದು ಹಾಡಿದರೆ ಮಗು ತನ್ನ ಮುಷ್ಠಿ ಬಿಚ್ಚುವುದು ತೆಗೆಯುವುದು ಮಾಡುತ್ತದೆ.

ಜನಪದ ಆಟಗಳನ್ನು ಚಾರಿತ್ರಿಕವಾಗಿ, ಭೌಗೋಳಿಕವಾಗಿ ಅವಲೋಕಿಸಿದಾಗ ಎಲ್ಲ ಜನಪದ ಆಟಗಳು ಎಲ್ಲಾ ಕಾಲದಲ್ಲೂ, ಎಲ್ಲಾ ಜನರಲ್ಲೂ ಜನಪ್ರಿಯವಾಗಿರಲಿಲ್ಲ. ಅಂದರೆ ಪರಂಪರಾನುಗತ ಸಲಕರಣೆಗಳನ್ನು ಬಳಸಿಕೊಂಡು, ಮನೆಯ ಒಳಗೆ ಮತ್ತು ಹೊರಗೆ ಆಡಲಾಗುವ ಯಾವುದೇ ಗುಂಪಿನ ಜನತೆಯ ಆಟಗಳೆಲ್ಲಾ ಜನಪದ ಆಟಗಳು. ಈಜಿಪ್ಟ್, ಮೆಹೆಂಜೋದಾರೋಗಳಲ್ಲಿ, ವೇದೋಪನಿಷತ್ತುಗಳಲ್ಲಿ, ರಾಮಾಯಣ, ಮಹಾಭಾರತಗಳಲ್ಲಿ ರಾಜಮಹಾರಾಜರುಗಳ ಕಾಲದಲ್ಲಿ ಅದರಲ್ಲೂ ವಿಶೇಷವಾಗಿ ವಿಜಯನಗರ, ಮೈಸೂರು ಒಡೆಯರ ಕಾಲದಲ್ಲಿ ಆಟಗಳ ಬಗೆಗಿನ ಉಲ್ಲೇಖಗಳು ಸಾಕಷ್ಟು ದೊರೆಯುತ್ತವೆ.

ಪಂಪನ 'ವಿಕ್ರಮಾರ್ಜುನ ವಿಜಯದಲ್ಲಿ' ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತೀರಿ. (ಪಂಪ ಭಾರತ ೬-೯೯) ಎಂಬ ಸಾಲುಗಳಿಂದ ಹಿಡಿದು ಜನ್ನ, ಜಗನ್ನಾಥ ವಿಜಯ, ನಂಜುಂಡ, ಕುಮಾರವ್ಯಾಸರಾದಿಯಾಗಿ ಅನೇಕ ಕವಿಗಳ ಕಾವ್ಯಗಳಲ್ಲಿ ಪಗಡೆ ಆಟ, ಕುದುರೆ ಓಡಿಸುವ ಆಟ, ಚಿನ್ನಿಕೋಲು, ಕಣ್ಣುಮುಚ್ಚಾಟ, ಜೂಜು, ಆಣೆಕಲ್ಲಾಟ ಮುಂತಾದ ಆಟಗಳ ಉಲ್ಲೇಖವಿದೆ. ಭಾರತದಲ್ಲಿರುವ ಬಗೆಬಗೆಯ ಆಟಗಳು ಈಜಿಪ್ಟ್ ಮತ್ತು ಚೀನಾದಲ್ಲಿ ಸುಮಾರು ೫೦೦೦ ವರ್ಷಗಳ ಹಿಂದೆ ಇದ್ದವೆಂಬುದಕ್ಕೆ ಹಲವಾರು ಪುರಾವೆಗಳಿವೆ. ಈಜಿಪ್ಟ್‌ನಲ್ಲಿರುವ ಯುದ್ಧ, ಗೂಳಿ ಕಾಳಗ ಮತ್ತು ಅಂಗ ಸಾಧನೆ ಹಾಗೂ ಬ್ಯಾಬಿಲೋನಿಯಾದಲ್ಲಿ ಮುಷ್ಠಿಯುದ್ಧ ಬಿಲ್ಲುಗಾರಿಕೆ ಇವೆ. ಇವುಗಳ ಹಾಗೆ ಭಾರತವೂ ಕೂಡ ಕ್ರೀಡಾಸಕ್ತಿಯುಳ್ಳದ್ದು ಎಂಬುದರಲ್ಲಿ ಸಂಶಯವಿಲ್ಲ. ಸಿಂಧೂ ನಾಗರಿಕತೆಯಲ್ಲಿ ಕ್ರೀಡೆಗಳಿಗೆ ಮಹತ್ತರವಾದ ಸ್ಥಾನವಿತ್ತೆಂದು ಇತಿಹಾಸ ಮೂಲಗಳಿಂದ ತಿಳಿದುಬರುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ನಡುಗಡ್ಡೆಗಳ ಪರಿಸರದಲ್ಲಿರುವ ಕೆಲವು ಆಟಗಳನ್ನು ವರ್ಗೀಕರಿಸುವುದು ಕಷ್ಟಸಾಧ್ಯದ ಕೆಲಸ. ಇಲ್ಲಿ ಕಂಡು ಬರುವ ಆಟಗಳನ್ನು ಹೊರಾಂಗಣ ಆಟ, ಒಳಾಂಗಣ ಆಟಗಳೆಂದು ವರ್ಗೀಕರಿಸಿದ್ದೇನೆ. ಇಲ್ಲಿ ಕೆಲವೊಂದು ಪ್ರಮುಖ ಆಟಗಳನ್ನು ಮಾತ್ರ ವಿವರಿಸಿ ಉಳಿದ ಆಟಗಳನ್ನು ಹೆಸರಿಸಿದ್ದೇನೆ.

**ಒಳಾಂಗಣ ಆಟಗಳು:** ಮನೆಯ ಒಳಗಡೆ ಆಡುವಂತಹ ಆಟಗಳಿಗೆ ಒಳಾಂಗಣ ಆಟಗಳು ಎಂದು ಕರೆಯುತ್ತಾರೆ.

**ಚೌಕಾಬಾರ್ (ಚಕ್ಕ):** ಮಹಿಳೆಯರ ಆಟಗಳಲ್ಲಿ ಇದೊಂದು ಜನಪ್ರಿಯ ಆಟ. ಇಬ್ಬರು ಅಥವಾ ನಾಲ್ಕು ಜನರು ಆಟದಲ್ಲಿ ಭಾಗವಹಿಸುತ್ತಾರೆ. ಐದೈದು(೨೫ ಮನೆ) ಅಥವಾ ಏಳೇಳು ಮನೆ (೪೯ಮನೆ) ಬರೆದು ಮಧ್ಯದ ಮನೆಯಲ್ಲಿ ೫ ಅಥವಾ ೭ ಕಾಯಿ ಬಳೇ ಚೂರು ಇಟ್ಟು ಆಟ ಆರಂಭಿಸುತ್ತಾರೆ. ಮಧ್ಯದ ಅಥವಾ ಮೂಲೆಯಲ್ಲಿರುವವು ಕಟ್ಟೆಮನೆಗಳು. ಇಲ್ಲಿ ಕಡಿಯಲು ಬರುವುದಿಲ್ಲ. ತಿಕ್ಕಿದ ಹುಣಸೆಹಣ್ಣಿನ ಬೀಜದಿಂದ ಅಥವಾ ಕವಡೆಯಿಂದ ಆಟ ಆರಂಭಿಸುತ್ತಾರೆ. ಕವಡೆಯನ್ನು ಕೈಯಲ್ಲಿ ಕುಲಕಿ ನೆಲದ ಮೇಲೆ ಹಾಕುವರು. ಅಂಗಾತ ಬಿದ್ದ ಕವಡೆಗಳ ಸಂಖ್ಯೆಗಳ ಆಧಾರದಲ್ಲಿ ಕಾಯಿ ಬಿಡುತ್ತಾರೆ. ಕಟ್ಟೆಮನಿ ಇಲ್ಲದ ಸ್ಥಳದಲ್ಲಿ ಎದುರಾಳಿ ಕಾಯಿ ಸಿಕ್ಕರೆ ಕಡಿದು ಮತ್ತೆ ಆಡುತ್ತಾರೆ. ಎಲ್ಲಾ ಕಾಯಿಗಳನ್ನು ನಡುಮಧ್ಯದ ಮನೆಗೆ ಯಾರು ತಂದು ಹಣ್ಣು ಮಾಡಿಕೊಳ್ಳುತ್ತಾರೋ ಅವರು ಗೆದ್ದಂತೆ. ಹೆಣ್ಣು ಮಕ್ಕಳು ವಿರಾಮದ ವೇಳೆಯಲ್ಲಿ ತಮ್ಮ ಮನೆಗಳಲ್ಲಿ ಈ ಆಟವನ್ನು ಆಡುತ್ತಾರೆ.

**ಅತ್ತಿಕಟಗಿ ಬಿತ್ತಿಕಟಗಿ ಆಟ:** ಈ ಆಟಕ್ಕೆ ಎಷ್ಟು ಮಕ್ಕಳಾದರೂ ನಡೆಯುತ್ತದೆ. ಎಲ್ಲಾ ಮಕ್ಕಳು ಕುಳಿತುಕೊಂಡು ತಮ್ಮ ತಮ್ಮ ಎರಡು ಕೈಗಳನ್ನು ನೆಲಕ್ಕೆ ಬೋರಲಿಡಬೇಕು. ಅವರಲ್ಲಿ ಒಬ್ಬರು ಉಳಿದೆಲ್ಲರ ಕೈಗಳ ಮೇಲೆ ತೋರ್ಬೆರಳು ಇಟ್ಟು

ಅತ್ತಿಕಟಗಿ ಬಿತ್ತಿ ಕಟಗಿ

ಭಾವನೋರು ಬಸನೋರು

ಕೈ ಕೈ ಧೂಳ್ ಗೈ

ಪಂಚಂ ಪಗಡಂ

ನೆಲಕಟ್ಟ ಹನಮ

ದಡಲ್ಲಿ ದಡಕಿ

ಸೇರಪಾವ ಅಡಕೆ

ತಿಮ್ಮಣ ಎತ್ತು

ತಿರುಗಿ ಬಿತ್ತು

ಸೂಜಿನಾ ದಬ್ಬಣಾನಾ ಎಂದು ಹಾಡು ಹೇಳುವರು. ಕೈಯನ್ನು ಚೂಟಬೇಕು. ಆಗ ಸೂಜಿ ಎಂದರೆ ಅಂಗೈ ನೆಲಕ್ಕೆ ತಾಗಿಸಿಯೇ ಮೇಲ್ಮುಖ ಮಾಡಬೇಕು. ದಬ್ಬಣ ಎಂದರೆ ಹಾಗೆ ಬೋರಲಿರಬೇಕು. ಕೊನೆಗೆ ಎಲ್ಲರ ಕೈಗಳನ್ನು ಅವರವರ ಬೆನ್ನ ಹಿಂದೆ ಇಟ್ಟು ಕೊಳ್ಳಲು ಹೇಳಬೇಕು. ಆ ಮೇಲೆ ಪ್ರತಿಯೊಬ್ಬರಿಗೂ ಪ್ರಶ್ನೋತ್ತರಗಳ ಮೂಲಕ ಆಟ ಮುಂದುವರಿಯುತ್ತದೆ.

ಪ್ರಶ್ನೆ : ಕೈ ಕೈ ಎಲ್ಲಿಗೋದವು?

ಉ : ಬಾಗಿಲಿಂದೋದವು

ಪ್ರ : ಬಾಗಿಲೇನು ಕೊಡ್ತು?

ಉ : ಚೆಕ್ಕಿ ಕೊಡ್ತು

ಪ್ರ : ಚೆಕ್ಕಿ ಏನ್ ಮಾಡ್ದಿ?

ಉ : ಒಲ್ಯಾಗ ಹಾಕಿದೆ

ಪ್ರ. : ಒಲಿ ಏನ್ ಕೊಟ್ಟಿತು?

ಉ. : ಬೂದಿ ಕೊಟ್ಟಿತು

ಪ್ರ. : ಬೂದಿ ಏನ್ ಮಾಡ್ದಿ?

ಉ. : ತಿಪ್ಪೀಗೆ ಹಾಕ್ದೆ

ಪ್ರ. : ತಿಪ್ಪಿ ಏನು ಕೊಟ್ಟಿತು?

ಉ. : ಗೊಬ್ಬರ ಕೊಟ್ಟಿತು

ಪ್ರ : ಗೊಬ್ಬರ ಏನ್ ಮಾಡ್ದಿ?

ಉ. : ಹೊಲಕ್ಕಾಗಿದೆ

ಪ್ರ : ಹೊಲ ಏನ್ ಕೊಟ್ಟಿತು

ಉ. : ಹೂಕೊಟ್ಟಿತು

ಪ್ರ : ಹೂ ಏನ್ ಮಾಡ್ದಿ?

ಉ. : ದೇವರಿಗೆ ಏರಿಸಿದೆ

ಪ್ರ : ದೇವರು ಏನ್ ಕೊಟ್ಟ?

ಉ. : ವರ ಕೊಟ್ಟ ಎಂದು ಪ್ರತಿಯೊಬ್ಬರು ಸಂವಾದ ಮೂಲಕ ಆಟ ಮುಗಿಸುವರು.

(ಕ್ಷೇತ್ರಕಾರ್ಯದಲ್ಲಿ ಗಡ್ಡೆಯ ಮಕ್ಕಳಿಂದ)

**ಆಣೆ ಕಲ್ಲಾಟ:** ಆಣೆ ಕಲ್ಲಾಟ ಎಂದರೆ ಎದಿರು ಬದಿರು ಇಬ್ಬರು ಕುಳಿತುಕೊಂಡು ಆಡುವ ಆಟ ಇದಾಗಿದೆ. ಐದಾರು ಕಲ್ಲುಗಳು ಬೇಕು. ಎಲ್ಲ ಕಲ್ಲುಗಳನ್ನು ನೆಲಕ್ಕೆ ಹಾಕಿ ಅದರೊಳಗೆ ಒಂದು ಕಲ್ಲನ್ನು ತೆಗೆದುಕೊಂಡು ಆ ಕಲ್ಲನ್ನು ಎರಡು ಮೂರು ಅಡಿ ಎತ್ತರಕ್ಕೆ ತೂರಿ ಆ ಕಲ್ಲು ಕೆಳಗೆ ಬರುವುದರೊಳಗೆ ಕೆಳಗೆ ಚೆಲ್ಲಿದ ಕಲ್ಲುಗಳನ್ನು ಒಂದೊಂದಾಗಿ ತೆಗೆದುಕೊಂಡು ಬದಿಗಿಡಬೇಕು. ಒಂದೊಂದು ತೆಗೆದುಕೊಳ್ಳುವಾಗ ಪಕ್ಕದ ಕಲ್ಲುಗಳು ಕೈಗೆ ತಗುಲಬಾರದು. ತಗುಲಿದರೆ ಆಟದಲ್ಲಿ ಸೋತಂತೆ. ಆ ಮೇಲೆ ತೂರಿದ ಕಲ್ಲು ಕೆಳಗೆ ಬರುವುದರೊಳಗೆ ಎರಡೆರಡು, ಮೂರು ಮೂರು ಕೊನೆಗೆ ಎಲ್ಲಾ ಕಲ್ಲುಗಳನ್ನು ಒಮ್ಮೆಗೆ ತೆಗೆದುಕೊಳ್ಳಬೇಕು.

**ಹೊರಾಂಗಣ ಆಟಗಳು:** ಮನೆಯ ಹೊರಗೆ ಅಥವಾ ಪ್ರಕೃತಿಯ ಮಧ್ಯದಲ್ಲಿ ಆಡುವ ಆಟಗಳಿಗೆ ಹೊರಾಂಗಣ ಆಟಗಳು ಎನ್ನುತ್ತಾರೆ. ಇಲ್ಲಿ ಇಂತಹ ಆಟಗಳಲ್ಲಿ ಸಾಕಷ್ಟು ಸಿಗುತ್ತವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ವಿವರಿಸಲಾಗಿದೆ.

**ಚಿಣಿ ಪಿಣಿ (ಚಿನ್ನಿದಾಂಡು):** ಐದಾರು ಮಕ್ಕಳು ಮಾಡಿಕೊಂಡು ಒಬ್ಬರಾದ ಮೇಲೊಬ್ಬರಂತೆ ಚಿಣಿ ಪಿಣಿ ಆಡುತ್ತಾರೆ. ಈ ಆಟಕ್ಕೆ ಪಿಣಿ (ಅರ್ಧ ಅಡಿ ಉದ್ದದ ಎರಡು ಬದಿಗೆ ಚೂಪಾಗಿ ಕೆತ್ತಿರುವ ಕಟ್ಟಿಗೆ) ಮತ್ತು ಚಿಣಿ ಎರಡೂ ಅಥವಾ ಎರಡೂವರೆ ಅಡಿ ಉದ್ದ ಕಟ್ಟಿಗೆ ಒಂದು ಭಾಗದಲ್ಲಿ ಚೂಪಾಗಿ ಕೆತ್ತಿರುವಂತದ್ದು) ಬೇಕು. ನೆಲದಲ್ಲಿ ಉದ್ದನೆಯ ತಗ್ಗು ಕೊರೆದುಕೊಂಡು ಅದರಲ್ಲಿ ಚಿಣಿ ಅಡ್ಡಲಾಗಿ ಇಟ್ಟು ಚಿಣಿಯಿಂದಾಗಿ ಒಬ್ಬ ಚಿಮ್ಮುತ್ತಾನೆ. ಉಳಿದ ನಾಲ್ಕೈದು ಹುಡುಗರು ಚಿಮ್ಮಿದ

ಪಿಣಿಯನ್ನು ಹಿಡಿಯಲು ಯತ್ನಿಸುತ್ತಾರೆ. ಒಂದು ವೇಳೆ ನೆಲಕ್ಕೆ ಬೀಳುವ ಮೊದಲೇ ಹಿಡಿದರೆ ಚಿಮ್ಮಿದವನು ಔಟ್ ಆದಂತೆ. ಹಿಡಿಯದಿದ್ದರೆ ಅದೇ ಪಿಣಿಯನ್ನು ಪಿಚ್ಚಿನ ಹತ್ತಿರ ನಿಂತಿರುವನ (ಚಿಮ್ಮಿದವನ) ಕಡೆಗೆ ಎಸೆಯಬೇಕು. ಎಸೆದ ಪಿಣಿ ಪಿಚ್ಚಿಗೆ ತುಂಬಾ ಹತ್ತಿರವಿದ್ದರೆ ಚಿಮ್ಮಿದವನು ಔಟ್ ಆಗುತ್ತಾನೆ. ದೂರ ಇದ್ದರೆ ಚಿಮ್ಮಿದವನು ಪಿಣಿಯ ಒಂದು ತುದಿಯನ್ನು ಚಿಣಿಯಿಂದ ನೆಲಕ್ಕೆ ಬಾರಿಸಿ ಮೇಲೆದ್ದ ಪಿಣಿಯನ್ನು ಚಿಣಿಯಿಂದ ವೇಗವಾಗಿ ಬಾರಿಸುತ್ತಾನೆ. ಹೀಗೆ ಮೂರು ಬಾರಿ ಬಾರಿಸುತ್ತಾನೆ. ಪಿಣಿಯ ಪಿಚ್ಚಿನಿಂದ ಇರಬಹುದಾದ ದೂರದ ಆಧಾರದ ಮೇಲೆ ಲೆಕ್ಕ ಇಡುತ್ತಾರೆ. ಈ ಲೆಕ್ಕದಲ್ಲಿ ಯಾರು ಹೆಚ್ಚು ಮೊತ್ತಗಳಿಸುತ್ತಾರೋ ಅವರು ಗೆದ್ದಂತೆ. ಕೆಲವು ಕಡೆ ಈ ಆಟವನ್ನು ಸ್ವಲ್ಪ ವ್ಯತ್ಯಾಸವಾಗಿ ಆಡುವುದು ಉಂಟು. ಸಾಮಾನ್ಯವಾಗಿ ಈ ಆಟವನ್ನು ಹುಡುಗರು ಆಡುತ್ತಾರೆ. ಈ ಆಟದಿಂದ ಕೆಲವು ಸಲ ಅಪಾಯ ಉಂಟಾಗುತ್ತದೆ ಎಂದು ತಿಳಿಯುತ್ತದೆ.

**ಕುಂಟಾ ಬಿಲ್ಲೆ ಆಟ:** ಇದು ಹೆಣ್ಣು ಮಕ್ಕಳ ಆಟಗಳಲ್ಲೊಂದು. ಚೌಕಾಕಾರದ, ವೃತ್ತಾಕಾರದ ೮–೧೦ ಮನೆಗಳನ್ನು ನೆಲದಲ್ಲಿ ಬರೆದು ಒಬ್ಬರ ನಂತರ ಒಬ್ಬರಂತೆ ಇಬ್ಬರು ಆಡುತ್ತಾರೆ. ಕೈಯಲ್ಲಿ ಒಂದು ಹಣಚಿ ಪಿಲ್ಲೆ ಅಥವಾ ಅಗಲವಾದ ಕಲ್ಲು. ಮನೆಯೊಳಗೆ ಆಡುತ್ತಾ ಆ ಮನೆಯನ್ನು ದಾಟಿ ಒಂಟಿ ಗಾಲಿನಿಂದ ಮುಂದಿನ ಎಲ್ಲಾ ಮನೆಗಳಿಗೆ ಗೆರೆ ಕೊರೆದು ಪಟ್ಟ ಎಂದು ಹೇಳುತ್ತಾರೆ. ಬೋಕಿ ಮನೆಯ ಹೊರಗೆ ಬಿದ್ದರೆ ನಂತರದವರು ಆಡಬೇಕಾಗುತ್ತದೆ. ಕೆಲವರು ಎಲ್ಲಾ ಮನೆಗಳಿಗೆ ಸರಿಯಾಗಿ ಕಾಯಿ ಹಾಕಿ ಒಂಟಿ ಗಾಲಿನಲ್ಲಿ ಹೋಗಿ ಬಂದರೆ ಮನೆಯ ತುದಿಯಲ್ಲಿ ಬೆನ್ನು ಮಾಡಿನಿಂತು ಹಿಂದಿನಿಂದ ಕಲ್ಲು ಎಸೆಯುತ್ತಾರೆ. ಆ ಕಲ್ಲು ಯಾವ ಮನೆಯಲ್ಲಿ ಬೀಳುತ್ತದೆಯೋ ಆ ಮನೆ ಪಟ್ಟ ಆದಂತೆ. ಎದುರಾಳಿ ಈ ಮನೆಯನ್ನು ತುಳಿಯುವ ಹಾಗಿಲ್ಲ. ಒಟ್ಟಿನಲ್ಲಿ ಹೆಚ್ಚು ಮನೆಗಳನ್ನು ಪಟ್ಟ ಮಾಡಿಕೊಂಡವರೆ ಗೆದ್ದಂತೆ.

**ಕಣ್ಣು ಮುಚ್ಚಾಲೆ ಆಟ:** ಒಬ್ಬ ಕುಳಿತುಕೊಂಡು ಇನ್ನೊಬ್ಬನ ಕಣ್ಣನ್ನು ಎಡಗೈಯಿಂದ ಮುಚ್ಚಿ ಆ ಹುಡುಗನ ಬಲಗೈಯನ್ನು ಹಿಡಿದು ಮುಂದೆ ನಿಂತ ಆಟಗಾರರನ್ನು ತೋರಿಸುತ್ತಾ ಅವರ್ ಬಿಟ್ಟು ಇವರ್ ಬಿಟ್ಟು ಇವರ್‍ಯಾರು ಎಂದು ಹೇಳುವವರನ್ನು ಸರಿಯಾಗಿ ಗುರುತಿಸಲು ಆಗುವುದಿಲ್ಲ. ಕೊನೆಗೆ ಎಲ್ಲಾ ಆಟಗಾರರು ಅಡಗಿಸಿಕೊಳ್ಳುತ್ತಾರೆ. ಆಗ ಕಣ್ಣು ಮುಚ್ಚಿದವರು;

ಕಣ್ಣಾ ಮುಚ್ಚೆ ಕಾಡೇಗೂಡೇ

ಉದ್ದಿನ ಮೂಟೆ ಉರುಳಿ ಹೋಯಿತು

ನಮ್ಮಯ ಹಕ್ಕಿ ಬಿಟ್ಟೆ ಬಿಟ್ಟೆ

ನಿಮ್ಮಯ ಹಕ್ಕಿ ಮುಚ್ಚಿಕೊಳ್ಳಿ ಕಟ್ಟೆಮನೆ ಹಾಳಾಯ್ತು.

ಈ ರೀತಿಯಾಗಿ ಹಾಡುತ್ತಾ ಮುಚ್ಚಿದ ಕಣ್ಣನ್ನು ಬಿಡುವರು. ಆಗ ಅವನು ಅಡಗಿಕೊಂಡವರನ್ನು ಹಿಡಿಯಲು ಪ್ರಯತ್ನಿಸುವನು. ಮೊದಲು ಮುಟ್ಟಿಸಿಕೊಂಡವರು ಮುಂದಿನ ಆಟದಲ್ಲಿ ಕಣ್ಣು ಕಟ್ಟಿಸಿಕೊಳ್ಳಬೇಕು.

ಇಲ್ಲಿಯವರೆಗೆ ವಿವರಿಸಲಾದ ಆಟಗಳ ಜೊತೆಗೆ ಮರಕೋತಿ ಆಟ, ಬುಗುರಿ, ಗೋಲಿ ಗಜಗದ ಆಟ, ಪಿನ್ನದ ಆಟ, ರೊಕ್ಕದ ಆಟ, ಇಸುಪೇಟ ಆಟ, ನಿಂಬೆಹಣ್ಣು ಎಸೆಯುವುದು, ಬಣ್ಣ ಎರಚುವ ಆಟ (ಓಕಳಿ ಆಟ) ಮುಂತಾದವುಗಳನ್ನು ನಡುಗಡ್ಡೆಗಳ ಪರಿಸರದಲ್ಲಿ ಕಾಣಬಹುದು.

ಜನಪದ ಆಟಗಳಲ್ಲಿ ಹೆಚ್ಚಾಗಿ ಹುಟ್ಟು ಸಾವಿನ ಪರಿಕಲ್ಪನೆಯನ್ನು ಕಾಣುತ್ತೇವೆ. ಅಂದರೆ ಹುಟ್ಟು ಸಂತೋಷದ ಸಂಕೇತವಾದರೆ ಸಾವು ಭಯಾನಕವಾಗಿರುತ್ತದೆ. ಅಂದರೆ ಯಾವುದೇ ಒಂದು ಆಟ ಆಡುವಾಗ ಎದುರಾಳಿಯನ್ನು ಸೋಲಿಸುವುದು ಮತ್ತು ಸಾಯಿಸುವುದು ಅಂದರೆ ಆ ಸಾವಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದನ್ನು ಕಾಣಬಹುದು. ಕೊನೆಗೆ ಎದುರಾಳಿಯಿಂದ ಸೋತು ತನ್ನ ಮನೆಯನ್ನು ಸೇರಿ ಮತ್ತೆ ಗೆಲ್ಲಲು ಪ್ರಯತ್ನಿಸುವುದು. ಈ ಆಟಗಳಲ್ಲಿ ಜನಪದರು ತಮ್ಮ ಬದುಕಿನ ಹೋರಾಟದ ಹುಟ್ಟು ಸಾವು ಮುಕ್ತಿಗಳನ್ನು ಚಿತ್ರಿಸಿದ್ದಾರೆ.

### ೩.೨. ಆರ್ಥಿಕ ಸ್ಥಿತಿಗತಿ

ಆರ್ಥಿಕ ವ್ಯವಸ್ಥೆಯ ಅಧ್ಯಯನ ಮಾಡದಿದ್ದರೆ ಅಧ್ಯಯನ ಪೂರ್ಣವಾಗುವುದಿಲ್ಲ. ಏಕೆಂದರೆ ಆ ನಡುಗಡ್ಡೆಗಳ ಸರ್ವತೋಮುಖ ಬೆಳವಣಿಗೆ ಮತ್ತು ಅಭಿವೃದ್ಧಿಯು ಅಲ್ಲಿನ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ.

ಭಾರತ ದೇಶದಲ್ಲಿರುವ ಪ್ರತಿಯೊಂದು ಗ್ರಾಮವು ಬಡತನ, ದಾರಿದ್ರ್ಯ, ನಿರುದ್ಯೋಗ, ಅನಕ್ಷರತೆಯಿಂದ ಬಳಲುತ್ತಿದ್ದರೂ ಜನಪದ ಕ್ಷೇತ್ರ ಈ ಸಂವೇದನೆಗಳಿಂದಲೇ ಅರಳುತ್ತಿರುವುದನ್ನು ಕಾಣಬಹುದಾಗಿದೆ. ಬದುಕಿಗೆ ಅಥವಾ ಜೀವನ ನಡೆಸಲಿಕ್ಕೆ ಅಗತ್ಯವಾದ ಕಸುಬು ಉಪಕಸುಬಗಳೇ ಗ್ರಾಮೀಣ ಜನರ ಆದಾಯದ ಮೂಲಗಳಾಗಿರುತ್ತವೆ. ಅರ್ಥವ್ಯವಸ್ಥೆಯ ಅಧ್ಯಯನದಿಂದ ಒಂದು ಗ್ರಾಮದ ನಾಗರಿಕತೆಯು ಯಾವ ಮಟ್ಟದಲ್ಲಿದೆ ಎಂಬುದರ ಅರಿವು ಆಗಿರುತ್ತದೆ.

**ಕೃಷಿ:** ಸಮುದಾಯದ ಪ್ರಧಾನ ಮಾನದಂಡ ಅದರ ಉದ್ಯೋಗ ಎಂದು ಸಮಾಜಶಾಸ್ತ್ರಜ್ಞರಾದ **ಸೊರೊಕೆನ್** ಮತ್ತು **ಜಮ್ಮರ್‌ಮನ್** ಎಂಬುವವರು ಹೇಳಿದ್ದಾರೆ. ಸಾಮಾಜಿಕ ವಿಕಾಸದ ಒಂದು ಮಹತ್ವದ ಹಂತವೇ ಗ್ರಾಮ. ವಿವಿಧ ಕಸುಬು ಮಾಡುವ ಕುಟುಂಬಗಳು, ವಿವಿಧ ಸಮುದಾಯಗಳವರು, ವೃತ್ತಿಗಳವರು ನೆಲೆಸಿರುವ ತಾಣವೇ ಗ್ರಾಮ, ಹಳ್ಳಿ, ಗ್ರಾಮೀಣ ಪ್ರದೇಶದಲ್ಲಿ ನೆಲೆಸಿರುವ ಸಮುದಾಯಗಳು

ಕೃಷಿಯನ್ನೇ ಅವಲಂಬಿಸಿರುತ್ತವೆ. ಗ್ರಾಮಗಳಲ್ಲಿ ಜೀವನ ಮಾಡುವ ಆ ಜನರಿಗೆ ಕೃಷಿಯೇ ಜೀವನಾಧಾರವಾಗಿರುತ್ತದೆ. ಕೃಷಿ ಕೇವಲ ಉದ್ಯೋಗವಲ್ಲ ಬದುಕುವ ಕಲೆಯನ್ನು ಕಂಡುಕೊಳ್ಳುವ ಒಂದು ವರ್ಗ.

ನಡುಗಡ್ಡೆಗಳ ಜನರು ಮಳೆಗಾಲದಲ್ಲಿ ಹೆಸರು, ಶೇಂಗಾ, ಸೂರ್ಯಕಾಂತಿ, ಹುರುಳಿ, ಕಡಲೆ, ಜೋಳ ಮುಂತಾದ ಕಾಳು ಕಡಿಗಳನ್ನು ಬೆಳೆಯುತ್ತಾರೆ. ಕೆಲವೊಂದು ಗಡ್ಡೆಗಳಲ್ಲಿ ಕಾಯಿಪಲ್ಯೆಗಳನ್ನು ಬೆಳೆಯುತ್ತಾರೆ. ನಿತ್ಯ ಉಪಯೋಗಿಸಬಹುದಾದ ಅತಿ ಅಲ್ಪ ಪ್ರಮಾಣದಲ್ಲಿ ಸವತೆಕಾಯಿ, ಟೊಮೆಟೋ, ಬದನೆ, ಬೆಂಡೆ, ಚವಳಿಕಾಯಿ ಬೆಳೆಯುತ್ತಾರೆ. ಚಳಿಗಾಲ, ಮಳೆಗಾಲ, ಬೇಸಿಗೆ ಕಾಲಗಳೆನ್ನದೆ ಮುದುಕರು, ಮಕ್ಕಳು, ವಯಸ್ಸಿನವರೆಲ್ಲರೂ ಹಗಲಿರುಳು ದುಡಿದು ಇಷ್ಟೆಲ್ಲಾ ಬೆಳೆಗಳನ್ನು ಬೆಳೆಯುತ್ತಾರೆ. ಆದರೆ ರೈತರು ಬೆಳೆದ ಬೆಳೆಗಳಿಗೆ ಬೆಂಬಲ ಬೆಲೆ ಸಿಗದೇ ಇರುವುದು, ಮಾರುಕಟ್ಟೆಯಲ್ಲಿನ ಬೆಲೆಯ ಅನಿಶ್ಚಿತತೆ, ದಲ್ಲಾಳಿಗಳ ಹಾವಳಿಯಿಂದಾಗಿ ರೈತನ ಸ್ಥಿತಿ ತುಂಬಾ ಚಿಂತಾಜನಕವಾಗಿದೆ ಮತ್ತು ರೈತರ ಶ್ರಮಕ್ಕೆ ಪ್ರತಿಫಲ ಸಿಗುತ್ತಿಲ್ಲ. ಬೆಟ್ಟ ಅಗೆದು ಇಲಿ ಹಿಡಿದರು ಎಂಬ ಗಾದೆಯಂತೆ ಊಟದ ಹೊತ್ತಿಗೆ ಊಟ, ಉಪಾಹಾರದ ಹೊತ್ತಿಗೆ ಉಪಾಹಾರ, ನಿದ್ದೆಯ ಹೊತ್ತಿಗೆ ನಿದ್ದೆ, ಇಲ್ಲದೇ ದುಡಿದರೂ ರೈತರಿಗೆ ನಾನಾ ರೀತಿಯ ಆದಾಯಕ್ಕಿಂತ ನಷ್ಟವೇ ಹೆಚ್ಚಾದಾಗ ವ್ಯವಸಾಯವನ್ನೇ ಮಾಡುವುದು ಬೇಡ ಎನ್ನುವಷ್ಟು ಬೇಸತ್ತಿದ್ದಾರೆ.

ಜಮೀನುಗಳಿಲ್ಲದ ಮಂದಿ ಉಳ್ಳವರ ಜಮೀನುಗಳನ್ನು ಲಾವಣಿ ಮಾಡಿಕೊಂಡು ದುಡಿಯುತ್ತಿದ್ದವರೂ ವ್ಯವಸಾಯದಿಂದ ಏನೇನೂ ಲಾಭ ದೊರೆಯದ್ದರಿಂದ ವ್ಯವಸಾಯವನ್ನು ಮರೆತು, ಕೂಲಿ ಹಾಗೂ ತಮಗೆ ಅನುಕೂಲವಾದ ಉದ್ಯೋಗಗಳನ್ನು ಅರಸುತ್ತ ಪೂನಾ, ಬೆಂಗಳೂರಿಗೆ ನಡುಗಡ್ಡೆಗಳನ್ನು ಬಿಟ್ಟು ಹೋಗಿ ಹಣ ಮಾಡಿಕೊಂಡು ಬರುತ್ತಿದ್ದಾರೆ. ದೇವರಗಡ್ಡೆ, ಕುರುವಪೂರ ಗಡ್ಡೆಗಳಲ್ಲಿ ಕೆಲವರು ಸ್ವಲ್ಪಮಟ್ಟಿಗೆ ವಿದ್ಯೆ ಕಲಿತು ತಕ್ಕ ಉದ್ಯೋಗ ದೊರೆಯದೆ ನಿರುದ್ಯೋಗಿಗಳಾಗಿ ಊರಲ್ಲಿ ಕೆಲಸವಿಲ್ಲದೇ ಕುಳಿತುಕೊಂಡು ಕಾಲಕಳೆಯುವಂತಾಗಿದೆ. ಈ ಎಲ್ಲ ಕಾರಣಗಳಿಂದ 'ದುಡಿಮೆಯೇ ದುಡ್ಡಿನ ತಾಯಿ' ಎಂಬ ಗಾದೆ, 'ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು' ಎನ್ನುವಂತ ಗಾದೆ ಮಾತುಗಳನ್ನು ಅರ್ಥಮಾಡಿಕೊಂಡರೆ ಜೀವನ ಬಂಡಿ ಸುಗುಮವಾಗಿ ಸಾಗುತ್ತದೆ.

ನಾಡಿನ ಜನಜೀವನದ ಮುಖ್ಯ ವೃತ್ತಿಗಳಲ್ಲಿ ಕೃಷಿಯೂ ಒಂದಾಗಿದೆ. ಕೃಷಿಯು ಸಂಸ್ಕೃತಿಯ ಆರ್ಥಿಕ ಚಟುವಟಿಕೆಗಳಲ್ಲಿ ಮಾನವಶಾಸ್ತ್ರಜ್ಞರು ಹೇಳುವಂತೆ ಪಶುಪಾಲನೆಯ ಹಂತ ಕಳೆದ ಮೇಲೆ ಅಥವಾ ಅದರೊಟ್ಟಿಗೆ ಬೆಳೆದುಬಂದದ್ದಾಗಿದೆ. ಆಹಾರ ಉತ್ಪಾದನೆಯೇ ಮುಖ್ಯ ಗುರಿಯಾಗಿದ್ದು, ಈ ಚಟುವಟಿಕೆಯ ಸ್ವರೂಪ ಸಹಸ್ರಾರು ವರ್ಷಗಳಿಂದ ತೀವ್ರ ರೂಪದ ಬದಲಾವಣೆಗೆ ಒಳಗಾಗದೇ

ಉಳಿದಿದೆ. ಆದರೆ ಆಧುನಿಕ ತಂತ್ರಜ್ಞಾನದ ಪ್ರವೇಶದಿಂದಾಗಿ ಕೃಷಿ ತನ್ನ ಸಾಂಪ್ರದಾಯಿಕ ಲಕ್ಷಣಗಳನ್ನು ಬಿಟ್ಟುಕೊಡುವುದು ಕೆಲವುಗಡ್ಡೆಗಳಲ್ಲಿ ಅನಿವಾರ್ಯವಾಗಿದೆ. ದೇವರಗಡ್ಡೆ, ಕುರವಪೂರ, ಜಲದುರ್ಗ ನಡುಗಡ್ಡೆಗಳಲ್ಲಿ ಕಾಣಬಹುದಾಗಿದೆ. ಮಾರುಕಟ್ಟೆ ಬೃಹತ್ ರೀತಿಯಲ್ಲಿ ಕೃಷಿಕ್ಷೇತ್ರದಲ್ಲಿ ಪ್ರವೇಶ ಮಾಡಿದೆ. ಕೃಷಿ ಕೂಡ ಒಂದು ಉದ್ಯಮವಾಗಿದೆ. ಏಕೆಂದರೆ ಕೃಷಿಯಲ್ಲಿರುವ ಆರ್ಥಿಕ ಸಾಮರ್ಥ್ಯ ಈಗ ಬಹುರಾಷ್ಟ್ರೀಯ ಕಂಪನಿಗಳನ್ನು ತನ್ನತ್ತ ಸೆಳೆಯುತ್ತದೆ. ಇವೆಲ್ಲದರ ಪರಿಣಾಮವಾಗಿ ಕೃಷಿ ಒಂದು ಬಹು ಆಸಕ್ತಿಗಳುಳ್ಳ ರೈತನು ಮಳೆಯ ನಕ್ಷತ್ರಗಳನ್ನು ಪ್ರಾಕೃತಿಕ ವ್ಯಾಪಾರಗಳನ್ನು ಬಳಸಿ ತನ್ನ ಚಟುವಟಿಕೆಗಳ ಬಗ್ಗೆ ನಿರ್ಣಯಿಸುತ್ತಿರುವಾಗಲೇ ಅತ್ಯಾಧುನಿಕ ಯಂತ್ರಗಳ ಬಳಕೆ ಬಂದವು. ಬೆಳೆಗೆ ನೀರನ್ನು ಒದಗಿಸಲು ಸಾವಿರಾರು ವರ್ಷಗಳಷ್ಟು ಹಳೆಯದಾದ ಮೂಲಗಳನ್ನು ವಿಧಾನಗಳನ್ನು ಬಳಸುತ್ತಿರುವಾಗಲೇ ಬೃಹತ್ ಅಣೆಕಟ್ಟುಗಳು ನೀರನ್ನು ಶೇಖರಿಸಿ ನೀರಾವರಿ ಮೂಲಕ ಕೃಷಿಕ ಬೆಳೆಗಳನ್ನು ಬೆಳೆದು ತನ್ನ ಜೀವನವನ್ನು ನಡೆಸುತ್ತಾ ಬಂದಿರುವುದನ್ನು ಕಾಣುತ್ತೇವೆ.

ಮಾನವನ ವಿಕಾಸದ ದಾರಿಯನ್ನು ಶೋಧಿಸುತ್ತ ಹೋದಂತೆ ನಮಗೆ ಸಹಜವಾಗಿ ಅವನ ವಿಕಾಸಕ್ರಮದ ಕುರುಹು ಅಥವಾ ಹಂತಗಳನ್ನೇ "ಮಂಗನಿಂದ ಮಾನವ"ನ ಹಂತವೆನ್ನಬಹುದು. ಮಾನವನ ಸಂಸ್ಕೃತಿಯ ವಿಕಾಸವನ್ನು ಈ ರೀತಿಯಾಗಿ ನೋಡಬಹುದು.

೧. ಆದಿವಾಸಿ ಸಂಸ್ಕೃತಿ(Primitive Culture) ೨. ಗ್ರಾಮೀಣ ಸಂಸ್ಕೃತಿ(Rural Culture) ೩. ನಗರ ಸಂಸ್ಕೃತಿ(Urban Culture) ಈ ಮೂರು ಅವಸ್ಥೆಗಳಲ್ಲಿ ಮನುಷ್ಯನ ವೃತ್ತಿ ಬದುಕು ಬೇರೆ ಬೇರೆ ನೆಲೆಗಳಲ್ಲಿ ರೂಪಿತಗೊಂಡಿರುತ್ತದೆ. ಆದಿವಾಸಿ ಮಾನವನು ತನ್ನ ಉಪಜೀವನಕ್ಕೆ ಅಥವಾ ತನ್ನ ಹೊಟ್ಟೆ ತುಂಬಿಕೊಳ್ಳಲಿಕ್ಕೆ ಅಥವಾ ಹಸಿವನ್ನು ಹಿಂಗಿಸಿಕೊಳ್ಳುವುದಕ್ಕೆ ಕಾಡಿನಲ್ಲಿರುವ ಹಸಿದಾದ ಗಡ್ಡೆ ಗೆಣಸು ಮಾಂಸ ತಿನ್ನುತ್ತಾ ಕಾಡಿನಲ್ಲಿ ಜೀವಿಸುತ್ತಿದ್ದನಾದ್ದರಿಂದ ಅವನ ಸಂಸ್ಕೃತಿಯು ಸಹ ಅಲ್ಲಿನ ಜೀವನ ವಿಧಾನವನ್ನಾಧರಿಸಿ ರೂಪಿತಗೊಂಡಿತ್ತು.

ಗ್ರಾಮೀಣ ಸಂಸ್ಕೃತಿಯು ರೂಪ ತಳೆಯುವ ಕಾಲಕ್ಕೆ ಮನುಷ್ಯ ಕಾಡನ್ನು ತೊರೆದು ಅಲೆಮಾರಿ ಜೀವನ ಕ್ರಮವನ್ನು ರೂಪಿಸಿಕೊಂಡನು. ಹೀಗೆ ಕೃಷಿಯನ್ನು ಅವಲಂಬಿಸಿದ ಮಾನವನ ಇತಿಹಾಸದಲ್ಲಿ ಗ್ರಾಮ ಸಮುದಾಯಗಳ ಏಳಿಗೆಯನ್ನು ಪಡೆದು ವಿವಿಧ ರೀತಿಯ ಸಾಮಾಜಿಕ ಲಕ್ಷಣಗಳು ಕಾಣಿಸಿಕೊಂಡವು. ಮಾನವನ ವೃತ್ತಿ ವಿವರಗಳು, ವೈಯಕ್ತಿಕ ಸುಖ ದುಃಖಗಳು, ಕೌಟುಂಬಿಕ ರೀತಿ ನೀತಿಗಳು ಸಹಕಾರ ಸಂಬಂಧಗಳು ಧಾರ್ಮಿಕ ಅಂಗಗಳು, ಸಾಮಾಜಿಕ ಜೀವನ, ಆರ್ಥಿಕ ಜೀವನ ಮುಂತಾದವುಗಳು ಗ್ರಾಮೀಣ ಸಂಸ್ಕೃತಿಯನ್ನು ಹೆಚ್ಚು ಸಂಮೃದ್ಧಿಗೊಳಿಸಿದವು. ಇಂತಹ ಗ್ರಾಮ ಸಂಸ್ಕೃತಿ ಪ್ರಧಾನವಾಗಿ ಕೃಷಿಗೆ ಸಂಬಂಧಿಸಿರುವುದು ಸಹಜವಾಗಿದೆ. ಏಕೆಂದರೆ "ರೈತನೇ ದೇಶದ ಬೆನ್ನೆಲುಬು". ಆದರೆ ಕೃಷಿ ಸನ್ನಿವೇಶ ಸಂದರ್ಭಗಳನ್ನು ಅನುಸರಿಸಿ ಮತ್ತು ಸಾಮಾಜಿಕ

ಸ್ವರೂಪವನ್ನಾಧರಿಸಿ ರೂಪಿತವಾಗಿರುತ್ತದೆ. ಆದುದರಿಂದ ಕೃಷಿ ಸಂಸ್ಕೃತಿಯ ಸ್ವರೂಪವನ್ನು ಆಯಾ ಪ್ರಾದೇಶಿಕ ಪರಿಸರವನ್ನು ಅನುಸರಿಸಿ ಅವುಗಳ ವಿಶಿಷ್ಟತೆಯನ್ನು ಗುರುತಿಸುವುದು ಅವಶ್ಯಕವೆನಿಸುತ್ತದೆ.

ಈ ನಡುಗಡ್ಡೆಗಳು ಮಿಶ್ರ ಬೇಸಾಯವನ್ನು ಅನುಸರಿಸಿಕೊಂಡು ಬಂದಿವೆ. ಇಂತಹ ಪರಿಸ್ಥಿತಿ ಕರ್ನಾಟಕದ ಇತರ ಪ್ರದೇಶಗಳಲ್ಲಿ ಕಂಡುಬರುತ್ತದೆ. ಆದರೆ ಜಾನಪದೀಯವಾಗಿ ಅನೇಕ ಸಾಂಸ್ಕೃತಿಕ ವೈಶಿಷ್ಟ್ಯಗಳು ಪ್ರತಿಯೊಂದು ಪ್ರದೇಶಕ್ಕೆ ಭಿನ್ನವಾದ ಆಯಾಮವನ್ನು ತಂದುಕೊಟ್ಟಿರುತ್ತವೆ. ಹೀಗಾಗಿ ಇಲ್ಲಿನ ಕೃಷಿ ಪದ್ಧತಿಯ ಮೂಲಕ ಜನಪದ ವಿವರಗಳನ್ನು ಪರಿಶೀಲಿಸಬಹುದಾಗಿದೆ.

ನಡುಗಡ್ಡೆಗಳು ಕೃಷಿಕಾರ್ಯ ಮಾಡುವ ಕಸುಬುದಾರರನ್ನು ರೈತ, ಒಕ್ಕಲಿಗ, ವ್ಯವಸಾಯಗಾರ ಎಂಬುದಾಗಿ ಕರೆಯುತ್ತಾರೆ. ಕೃಷ್ಣಾ ನದಿ ನೀರಿನ ಲಭ್ಯತೆ ಇರುವುದರಿಂದ ಹೆಚ್ಚಿನ ರೈತರ ಭೂಮಿ ನೀರಾವರಿ ಇದೆ. ಹೀಗಿದ್ದರೂ ಹೆಚ್ಚಿನ ವ್ಯವಸಾಯ ಮಳೆಯನ್ನು ಕೂಡ ಆಧರಿಸಿದೆ. ಇನ್ನು ಕೆಲವು ಗಡ್ಡೆಗಳಲ್ಲಿ ಸಂಪೂರ್ಣವಾಗಿ ನೀರಾವರಿ ಇಲ್ಲ. ಇನ್ನುಳಿದ ಗಡ್ಡೆಗಳಿಗೆ ನೀರಾವರಿ ಸೌಲಭ್ಯವಿಲ್ಲ. ಯಾಕೆಂದರೆ ವಿದ್ಯುತ್ ಸಂಪರ್ಕವಿಲ್ಲ. ಅದ್ದರಿಂದ ಅಲ್ಲಿ ನೀರಾವರಿ ಇಲ್ಲ. ಉದಾಹರಣೆಗೆ ನೀಲಕಂಠ ರಾಯಗಡ್ಡೆಯಲ್ಲಿ ವಿದ್ಯುತ್ ಸಂಪರ್ಕವಿಲ್ಲ ನೀರಾವರಿಯಿಲ್ಲ. ಹೀಗಾಗಿ ಮುಂಗಾರು ಹಿಂಗಾರು ಮಳೆ ಮಾರುತಗಳನ್ನಾಧರಿಸಿ ಬೆಳೆ ಬೆಳೆಯುವ ಪದ್ಧತಿಯೂ ರೂಢಿಯಲ್ಲಿದೆ. ನೀರಾವರಿ ಇದ್ದ ಗಡ್ಡೆಗಳಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಆದರೂ ಬೇಸಾಯದ ಬಹುಭಾಗ ಸಾಂಪ್ರದಾಯಿಕ ಮಾದರಿಯಲ್ಲೇ ನಡೆಯುತ್ತದೆ.

**ಮುಂಗಾರು ಬೆಳೆಗಳು:** ನಡುಗಡ್ಡೆಗಳಲ್ಲಿ ಅನೇಕ ಮುಂಗಾರು ಬೆಳೆಗಳನ್ನು ಬೆಳೆಯುತ್ತಾರೆ. ಆ ಪ್ರದೇಶದ ಭೂಮಿ ಗುಣಧರ್ಮಗಳ ಹಿನ್ನೆಲೆಯಲ್ಲಿ ಮಳೆಯ ಪ್ರಮಾಣವನ್ನು ಅನುಸರಿಸಿ ಬೆಳೆಯನ್ನು ಬೆಳೆಯುತ್ತಾರೆ. ಸಾಮಾನ್ಯವಾಗಿ ಹೆಸರು, ಅಲಸಂಧಿ, ಶೇಂಗಾ, ಸೂರ್ಯಕಾಂತಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

**ಹಿಂಗಾರು ಬೆಳೆಗಳು:** ಮಳೆಯನ್ನೇ ಅವಲಂಬಿಸಿ ಬೆಳೆದ ಬೆಳೆಗಳಿಗೆ ಒಣಬೇಸಾಯ ಬೆಳೆಗಳು ಜೋಳ, ಕಡಲೆ, ಶೇಂಗಾ, ತೊಗರಿ ಮುಂತಾದವು.

**ನೀರಾವರಿ ಬೆಳೆಗಳು:** ಭತ್ತ, ಗೋಧಿ, ಈರುಳ್ಳಿ, ಮೆಣಸಿನಕಾಯಿ, ಕಡಲೆ ಇನ್ನು ಅನೇಕ.

**ಮಿಶ್ರ ಬೆಳೆಗಳು:** ವಿಶೇಷವಾಗಿ ಮಿಶ್ರ ಬೆಳೆಗಳಾದ ಮೆಣಸಿನಕಾಯಿ ಬೆಳೆಯುವುದರೊಂದಿಗೆ ಅದರಲ್ಲಿ ಈರುಳ್ಳಿ, ಜೋಳ, ಕಡಲೆ, ಕುಸುಬಿ ಮೇರೆಯಲ್ಲಿ ಎಳ್ಳು, ಗುರೆಳ್ಳು ಕೂಡಾ ಬೆಳೆಯುತ್ತಾರೆ. ತೊಗರಿ ಯೊಂದಿಗೆ ಹುರುಳಿ ಬೆಳೆಯುತ್ತಾರೆ. ಮುಂತಾದ ಮಿಶ್ರ ಬೆಳೆಯನ್ನು ಬೆಳೆಯುತ್ತಾರೆ. ಹೀಗೆ ಮಿಶ್ರ ಬೆಳೆಯನ್ನು ಬೆಳೆಯುವುದರ ಉದ್ದೇಶವೇನೆಂದರೆ ಮನುಷ್ಯನ ಆಹಾರ ಧಾನ್ಯಗಳ ಜೊತೆಗೆ ಪಶುಗಳಿಗೆ

ಮೇವನ್ನು, ಹೊಟ್ಟನ್ನು ಪಡೆಯುವ ಉದ್ದೇಶವಾಗಿದೆ. ಹೀಗಾಗಿ ಮಳೆಯನ್ನು ಅವಲಂಬಿಸಿದ ಭೂಮಿಯೇ ನಡುಗಡ್ಡೆಸ್ಥರಿಗೆ ಜೀವನಾಧಾರವಾಗಿದೆ. ಏಕೆಂದರೆ ಎಲ್ಲದಕ್ಕೂ ಮಳೆಯೇ ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತದೆ. ಹೀಗಾಗಿ ಒಣಬೇಸಾಯದ ಭೂಮಿ, ಗುಡ್ಡ ಪ್ರದೇಶಗಳ ನಡುಗಡ್ಡೆಗಳ ಜನರ ಜೀವಾಳ ಎನ್ನಬಹುದು.

**ಕೃಷಿ ಉಪಕರಣಗಳು:** ಕೃಷಿಕರ ಕೈಗಳ ಮುಂದುವರಿಕೆಯೇ ಕೃಷಿ ಉಪಕರಣಗಳು. ಕೊಯ್ಯುವ ಚಿಕ್ಕ ಕುಡುಗೋಲಿನಿಂದ ಹಿಡಿದು ಹಲವಾರು ಸಂಕೀರ್ಣ ಅಂಶಗಳಿರುವ ನೇಗಿಲು ಬಂಡಿಗಳವರೆಗೆ ಉಪಕರಣಗಳ ವ್ಯಾಪ್ತಿ ಹರಡಿದೆ. ಬೇಸಾಯಕ್ಕಾಗಿ ಬಳಸುವ ಪರಿಕರಣಗಳನ್ನು ನೋಡಬಹುದು.

**ನೇಗಿಲು:** ಭೂಮಿಯನ್ನು ಊಳಲು ಬಳಸುವ ಸಾಧನ. ಇದಕ್ಕೆ ರೈತರು ಗಳೇ ಹೊಡೆಯುವುದು ಎನ್ನುತ್ತಾರೆ. ಈ ನೇಗಿಲಿನಲ್ಲಿ ಅನೇಕ ವಿಧಗಳುಂಟು.

೧. **ಕಬ್ಬಿಣದ ನೆಗ್ಗು ಟ್ರ್ಯಾಕ್ಟರ್:** ಇದರ ಮೂಲಕ ಭೂಮಿಯನ್ನು ಊಳಲು ಈ ನೇಗಿಲನ್ನು ಬಳಸುತ್ತಾರೆ.

೨. **ದೊಡ್ಡ ನೇಗಿಲು:** ಎರಡರಿಂದ ಐದು ಜೊತೆ ಎತ್ತು ಬಳಸಿ ಭೂಮಿಯನ್ನು ಊಳಲು ಬಳಸುತ್ತಾರೆ.

೩. **ಮಣ್ಣೇರಿಸುವ ನೇಗಿಲು:** ಇದನ್ನು ಮಣ್ಣೇರಿಸಲು ಮತ್ತು ಸಾಲು ಬಿಡಲು ಬಳಸಲು ಉಪಯೋಗಿಸುತ್ತಾರೆ.

**ಕಟ್ಟಿಗೆ ನೇಗಿಲು:** ಮೂರು ಅಡಿ ಮರಕೆತ್ತಿ ಒಂದು ತುದಿ ಚೂಪಾಗಿದ್ದು, ತಲೆಯ ಭಾಗದಲ್ಲಿ ಚಪ್ಪಟೆಯಾಗಿದ್ದು ಮೇಳಿ ಸೇರಿಸಲು ಅದರಲ್ಲಿ ಸಣ್ಣ ಕುಳಿ ಮಾಡಿರುತ್ತಾರೆ.

**ಮೇಳಿ:** ನೇಗಿಲನ್ನು ನಿಯಂತ್ರಿಸಲು ಇರುವ ಹಿಡಿ ಸೇರಿದ ಭಾಗವಾಗಿದೆ. ಇದು ಇಂಗ್ಲೀಷಿನ ಐ ಆಕಾರದಲ್ಲಿ ಇರುತ್ತದೆ. ಇದು ಹರಗುವುದರಿಂದ, ಬಿತ್ತುವ ಕೂರಿಗೆ ಮುಂತಾದ ಎಲ್ಲ ಸಾಧನೆಗಳಿಗೂ ಅತ್ಯವಶ್ಯಕವಾಗಿ ಬಳಸುತ್ತಾರೆ.

**ಈಸು:** ನೇಗಿಲು ಮತ್ತು ನೊಗವನ್ನು ಸೇರಿಸುವ ಮರದ ತುಂಡು. ಇದನ್ನು ನೇಗಿಲು ಉಳುಮೆಗೆ ಅಥವಾ ಕುಂಟೆ ದಿಂಡಿಗೆ ಎಡೆ ಹೊಡೆಯುವ ದಿಂಡಿಗೆ, ಬಿತ್ತುವ ಕೂರಿಗೆಗೆ, ಎತ್ತಿನ ಬಂಡಿಗೆ, ಎತ್ತುಗಳು ಹೊತ್ತಿರುವ ನೊಗಕ್ಕೆ ಬಂಧಿಸುವ ಉದ್ದನೆಯ ದಂಡವನ್ನು ಈಸು ಎನ್ನುತ್ತಾರೆ.

**ಜತಿಗೆ:** ಎತ್ತುಗಳನ್ನು ನೊಗಕ್ಕೆ ಕಟ್ಟಲು ಬಳಸುವ ಚರ್ಮದ ಸಾಧನವಾಗಿದೆ.

**ನಗ:** ಎರಡು ಎತ್ತುಗಳ ಹೆಗಲ ಮೇಲೆ ಇಡುವ ಕಟ್ಟಿಗೆಯ ಸಾಧನವಾಗಿದೆ. ಹೊಲಕ್ಕೆ ಎತ್ತುಗಳನ್ನು ಹೊಡೆದುಕೊಂಡು ಹೋಗುವಾಗ ಈ ನಗದ ಸಹಾಯವನ್ನು ಪಡೆಯುತ್ತಾರೆ ಮತ್ತು ಎತ್ತುಗಳ ಸಹಾಯದಿಂದ ಕೆಲಸ ಮಾಡುವ ಉಪಕರಣಗಳನ್ನು ಬಂಧಿಸುತ್ತಾರೆ.

**ಹಗ್ಗ:** ಕೃಷಿ ಚಟುವಟಿಕೆಯ ಉಪಕರಣಗಳಲ್ಲಿ ಹಗ್ಗವೂ ಒಂದು. ಇದನ್ನು ಎತ್ತು ಕಟ್ಟಲು, ಚಕ್ಕಡಿಯ ಮೇಲೆ ಮೇವು, ಹತ್ತಿಕಟ್ಟಿಗೆ ಕಟ್ಟಲು ಹೀಗೆ ಹಲವಾರು ಕೆಲಸಗಳಿಗೆ ಉಪಯೋಗಿಸುತ್ತಾರೆ. ಪುಂಡಿನಾರು, ಡಬಗಳ್ಳಿ ನಾರಿನಿಂದ ಹಗ್ಗವನ್ನು ನಡಗಡ್ಡೆಗಳಲ್ಲಿ ತಯಾರುಮಾಡುತ್ತಾರೆ.

**ಬಾರಕೋಲು:** ಎತ್ತುಗಳನ್ನು, ದನಗಳನ್ನು ಬೆದರಿಸಲು ಉಪಯೋಗಿಸುವ ಸಾಧನ. ಇದನ್ನು ನಾರಿನಿಂದ, ಚರ್ಮದಿಂದ ಮಾಡಿರುತ್ತಾರೆ. ಇದನ್ನು ಸುಂದರವಾದ ಕುಚ್ಚುಗಳಿಂದ ಅಲಂಕರಿಸುತ್ತಾರೆ. ಹೆಸರೇ ಸೂಚಿಸುವ ಹಾಗೆ ಬಾರು ಎಂದರೆ ಉದ್ದನೆಯ ಛಾವಟಿ. ಕೋಲು ಎಂದರೆ ಅದಕ್ಕೆ ತೊಡುಕು ಹಾಕಿದ ಕಟ್ಟಿಗೆ.

**ಗುದ್ದಲಿ:** ನೆಲ ಅಗೆಯಲು ಬಳಸುವ ಸಾಧನ. ಆಳವಾಗಿ ಬೇರು ಬಿಟ್ಟಿರುವ ಗಿಡವನ್ನು ಕಡಿಯಲು ಮತ್ತು ಮಣ್ಣನ್ನು ಅಗೆಯಲು ಕಲ್ಲುಗಳನ್ನು ತೆಗೆಯಲು ಬಳಸುತ್ತಾರೆ. ಇದು ಹರಿತವಾದ ಚೂಪಾದ ಮುಖವನ್ನು ಹೊಂದಿರುತ್ತದೆ. ಕೈಯಲ್ಲಿ ಹಿಡಿಯಲು ಸಹಾಯಕವಾದ ಕಟ್ಟಿಗೆ ಇರುತ್ತದೆ.

**ಸಲಿಕೆ:** ಇದು ಮಣ್ಣನ್ನು ಎಳೆಯಲು, ಕೆಸರು ತೆಗೆಯಲು, ತೋಟಗಳಿಗೆ ನೀರು ಕಟ್ಟಲು ಉಪಯೋಗಿಸುತ್ತಾರೆ. ಅಗಲವಾದ ತಗಡಿನ ಕಬ್ಬಿಣದಿಂದ ಮಾಡಿದ್ದಾಗಿರುತ್ತದೆ.

**ಕುರ್ಚಿಗಿ:** ಇದು ಬೆಳೆಯಲ್ಲಿ ಬೆಳೆದಿರುವ ಕಳೆ ತೆಗೆಯಲು ಬಳಸುವ ಕಬ್ಬಿಣದ ಸಾಧನ. ಇದರ ಹಿಂದಿರುವ ಭಾಗವನ್ನು ಹಿಡಿಕೆ ಎನ್ನುತ್ತಾರೆ. ಇದನ್ನು ಕಟ್ಟಿಗೆಯಿಂದ ಮಾಡಿರುತ್ತಾರೆ. ಕೈಗೆ ಕಬ್ಬಿಣದ ಅಂಚು ಚುಚ್ಚಬಾರದೆಂದು ಮತ್ತು ಹಿಡಿತಕ್ಕಾಗಿ ಇದನ್ನು ಬಳಸುತ್ತಾರೆ.

**ಕುಡುಗೋಲು:** ಇದನ್ನು ಭತ್ತ ಕೊಯ್ಯಲು, ಜೋಳ, ಗೋಧಿ, ಸಜ್ಜೆ, ಮೇವು ಕೊಯ್ಯುಲು ಬಳಸುತ್ತಾರೆ.

**ಚಿಕ್ಕ:** ಎತ್ತಿಗೆ ಬಾಯಿಗೆ ಹಾಕುತ್ತಾರೆ. ಚಚೌಕದ ಹಲವಾರು ತೂತುಗಳನ್ನು ಹೊಂದಿರುತ್ತದೆ. ಎತ್ತುಗಳು ಬೆಳೆಯನ್ನು ತಿನ್ನಬಾರದೆಂದು ಇದನ್ನು ಬಳಸುತ್ತಾರೆ.

**ಎತ್ತಿನ ಗಾಡಿ:** ಎತ್ತುಗಳ ಸಹಾಯದಿಂದ ಅನೇಕ ಕೃಷಿಗೆ ಉಪಯೋಗಿಸುವ ಮತ್ತು ಅನೇಕ ಸಲಕರಣೆಗಳನ್ನು, ಸಾಮಾನುಗಳನ್ನು ತರಲಿಕ್ಕೆ ಮತ್ತು ಹೊಲಕ್ಕೆ ಹೋಗಲು ಮತ್ತು ವಕ್ಕಲಾದ ದವಸ ಧಾನ್ಯಗಳನ್ನು ಮನೆಗೆ ತರಲು ಬಳಸುತ್ತಾರೆ. ಜಾತ್ರೆಗೆ ಹೋಗಲು ಊರಿಗೆ ಹೋಗಲು ಬಳಸುತ್ತಾರೆ.

**ಉಡಿಚೀಲ:** ಬಿತ್ತುವಾಗ ಬೀಜ ಹಾಕಿಕೊಳ್ಳಲು ಮಾಡಿದ ಸಣ್ಣಚೀಲ ಅಥವಾ ಬಟ್ಟೆಯಿಂದ ಕೂಡ ಕಟ್ಟಿಕೊಳ್ಳುತ್ತಾರೆ.

**ಬುಕ್ಕ:** ಎಳೆಯಲು ಸಹಾಯವಾಗುವಂತೆ ಕೂರಿಗೆಗೆ ಜೋಡಿಸಿರುವ ಉದ್ದನೆಯ ಬೊಂಬಿನ, ಕಟ್ಟಿಗೆಯಿಂದ ಮತ್ತು ಕಬ್ಬಿಣದಿಂದ ಮಾಡಿರುತ್ತಾರೆ. ನಡುವೆ ಬೀಜಗಳು ಬೀಳಲು ರಂಧ್ರವನ್ನು ಮಾಡಿರುತ್ತಾರೆ. ಹೊಲ ಬಿತ್ತುವಾಗ ಬಳಸುತ್ತಾರೆ.

**ನಡುಗಡ್ಡೆಗಳು ಮತ್ತು ಆಧುನಿಕ ಕೃಷಿ:** ನಡುಗಡ್ಡೆಗಳು ಕೃಷಿ ಆಧಾರಿತವಾದವುಗಳು. ಅದರಿಂದ ಕೃಷಿಯೇ ಗ್ರಾಮೀಣ ಅರ್ಥ ವ್ಯವಸ್ಥೆಯ ಬೆನ್ನೆಲುಬು. ಕೃಷಿಕನೇ ರಾಷ್ಟ್ರದ ಬೆನ್ನೆಲುಬು. ಅವನೇ ಅದರ ಅಡಿಗಲ್ಲು ಆಗಿರುವುದರಿಂದ ಇವರ ಬದುಕನ್ನು ಮೊದಲು ಭದ್ರಪಡಿಸಬೇಕು. ಹಳ್ಳಿಗಳನ್ನು ಭಾರತದ ಜೀವನಾಡಿಗಳೆಂದು ಹೇಳಬಹುದು. ಗ್ರಾಮಗಳು ಕೃಷಿ ಮತ್ತು ಕೃಷಿಉತ್ಪಾದನೆಯನ್ನೇ ಆಧರಿಸಿ ನಿಂತಿವೆ. ರಾಷ್ಟ್ರೀಯ ಆದಾಯದಲ್ಲಿ ಕೃಷಿ ಕ್ಷೇತ್ರದಪಾಲು ಕುಸಿಯುತ್ತಾ ಹೋಗಿದ್ದರೂ ಇಂದಿಗೂ ನಮ್ಮ ನಾಡು ಶೇ. ೬೫ ರಷ್ಟು ಕೃಷಿಯನ್ನು ಅವಲಂಬಿಸಿದೆ. ಗ್ರಾಮಗಳೇ ದೇಶದ ಸಂಪತ್ತಿನ ಮೂಲಗಳು. ರೈತನ ಉದ್ದಾರವೇ ದೇಶದ ಉದ್ದಾರ ಹಾಗೂ ಏಳಿಗೆ. ರೈತನು ನಗುನಗುತ್ತಾ ನೆಮ್ಮದಿಯಿಂದ ಜೀವನ ಸಾಗಿಸುತ್ತಾನೆಂದರೆ ದೇಶವು ನೆಮ್ಮದಿಯಿಂದ ನಿಟ್ಟುಸಿರು ಬಿಡುತ್ತದೆ. ಒಟ್ಟಿನಲ್ಲಿ ದೇಶಕ್ಕೆ ಗ್ರಾಮಗಳು ಆಧಾರಸ್ತಂಭಗಳು ಎನ್ನಬಹುದು. ನಡುಗಡ್ಡೆಗಳು ಇದಕ್ಕೆ ಹೊರತಾಗಿದ್ದಲ್ಲ.

ಹೀಗಿದ್ದಾಗ ಕೃಷಿಯ ಕ್ಷೇತ್ರ ಹಲವಾರು ಸಮಸ್ಯೆಗಳಿಗೆ ಸಿಲುಕಿರುವುದರಿಂದ ನಡುಗಡ್ಡೆಗಳ ಕೃಷಿ ಸ್ಥಿತಿ ತುಂಬಾ ಶೋಚನೀಯವಾಗಿದೆ. ಹಲವಾರು ಆರ್ಥಿಕ ಸಮಸ್ಯೆಗಳಿಂದಾಗಿ ಹಿಂದುಳಿದಿವೆ. ಕೃಷಿ ಚಟುವಟಿಕೆಗಳಲ್ಲಿ ಆಧುನಿಕತೆ ಎಲ್ಲೆಡೆ ಗೋಚರಿಸುವುದನ್ನು ನೋಡಬಹುದಾಗಿದೆ. ಹಾಗೆ ನಡುಗಡ್ಡೆಗಳಲ್ಲಿ ಇಂದು ಆಧುನಿಕತೆ ಗೋಚರಿಸುತ್ತದೆ. ಮೆಲ್ಲಗೆ ಆಧುನಿಕತೆಯನ್ನು ಕೆಲವು ಗಡ್ಡೆಗಳವರು ಅನುಸರಿಸುತ್ತಿರುವುದನ್ನು ಕಾಣಬಹುದಾಗಿದೆ. ಯಂತ್ರೋಪಕರಣಗಳ ಬಳಕೆ ಮತ್ತು ರಾಸಾಯನಿಕ ಗೊಬ್ಬರದ ಬಳಕೆಯನ್ನು ನಾವು ಕಾಣಬಹುದಾಗಿದೆ.

**ಯಂತ್ರಗಳ ಬಳಕೆ:** ಇಂದು ಭೂಮಿಯನ್ನು ಊಳಲು ಕೆಲವುಗಡ್ಡೆಗಳಲ್ಲಿ ದೇವರಗಡ್ಡೆ ಕುರುವ ಪೂರಗಡ್ಡೆ, ಜಲದುರ್ಗ ನಡುಗಡ್ಡೆಗಳಲ್ಲಿ ಆಧುನಿಕತೆ ಕಡೆಗೆ ಬರುತ್ತಿದ್ದಾರೆ. ಟ್ರ್ಯಾಕ್ಟರ್‌ಗಳನ್ನು ಹೊಲ ಬಿತ್ತನೆ, ಬೆಳೆ, ಕಟಾವ ಮಾಡಲು ಬಂಡಿ ಬದಲಿ ಹೊಲಗಳಿಗೆ ಟ್ರ್ಯಾಕ್ಟರ್ ತೆಗೆದುಕೊಂಡು ಹೋಗುವುದು ಔಷಧಿ ಸಿಂಪಡಿಸುವ ಯಂತ್ರ ಉಪಕರಣಗಳನ್ನು ಬಳಸುತ್ತಾರೆ.

**ರಾಸಾಯನಿಕ ಗೊಬ್ಬರದ ಬಳಕೆ:** ಬೆಳೆಗಳಿಗೆ ಹಿಂದೆ ನಡುಗಡ್ಡೆಗಳಲ್ಲಿ ಪಶುಸಾಕಾಣಿಕೆಯಿಂದ ಪಡೆಯುವ ಶಕ್ತಿಯುತ ಕುರಿ ಗೊಬ್ಬರ, ಹಸುಗೊಬ್ಬರವನ್ನು ಬಳಸುತ್ತಿದ್ದರು. ಇಂದು ಆಧುನಿಕತೆಯಿಂದ ರಸಗೊಬ್ಬರದ

ಬಳಕೆಯನ್ನು ಕಂಡುಕೊಂಡಿದ್ದಾರೆ. ಇದು ಕೂಡ ರಸ್ತೆ ಸಂಪರ್ಕ ಹೊಂದಿರುವ ಗಡ್ಡೆಗಳಲ್ಲಿ ಮಾತ್ರ ಯಂತ್ರ ಉಪಕರಣಗಳ ಬಳಕೆ ಮತ್ತು ರಸಗೊಬ್ಬರದ ಬಳಕೆಯನ್ನು ಮಾಡುತ್ತವೆ ಎಂದು ಹೇಳಬಹುದು. ಹಿಂಗಾರಿ ಮತ್ತು ಮುಂಗಾರಿ ಕ್ಷೇತ್ರಗಳನ್ನು ಗಮನಿಸಿದರೆ, ರಾಸಾಯನಿಕ ಗೊಬ್ಬರ ಬಳಸಿ ಅಲ್ಪ ಜಮೀನಿನಲ್ಲಿ ಅಧಿಕ ಇಳುವರಿ ಪಡೆಯುತ್ತಾರೆ. ಮಂಗಳ, ಯಾರಿಯಾ, ಡಿ.ಎ.ಪಿ., ಬೋರಾನ್, ಫಾಸ್ಪೇಟ್ ಇನ್ನು ಅನೇಕ ಹೆಸರಿನ ಗೊಬ್ಬರಗಳನ್ನು ಬಳಸುತ್ತಾರೆ. ಒಂದು ವೇಳೆ ಮಳೆ ಬರದೆ ಇದ್ದ ಸಮಯದಲ್ಲಿ ಬೆಳೆ ಒಣಗಿ ನಷ್ಟವನ್ನು ಅನುಭವಿಸಿ ಆರ್ಥಿಕತೆಯಿಂದ ಬಳಲುತ್ತಾರೆ.

ನಡುಗಡ್ಡೆಗಳಿಗೆ ವಾಹನಗಳ ಸೌಲಭ್ಯವಿಲ್ಲ. ಜಲದುರ್ಗ ನಡುಗಡ್ಡೆ ಮಾತ್ರ ಅಲ್ಪ ಪ್ರಮಾಣದಲ್ಲಿ ವಾಹನ ಸೌಲಭ್ಯವಿದೆ. ಇನ್ನುಳಿದ ಎಲ್ಲ ಗಡ್ಡೆಗಳಿಗೆ ವಾಹನಗಳ ಸೌಲಭ್ಯವಿಲ್ಲ, ಇವರು ಬೆಳೆದ ದವಸ ಧಾನ್ಯಗಳನ್ನು ತೆಪ್ಪದ ಮೂಲಕ ದಡಕ್ಕೆ ಸಾಗಿಸಿ ಮತ್ತು ಅಲ್ಲಿಂದ ಬೇರೆ ಊರಿನ ಬಸ್ಸುಗಳಿಗೆ ಖಾಸಗಿವಾಹನಗಳ ಮೂಲಕ ಸಮೀಪದ ಮಾರುಕಟ್ಟೆಗಳಿಗೆ ತಂದು ಮಾರುತ್ತಾರೆ. ಇತ್ತೀಚಿಗೆ ಗ್ರಾಮಗಳ ಸಮುದಾಯದ ಕಾರ್ಯಗಳು ತೀವ್ರವಾಗಿ ಬದಲಾಗುತ್ತಿವೆ. ಆದರೆ ನಡುಗಡ್ಡೆಗಳು ಸಾರಿಗೆ ಸಂಪರ್ಕದಲ್ಲಿ ಆಧುನೀಕರಣದಿಂದ ದೂರ ತಳ್ಳಲ್ಪಟ್ಟಿವೆ. ಹಿಂದಿನಿಂದ ಇಂದಿನವರೆಗೂ ರಸ್ತೆ ಸಂಪರ್ಕ ಇಲ್ಲದೆ ನಡುಗಡ್ಡೆಗಳ ಜನರು ಪ್ರತಿಯೊಂದು ದಿನನಿತ್ಯದ ಆಹಾರ ಸಾಮಗ್ರಿಗಳಿಂದ ಹಿಡಿದು ದವಸ ಧಾನ್ಯದವರೆಗೆ ಚಿಕ್ಕಪುಟ್ಟ ವ್ಯಾಪಾರದಿಂದ ದೊಡ್ಡ ವ್ಯಾಪಾರವನ್ನು ದೋಣಿ ಅಥವಾ ತೆಪ್ಪದ ಮೂಲಕವೇ ನಡೆಸುತ್ತಾರೆ. ಇದರಿಂದ ವ್ಯಾಪಾರವಹಿವಾಟು ನಡೆಸಬೇಕಾದರೆ ಯಾವುದೇ ಸರಿಯಾದ ಮಾಹಿತಿಗಳು ಸಿಗದೇ ತೆಗೆದುಕೊಂಡು ಹೋದ ದವಸ ಧಾನ್ಯಗಳನ್ನು ಅವರು ಹೇಳಿದ ಬೆಲೆಗೆ ಕೊಟ್ಟು ಬರುತ್ತಾರೆ. ಯಾಕೆಂದರೆ ಮತ್ತೆ ಹಿಂದಕ್ಕೆ ತರಲು ಆಗುವುದಿಲ್ಲ. ಆ ಕಾರಣದಿಂದ ಆರ್ಥಿಕ ನಷ್ಟವನ್ನು ಅತಿಹೆಚ್ಚಾಗಿ ನಡುಗಡ್ಡೆ ಜನ ಅನುಭವಿಸುತ್ತಾರೆ ಎಂದು ಹೇಳಬಹುದು. ಆರ್ಥಿಕತೆಯಿಂದ ಹಿಂದುಳಿಯಲು ಪ್ರಮುಖ ಕಾರಣವಾಗುತ್ತದೆ.

**ಆರ್ಥಿಕ ಸಂಘ ಸಂಸ್ಥೆಗಳು:** ದೇವರಗಡ್ಡೆ, ಜಲದುರ್ಗಗಡ್ಡೆ, ಕುರುವಪೂರಗಡ್ಡೆ, ಈ ಗಡ್ಡೆಗಳಲ್ಲಿ ಜನಸಂಖ್ಯೆ ತೀರಾ ಕಡಿಮೆ ನಡುಗಡ್ಡೆಗಳಿರುವುದರಿಂದ ಇಲ್ಲಿ ಒಂದು ಎರಡು ಸಂಘಗಳು ಅಂಗನವಾಡಿ ಕಾರ್ಯಕರ್ತೆಯರಿಂದ ಸ್ಥಾಪನೆಯಾಗಿವೆ. ಅವರಲ್ಲಿ ಚಿಕ್ಕ ಉಳಿತಾಯದ ಅರಿವು ಮೂಡಿಸುತ್ತವೆ. ಆರ್ಥಿಕ ಸಬಲೀಕರಣಕ್ಕೆ ಒತ್ತು ಕೊಡುತ್ತಲಿವೆ.

**ಈ ಸಂಘಗಳ ಸ್ಥಾಪನೆಯ ಉದ್ದೇಶಗಳು**

೧. ಮಹಿಳಾ ನಿರುದ್ಯೋಗ ನಿರ್ಮೂಲನೆ

೨. ಮಹಿಳಾ ಸಬಲೀಕರಣ

೩. ಸಾಮರ್ಥ್ಯ ಬಲವರ್ಧನೆ

೪. ನಾಯಕತ್ವ ತರಬೇತಿ

೫. ಆದಾಯ ಉತ್ಪನ್ನ ಚಟುವಟಿಕೆಗಳನ್ನು ರೂಪಿಸುವುದು.

೬. ಸ್ತ್ರೀಯರನ್ನು ಕ್ರಿಯಾಶೀಲರನ್ನಾಗಿ ಮಾಡುವುದು ಹೀಗೆ ವಿವಿಧ ಉದ್ದೇಶಗಳ ಈಡೇರಿಕೆಗಾಗಿ ಈ ನಡುಗಡ್ಡೆಗಳಲ್ಲಿ ಸಂಘ ಸಂಸ್ಥೆಗಳ ಮೂಲಕ ಸಾರ್ವಜನಿಕರ ಪಾಲುದಾರಿಕೆಯಲ್ಲಿ ಈ ಕಾರ್ಯಗಳು ಜರುಗುತ್ತಿರುವುದು ವಿಶೇಷವಾಗಿದೆ.

ಜಮೀನು ಇರಲಾರದ ಸಂಘದ ಸದಸ್ಯರಿಗೆ ಬಡ್ಡಿರಹಿತ ಸಾಲನೀಡುವುದು. ಕೃಷಿ ಭೂಮಿ ಇರುವವರಿಗೆ ಕಡಿಮೆ ಬಡ್ಡಿಯ ಮೂಲಕ ಸಾಲ ನೀಡುವರು. ಇದರಿಂದ ಅವರು ತಮ್ಮ ಆರ್ಥಿಕ ಬದುಕನ್ನು ಸುಧಾರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಸಂಘದ ಸದಸ್ಯರು ನಿಗದಿಪಡಿಸಿದ ಅವಧಿಗೆ ಸರಿಯಾಗಿ ಸಾಲದ ಕಂತು ಮರುಪಾವತಿಸಲು ಸಾಲಗಾರರು ಶ್ರಮಿಸುತ್ತಾರೆ. ಜವಾಬ್ದಾರಿ ಅರಿತುಕೊಂಡು ಆರ್ಥಿಕ ಸಬಲೀಕರಣದತ್ತ ಸಾಗುವುದು ಇದರ ಉದ್ದೇಶವಾಗಿದೆ. ಇವುಗಳಿಂದ ವಿವಿಧ ಕಾರ್ಯಕ್ರಮಗಳ ಮೂಲಕ ಸಾರ್ವಜನಿಕ ಆರ್ಥಿಕ ಹೊಣೆಗಾರಿಕೆ ನಿಭಾಯಿಸುವಲ್ಲಿ ಇನ್ನು ಹಿಂದುಳಿದಿದ್ದಾರೆ. ಸಂಘಗಳಿಂದ ಸಾಲಪಡೆದರು ಯಾವುದೇ ಉದ್ಯೋಗಗಳನ್ನು ಮಾಡದೆ ತಮ್ಮ ಕುಟುಂಬ ಸಮಸ್ಯೆಗಳಿಗೆ ಹಣವನ್ನು ಬಳಕೆ ಮಾಡಿಕೊಳ್ಳುತ್ತಿದ್ದಾರೆ.

ಈ ಗಡ್ಡೆಗಳಿಗೆ ಸಮೀಪದ ತಾಲೂಕಾ ಕ್ಷೇತ್ರವಾದ ಲಿಂಗಸ್ಗೂರ ಹಾಗೂ ರಾಯಚೂರಿನಲ್ಲಿ ಜಮೀನು ಹೊಂದಿದ ವ್ಯಕ್ತಿಗಳು ಬ್ಯಾಂಕಿನೊಂದಿಗೆ ವ್ಯವಹರಿಸುತ್ತಿದ್ದಾರೆ. ಗ್ರಾಮೀಣಬ್ಯಾಂಕು, ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಈ ಬ್ಯಾಂಕ್‌ಗಳಲ್ಲಿ ಪ್ರತಿಶತ ೫% ರಷ್ಟು ಸಾಲ ಪಡೆದುಕೊಳ್ಳುತ್ತಾರೆ. ಎಷ್ಟೋ ವೇಳೆ ಬರಗಾಲ ಬಂದಾಗ ಸಾಲತೀರಿಸುವಷ್ಟೇ ಅಲ್ಲ, ಅದರ ಬಡ್ಡಿ ಕಟ್ಟಲು ಆಗದೇ ಪರದಾಡುವ ಸ್ಥಿತಿಯನ್ನು ಕಾಣುತ್ತೇವೆ. ಅತಿ ಹೆಚ್ಚಾಗಿ ಬ್ಯಾಂಕಿನೊಂದಿಗೆ ವ್ಯವಹಾರ ಇಟ್ಟುಕೊಂಡಿಲ್ಲ. ಏಕೆಂದರೆ ನಡುಗಡ್ಡೆಗಳಲ್ಲಿ ಅಕ್ಷರಸ್ಥರು ತುಂಬಾನೆ ಕಡಿಮೆ. ಇದರ ಬಗ್ಗೆ ತಿಳುವಳಿಕೆ ಮಾಹಿತಿಗಳಿಂದ ದೂರ ಇರುವುದರಿಂದ ಆರ್ಥಿಕವಾಗಿ ಸದೃಡವಾಗಲು ಆಗಿಲ್ಲ ಎಂದು ಹೇಳಬಹುದು. ಇಲ್ಲಿರುವ ಸಂಘಗಳು ಭಾಗ್ಯಲಕ್ಷ್ಮೀ ಸ್ವಸಹಾಯ ಗುಂಪು, ಶಾರದ ಸ್ವಸಹಾಯ ಗುಂಪು, ಹೇಮರೆಡ್ಡಿಮಲ್ಲಮ್ಮ ಸ್ವಸಹಾಯ ಗುಂಪು, ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳಿವೆ. ಇವುಗಳಿಂದ ಸಂಪೂರ್ಣವಾಗಿ ಯೋಜನೆಗಳನ್ನು ಪಡೆಯುವಲ್ಲಿ ನಡುಗಡ್ಡೆಗಳ ಜನ ಸಫಲರಾಗಿದ್ದಾರೆ. ಸಂಪೂರ್ಣ ವಾಗಿ ಇದರ ಲಾಭವನ್ನು ಪಡೆಯುತ್ತಿಲ್ಲ. ಇನ್ನು ಸರಕಾರ ನೀಡುತ್ತಿರುವ ಅನೇಕ ಯೋಜನೆಗಳನ್ನು ಇವರು ಬಳಸಿಕೊಳ್ಳುತ್ತಿಲ್ಲ ಎಂದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಇದರಿಂದ ಆರ್ಥಿಕ ಸಮಸ್ಯೆಯಿಂದ ಹೊರಬರಲು ಸಾಧ್ಯವಾಗುತ್ತಿಲ್ಲವಾದರೂ, ಇನ್ನೂ ಅನೇಕ ಆರ್ಥಿಕ ಸಮಸ್ಯೆಗಳು ಇವರನ್ನು ಕಾಡುತ್ತವೆ.

## ೩.೩ ಶೈಕ್ಷಣಿಕ ಸ್ಥಿತಿಗತಿ

ನಡುಗಡ್ಡೆಗಳಲ್ಲಿ ಸಾಕ್ಷರತೆಯ ಪ್ರಮಾಣ ನಿಧಾನಗತಿಯಲ್ಲಿ ಸಾಗುತ್ತಿದ್ದು ಇದೊಂದರಿಂದಲೇ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗುತಿಲ್ಲ. ೨೦೦೧ರ ಜನಗಣತಿಯ ಪ್ರಕಾರ ಬುಡಕಟ್ಟು ಸಾಕ್ಷರತೆ ದೇಶದ ಸರಾಸರಿ ಸಾಕ್ಷರತೆಯ ಪ್ರತಿಶತ ೧೦ಕ್ಕಿಂತಲೂ ಕಡಿಮೆಯಿದೆ. ಬಹುಸಂಖ್ಯಾತ ೭೨% ಹೆಚ್ಚು ಆದಿವಾಸಿಗಳು ನಿರಕ್ಷರಿಗಳಾಗಿದ್ದಾರೆ. ಅಧ್ಯಯನ ಪ್ರಕಾರ ರಾಯಚೂರು ಜಿಲ್ಲೆ ಸಾಕ್ಷರತೆ ತೀರ ಕಡಿಮೆ. ಅದರಲ್ಲಿ ನಡುಗಡ್ಡೆಗಳಲ್ಲಿ ವಾಸಿಸುವವರ ಜನರ ಸಾಕ್ಷರತೆ ತೀರ ಕೆಳಮಟ್ಟವಾಗಿದೆ. ಇತ್ತೀಚೆಗೆ ಒಬ್ಬ ಪ್ರಾಥಮಿಕ ಶಿಕ್ಷಕರನ್ನು ನಿಯಮಿಸಿದ್ದಾರೆ. ನದಿ ತುಂಬಿ ಹರಿಯುವ ಸಂದರ್ಭದಲ್ಲಿ ಮಕ್ಕಳಿಗೆ ಶಾಲೆಯು ತೆರೆಯುವುದಿಲ್ಲ. ಎಲ್ಲಾ ಗಡ್ಡೆಗಳಿಗಿಂತ ಸಾಕ್ಷರತೆಯಲ್ಲಿ ಸ್ವಲ್ಪ ಹೆಚ್ಚಿನ ಪ್ರಗತಿ ಸಾಧಿಸಿದ ಗಡ್ಡೆಯೆಂದರೆ ರಾಯಚೂರು ಜಿಲ್ಲೆಯ ಲಿಂಗಸ್ಗೂರಿನಿಂದ ೩೫ ಕಿ.ಮೀ ನಾರಾಯಣಪೂರದಿಂದ ೧೦ಕಿ.ಮೀ ಇರುವ ದೇವರಗಡ್ಡೆ. ಇದಕ್ಕೆ ಹೊರ ಜಗತ್ತಿಗೆ ಹೋಗಿ ಬರಲು ದಾರಿ ವ್ಯವಸ್ಥೆ ಇತ್ತೀಚೆಗೆ ಮಾಡಲಾಗಿದ್ದು, ಈ ಗಡ್ಡೆಯಲ್ಲಿ ವಾಸಿಸುವ ಜನರ ಪ್ರಮಾಣ ಒಟ್ಟು-೮೫೭ ಇದ್ದು, ಹೆಣ್ಣು-೪೬೫, ಗಂಡು-೩೯೨ ಇದ್ದು, ಇಲ್ಲಿ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಇದೆ. ಶಾಲೆಗೆ ದಾಖಲಾದ ಮಕ್ಕಳು ೧೭೩, ಗಂಡು ಮಕ್ಕಳು-೮೩, ಹೆಣ್ಣು ಮಕ್ಕಳು-೯೦ ಒಟ್ಟು-೧೭೩ ಮಕ್ಕಳು ಇದ್ದು, ಈ ಶಾಲೆಗೆ ೫ ಜನಶಿಕ್ಷಕರು ಇದ್ದು, ಎಲ್ಲಾಗಡ್ಡೆಗಳಿಗಿಂತ ಶಿಕ್ಷಣದಲ್ಲಿ ಸ್ವಲ್ಪ ಪ್ರಗತಿ ಸಾಧಿಸಿರುವುದನ್ನು ಗಡ್ಡೆಯ ಶಿಕ್ಷಕರನ್ನು ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಿದಾಗ ತಿಳಿದುಬರುತ್ತದೆ. ಇದೇ ರೀತಿ ಇದಕ್ಕಿಂತ ಸ್ವಲ್ಪ ಪ್ರಗತಿ ಸಾಧಿಸಿದ ರಾಯಚೂರು ಜಿಲ್ಲೆ ಸ್ಥಳದಲ್ಲಿ ಬರುವ ಆತಕೂರದಿಂದ ೩ ಕಿ.ಮೀ ಪಂಚದೇವನ ಪಾಡದಿಂದ ೨ ಕಿ.ಮೀ.ದಲ್ಲಿರುವ ಕುರವಪೂರಗಡ್ಡೆ. ಇದಕ್ಕೆ ಯಾವುದೇ ರೀತಿ ದಾರಿ ಮಾರ್ಗವಿಲ್ಲ. ದೋಣಿ ಮೂಲಕ ಹೋಗಬೇಕು ಬರಬೇಕು. ಇಲ್ಲವೆ ಈಜುಕೊಂಡು ಹೋಗಿಬರಬೇಕು. ಕೇಳಿದರೆ ಆಶ್ಚರ್ಯ ಎನಿಸುತ್ತದೆ. ಸ್ವಲ್ಪ ಶಿಕ್ಷಣದಲ್ಲಿ ಪ್ರಗತಿ ಸಾಧಿಸಲಿಕ್ಕೆ ಕಾರಣ ಅದೇ ಗಡ್ಡೆಯ ಬ್ರಾಹ್ಮಣ ಸಮುದಾಯದ ಶ್ರೀಮತಿ ನಳಿನಿ ಪೂಜಾರ. ಶಿಕ್ಷಕಿಯಾಗಿ ನೇಮಕವಾಗಿದ್ದರಿಂದ ತಮ್ಮ ಗಡ್ಡೆಯನ್ನು ಆಯ್ಕೆ ಮಾಡಿಕೊಂಡು ಅಲ್ಲಿಗೆ ಒಂದು ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿ ಶಿಕ್ಷಣ ಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಈ ಗಡ್ಡೆಯಲ್ಲಿ ಎಲ್ಲಾ ಸಮುದಾಯದವರಿಂದ ೧೯೦ ಮನೆಗಳಿದ್ದು, ೮೦೦ ಜನಸಂಖ್ಯೆಯನ್ನು ಒಳಗೊಂಡಿದ್ದು ಮತ್ತೆ ಒಂದು ಅಂಗನವಾಡಿ ಇದ್ದು, ಇದಕ್ಕೆ ನಳಿನಿ ಶಿಕ್ಷಕಿ ಅಂಗನವಾಡಿಯ ಕಾರ್ಯಕರ್ತೆಯಾಗಿದ್ದಾರೆ. ಒಟ್ಟು ೮೦೦ ಜನಸಂಖ್ಯೆ ಇದೆ. ಶಾಲೆಗೆ ದಾಖಲಾದ ಮಕ್ಕಳು ೬೧ ಮಕ್ಕಳು. ಗಂಡು ಹೆಣ್ಣು ಸೇರಿ. ಈ ಶಾಲೆಗೆ ಇಬ್ಬರು ಶಿಕ್ಷಕರು ಇದ್ದು ಇನ್ನೊಬ್ಬ ಶಿಕ್ಷಕರು ರಾಯಚೂರಿನಿಂದ ಬರುತ್ತಾರೆ. ಅವರು ನದಿ ನೀರು ಇಲ್ಲದಾಗ ಬಂದುಹೋಗುತ್ತಾರೆ. ದಿನಾಲು ನಳಿನಿ ಶಿಕ್ಷಕರು ನೋಡಿಕೊಳ್ಳುತ್ತಾರೆ ಎಂದು ಗಡ್ಡೆಗೆ ಕ್ಷೇತ್ರಕಾರ್ಯಕ್ಕೆ

ಹೋದಾಗ ನಳಿನಿ ಪೂಜಾರ ಅವರನ್ನು ಸಂದರ್ಶಿಸಿದಾಗ ತಿಳಿದು ಬಂದಿರುತ್ತದೆ. ಶೈಕ್ಷಣಿಕ ದೃಷ್ಟಿಯಿಂದ ನೋಡಿದಾಗ ಈ ಗಡ್ಡೆಯಲ್ಲಿ ಅಲ್ಪಪ್ರಮಾಣದ ಸುಧಾರಣೆ ಕಾಣುತ್ತಿದೆ. ಅಂಗನವಾಡಿ ಶಿಕ್ಷಕಿ ಆಗಿದ್ದ ರಜನಿ ಪೂಜಾರಿಯವರು ಸ್ತ್ರೀಶಕ್ತಿ ಸಂಘಗಳ ಭಾಗ್ಯ ಲಕ್ಷ್ಮಿ ಯೋಜನೆಯನ್ನು ಜನರಿಗೆ ತಲುಪಿಸುವಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇನ್ನುಳಿದ ಗಡ್ಡೆಗಳಲ್ಲಿ ಪ್ರಾಥಮಿಕ ಶಾಲೆ ಇದ್ದರು ಆಟಕ್ಕೆ ಉಂಟು ಲೆಕ್ಕಕ್ಕೆ ಇಲ್ಲ ಎನ್ನುವ ರೀತಿಯಲ್ಲಿವೆ ಎಂದು ಕ್ಷೇತ್ರಕಾರ್ಯದಿಂದ ತಿಳಿಯುತ್ತದೆ.

ದೇವರ ಗಡ್ಡೆಯೊಂದು ಬಿಟ್ಟು ಉಳಿದೆಲ್ಲ ನಡುಗಡ್ಡೆಗಳಲ್ಲಿ ಕನ್ನಡ ಮತ್ತು ತೆಲುಗು ಭಾಷೆ ಯಾಗಿದ್ದು, ದೇವರಗಡ್ಡೆಯಲ್ಲಿ ಕನ್ನಡ ಮಾತ್ರ ಮಾತನಾಡುತ್ತಾರೆ. ಎಲ್ಲಾ ನಡುಗಡ್ಡೆಗಳಲ್ಲಿ ಪ್ರಾಥಮಿಕ ಶಿಕ್ಷಣ ಪಡೆದಿದ್ದ ಮಕ್ಕಳು ಮುಂದಿನ ಅಭ್ಯಾಸಕ್ಕೆ ಹೋಗುವುದಿಲ್ಲ. ಇದೊಂದು ವಿಪರ್ಯಾಸದ ಸಂಗತಿಯಾಗಿದೆ. ನಂತರ ಈ ಮಕ್ಕಳು ದುಡಿಮೆಯಲ್ಲಿ ತೊಡಗಿಸಿಕೊಳ್ಳುತ್ತವೆ. ಪೋಷಕರು ಕೂಡ ತಮ್ಮ ಮಕ್ಕಳಿಗೆ ವಿದ್ಯೆ ಅಗತ್ಯವಿದೆಯೆಂದು ಭಾವಿಸುವುದಿಲ್ಲ. ದೇವರ ಗಡ್ಡೆಯಲ್ಲಿ ಉನ್ನತ ಶಿಕ್ಷಣ ಎಂದರೆ ಪದವಿ. ಸ್ನಾತಕೋತ್ತರ ಅಧ್ಯಯನ ಮಾಡುವವರ ಸಂಖ್ಯೆ ಬೆರಳೆಣಿಕೆಯಷ್ಟಿದೆ ಎಂದರೆ ಶಿಕ್ಷಣದ ಗಂಭೀರತೆಯ ಅರಿವು ಉಂಟಾಗುವುದು.

ನಡುಗಡ್ಡೆಗಳಲ್ಲಿ ಹೆಣ್ಣು ಮಕ್ಕಳ ಶಿಕ್ಷಣ ವಿಷಯ ಬಂದಾಗ ಅವರಿಗೆ ಹೋಗಿ ಬರಲು ಅನುಕೂಲವಿಲ್ಲದೇ ಇರುವಾಗ ಶಿಕ್ಷಣದ ಮಾತು ಬಹಳ ದೂರ ಉಳಿದಿದೆ. ಅದರಲ್ಲಿ ಸಾಂಪ್ರದಾಯಿಕ ಕಟ್ಟಳೆಗಳು ಅಡ್ಡಿ ಬರುತ್ತವೆ. ಪ್ರೌಢಾವಸ್ಥೆಯಲ್ಲಿ ಹೆಣ್ಣು ಪ್ರಕೃತಿ ದತ್ತವಾಗಿ ಋತುಮತಿಯಾದ ದಿನದಿಂದ ಲೈಂಗಿಕ ದೌರ್ಜನ್ಯದ ಭಯದಿಂದಾಗಿ ಶಾಲೆಗೆ ಹೋಗುವುದನ್ನು ಬಿಡಿಸಿ ಮದುವೆ ಮಾಡಲು ಸಿದ್ಧರಾಗುತ್ತಾರೆ. ಗಂಡು ಮಕ್ಕಳು ಸಹಿತ ಪ್ರಾಥಮಿಕ ಶಿಕ್ಷಣದ ನಂತರ ಹೈಸ್ಕೂಲ್ ಶಿಕ್ಷಣಕ್ಕೆ ಬೇರೆ ಊರಿಗೆ ಹೋಗುವ ಬದಲು ಪಾಲಕರ ಜೊತೆ ಕೂಲಿಗೆ ಹೋಗುವುದೇ ಹೆಚ್ಚು. ಇಲ್ಲದಿದ್ದರೆ ಕುರಿ, ಮೇಕೆ, ದನಗಳನ್ನು ಕಾಯಲು ಮತ್ತು ನದಿಯಲ್ಲಿ ಮೀನುಗಳನ್ನು ಹಿಡಿಯಲು ಹೋಗುತ್ತಾರೆ.

‘ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಲೇಸು’ ಎಂದು ತಿಳಿದು ಶಿಕ್ಷಣ ಕಲಿತರೂ ದುಡಿಮೆ ಮಾಡಬೇಕು. ಶಿಕ್ಷಣ ಕಲಿಯದಿದ್ದರೂ ದುಡಿಮೆ ಮಾಡಬೇಕು ಎನ್ನುವ ಪಾಲಕರ ತಪ್ಪು ಗ್ರಹಿಕೆಯಿಂದ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಇದರಿಂದ ಅನಕ್ಷರಸ್ಥರಾದ ಇವರಿಗೆ ಸರ್ಕಾರ ಯಾವುದೇ ಮಹತ್ವದ ಯೋಜನೆ ಜಾರಿಗೆ ತಂದರು ಶಿಕ್ಷಣದ ಕೊರತೆಯಿಂದ ಆ ಎಲ್ಲ ಯೋಜನೆಗಳ ಫಲದಿಂದ ವಂಚಿತರಾಗುತ್ತಿದ್ದಾರೆ.

**ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳು**

ನಡುಗಡ್ಡೆಗಳಲ್ಲಿನ ಜನರಲ್ಲಿ ಅಕ್ಷರಸ್ಥರ ಸಂಖ್ಯೆ ಕಡಿಮೆ ಎಂದು ಹೇಳಬಹುದು. ಅವರಲ್ಲಿನ ಅನಕ್ಷರತೆಯು ಅವರ ಅಭಿವೃದ್ಧಿಗೆ ಬಹಳ ತೊಡಕಾಗಿದೆ ಎಂದರೆ ತಪ್ಪಾಗಲಾರದು. ನಾವು

ಯಾವ ಸಮಸ್ಯೆಗಳನ್ನು ಎದುರಿಸುತ್ತಿದ್ದೇವೆ? ನಾವುಗಳು ಹೇಗೆ ನಾಗರೀಕ ಸಮಾಜದಿಂದ ಶೋಷಣೆಗೆ ಒಳಗಾಗುತ್ತಿದ್ದೇವೆ? ನಮ್ಮ ಅಭಿವೃದ್ಧಿಗಾಗಿ ಸರ್ಕಾರ ಯಾವ ಯಾವ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಆ ಕಾರ್ಯಕ್ರಮಗಳ ಪ್ರಯೋಜನವನ್ನು ಹೇಗೆ ಪಡೆಯಬೇಕು? ನಾವು ಸಾಮಾಜಿಕವಾಗಿ ಆರ್ಥಿಕವಾಗಿ ಹೇಗೆ ಅಭಿವೃದ್ಧಿಯಾಗಬೇಕು ಎಂಬುದರ ಬಗ್ಗೆ ಚಿಂತನೆ ಮಾಡಲು ಹಾಗೂ ತಮ್ಮ ನೆಲೆಗಳನ್ನು ಅಭಿವೃದ್ಧಿ ಪಡಿಸಿಕೊಳ್ಳಲು ಅವರಿಗೆ ಪ್ರಮುಖವಾಗಿ ಶಿಕ್ಷಣ ಬೇಕು. ಅವರು ಅಕ್ಷರಸ್ಥರಾಗಬೇಕು. ಜಾಗತಿಕ ಸಮಾಜದಲ್ಲಿ ತಮ್ಮ ಅಸ್ಥಿತ್ವವನ್ನು ಉಳಿಸಿಕೊಳ್ಳಲು ನಡುಗಡ್ಡೆಗಳಲ್ಲಿನ ಜನರಿಗೆ ಶಿಕ್ಷಣ ಬೇಕಾಗಿದೆ.

ನಮ್ಮ ದೇಶ ಮಾಹಿತಿ ತಂತ್ರಜ್ಞಾನದಲ್ಲಿ ಮುನ್ನುಗ್ಗುತ್ತಿದ್ದು, ಜಾಗತೀಕರಣದೊಳಗೆ ಸ್ಪರ್ಧೆಗಳಿದ್ದರೂ ಈ ನಡುಗಡ್ಡೆಗಳು ತಮ್ಮ ಮೂಲನೆಲೆ ಬಿಟ್ಟು ಹೊರ ಪ್ರಪಂಚಕ್ಕೆ ಬಂದು ನೆಲೆಸುವುದಕ್ಕೆ ಇಷ್ಟಪಡುತ್ತಿಲ್ಲ. ಮತ್ತು ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ಯೋಚನೆ ಮಾಡುತ್ತಿಲ್ಲ. ಅದರ ಬದಲು ತಮ್ಮ ಮೂಲ ನೆಲೆಯ ಬಗ್ಗೆ ಯೋಚನೆ ಮಾಡುತ್ತಾರೆ. ಇದರಿಂದ ಮಕ್ಕಳ ಭವಿಷ್ಯ ಸಂಪೂರ್ಣವಾಗಿ ಕುಂಠಿತಗೊಳ್ಳುತ್ತದೆ ಮತ್ತು ನಾಗರೀಕ ಸಮಾಜದಿಂದ ದೂರ ಉಳಿದಿದ್ದಾರೆ. ಅವರು ಅವರೇ ಹೆಣೆದುಕೊಂಡಿರುವ ಅನೇಕ ಸಮಸ್ಯೆಗಳಲ್ಲಿ ಸಿಲುಕಿದ್ದಾರೆ. ಸರ್ಕಾರ ಅವರಿಗಾಗಿ ಆಶ್ರಮ ಮನೆಗಳನ್ನು ನಿರ್ಮಿಸಿ ಕೊಟ್ಟರು ಅವರು ನಡುಗಡ್ಡೆಗಳನ್ನು ಬಿಟ್ಟು ಹೊರಗಡೆ ನಿರ್ಮಾಣವಾಗಿರುವ ಆಶ್ರಮ ಮನೆಗಳಿಗೆ ಬಂದಿಲ್ಲ. ಕಾರಣವೇನೆಂದರೆ ನೀವು ಬರಿ ಮನೆ ಕೊಡುತ್ತೀರಾ? ಅದರ ಜೊತೆಗೆ ನೀವು ನಮಗೆ ಭೂಮಿ ಕೊಡುತ್ತೀರಾ? ಬರಿ ಮನೆಗೆ ಬಂದು ನಾವು ಉಪವಾಸ ಮಾಡಬೇಕು. ನಮಗೆ ಬೇಕಾದ ಅಗತ್ಯ ಪಶುಸಂಗೋಪನೆಗೆ ಭೂಮಿ ಜಾಗ ಕೋಡುತ್ತೀರಾ? ಎನ್ನುವ ಇನ್ನು ಅನೇಕ ಪ್ರಶ್ನೆಗಳನ್ನು ಅವರು ಕೇಳುತ್ತಾರೆ. ಹೀಗಾಗಿ ತಮ್ಮ ಮೂಲ ನೆಲೆ ಬಿಟ್ಟು ಬರಲು ಇಷ್ಟಪಡುತ್ತಿಲ್ಲ ಎಂದು ಹೇಳಬಹುದು. ಆದರೆ ಇದರಿಂದ ತಮ್ಮ ಮಕ್ಕಳ ಭವಿಷ್ಯ ಹೇಗೆ ಎನ್ನುವ ಯೋಚನೆ ಅವರಿಗೆ ಇಲ್ಲ.

ನಡುಗಡ್ಡೆಗಳಲ್ಲಿನ ಜನರ ಬಡತನವೂ ಸಹ ಶಿಕ್ಷಣ ಪಡೆಯುವುದಕ್ಕೆ ಮಾರಕವಾಗಿದೆ. ಬಡತನದ ಕಾರಣದಿಂದಾಗಿ ಈ ಜನರು ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳುಹಿಸುವುದರ ಬದಲು ಪಶುಸಂಗೋಪನೆಗೆ ಬಳಸಿಕೊಳ್ಳುತ್ತಾರೆ. ವಿದ್ಯಾಭ್ಯಾಸದ ಬದಲು ತಮ್ಮ ಕುಲ ಕಸುಬನ್ನು ಪ್ರೋತ್ಸಾಹಿಸುತ್ತಾರೆ. ಅವರ ಜೀವನ ಸಾಗಿಸಲು ಮುಂದಾಗಿದ್ದಾರೆ. ಈ ನಡುಗಡ್ಡೆಗಳಿಗೆ ದಾರಿ ಸಂಪರ್ಕ ಮತ್ತು ವಾಹನಗಳ ಸೌಲಭ್ಯವಿಲ್ಲದ ಕಾರಣ ಇಲ್ಲಿನ ಮಕ್ಕಳು ಶಿಕ್ಷಣ ಪಡೆಯುವಲ್ಲಿ ಹಿಂದುಳಿದಿದ್ದಾರೆ ಎಂದು ಹೇಳಬಹುದು.

ಯಾವುದೇ ಒಬ್ಬ ವ್ಯಕ್ತಿ ವಿದ್ಯಾವಂತನಾಗಲು ಆ ವ್ಯಕ್ತಿಗೆ ವಿದ್ಯಾದಾನ ಮಾಡಿದ ಶಿಕ್ಷಕರ ಗುಣಮಟ್ಟವನ್ನು ಅವಲಂಬಿಸಿರುತ್ತದೆ. ನಡುಗಡ್ಡೆಗಳ ಮಕ್ಕಳಿಗೆ ವಿದ್ಯಾಭ್ಯಾಸವನ್ನು ನೀಡಲು ಬರುವ

ಶಿಕ್ಷಕರು ಹೊರಗಿನವರಾಗಿದ್ದಾರೆ. ಬೇರೆ ಬೇರೆ ಜಿಲ್ಲೆಗಳಿಂದ, ನಗರ ಪ್ರದೇಶದಿಂದ ಬಂದು ಪಾಠ ಹೇಳಿಕೊಡುವ ಇವರುಗಳಿಗೆ ನಡುಗಡ್ಡೆಗಳ ಪರಿಸ್ಥಿತಿ, ಜನರ ಜೀವನ ಸ್ಥಿತಿಗತಿ ಬಗ್ಗೆ ತಿಳುವಳಿಕೆ ಇರುವುದಿಲ್ಲ. ಹಾಗೆಯೇ ಶಿಕ್ಷಕರು ನಡುಗಡ್ಡೆಗಳಿಗೆ ಬರಲು ಯಾರು ಇಷ್ಟಪಡುವುದಿಲ್ಲ. ಒಂದು ವೇಳೆ ಬಂದರು ಅಪರಿಚಿತರಂತೆ ವರ್ತಿಸುತ್ತಾರೆ. ಉದ್ಯೋಗ ಸಿಕ್ಕ ಅನಿವಾರ್ಯಕ್ಕಾಗಿ ಇಲ್ಲಿಗೆ ಬಂದು ಹೋಗುವಂತಹ ಶಿಕ್ಷಕರು ಇದ್ದಾರೆ. ಈ ಸ್ಥಳದಿಂದ ಕುಂಟು ನೆಪ ಹೇಳಿ ಇಲ್ಲಿಂದ ವರ್ಗಾವಣೆ ಮಾಡಿಸಿಕೊಳ್ಳುತ್ತಾರೆ. ಯಾಕೆಂದರೆ ಇಲ್ಲಿ ಮೊದಲೇ ರಸ್ತೆ ಸಂಪರ್ಕ ಸಮಸ್ಯೆ. ಇದರಿಂದ ಅವರಿಗೆ ಹೋಗಿ ಬರುವುದಕ್ಕೆ ಆಗುವುದಿಲ್ಲ. ಎಲ್ಲರಿಗೂ ಕಣ್ಣಿಗೆ ಕಾಣುವಂತಹ ಸ್ಥಿತಿ. ಇಂತಹ ಕಡೆ ಸರ್ಕಾರ ಶಾಲೆ ನಿರ್ಮಿಸಿದೆ. ಆದರೆ ಇಲ್ಲಿಗೆ ಬರುವ ಶಿಕ್ಷಕರು ಒಬ್ಬರು ಇಬ್ಬರು ಬಂದರೂ ನದಿ ದಾಟಿ ಬರಬೇಕು ಅನ್ನುವ ಕಾರಣಕ್ಕೆ ವರ್ಗಾವಣೆ, ಇಲ್ಲವೆ ಕೆಲವು ತಿಂಗಳವರೆಗೆ ಹೆಚ್ಚುವರಿ ಕಾರ್ಯದ ಮೇಲೆ ಬೇರೆ ಹಳ್ಳಿಗಳಿಗೆ ನಿಯುಕ್ತಗೊಳಿಸಿಕೊಳ್ಳುತ್ತಾರೆ. ಇದರಿಂದ ಶಾಲೆ ಇದ್ದು ಶಿಕ್ಷಕರು ಇರುವುದಿಲ್ಲ. ನದಿಗೆ ನೀರು ಬಂದಾಗ ಸಂಪೂರ್ಣವಾಗಿ ಶಾಲೆ ಮುಚ್ಚಿರುತ್ತಾರೆ. ಇಂತಹ ಸಮಸ್ಯೆ ಮಕ್ಕಳ ವಿದ್ಯಾಭ್ಯಾಸ ಕುಂಠಿತಗೊಳ್ಳಲು ಕಾರಣವಾಗಿದೆ.

### ೩.೪. ರಾಜಕೀಯ ಆಡಳಿತ

ಈ ನಡುಗಡ್ಡೆಗಳಲ್ಲಿ ವಾಸಿಸುವ ಸಮುದಾಯದವರು ರಾಜಕೀಯದಲ್ಲಿ ಪಾಲ್ಗೊಳ್ಳುವಿಕೆಯ ಕೊರತೆಯಿಂದಲೋ, ಅಥವಾ ಸರ್ಕಾರ ನಡುಗಡ್ಡೆಗಳಲ್ಲಿ ಯಾವ ಯಾವ ಸಮುದಾಯಗಳು ನೆಲಸಿವೆ ಎಂಬ ತಿಳುವಳಿಕೆಯಿಂದಾಗಿ ಸವಲತ್ತು ಮತ್ತು ಸಮಸ್ಯೆಗಳ ಕುರಿತು ಗುರುತಿಸಲು ಸಾಧ್ಯವಾಗದೇ ಇರುವುದರಿಂದಲೋ, ಅಥವಾ ಇಲ್ಲಿನ ಜನರು ತಮ್ಮ ಸಮಸ್ಯೆಗಳನ್ನು ಸರಿಯಾದ ನಾಯಕತ್ವ ಹಾಗೂ ವೇದಿಕೆಯ ಕೊರತೆಯಿಂದಲೂ ಅನೇಕ ನಡುಗಡ್ಡೆಗಳು ಸರ್ಕಾರದಿಂದ ಸ್ಥಾನಮಾನವನ್ನು ಪಡೆದಿಲ್ಲ ಎಂದು ಹೇಳಬಹುದು.

ಸ್ಥಳೀಯ ಸಂಸ್ಥೆ ಚುನಾವಣೆ ಸಂದರ್ಭದಲ್ಲಿ ಮೀಸಲಾತಿ ಸ್ಥಿತಿ ರೂಪಿಸುವ ಗ್ರಾಮಗಳಿಂದ ಬೇರೆಯಾಗಿ ದೂರವಾಗಿ ನಡುಗಡೆಗಳಲ್ಲಿ ನೆಲೆಸಿರುವ ಸಮುದಾಯಗಳು ಯಾವುವು ಮತ್ತು ಎಷ್ಟು ನಡುಗಡ್ಡೆಗಳಿವೆ, ಅವುಗಳಿಗೆ ಯಾವ ರೀತಿ ಮೀಸಲಾತಿ ಕಲ್ಪಿಸಿದರೆ ಅನುಕೂಲವಾಗುತ್ತದೆ ಎಂಬ ಅರಿವಿನ ಕೊರತೆ ಇದೆ. ಈ ಅರಿವಿನ ಕೊರತೆಯಿಂದಾಗಿ ಯಾದಗಿರಿ ಜಿಲ್ಲಾ ಗ್ರಾಮ ಪಂಚಾಯತ್ ಮತ್ತು ರಾಯಚೂರು ಜಿಲ್ಲೆಯ ಗ್ರಾಮ ಪಂಚಾಯತ್ ಚುನಾವಣೆಯ ಮೀಸಲಾತಿ ನೀಡಿ ಮತ್ತು ಆಯೋಗಗಳ ಶಿಫಾರಸ್ಸುಗಳ ಆಧಾರದಿಂದಾಗಿ ನಡುಗಡ್ಡೆಗಳಲ್ಲಿ ವಾಸಿಸುವವರಿಗೆ ಅವಕಾಶ ಒದಗಿಸಲು ಸಾಧ್ಯವಾಗಿಲ್ಲ. ಕೆಲವು ನಡುಗಡ್ಡೆಗಳು ರಾಜಕೀಯದಿಂದಲೇ ದೂರ ಉಳಿದಿವೆ. ಯಾವುದೇ ಚುನಾವಣೆ ಗಾಗಿ, ಗುರುತಿನ ಚೀಟಿ ಪಡೆದಿಲ್ಲ ಮತ್ತು ಅವರಿಗೆ ಕಲ್ಪಿಸಿಲ್ಲ ಎಂದು ಹೇಳಬಹುದು. ಉದಾ: ನೀಲ

ಕಂಠರಾಯನಗಡ್ಡೆ. ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಕಕ್ಕರೆ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುವಂತಹದ್ದು. ಈ ಗಡ್ಡೆಗೆ ಯಾವ ರೀತಿಯ ಸೌಲಭ್ಯವಿಲ್ಲ ಮತ್ತು ಯಾರಿಗೂ ಆಧಾರ್ ಕಾರ್ಡ್ ಇಲ್ಲ. ಚುನಾವಣೆ ಗುರುತಿನ ಪತ್ರವು ಇಲ್ಲ ಎಂದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ಇನ್ನುಳಿದ ಗಡ್ಡೆಗಳಲ್ಲೂ ಎಲ್ಲಾ ಜನರಿಗೆ ಈ ಸೌಲಭ್ಯ ಇಲ್ಲ. ಯಾರೋ ಒಬ್ಬರಿಗೆ ಇರುತ್ತದೆ. ಇದ್ದವರಿಗೂ ಕೂಡ ಅದರ ಲಾಭವಿಲ್ಲ. ಜನಪ್ರತಿನಿಧಿಯನ್ನು ಹೋಗಿ ಕೇಳಿದರೆ ಇದರ ಬಗ್ಗೆ ತಲೆಯೇ ಕೆಡಿಸಿಕೊಳ್ಳುವುದಿಲ್ಲ. ಮಾಡಿಕೊಡುತ್ತೇವೆ ಎಂದು ಭರವಸೆ ಕೊಟ್ಟು ಹೋಗುತ್ತಾರೆ ಹೊರತು ಈವರೆಗೆ ಯಾವ ಸೌಲಭ್ಯವನ್ನು ನಮಗೆ ಮಾಡಿಕೊಟ್ಟಿಲ್ಲ ಎಂದು ನಡುಗಡ್ಡೆಗಳ ಸಮುದಾಯಗಳು ಹೇಳುತ್ತವೆ. ಈ ಸಮಸ್ಯೆ ಒಂದು ಗಡ್ಡೆಯ ಸಮಸ್ಯೆಯಾಗಿಲ್ಲ. ಎಲ್ಲಾ ಗಡ್ಡೆಗಳ ಸಮಸ್ಯೆಯಾಗಿದೆ.

ಇಂಥ ಸಂದರ್ಭದಲ್ಲಿ ಆರ್ಥಿಕವಾಗಿ ಸದೃಢವಾಗಿರುವ ಹಾಗೂ ರಾಜಕೀಯ ಹಿಂಬಾಲಕರಿಗೆ ಪಕ್ಕದ ಊರುಗಳಲ್ಲಿ ಈ ಗಡ್ಡೆಗಳ ವ್ಯಾಪ್ತಿಗೆ ಬರುವ ಪಂಚಾಯಿತಿಗಳ ಪ್ರತಿನಿಧಿಗಳು ಬರುವ ಎಲ್ಲಾ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ನಿಜವಾಗಿಯೂ ಕಡು ಬಡವರಾಗಿದ್ದು ಈ ನಡುಗಡ್ಡೆಗಳ ಜನರು ಯಾವುದೇ ಆಶ್ರಯ ಮನೆಗಳು ಇಲ್ಲದೇ ಇಂದಿಗೂ ಗುಡಿಸಲುಗಳಲ್ಲಿ ವಾಸಿಸುತ್ತಾ ಸರ್ಕಾರದ ಯಾವುದೇ ಪ್ರಯೋಜನ ಪಡೆಯದೇ ಎಲ್ಲ ಅವಕಾಶಗಳಿಂದ ವಂಚಿತರಾಗಿದ್ದಾರೆ.

ಕರ್ನಾಟಕದ ವಿಧಾನಸಭೆ ಸದಸ್ಯರು ೨೨೪ ಸಂಖ್ಯೆಯಾದರೆ, ಅದರಲ್ಲಿ ಪರಿಶಿಷ್ಟ ಪಂಗಡದವರು ಗಳಿಗೆ ೧೫ ಕ್ಷೇತ್ರಗಳು. ಅವುಗಳಲ್ಲಿ ವಿಶೇಷವಾಗಿ ರಾಯಚೂರು ಜಿಲ್ಲೆಯಲ್ಲಿ ೪ ಜನ ಪರಿಶಿಷ್ಟ ಪಂಗಡದ ವಿಧಾನಸಭಾ ಸದಸ್ಯರನ್ನು ಹೊಂದಿದೆ. ಆದರೆ ಏನು ಪ್ರಯೋಜನ. ಇಲ್ಲಿನ ಜನರ ಗೋಳು ಕೇಳುತ್ತಿಲ್ಲ ಎಂಬುದು ನಡುಗಡ್ಡೆಗಳ ಜನರ ಅಭಿಪ್ರಾಯವಾಗಿದೆ. ವಿಧಾನಸಭೆಯ ಸದಸ್ಯರು ಲೋಕಸಭೆಯ ಸದಸ್ಯರು ಯಾವತ್ತು ಇಲ್ಲಿಗೆ ಬಂದು ಸಮಸ್ಯೆಗಳನ್ನೇ ಕೇಳಿಲ್ಲ  ಅಂದ ಮೇಲೆ ಇಲ್ಲಿನ ಕಷ್ಟ ಅವರಿಗೆ ಏನು ಗೊತ್ತು ಎಂದು ಸ್ಥಳೀಯರು ಹೇಳುತ್ತಾರೆ. ಇನ್ನು ನೀಲಕಂಠರಾಯನ ಗಡ್ಡೆಯಲ್ಲಿ ಚುನಾವಣೆಗೂ ಅವರಿಗೂ ಸಂಬಂಧವಿಲ್ಲವೆಂದು, ರಾಜಕೀಯ ವ್ಯಕ್ತಿಗಳಿಗೆ ಅವರಿಗೆ ಸಂಬಂಧವಿಲ್ಲದಂತೆ ಬದುಕುತ್ತಿದ್ದಾರೆ. ಇಲ್ಲಿರುವ ಎಲ್ಲ ಜನರು ಬೇಡರೇ. ಇಡೀ ಗಡ್ಡೆಯ ತುಂಬಾ ಇವರೇ ಇದ್ದಾರೆ. ಬೇಡರ ರಾಜಕೀಯದಿಂದಲೇ ಚರಿತ್ರೆಯನ್ನು ಮೆರೆದಿರುವ ಯಾದಗಿರಿ ಜಿಲ್ಲಾಸುರಪುರ ಸಂಸ್ಥಾನ ತನ್ನ ಒಡಲಾಳದಲ್ಲಿರುವ ನೀಲಕಂಠರಾಯನ ಗಡ್ಡೆಯನ್ನು ಗುರುತಿಸದೇ ಇರುವುದು ಇದೊಂದು ದುರಂತದ ಕಥೆಯಾಗಿದೆ. ಪ್ರಸ್ತುತವಾಗಿ ಬೇಡ ನಾಯಕರ ರಾಜಕೀಯ ಇದ್ದರೂ ಕೂಡ ತಮ್ಮ ಬದುಕನ್ನು ಕಟ್ಟಿಕೊಳ್ಳಲಿಕ್ಕೆ ಆಗದೇ ಇರುವುದು ಮತ್ತು ಆ ನಾಯಕರು ಕೂಡ ಇವರ ಸಮಸ್ಯೆಗಳನ್ನು ಗುರುತಿಸದೇ ಇರುವುದು ಶೋಚನೀಯ ಸಂಗತಿಯಾಗಿದೆ. ಇವರಿಗೆ ಚುನಾವಣೆ

ಪತ್ರನೇ ಇಲ್ಲ ಅಂದಮೇಲೆ ಇವರ ಅವಶ್ಯಕತೆ ಆ ರಾಜಕೀಯ ನಾಯಕರಿಗೆ ಇಲ್ಲವೆಂದು ಅರ್ಥ ವಾಗುತ್ತದೆ.

ಇನ್ನು ರಾಯಚೂರು ಜಿಲ್ಲೆಯಲ್ಲಿ ಬರುವ ಲಿಂಗಸೂರು ತಾಲೂಕಿನ ಗುಂತುಗೊಳ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರುವ ಜಲದುರ್ಗ, ಹಂಚಿನಾಳ, ಯರಗೋಡಿ, ಯಳಗುಂದ, ಕಡದರಗಡ್ಡೆ ಈ ಗಡ್ಡೆಗಳಲ್ಲಿ ಬರುವ ಸಮುದಾಯಗಳು ಚುನಾವಣೆ ಗುರುತಿನ ಪತ್ರ ಪಡೆದರು ಯಾವುದೇ ಸೌಲಭ್ಯಗಳಿಲ್ಲದೇ ಅನೇಕ ಸಮಸ್ಯೆಗಳಿಗೆ ಗುರಿಯಾಗಿದ್ದಾರೆ. ಇಲ್ಲಿಗೆ ಬರುವ ಎಲ್ಲಾ ಸೌಲಭ್ಯಗಳನ್ನು ಗ್ರಾಮ ಪಂಚಾಯಿತಿ ಪ್ರತಿನಿಧಿಗಳು ನುಂಗಿ ನೀರು ಕುಡಿಯುತ್ತಿದ್ದಾರೆ ಎಂದು ಅಲ್ಲಿನ ಜನರು ಕ್ಷೇತ್ರಕಾರ್ಯಕ್ಕೆ ಹೋದಾಗ ತಮ್ಮ ಅಳಲನ್ನು ತೋಡಿಕೊಂಡರು.

ದೀಪದ ಕೆಳಗೆ ಕತ್ತಲು ಎನ್ನುವಂತೆ ೪ ಜನ ಪರಿಶಿಷ್ಟ ಪಂಗಡದ ವಿಧಾನಸಭೆಯ ಸದಸ್ಯರನ್ನು ಹೊಂದಿದ್ದರು, ಕೇವಲ ಮತದ ಆಸೆ, ಆಧಿಕಾರದ ದಾಹದಿಂದ ಮುಂದುವರಿದ ಬಲಿಷ್ಠ ಸಮುದಾಯಗಳ ಕೈಗೊಂಬೆಗಳಾಗಿ ಕೆಲಸ ಮಾಡುತ್ತಿದ್ದಾರೆ. ಇದರಿಂದ ಡಾ.ಬಿ.ಆರ್.ಅಂಬೇಡ್ಕರ್ ಅವರು ರಾಜಕೀಯ ಮೀಸಲಾತಿ ಕಲ್ಪಿಸುವುದರ ಮುಖಾಂತರ ಆ ಸಮುದಾಯಗಳ ಬೆಳವಣಿಗೆಯಾಗುತ್ತದೆ ಎಂದು ತಿಳಿದು ರಾಜಕೀಯ ಮೀಸಲಾತಿ ಕಲ್ಪಿಸಿದರೆ, ಸಂವಿಧಾನದ ಆಶಯಕ್ಕೆ ಧಕ್ಕೆ ತರುವಂತೆ ಶೋಷಿತರ ಪರವಾಗಿ ನಿಲ್ಲಬೇಕಾಗಿದ್ದ ಜನಪ್ರತಿನಿಧಿಗಳು ಅಧಿಕಾರದ ದುರಾಸೆಯಿಂದ ಬಲಿಷ್ಠ ಸಮುದಾಯಗಳ ಕೈಯಲ್ಲಿ ಕೆಲಸ ಮಾಡುವ ಗುಲಾಮರಾಗುತ್ತಿದ್ದಾರೆ. ಇದರಿಂದ ರಾಜಕೀಯ ಸೌಲಭ್ಯ ಪಡೆದಿದ್ದರೆ ಕೇವಲ ಒಬ್ಬ ವ್ಯಕ್ತಿಯಾದರೆ ಮೀಸಲಾತಿ ಸೌಲಭ್ಯ ಪಡೆದ ವ್ಯಕ್ತಿ ಎಲ್ಲರಿಗೂ ಅವಕಾಶ ಒದಗಿಸುವುದರಲ್ಲಿ ವಿಫಲ. ಈ ರೀತಿಯಾಗಿ ಜನಪ್ರತಿನಿಧಿಗಳು ತಮಗೆ ಇರುವ ಅಧಿಕಾರವನ್ನು ಸರಿಯಾದ ರೀತಿಯಲ್ಲಿ ಬಳಕೆ ಮಾಡದೆ ಕೆಲವೇ ಕೆಲವು ಜನರ ಉದ್ಧಾರಕ್ಕಾಗಿ ಮೀಸಲಾತಿಯಲ್ಲಿ ಆಯ್ಕೆಯಾಗಿ ಮೀಸಲು ಕ್ಷೇತ್ರದ ಜನರಿಗೆ ಸೌಲಭ್ಯ ಒದಗಿಸುವುದರಲ್ಲಿ ವಿಫಲವಾಗಿ ಇಡೀ ಮೀಸಲಾತಿ ನೀತಿಯನ್ನು ತಲೆಕೆಳಗೆ ಆಗುವಂತೆ ಮಾಡುತ್ತಿದ್ದಾರೆ. ಇದರಿಂದಾಗಿ ಪರಿಶಿಷ್ಟ ಪಂಗಡದವರ ಮತ್ತು ಹಿಂದುಳಿದವರ ಬದುಕು ಒಂದು ಕಡೆಯಾದರೆ ನಡುಗಡ್ಡೆಗಳಲ್ಲಿ ನೆಲೆಸಿರುವವರ ಬದುಕು ನಿರೀಕ್ಷಿತ ಪ್ರಮಾಣದಲ್ಲಿ ಸುಧಾರಣೆಯಾಗದಿರುವುದು ವಿಶಾದನೀಯ ಸಂಗತಿಯಾಗಿದೆ.

ಇನ್ನು ರಾಯಚೂರು ಜಿಲ್ಲಾ ವ್ಯಾಪ್ತಿ ಒಳಗಡೆ ಬರುವ ನಡುಗಡ್ಡೆಗಳಾದ ರಾಮಗಡ್ಡೆ, ಕುರವಪುರಗಡ್ಡೆ, ನಾರದಗಡ್ಡೆ, ರಾಮಗಡ್ಡೆ ಕೊರ್ತಕುಂಡ ಗ್ರಾಮಪಂಚಾಯಿತಿ ವ್ಯಾಪ್ತಿಗೆ ಬರುತ್ತವೆ. ಕುರುವಪುರಗಡ್ಡೆ ಆತಕೂರ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಒಳಪಡುತ್ತದೆ. ನಾರದಗಡ್ಡೆ ಬೂರ್ದಿಸಾಡು ವ್ಯಾಪ್ತಿಯೊಳಗಡೆ ಬರುತ್ತದೆ. ಈ ಗಡ್ಡೆಗಳಿಗೆ ಯಾವುದೇ ರೀತಿಯ ವಾಹನಗಳ ಸೌಲಭ್ಯವಿಲ್ಲ. ಈ ಗಡ್ಡೆಗಳು ಸಂಪೂರ್ಣವಾಗಿ ನದಿಯನ್ನು ದಾಟಲು ತೆಪ್ಪಗಳನ್ನು ಅವಲಂಬಿಸಿವೆ. ಈ ಗಡ್ಡೆಗಳಲ್ಲಿ

ನಾರದಗಡ್ಡೆಯಲ್ಲಿ ಜನರ ವಾಸವಿಲ್ಲ. ಹಿಂದಿನ ಕಾಲದಲ್ಲಿ ಜನರು ವಾಸವಿದ್ದ ಕೆಲವು ಕುರುಹುಗಳನ್ನು ಕಾಣಬಹುದು. ಕೆಲವರು ಬೂರ್ದಿಪಾಡುವಿನಲ್ಲಿ ವಾಸವಾಗಿದ್ದಾರೆ ಎಂದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಇನ್ನುಳಿದ ರಾಮಗಡ್ಡೆಯಲ್ಲಿ ಜನರು ಕೂರ್ತಕೊಂಡಕ್ಕೆ ಸ್ಥಳಾಂತರಗೊಂಡಿದ್ದರೆ, ಇನ್ನು ಕೆಲವರು ಒಂದೊಂದು ಎರಡು ತಿಂಗಳು ಮೂರು ತಿಂಗಳ ಬೆಳೆ ಬಂದಾಗ ಗಡ್ಡೆಯಲ್ಲಿ ವಾಸ ಮಾಡುತ್ತಾರೆ. ಇವರು ಕೂಡ ಗಡ್ಡೆಯಲ್ಲಿ ಪ್ರತಿಯೊಬ್ಬರು ಗುರುತಿನ ಪತ್ರಗಳನ್ನು ಪಡೆದಿಲ್ಲ ಎಂದು ಹೇಳಬಹುದು. ಮತ್ತು ಕುರವಪುರಗಡ್ಡೆಯಲ್ಲಿಯೂ ಕೂಡ ಸಂಪೂರ್ಣ ಜನರು ಗುರುತಿನ ಚೀಟಿ ಪಡೆದಿಲ್ಲ. ಈ ಗಡ್ಡೆಯಲ್ಲಿ ಕೆಳವರ್ಗದ ಜನರು ಅಸಹಾಯಕ ಸ್ಥಿತಿಯಲ್ಲಿ ಜೀವನ ಮಾಡುತ್ತಿದ್ದಾರೆ. ಈ ಗಡ್ಡೆಯಲ್ಲಿ ಗೊಲ್ಲ ಸಮುದಾಯದವರೇ ಅತೀ ಹೆಚ್ಚಿನ ಜನಸಂಖ್ಯೆಯಲ್ಲಿ ಇದ್ದಾರೆ. ಈ ಗಡ್ಡೆಯಲ್ಲಿರುವ ಎಲ್ಲಾ ಜಮೀನನ್ನು ಇದೇ ಸಮುದಾಯದವರೇ ಪಡೆದುಕೊಂಡಿದ್ದಾರೆ. ಗಡ್ಡೆಯಲ್ಲಿ ಬ್ರಾಹ್ಮಣರ ಅಗ್ರಹಾರವಿದೆ. ಇವರ ಎರಡು ಕುಟುಂಬಗಳು ಜಮೀನನ್ನು ಹೊಂದಿವೆ. ಮೂರು ಬೇಡರ ಮನೆಗಳಿದ್ದು, ಇಪ್ಪತ್ತೈದು ಹರಿಜನ ಮನೆಗಳಿದ್ದು, ಇಪ್ಪತ್ತೈದು ಮನೆಗಳು ಜಮೀನನ್ನು ಹೊಂದಿಲ್ಲ ಎಂದು ಹೇಳಬಹುದು. ಇವರು ಕೂಲಿಯನ್ನು ಆಧರಿಸಿ ಜೀವನವನ್ನು ಮಾಡುತ್ತಿದ್ದಾರೆ. ಯಾವುದೇ ಸರ್ಕಾರಿ ಸೌಲಭ್ಯವಿಲ್ಲದೇ, ಜೀವನ ಸಾಗಿಸುತ್ತಿದ್ದಾರೆ. ಗೊಲ್ಲ ಸಮುದಾಯದವರ ನೂರು ಮನೆಗಳಿವೆ. ಮೀಸಲಾತಿ ಆಧರಿಸಿ ಈಗ ಹರಿಜನರಲ್ಲಿ ಒಬ್ಬರನ್ನು ಪಂಚಾಯಿತಿ ಸದಸ್ಯರನ್ನಾಗಿ ಮಾಡಿದ್ದಾರೆ. ಅನಕ್ಷರಸ್ಥರು ಅನ್ನುವ ಕಾರಣಕ್ಕೆ ಬರುವ ಸೌಲಭ್ಯಗಳನ್ನು ಗೊಲ್ಲರೇ ದೋಚುತ್ತಿದ್ದಾರೆ. ಇವರಿಗೆ ಕೇಳಲು ಯಾವ ಮಾಹಿತಿ ಹಕ್ಕುಗಳು ಗೊತ್ತಿಲ್ಲ. ಆದಕಾರಣ ಈ ಸಮುದಾಯದವರು ಇಲ್ಲಿ ಒಂದು ಹೊತ್ತಿನ ಊಟಕ್ಕೆ ಪರದಾಡುವ ಪರಿಸ್ಥಿತಿ ಉಂಟಾಗಿದೆ. ಯಾವ ರಾಜಕಾರಣಿಗಳು ಕೂಡ ಗಡ್ಡೆಗೆ ಬರುವುದಿಲ್ಲ. ನಮ್ಮ ಸಮಸ್ಯೆಗಳನ್ನು ಕೇಳುವುದಿಲ್ಲ ಎಂದು ಜನರು ಹೇಳುತ್ತಾರೆ.

ಇನ್ನು ಮೇಲಿನ ಗಡ್ಡೆ, ದೇವರಗಡ್ಡೆ, ಇವು ಯಾದಗಿರಿ ಜಿಲ್ಲಾ ಸುರಪುರ ತಾಲೂಕು, ನಾರಾಯಣಪುರ ಗ್ರಾಮಪಂಚಾಯಿತಿ ವ್ಯಾಪ್ತಿಗೆ ಒಳಪಡುತ್ತಿವೆ. ಈ ಗಡ್ಡೆಗಳು ಸ್ವಲ್ಪ ಪರವಾಗಿಲ್ಲ ಎಂದು ಹೇಳಬಹುದು. ಯಾಕೆಂದರೆ ಈ ಗಡ್ಡೆ ನ್ಯಾಯಬೆಲೆ ಅಂಗಡಿಯನ್ನು ಹೊಂದಿದೆ. ಆದರೂ ಅಲ್ಲಿಯ ಗಡ್ಡೆಗಳಂತೆ ಇಲ್ಲಿ ಸಮಸ್ಯೆಗಳಿವೆ ಎಂದು ತಿಳಿಯುತ್ತದೆ. ಇಲ್ಲಿ ಕೂಡ ಸಂಪೂರ್ಣವಾಗಿ ಗುರುತಿನ ಚೀಟಿಗಳನ್ನು ಇನ್ನು ಪಡೆದಿಲ್ಲ ಎಂದು ಹೇಳಬಹುದು.

ಒಂದು ಪ್ರಮುಖ ಕಾರಣವೆಂದರೆ ನಡುಗಡ್ಡೆಗಳ ನಿವಾಸಿಗಳಿಗೆ ಯಾವುದೇ ವೈಭವದ ಬದುಕು ಬೇಕಾಗಿಲ್ಲ. ಇವರಿಗೆ ನಾಗರಿಕ ಸಂಪರ್ಕ, ಮೂಲಭೂತ ಅವಶ್ಯಕತೆ ಒದಗಿಸಿದರೆ ಸಾಕು ಎಂದು ಹೇಳುವರು. ಅವರ ಬೇಡಿಕೆ ಸಣ್ಣ ಬೇಡಿಕೆಗಳು. ಇಂದಿಗೂ ಪೂರೈಸಲು ಅಸಾಧ್ಯವಾಗಿದೆ. ಇದರೊಂದಿಗೆ ಸರ್ಕಾರಿ ಅಧಿಕಾರಿಗಳ ದಿವ್ಯ ನಿರ್ಲಕ್ಷ್ಯ, ಲಂಚಕೋರತನ, ರಾಜಕೀಯ ನಾಯಕರ ಪೊಳ್ಳು ಆಶ್ವಾಸನೆಗಳು, ಅಲ್ಲದೇ ನಡುಗಡ್ಡೆಗಳ ಕುರಿತು ವಸ್ತುನಿಷ್ಠ ಅಧ್ಯಯನಗಳ ಕೊರತೆ ಈ

ಜನರ ಪ್ರಗತಿಗೆ ಪ್ರಮುಖ ಅಡೆತಡೆಗಳಾಗಿವೆ ಎಂದು ಹೇಳಬಹುದು. "ಯಾರಿಗೆ ಬಂತು ಎಲ್ಲಿಗೆ ಬಂತು ನಲವತ್ತೇಳರ ಸ್ವಾತಂತ್ರ್ಯ ರಾಜಕಾರಣಿಗಳ ಓಟಿಗೆ ಬಂತು ಸ್ವಾತಂತ್ರ್ಯ" ಎನ್ನುವ ಸ್ಥಿತಿ ಇಲ್ಲಿನ ರಾಜಕಾರಣವಾಗಿದೆ.

**ನಡುಗಡ್ಡೆಗಳು ಮತ್ತು ಪ್ರಸ್ತುತ ಜಗತ್ತು**

ಕೃಷ್ಣಾನದಿ ತೀರದ ನಡುಗಡ್ಡೆಗಳನ್ನು ಪ್ರಸ್ತುತ ಜಗತ್ತಿಗೆ ಹೋಲಿಸಿ ನೋಡುವುದಾದರೆ ಇವತ್ತಿಗೂ ಕೂಡ ಆ ನಡುಗಡ್ಡೆಗಳ ಜೀವನ ಪರಿಸ್ಥಿತಿ ಹಾಗೆ ಉಳಿದಿದೆ. ಯಾವುದರಲ್ಲಿಯೂ ಬದಲಾವಣೆ ಕಂಡಿಲ್ಲ ಎಂದು ಹೇಳಬಹುದು. ಆಧುನಿಕ ಜಗತ್ತು ಎಷ್ಟೇ ಮುಂದುವರಿದರು, ಆ ನಡುಗಡ್ಡೆಗಳ ಜನರ ಬದುಕು ಅತಂತ್ರ ಸ್ಥಿತಿಯಲ್ಲಿ ಸಾಗಿದೆ. ಸರ್ಕಾರದ ಎಲ್ಲಾ ಸೌಲಭ್ಯಗಳಿಂದ ವಂಚಿತರಾಗಿ ಈ ದೇಶದ ಪ್ರಜೆಗಳೇ ಅಲ್ಲವೇನೊ ಎಂಬುವಂತೆ ಜೀವನ ಮಾಡುತ್ತಿದ್ದಾರೆ. ಸರ್ಕಾರವು ಕೂಡ ಒಬ್ಬ ಪ್ರಜೆಗೆ ನೀಡಬೇಕಾದ ಯಾವುದೇ ಸೌಲಭ್ಯವನ್ನು ಅವರಿಗೆ ನೀಡಿಲ್ಲ. ಈ ಆಧುನಿಕ ಜಗತ್ತಿನಲ್ಲಿ ಎಲ್ಲ ಬುಡಕಟ್ಟು ಸಮುದಾಯಗಳು ಸ್ವಲ್ಪಮಟ್ಟಿಗೆ ಬದಲಾವಣೆ ಹೊಂದಿವೆ. ಆದರೆ ಈ ನಡುಗಡ್ಡೆಗಳು ತಾವು ವಾಸಿಸುವ ನಡುಗಡ್ಡೆಗಳಿಗೆ ಹಾದಿಯ ಮಾರ್ಗವಿಲ್ಲದೇ ವಾಹನಗಳ ಸೌಲಭ್ಯವಿಲ್ಲದೇ ಈ ಜನರು ನದಿಯನ್ನು ತೆಪ್ಪದ ಮೂಲಕವೇ ಹಾದು ಹೋಗಬೇಕು. ನಮ್ಮ ಸಮಾಜ ಆಧುನಿಕತೆ ಕಂಡಿದ್ದರು, ಇಲ್ಲಿರುವ ಕೆಲವು ಗಡ್ಡೆಗಳಿಗೆ ಹಾದಿಯ ಮಾರ್ಗವಿಲ್ಲ. ಈಜುವುದರ ಮೂಲಕ ನಡುಗಡ್ಡೆಯನ್ನು ಸೇರುತ್ತಾರೆ. ಇಂತಹ ಗಡ್ಡೆಗಳೆಂದರೆ ನಾರದಗಡ್ಡೆ, ಕುರುವಪುರಗಡ್ಡೆ, ರಾಮಗಡ್ಡೆ, ನೀಲಕಂಠರಾಯನಗಡ್ಡೆ. ಈ ಗಡ್ಡೆಗಳು ಇವತ್ತಿಗೂ ಸಮಾಜಕ್ಕೆ ನಿಲುಕದ ಈ ಜನರ ಬದುಕು ಕಲ್ಪನೆಗೆ ಮೀರಿ ನಿಂತಿದೆ. ಅದರಲ್ಲಿ ಮಕ್ಕಳ ಮತ್ತು ಮಹಿಳೆಯರ ಸ್ಥಿತಿ ಹೀನಾಯವಾಗಿದೆ. ಉದಾ: ಮೊನ್ನೆ ತಾನೇ ನೀಲಕಂಠ ರಾಯನಗಡ್ಡೆಯ ಮಹಿಳೆಯೊಬ್ಬರು ತೆಪ್ಪ ಇಲ್ಲದ ಸಮಯದಲ್ಲಿ ತಾನೇ ನದಿಯನ್ನು ಈಜಿಕೊಂಡು ಬಂದು ಆಸ್ಪತ್ರೆಯಲ್ಲಿ ಮಗುವಿಗೆ ಜನ್ಮ ನೀಡಿದ್ದಾಳೆ. ಇಂತಹ ಸಂಗತಿ ನೋಡಿದ ಈ ಆಧುನಿಕ ಜಗತ್ತಿನಲ್ಲಿ ಇನ್ನು ಇಂತಹ ಸಮಸ್ಯೆಗಳನ್ನು ಎದರಿಸುವಂತಹ ಸಮುದಾಯಗಳು ಇದ್ದವು ಎನ್ನುವ ಪ್ರಶ್ನೆ ನಮ್ಮ ಆಧುನಿಕ ಜಗತ್ತಿನ ಸಮುದಾಯಗಳಿಗೆ ಯಕ್ಷ ಪ್ರಶ್ನೆಯಾಗಿ ಕಾಡುತ್ತಿದೆ.

ಬದಲಾವಣೆ ಎನ್ನುವುದು ನಿಸರ್ಗ ನಿಯಮ. ಈ ಗಡ್ಡೆಗಳಲ್ಲಿ ಜನಸಂಖ್ಯೆಯಲ್ಲಿ ಬದಲಾವಣೆಯನ್ನು ಮಾತ್ರ ಕಂಡಿದೆ. ಉಳಿದೆಲ್ಲವು ಹಾಗೇ ಇದೆ. ಹಿಂದೇ ಕೇವಲ ೧೦-೨೦ ಇದ್ದ ಕುಟುಂಬಗಳು ಈ ದಿನಗಳಲ್ಲಿ ೫೦, ೭೦, ೧೦೦ ಕುಟುಂಬಗಳಾಗಿವೆ. ಸಮಸ್ಯೆಗಳು ಹೆಚ್ಚಾಗುತ್ತಲಿವೆ, ಹೊರತು ಕಡಿಮೆಯಂತು ಇಲ್ಲ. ಇಲ್ಲಿ ಅರಣ್ಯ ಪ್ರದೇಶವು ಹೇರಳವಾಗಿತ್ತು. ಗಿಡ ಮರಗಳ ಪೊಟರೆಗಳಲ್ಲಿ ಕಾಡು ಪ್ರಾಣಿಗಳು ಅಧಿಕವಾಗಿದ್ದವು. ಆದರೆ ಇಂದು ಜನಸಂಖ್ಯೆಯ ಹೆಚ್ಚಳದಿಂದ ಅರಣ್ಯ ಪ್ರದೇಶ ಮಾಯವಾಗುತ್ತಿದೆ. ದಿನದ ಬೇಟೆಯಿಂದ ತುಂಬಿ ತುಳುಕುತ್ತಿದ್ದ ಪ್ರಾಣಿ ಸಂಕುಲ, ಇವತ್ತಿನ ದಿನದಲ್ಲಿ ಅಲ್ಪ ಪ್ರಮಾಣದಲ್ಲಿ ಕಾಣಬಹುದು.

ಈ ನಡುಗಡ್ಡೆಗಳಲ್ಲಿ ಇವತ್ತಿಗೂ, ಸಾಕಷ್ಟು ಸಮುದಾಯಗಳು ಗುಡಿಸಲುಗಳಲ್ಲಿ ಬದುಕುತ್ತಿದ್ದಾರೆ. ತಮ್ಮ ಪರಂಪರಾಗತವಾದ ಕೆಲವು ಆಚರಣೆಗಳನ್ನು ಜೀವಂತವಾಗಿ ಉಳಿಸಿಕೊಂಡು ಬಂದಿದ್ದಾರೆ. ತಲೆ ತಲಾಂತರದಿಂದ ಬಂದ ಸಮುದಾಯದ ಕುಲಕಸುಬುಗಳು ಆಧುನಿಕತೆಯ ಪ್ರಭಾವಕ್ಕೆ ಒಳಗಾಗದೇ, ಬಡಿಗತನ, ಕಮ್ಮಾರಿಕೆ ಕೆಲಸಗಳನ್ನು ಇಂದು ತಮ್ಮ ಪ್ರಾಚೀನ ಉಪಕರಣಗಳಿಂದಲೇ ಮಾಡುತ್ತಾರೆ. ಕೃಷಿಯಲ್ಲಂತೂ ಯಾವ ಆಧುನಿಕ ಉಪಕರಣಗಳನ್ನು ಬಳಸುವುದಿಲ್ಲ. ರೈತರೇ ಕೂಲಿಕಾರರು. ಎಲ್ಲ ಕೃಷಿ ಕೆಲಸಗಳನ್ನು ಮಾಡುತ್ತಾರೆ. ಇನ್ನು ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಎತ್ತಿನ ಬಂಡಿಗಳನ್ನು ತಮ್ಮ ಹೊಲ, ಮನೆಗೆ, ಕಾಳು ಕಡ್ಡಿಗಳನ್ನು ತರಲು ಉಪಯೋಗಿಸುತ್ತಾರೆ. ಇನ್ನು ಆಹಾರ ಪದ್ಧತಿಯಲ್ಲಿ ಕೂಡ ಬದಲಾವಣೆಯನ್ನು ಕಂಡಿಲ್ಲ. ಅದೇ ರೊಟ್ಟಿ, ಪಲ್ಯ, ಕಾಳು, ಜೋಳದ ನುಚ್ಚು, ಸಜ್ಜೆ ನುಚ್ಚು, ಸಾರು, ಅತಿ ಹೆಚ್ಚು ಊಟ ಮಾಡುತ್ತಾರೆ. "ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ" ಎಂಬಂತೆ ಆಧುನಿಕ ಜಗತ್ತಿನ ಮೋಹಕತೆಗೆ ಜನ ಇನ್ನೂ ಇಲ್ಲಿ ಮರುಳಾಗಿಲ್ಲ ಎಂದು ಕ್ಷೇತ್ರಕಾರ್ಯದಿಂದ ತಿಳಿಯುತ್ತದೆ.

ಮನುಷ್ಯನ ಹುಟ್ಟಿನಿಂದ ಸಾವಿನವರೆಗೆ ಆಚರಣೆಯಲ್ಲಿದ್ದ ಹಲವಾರು ಆಚರಣೆಗಳು ಇಂದಿನ ಸಮಾಜದಲ್ಲಿ ಮಾಯವಾಗುತ್ತಲಿವೆ. ಇಲ್ಲಿ ಸೂಲಗಿತ್ತಿಯರ ಮೂಲಕ ಹೆರಿಗೆ ಮನೆಯಲ್ಲಿಯೇ ಆಗಿ ಮಗುವಿಗೆ ಮತ್ತು ತಾಯಿಗೆ ಆಯಾ ಧರ್ಮಕ್ಕನುಸಾರವಾಗಿ ವಿವಿಧ ಆಚರಣೆಗಳನ್ನು ಮಾಡಲಾಗುತ್ತಿದೆ. ಮಗುವಿನ ಜನನ ಸಮಯದಲ್ಲಿ ಮಾಂಸವನ್ನು ಮನೆಯ ಮುಂಬಾಗಿಲ ಬಲಭಾಗ ದಲ್ಲಿ ನೆಲಕ್ಕೆ ಹುಗಿದು ಹಾಕುತ್ತಾರೆ. ಈ ಆಚರಣೆ ಇಲ್ಲಿ ಇನ್ನು ಹಾಗೆ ಉಳಿದಿದೆ. ಆಧುನಿಕತೆಯಿಂದ ಆಸ್ಪತ್ರೆಯಲ್ಲಿ ನಡೆಯುವುದರಿಂದ ಹೆರಿಗೆ ಇಂತಹ ಆಚರಣೆ ಇಂದು ನಶಿಸಿ ಹೋಗಿರುವುದನ್ನು ಕಾಣುತ್ತೇವೆ. ಋತುಮತಿಯಾದ ಸಮಯದಲ್ಲಿ ಪ್ರತಿದಿನ ಕೂಡಿಸಿ ಸೋಬಾನ ಪದ ಹಾಡುವ ಆಚರಣೆ ಆಧುನಿಕತೆಯಿಂದ ಅಳಿದು ಹೋಗುತ್ತದೆ. ಆದರೆ ಇಲ್ಲಿ ತನ್ನ ಸಂಪ್ರದಾಯ ಉಳಿಸಿಕೊಂಡು ಬಂದಿದೆ. ಹಾಗೆಯೇ ಬಾಳ ಸಂಗಾತಿಯ ಆಯ್ಕೆಯಲ್ಲಿ ವರ ಮತ್ತು ಕನ್ಯೆಯರನ್ನು ಗುರುತಿಸಿ ನಿಶ್ಚಯಿಸುವುದು ಹಿರಿಯರ ಕೆಲಸವಾಗಿದೆ. ಇಂದು ಆಧುನಿಕತೆಯೊಳಗೆ ಹಿರಿಯರ ಸಲಹೆ ಸೂಚನೆಗೆ ಯಾವ ಬೆಲೆ ಮತ್ತು ಗೌರವಗಳಿಲ್ಲ ಎನ್ನುವುದನ್ನು ನಾವು ಕಾಣಬಹುದು. ಆದರೆ ನಡುಗಡ್ಡೆಗಳಲ್ಲಿ ಹಿರಿಯರ ಸಲಹೆ ಮತ್ತು ಸೂಚನೆಗಳಿಗೆ ತುಂಬ ಗೌರವವಿರುವುದನ್ನು ನೋಡಬಹುದು.

ಮಗುವಿನ ನಾಮಕರಣದ ಹೆಸರುಗಳು ಮನೆಯ ಹಿರಿಯರ ಅಥವಾ ದೇವರ ಹೆಸರು ಇಡುವುದು ಸಂಪ್ರದಾಯವಾಗಿದೆ. ಗಡ್ಡೆಗಳಲ್ಲಿ ನಡೆಯುವ ಉತ್ಸವಗಳಲ್ಲಿ ಗಡ್ಡೆಗಳ ಜನರು ತನುಮನ ಧನದಿಂದ ಪಾಲ್ಗೊಂಡು ಎಲ್ಲ ಕೆಲಸ ಕಾರ್ಯಗಳನ್ನು ಭೇದವೆಣಿಸದಂತೆ ಜವಾಬ್ದಾರಿಯಿಂದ ನಿರ್ವಹಿಸುತ್ತಾರೆ. ಇನ್ನೊಬ್ಬರ ಮನೆಯ ನ್ಯಾಯವನ್ನು ತಮ್ಮ ಮನೆಯ ನ್ಯಾಯದಂತೆ ಅದನ್ನು

ಹಿರಿಯರು ಬಗೆಹರಿಸುತ್ತಾರೆ. ಅತಿ ಹೆಚ್ಚು ನ್ಯಾಯಗಳನ್ನು, ಗಡ್ಡೆಗಳಲ್ಲಿ ತಮ್ಮತಮ್ಮಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಪೊಲೀಸ್ ಕಚೇರಿಗೆ ಹೋಗುವುದಿಲ್ಲ ಎಂದು ಸ್ಥಳೀಯರು ಕ್ಷೇತ್ರಕಾರ್ಯಕ್ಕೆ ಹೋದಾಗ ಹೇಳಿದ್ದುಂಟು. ಇದುವರೆಗೂ ನಮ್ಮ ಗಡ್ಡೆಗಳಲ್ಲಿ ಜಗಳ ತೆಗೆದುಕೊಂಡು ನಾವು ಕಚೇರಿಗೆ ಹೋಗಿಲ್ಲ, ನಾವೇ ಬಗೆಹರಿಸಿಕೊಳ್ಳುತ್ತೇವೆ ಎಂದು ಗಡ್ಡೆಯ ಮುಖ್ಯಸ್ಥರು ತಿಳಿಸಿದರು.

ಈ ಗಡ್ಡೆಗಳಲ್ಲಿ ಇವತ್ತಿಗೂ ನೆಲಮೂಲ ಸಂಸ್ಕೃತಿಯನ್ನು ಗೌರವಿಸಿ ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಹೊರ ಜಗತ್ತಿನಲ್ಲಿ ಎಷ್ಟೊಂದು ವಿಚಿತ್ರ ವಿದೇಶಿಯ ಸಂಸ್ಕೃತಿಗೆ ಜನರು ಮಾರು ಹೋಗುತ್ತಾರೆ. ಆದರೆ ಈ ನಡುಗಡ್ಡೆಗಳಲ್ಲಿ ತನ್ನ ಆಚರಣೆ ಶೈಲಿ ಬೇರೆ ಬೇರೆ ರೂಪಗಳನ್ನು ಪಡೆದುಕೊಂಡಿಲ್ಲ. ಆಚರಣೆಯ ಉದ್ದೇಶ, ಗುರಿ, ಆಶಯ ಒಂದೇ ಆಗಿದೆ. ಆಚರಣೆಗಳನ್ನು ಆಧುನಿಕತೆಯ ಕಾಲ ತನ್ನೊಳಗೆ ಹಿಡಿದಿಟ್ಟುಕೊಳ್ಳುವ ಸಂದರ್ಭ, ಎಂತಹ ಅತ್ಯಾಧುನಿಕತೆಯೇ ಬಂದರು ಇಲ್ಲಿನ ಜನರು ಆಚರಣೆಗಳಿಗೆ, ನಂಬಿಕೆಗಳಿಗೆ ತಲೆಬಾಗಿದಂತಿದೆ. ಭಕ್ತಿ, ನಂಬಿಕೆ ಜನರಲ್ಲಿ ಅಚ್ಚಳಿಯದೇ ಉಳಿದು ಬಂದಿದೆ.

ಅಪಾರವಾದ ಜನಪದ ಸಾಹಿತ್ಯ ಈ ನಡುಗಡ್ಡೆಗಳ ಜನರಲ್ಲಿ ತುಂಬಿದೆ. ಇಂದು ಅದರ ಪ್ರಭಾವ ಕ್ಷೀಣಿಸುತ್ತಿದೆ. ಇಂದಿನ ಆಧುನಿಕತೆಯ ಪ್ರಭಾವದಿಂದ ಎಲೆಕ್ಟ್ರಾನಿಕ್ ಉಪಕರಣಗಳ ಬಳಕೆ ಹೆಚ್ಚಾಗುತ್ತಿದ್ದು ಕಾಲಘಟ್ಟದಲ್ಲಿ ಜನಪದ ಕಥೆ, ಗಾದೆ ಮತ್ತು ಒಗಟುಗಳ ಸ್ಥಾನವನ್ನು ಟೀವಿ, ರೇಡಿಯೋ, ಮೊಬೈಲ್‌ಗಳು ಆಕ್ರಮಿಸಿಕೊಳ್ಳುತ್ತಿವೆ. ಆದರೆ, ನಾನು ಅಧ್ಯಯನಕ್ಕೆ ಒಳಪಡಿಸಿರುವ ಕೆಲವು ಗಡುಗಡ್ಡೆಗಳಲ್ಲಿ ವಿದ್ಯುತ್ ಸಂಪರ್ಕವೇ ಇಲ್ಲ. ವಿದ್ಯುತ್ ಸಂಪರ್ಕ ಇಲ್ಲ ಅಂದ ಮೇಲೆ, ಟಿವಿ, ಮೊಬೈಲ್‌ಗಳ ಬಳಕೆ ಅಲ್ಲಿ ಇಲ್ಲ. ಇದು ಕೇಳಿದರೆ ನಿಮಗೆ ಆಶ್ಚರ್ಯವೆನಿಸಬಹುದು. ನಾವು ಕ್ಷೇತ್ರಕಾರ್ಯಕ್ಕೆ ಹೋದಾಗ, ನೀಲಕಂಠರಾಯನ ಗಡ್ಡೆಯಲ್ಲಿ ಪ್ರತಿಯೊಬ್ಬರನ್ನು ಭೇಟಿ ಮಾಡಿದಾಗ, ಯಾರ ಹತ್ತಿರವೂ ಮೊಬೈಲ್ ಇಲ್ಲದನ್ನು ನೋಡಿ ನನಗೆ ಆಶ್ಚರ್ಯವೆನಿಸಿತ್ತು. ಈ ಜಗತ್ತಿನಲ್ಲಿ ಬದುಕುವ ಜನರು ಮೊಬೈಲ್ ಇಲ್ಲದ ವ್ಯಕ್ತಿಗಳು ಯಾರು ಇಲ್ಲ, ಒಂದು ದಿನ ಬೇಕಾದರೆ ಉಪವಾಸ ಇರುತ್ತಾರೆ. ಮದುವೆ ಮಾಡಿಕೊಂಡ ಹೆಂಡತಿಯನ್ನು ಬೇಕಾದರೆ ಒಂದು ತಾಸು ಬಿಟ್ಟು ಜೀವನ ಮಾಡುತ್ತಾರೆ. ಆದರೆ ಮೊಬೈಲ್ ಬಿಟ್ಟು ಮಾತ್ರ ಒಂದು ಕ್ಷಣವು ಯಾವ ವ್ಯಕ್ತಿಯು ಇರುವುದಕ್ಕೆ ಇಷ್ಟ ಪಡಲಾರದಂತೆ ಹೊರಜಗತ್ತು ಮುಂದುವರಿದಿದೆ. ಇಂತಹ ಸಂದರ್ಭಗಳಲ್ಲಿ ಈ ನಡುಗಡ್ಡೆಗಳಲ್ಲಿ ಯಾವುದು ಗಮನಕ್ಕೆ ಬರದೇ ಸೀಮೆ ಎಣ್ಣೆಯ ಬೆಳಕಿನಲ್ಲಿ ಜೀವನ ಮಾಡುತ್ತಿದ್ದಾರೆ. ಇದಕ್ಕೆಲ್ಲ ಶಿಕ್ಷಣ ಪಡೆಯದೇ ಇರುವುದು ಪ್ರಮುಖ ಕಾರಣವೆಂದು ಹೇಳಬಹುದು. ಬೈಕ್ ಕಾರುಗಳಂತಹ ವಾಹನಗಳನ್ನು ಹೊರಜಗತ್ತಿನ ಜನರು ತಮ್ಮ ಜೀವನಕ್ಕೆ ರೂಢಿಸಿಕೊಂಡಿದ್ದಾರೆ. ನಡುಗಡ್ಡೆಗಳಲ್ಲಿ ಇನ್ನು ಕಾಲ್ನಡುಗೆಯೇ ಬೈಕ್, ಕಾರುಗಳಾಗಿವೆ.

ಈ ನಡುಗಡ್ಡೆಗಳ ಜನರ ಜೀವನವು ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕವಾಗಿ ಹಿಂದುಳಿದಿದೆ. ಮನೆಗಳಲ್ಲಿ ಪಿತೃ ಪ್ರಧಾನತೆಯನ್ನು ಕಾಣಬಹುದು. ಅವಿಭಕ್ತ ಕುಟುಂಬಗಳು ಹೆಚ್ಚಾಗಿರುವುದನ್ನು ಈ ನಡುಗಡ್ಡೆಗಳಲ್ಲಿ ಕಾಣಬಹುದು. ಪ್ರಸ್ತುತ ಪರಿಸರದಲ್ಲಿ ಸಮಾಜದ ಕನಿಷ್ಠ ಘಟಕವಾದ ಕುಟುಂಬವು ಆಧುನಿಕತೆಯ ಸ್ವಾರ್ಥತನ ಪ್ರಭಾವದಿಂದ ತನ್ನ ಸ್ವರೂಪವನ್ನು ಹೊರಗಿನ ಹಳ್ಳಿಗಳು ಬಹುಪಾಲು ಬದಲಾಯಿಸಿಕೊಂಡಿವೆ. ಅವಿಭಕ್ತ ಕುಟುಂಬದ ಸ್ಥಾನದಲ್ಲಿ ವಿಭಕ್ತ ಕುಟುಂಬಗಳು ಸ್ಥಾಪನೆಯಾಗಿವೆ. ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬಗಳು ತುಂಬಾ ವಿರಳವಾಗಿವೆ. ಆಧುನಿಕತೆಯ ಕಾಲಘಟ್ಟದಲ್ಲಿ ಅವಿಭಕ್ತ ಕುಟುಂಬದ ಪರಿಕಲ್ಪನೆಯೇ ಅಪ್ರಸ್ತುತವಾಗಿ ಮಾರ್ಪಟ್ಟಿದೆ. ಆದರೆ ಗಡ್ಡೆಗಳಲ್ಲಿ ವಿಭಕ್ತ ಕುಟುಂಬಗಳಲ್ಲೇ ಜೀವನ ಸಾಗಿಸುತ್ತವೆ. ಇದು ವಿಶೇಷವಾದ ಸಂಗತಿಯೆಂದು ಹೇಳಬಹುದು.

ಜಾಗತೀಕರಣದ ಮಾಯಾಜಾಲಕ್ಕೆ ಒಳಗಾಗುತ್ತಿರುವ ಇಂದಿನ ಜೀವನದಲ್ಲಿ ಸಾಂಪ್ರದಾಯಿಕ ಕೃಷಿಯನ್ನೇ ಹೆಚ್ಚಾಗಿ ಅನುಸರಿಸುವ ಇಲ್ಲಿನ ಜನರು ಕೃಷಿಯಲ್ಲಿನ ಸಂಪ್ರದಾಯಗಳನ್ನೆಲ್ಲ ಆಚರಿಸುತ್ತಾ ಬಂದಿದ್ದಾರೆ. ಇಲ್ಲಿ ಕೃಷಿ ಕೆಲಸಗಳನ್ನು ಆಧುನಿಕ ಯಂತ್ರೋಪಕರಣಗಳಿಂದ ಮಾಡುವುದಿಲ್ಲ. ಇಲ್ಲಿನ ಎಷ್ಟೋ ಜನರು ಭೂಮಿಯಿಲ್ಲದೆ ಕೂಲಿ ಕೆಲಸ ಮಾಡಿ ಜೀವನ ಸಾಗಿಸುತ್ತಾರೆ. ಒಂದು ವೇಳೆ ಯಂತ್ರೋಪಕರಣಗಳನ್ನು ಬಳಸಿ ಕೆಲಸ ಮಾಡುವುದೇ ಆಗಿದ್ದರೇ ಇಲ್ಲಿನ ಜನ ಹೊಟ್ಟೆಗೆ ಬಟ್ಟೆ ಹಾಕಿಕೊಂಡು ಮಲಗಬೇಕಾಗಿತ್ತು ಕೂಲಿಕಾರರು. ಇದು ಇನ್ನು ಇಲ್ಲಿ ನಡೆದಿಲ್ಲ ಎಂದು ಹೇಳಬಹುದು.

ಇಲ್ಲಿ ಮೂರು ನಾಲ್ಕು ದಶಕಗಳು ಕಳೆದರೂ ಕೃಷಿ ಪದ್ಧತಿ ಹಾಗೇ ಉಳಿದಿದೆ. ಅಂದರೆ ಕೃಷಿಯಲ್ಲಿ ಬದಲಾವಣೆ ಕಂಡಿಲ್ಲ. ಸಾಮಾನ್ಯವಾಗಿ ಬೆಳೆಯುವ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ವಾಣಿಜ್ಯ ಬೆಳೆಗಳನ್ನು ಅಳವಡಿಸಿಕೊಳ್ಳದೆ ಇರುವುದೇ ಇವರ ಆರ್ಥಿಕ ಸ್ಥಿತಿ ಕೆಳಮಟ್ಟದಲ್ಲಿದೆ ಎನ್ನಬಹುದು. ಸಾಂಪ್ರದಾಯಿಕ ಸಾವಯವ ಕೃಷಿ, ಸಹಜ ಕೃಷಿ ಪದ್ಧತಿಗಳಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡುವ ಮುಯ್ಯಾಳು ಪದ್ದತಿ ಇದೆ.

ಒಟ್ಟಾರೆ ಈ ನಡುಗಡ್ಡೆಗಳ ಸಾಮಾಜಿಕ ವ್ಯವಸ್ಥೆ, ಆರ್ಥಿಕ ಸ್ಥಿತಿಗತಿ, ಶೈಕ್ಷಣಿಕ ಬದುಕು, ರಾಜಕೀಯ ಆಡಳಿತ, ಇವೆಲ್ಲದರಲ್ಲಿ ಇವರ ಜೀವನ ಶೈಲಿ ಬದಲಾವಣೆಯನ್ನು ಕಾಣದೇ ನಿಂತ ನೀರಿನಂತೆ ಇವರ ಸಮಸ್ಯೆಗಳು ಸರಮಾಲೆಯಾಗಿವೆ. ಶಿಕ್ಷಣದಿಂದ ವಂಚಿತರಾಗಿ ಬೇರೆ ಊರಿಗೆ ಹೋಗಿ ಕಲಿಯಲು ಸಹ ಅನುಕೂಲವಿಲ್ಲ. ನದಿ ಈಜಿ ಹೋಗಬೇಕು. ಅದು ಹೇಗೆ ಸಾಧ್ಯ ಮಕ್ಕಳಿಂದ. ಇಲ್ಲಿ ಅನೇಕ ಕುಟುಂಬಗಳು ಅನಕ್ಷರಸ್ಥರು. ಆದರೆ ಶಿಕ್ಷಣವು ಎಲ್ಲ ವರ್ಗಗಳ ಸ್ವತ್ತು ಎಂದು ಹೇಳುವುದು. ಗಡ್ಡೆಗಳ ಜನರ ಶಿಕ್ಷಣ ವ್ಯವಸ್ಥೆ ಇಲ್ಲ. ಇಲ್ಲಿಯ ಆಡಳಿತದ ಬಗ್ಗೆ ಹೇಳಬೇಕೆಂದರೆ ಆಡಳಿತ ವ್ಯವಸ್ಥೆ ಅಧಿಕಾರಿ ವರ್ಗಗಳ ನಡುವಿನ ರಾಜಕೀಯ ವ್ಯಕ್ತಿಗಳ ನಡುವಿನ ಪರಸ್ಪರ ಸಂಬಂಧದಿಂದಲೂ ಇಲ್ಲಿನ ಜನರ ಸಮಸ್ಯೆ ಬಗೆಹರಿದಿಲ್ಲ. ಆಡಳಿತ ಸ್ವರೂಪ ಬದಲಾವಣೆ

ಕಂಡಿಲ್ಲ. ಈ ಗಡ್ಡೆಗಳ ಜನರು ತಾವೆಲ್ಲರೂ ಪರಸ್ಪರ ಒಬ್ಬರಿಗೊಬ್ಬರು ಅಧೀನರಾಗಿ ಬಾಳುತ್ತಿರುವರು. ಈ ಆಧುನಿಕತೆಯ ಸುಂದರ ತಳಕು ಬಳುಕಿನ ಬಣ್ಣದ ಲೋಕವನ್ನು ಕಣ್ಣು ತೆರೆದು ನೋಡದೇ ನಡುಗಡ್ಡೆಯಲ್ಲಿ ಕಣ್ಣಿಗೆ ಬಟ್ಟೆಯನ್ನು ಕಟ್ಟಿಕೊಂಡು ಕತ್ತಲೆಯ ಪ್ರಪಂಚವೇ ನಮ್ಮದು ಎಂದು ಭಾವಿಸಿರುವರು.

ಹಿಂದೆ ಈ ಗಡ್ಡೆಗಳು ತೀರ ನಿಕೃಷ್ಟ ಬದುಕನ್ನು ಮಾಡುತ್ತಿದ್ದವು. ಈಗ ಸ್ವಲ್ಪ ಪರವಾಗಿಲ್ಲ. ಕೆಲವು ನಡುಗಡ್ಡೆಗಳು ಅಂದರೆ ಮೇಲಿನ ಗಡ್ಡೆ, ದೇವರಗಡ್ಡೆ ಮೊದಲು ನದಿ ಈಜಿ ಬೇರೆ ಗ್ರಾಮಗಳಿಗೆ ಹೋಗಬೇಕಾಗಿತ್ತು. ಈಗ ದಾರಿ ಮಾರ್ಗವನ್ನು ಕಂಡುಕೊಂಡಿದ್ದಾರೆ. ಇನ್ನು ರಸ್ತೆ ಪ್ರಗತಿಯಲ್ಲಿ ನಡೆದೆ ಇದೆ. ಆದರೆ ಯಾವ ರೀತಿ ವಾಹನಗಳ ಸೌಲಭ್ಯವಿಲ್ಲ, ನಡೆದುಕೊಂಡೇ ಹೋಗಿ ಬರಬೇಕು. ಜಲದುರ್ಗ, ಹಂಚಿನಾಳ, ಯರಗೋಡೆ, ಯಳಗುಂದ, ಕಡದರಗಡ್ಡೆ ಈ ಗಡ್ಡೆಗಳಲ್ಲಿ ಹಿಂದಿನ ಕಾಲದಲ್ಲಿ ೧೦ ವರ್ಷಗಳ ಹಿಂದೆ ನದಿಯನ್ನು ಈಜಿಕೊಂಡು ೧೦-೧೫ ಕಿ.ಮೀ.ವರೆಗೆ ಹಾಲಭಾವಿ ಗ್ರಾಮಕ್ಕೆ ನಡೆದುಕೊಂಡೆ ಬರಬೇಕಾಗಿತ್ತು. ಆದರೆ ಈಗ ಜಲದುರ್ಗವು ಪ್ರವಾಸ ತಾಣವಾಗಿ ಮತ್ತು ಧಾರ್ಮಿಕ ಕೇಂದ್ರವಾಗಿರುವುದರಿಂದ ಸೇತುವೆಯನ್ನು ನಿರ್ಮಾಣ ಮಾಡಿದ್ದಾರೆ. ಈ ನಡುಗಡ್ಡೆಗೆ ಈ ಸೇತುವೆ ಮೂಲಕವೇ ಸುತ್ತುವರಿದು ಹೋಗಬೇಕು. ಸರ್ಕಾರ ವಾಹನ ಸೌಲಭ್ಯ ಕೂಡ ಒದಗಿಸಿದೆ. ಒಂದು ದಿನಕ್ಕೆ ಮೂರು ಬಾರಿ ಬಸ್ಸು ಎಲ್ಲ ನಡುಗಡ್ಡೆಗಳಿಗೆ ಬರುತ್ತದೆ. ಒಂದೇ ಬಸ್ಸು ಹೋಗಿ ಬರುತ್ತದೆ. ಆದರೆ ಬಸ್ಸಿನಲ್ಲಿ ಜನಗಳೇ ಇರುವುದಿಲ್ಲ. ಒಂದೊಂದು ಸಾರಿ ಡೀಸಲ್‌ಗೆ ದಂಡ ಎನ್ನುವಂತೆ ಬಸ್ಸು ಬಿಡುವುದಿಲ್ಲ. ಇಷ್ಟಾದರೂ ಇಲ್ಲಿನ ಜನರು ಆಧುನಿಕತೆಯಿಂದ ದೂರವೇ ಉಳಿದಿದ್ದಾರೆ ಎಂದು ಹೇಳಬಹುದು.

ಇನ್ನುಳಿದ ರಾಮಗಡ್ಡೆ ನಾರದ ಗಡ್ಡೆಗಳಲ್ಲಿ ಹಿಂದೆ ಈಜಿಕೊಂಡೇ ಬೇರೆ ಗ್ರಾಮಗಳಿಗೆ ಹೋಗಬೇಕಾಗಿತ್ತು. ಆದರೆ, ಈಗ ತೆಪ್ಪಗಳನ್ನು ಕಂಡುಕೊಂಡಿದ್ದಾರೆ. ಗಂಡಸರು ಅಷ್ಟೇ ಹೊರಗಿನ ಊರುಗಳಿಗೆ ಹೋಗಿ ಬರುತ್ತಿದ್ದರು. ಈಗ ಹೆಣ್ಣು ಮಕ್ಕಳು ಸಹ ಊರುಗಳಿಗೆ ಹೋಗಿ ಬರುತ್ತಾರೆ. ಆಗ ಮದುವೆ ಮಾಡಿಕೊಂಡು ಬಂದಂತಹ ಹೆಣ್ಣು ಮಕ್ಕಳು ತವರ ಮನೆಗೆ ಹೋಗುವಂತೆ ಇರಲಿಲ್ಲ. ಈಗ ಹೋಗಿ ಬರಬಹುದು. ಇನ್ನುಳಿದ ನೀಲಕಂಠರಾಯನ ಗಡ್ಡೆಯು ಅಷ್ಟೇ ತೆಪ್ಪವನ್ನು ಆಧರಿಸಿದೆ.

ದಿನ ಪತ್ರಿಕೆಗಳು, ಸುದ್ದಿಮಾಧ್ಯಮಗಳ ವಿಷಯವೇ ಇವರಿಗೆ ತಲುಪುವುದಿಲ್ಲವೆಂದ ಮೇಲೆ ಇವರು ತಮ್ಮ ಅಭಿವೃದ್ಧಿಯನ್ನು ಹೇಗೆ ಅಭಿವೃದ್ಧಿಪಡಿಸಿಕೊಳ್ಳಲು ಸಾಧ್ಯ. ಇವರು ಹೊರಜಗತ್ತಿಗೆ ಬರುವ ಮನಸ್ಸು ಮಾಡಿದರೆ, ಈ ಸುದ್ದಿ ಮಾಧ್ಯಮಗಳಿಂದ ತಮ್ಮ ಹಕ್ಕುಗಳು ಮತ್ತು ತಮ್ಮ

ಭವಿಷ್ಯವನ್ನು ತಾವೇ ಕಂಡುಕೊಳ್ಳಬಹುದು. ತಾವು ಅಕ್ಷರ ಕಲಿಯದ್ದಿದ್ದರು ತಮ್ಮ ಮಕ್ಕಳಿಗಾದರೂ ಶಿಕ್ಷಣ ಕೊಡುವ ಮನಸ್ಸು ಮಾಡಬೇಕು. ಆಗಲಾದರೂ ತಮ್ಮ ಸಮಸ್ಯೆಗಳಿಗೆ ಸ್ವಲ್ಪಮಟ್ಟಿಗಾದರೂ ಪರಿಹಾರ ಕಾಣಬಹುದು. ಇಲ್ಲವೆಂದರೇ ಇನ್ನು ಅನೇಕ ಶತಮಾನಗಳು ಕಳೆದರೂ ತಮ್ಮ ಜೀವನ ಶೈಲಿ ಮತ್ತು ಆರ್ಥಿಕ ಸ್ಥಿತಿ, ರಾಜಕೀಯದಿಂದ ದೂರವೇ ಉಳಿಯಬೇಕಾಗುತ್ತದೆ. ಇದನ್ನು ಅವರಿಗೆ ಹೆಚ್ಚಿನ ರೀತಿಯಲ್ಲಿ ತಿಳಿಸಬೇಕಾದರೆ ನಮ್ಮ ಸರ್ಕಾರ ಹೆಚ್ಚಿನ ಕಾರ್ಯಕ್ರಮಗಳ ಮೂಲಕ ಅವರಿಗೆ ತಿಳಿಯಪಡಿಸುವುದು ಮತ್ತು ಸಂಘಸಂಸ್ಥೆಗಳು ಹೋರಾಟ ಮಾಡಬೇಕು. ಗಡ್ಡೆಗಳ ಜನರ ನಾಯಕತ್ವ ಮತ್ತು ಈ ಗಡ್ಡೆಗಳ ಕುರಿತು ಹೆಚ್ಚಿನ ಅಧ್ಯಯನಗಳು ನಡೆದರೆ ಆ ಸಮುದಾಯಗಳನ್ನು ನಡುಗಡ್ಡೆ ಬಿಟ್ಟು ಪ್ರಸ್ತುತ ಜಗತ್ತಿಗೆ ಕರೆ ತರಲು ಸಾಧ್ಯವೆಂದು ಹೇಳಬಹುದು.

# ಅಧ್ಯಾಯ: ನಾಲ್ಕು

## ನಡುಗಡ್ಡೆಗಳ ದೈವಗಳು

## ಅಧ್ಯಾಯ: ನಾಲ್ಕು

# ನಡುಗಡ್ಡೆಗಳ ದೈವಗಳು

### ೪.೧. ದೈವಗಳ ಪರಿಕಲ್ಪನೆ

ಗತಕಾಲದ ಸಂಕೇತಗಳು ಸಮಕಾಲೀನಗೊಳ್ಳುವುದು ಸಂಸ್ಕೃತಿಯ ಒತ್ತಡದಿಂದ ಹಾಗೂ ಅದು ಪ್ರೇರೇಪಿಸುವ ಸೃಜನಶೀಲವಾದ ಗ್ರಹಿಕೆಯಿಂದ. ಪರಂಪರೆಯನ್ನು ಸಮಕಾಲೀನ ಅಗತ್ಯಗಳಿಗೆ ರೂಪಾಂತರಿಸುವಾಗ ಸಂಸ್ಕೃತಿಯ ರೂಪಕಗಳಿಗೆ ತಂತಾನೆ ಬಹು ಅರ್ಥಗಳು ಮತ್ತು ಪಲ್ಲಟಗಳು ಕಾಣಿಸಿಕೊಳ್ಳುತ್ತವೆ. ಒಂದು ಕಾಲದ ಅರ್ಥಸಂಕೇತವು ಸಮುದಾಯದ ಆಶಯಕ್ಕೆ ತಕ್ಕಂತೆ ಬದಲಾಗಲೇ ಬೇಕಾಗುತ್ತದೆ. ದೈವದ ಅರ್ಥ ಜಗತ್ತು ರೂಪಕ ಭಾಷೆಯಿಂದ ಅನಾವರಣಗೊಳ್ಳುವಂತದಾಗಿದ್ದು, ಯಾವುದೇ ಸಮುದಾಯವು ತನ್ನ ಅರ್ಥಗಳನ್ನು ಸಂಸ್ಕೃತಿಯ ನಿಯಮಾನುಸಾರವೇ ನಿರ್ಧರಿಸಿಕೊಂಡಿರುತ್ತದೆ.

ಜನಪದ ಸಮುದಾಯಗಳು ತಮ್ಮ ದೈವದ ಅರ್ಥಗಳನ್ನು ಆಯಾ ಕಾಲದ ಸಮುದಾಯದ ತಲೆಮಾರಿನ ಸಂದರ್ಭಗಳಿಗೆ ಬಿಟ್ಟು ಬಿಡುವುದರಿಂದ ಅವು ಮಾನವನ ಸುಪ್ತ ಪ್ರಜ್ಞೆಯಲ್ಲಿ ದೈವದ ಸಂಬಂಧವನ್ನು ಕಟ್ಟಿಕೊಳ್ಳುತ್ತವೆ. ವಿನಃ ಅರ್ಥಗಳನ್ನು ಮಾತ್ರ ತಿಳಿಯುವುದಕ್ಕೆ ಬಳಸಿಕೊಳ್ಳುವುದಿಲ್ಲ. ಮನುಷ್ಯನ ಮಿತಿಯನ್ನು ದಾಟುವ ಹಾಗೆ ತನ್ನ ವಾಸ್ತವ ವ್ಯಾಪ್ತಿಯ ಆಚೆಗೆ ಜಿಗಿಯುವ ಪ್ರತಿಮೆಯಲ್ಲಿ ಆತ ಆಚರಣೆಯನ್ನು ಭಾಷೆಯಾಗಿಸಿಕೊಳ್ಳುತ್ತಾನೆ. ಆಚರಣೆಯು ಭಾಷೆಯಾಗುವ ಸ್ಥಿತಿಯು ದೈವದ ನಂಬಿಕೆಯನ್ನು ಬಲಪಡಿಸುತ್ತದೆ. ಎಲ್ಲಾ ಸಮುದಾಯಗಳೂ ಕನಸಿನ ರೂಪಕವಾಗಿ ದೈವಗಳನ್ನು ಸೃಷ್ಟಿಸಿಕೊಂಡಿವೆ.

ದೈವ ಎಂಬುದು ದೇವರಲ್ಲ. ದೈವ ಎಂಬ ಪದ ದೇವರ ಉಪರೂಪದಂತೆ ಕೂಡಾ ಬಂದರೂ ಅದು ಶುದ್ಧಾಂಗವಾಗಿ ವೈದಿಕ ಪರಂಪರೆಯ ದೇವರ ಅಸ್ತಿತ್ವವನ್ನು ನಿರೂಪಿಸುವುದಿಲ್ಲ. ದೈವ ಎಂಬುದು ನಿಸರ್ಗದ ಪುರಾಣ. ಹೀಗಾಗಿ ಗ್ರಾಮ ದೈವದ ಪರಿಕಲ್ಪನೆಯು ಸಮುದಾಯಗಳ

ಮನಸ್ಸಿನ ರಚನೆಯೂ ಆಗಿರುತ್ತದೆ. ಆ ಮನಸ್ಸಿನ ಆಳದಲ್ಲಿ ದೈವ ಪುರಾಣವು ಆಗಿ, ಸಮಾಜದ ಮೌಲ್ಯವೂ ಆಗಿ, ಸಂಸ್ಕೃತಿಯ ಸಂಕೇತವೂ ಆಗಿ ಕೊನೆಗೆ ಸಮುದಾಯದ ವಾಸ್ತವ ಜಗತ್ತು ಆಗಿ ಬಿಡುತ್ತದೆ.

ದೈವ ಶಬ್ದವು ಅರ್ಥ ಸಂಕೇತಗಳನ್ನು ಒಳಗೊಂಡಿರುವುದು ತಳಸಮುದಾಯಗಳ ಬಹುಸೃಷ್ಠಿ ಶಕ್ತಿಯನ್ನು ಬಿಂಬಿಸುತ್ತದೆ. ನಿಸರ್ಗದ ಜೊತೆಗಿನ ಹೋರಾಟದಿಂದ ದೈವ ಪ್ರಜ್ಞೆ ವಿಕಾಸಗೊಂಡಿದೆ. ಬಹು ಸಂಸ್ಕೃತಿಗಳಿಂದ ಬಹು ದೈವಗಳು ಬೆಳೆಯುತ್ತವೆ ಎಂಬುದು ಮೊದಲೇ ನಿಸರ್ಗದಲ್ಲಿ ತೀರ್ಮಾನವಾಗಿರುವ ವಿಚಾರ.

ನಂಬಿಕೆಯ ಬಹುತ್ವದಿಂದ ಮನಸ್ಸು ಬಹುದೈವಗಳನ್ನು ಅನುಸರಿಸುತ್ತದೆ. ಸಮುದಾಯಗಳು ತಮ್ಮ ವರ್ಗೀಕರಣದಿಂದಲೂ ಪ್ರತ್ಯೇಕ ಅನನ್ಯತೆಯನ್ನು ನಿಗದಿಪಡಿಸಿಕೊಂಡು ದೈವದ ಬಹುತ್ವಕ್ಕೆ ದಾರಿ ಮಾಡಿಕೊಂಡಿವೆ. ಪ್ರಪಂಚದಾದ್ಯಂತ ಜನಪದರು ದೈವಗಳನ್ನು ಸೃಷ್ಟಿಸಿಕೊಂಡು ಬದುಕುತ್ತಿದ್ದಾರೆ. ದೈವಗಳ ಸೃಷ್ಠಿ, ಉಗಮ, ಮನುಷ್ಯ ಅಲೆಮಾರಿ ಜೀವನದಿಂದ ಒಂದು ಕಡೆ ನೆಲೆನಿಂತು ಜೀವನ ಮಾಡುವ ಸಂದರ್ಭವನ್ನು ತಿಳಿಸುತ್ತವೆ. ದೈವಗಳು ಜನಪದರ ಜೀವನ ಪ್ರತಿಬಿಂಬವಾಗಿವೆ. ದೈವಗಳ ಜಾತ್ರೆ ಆಚರಣೆಗಳನ್ನು ಅಧ್ಯಯನ ಮಾಡದೆ ಜನಪದರ ಜೀವನದ ರೀತಿ ನೀತಿಗಳನ್ನು ತಿಳಿಯಲು ಸಾಧ್ಯವೇ ಇಲ್ಲ. ಆಹಾರ ಹುಡುಕಾಟದಲ್ಲಿ ಅಲೆಮಾರಿಯಾಗಿದ್ದ ಮಾನವ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೆದಾಡುತ್ತಿದ್ದ, ಅಂತಹ ಸಂದರ್ಭದಲ್ಲಿ ನಿರ್ಧಿಷ್ಟವಾದ ನೆಲೆಯನ್ನು ಕಂಡುಕೊಂಡಿರಲಿಲ್ಲ. ಜಗತ್ತೆಲ್ಲ ವಿಸ್ಮಯವಾಗಿ ಕಾಣುತ್ತಿತ್ತು. "ಪ್ರಕೃತಿಯಲ್ಲಿ ನಡೆಯುವ ಘಟನೆಗಳು ಕುತೂಹಲ ವಿಷಯಗಳಾಗಿದ್ದವು. ಬಿಸಿಲು, ಗಾಳಿ, ಮಳೆ, ಮಿಂಚು, ಗುಡುಗು, ಬಿರುಗಾಳಿ, ಪ್ರವಾಹ, ಭೂಕಂಪ, ಕಾಡ್ಗಿಚ್ಚು ಮುಂತಾದ ಅನಿರೀಕ್ಷಿತ ಘಟನೆಗಳಿಂದ ಮನುಷ್ಯನ ಬದುಕಿಗೆ ಅಪಾಯ ಇರುವುದರ ಅನುಭವವಾಯಿತು. ಮನುಷ್ಯನಿಗೆ ಆಪತ್ತು ತರುವ ಪ್ರಕೃತಿಯ ವಿಕೋಪಗಳಿಗೆ ಹೆದರುವ ಅಥವಾ ಅವುಗಳನ್ನು ಉಪಾಯಗಳಿಂದ ಒಲಿಸಿಕೊಳ್ಳುವ ಪ್ರಯತ್ನ ನಡೆಯಿತು"(ಬಸವರಾಜು ಬಿ.ಎಸ್., ೨೦೧೪, ಪು.೧೨೨).

ಪ್ರಕೃತಿಯ ವ್ಯಾಪಾರದ ಹಿಂದೆ ಒಂದು ಶಕ್ತಿ ಇದೆ ಎಂದು ಇತ್ತೀಚಿನ ತಜ್ಞರು ಹೇಳುವ ಮಾತು ಬಹುಶಃ ಆದಿ ಮಾನವನಿಗೆ ಹೊಳೆಯುತ್ತಿರಲಿಲ್ಲ. "ದೇವರು ಎಂಬ ಕಲ್ಪನೆಯ ಹಿಂದೆ ಭಯ, ಭಕ್ತಿ, ಆಶ್ಚರ್ಯ, ರಕ್ಷಣೆಯನ್ನು ಬೇಡುವ ಮನೋವೃತ್ತಿ ಇವೆಲ್ಲವನ್ನು ಗುರುತಿಸಬಹುದು. ಅಂತಹ ದೇವರನ್ನು ಎದುರು ಹಾಕಿಕೊಂಡರೆ ಅವನು ವಿಪತ್ತು ತಂದೊಡ್ಡುತ್ತಾನೆ ಎಂಬ ಭಯದಿಂದಲೇ ಸುತ್ತಲಿನ ಅಪಾಯಕರ ಪ್ರಪಂಚದ ಕೋಟಲೆಯಿಂದ ನಮ್ಮನ್ನು ಪಾರುಮಾಡಿಯಾನು ಎಂಬ ನಿರೀಕ್ಷೆಯಿಂದಲೋ ಅವನು ನಮ್ಮ ಉನ್ನತೋನ್ನತ ಮೌಲ್ಯಗಳ ಸಂಕೇತ ಎಂಬ ಭಾವನೆಯಿಂದಲೋ

ಒಂದಲ್ಲ ಒಂದು ಕಾರಣದಿಂದಾಗಿ ಈ ದೇವರು ಎಂಬ ಕಲ್ಪನೆ ನಮ್ಮ ಮನಸ್ಸಿನಲ್ಲಿ ಸುಳಿದಾಡುತ್ತಲೇ ಇರುತ್ತದೆ. ಸಾವಿರಾರು ವರ್ಷಗಳಿಂದ ನಮ್ಮೊಡನೆ ಇದ್ದದ್ದು ಈಗಲೂ ಇರುವುದು ಈ ಕಲ್ಪನೆ" (ಮೂರ್ತಿರಾವ್ ಎ.ಎನ್., ೨೦೧೧, ಪು.೧೨).

ಪ್ರಾದಿಮ ಜನಪದ ಗುಂಪು ನಿಸರ್ಗದಲ್ಲಿ ಜೀವಿಸುತ್ತಿದ್ದುದರಿಂದ ನಿಸರ್ಗದ ವ್ಯಾಪಾರಗಳನ್ನು ವಿಸ್ಮಯ, ಭಯದಿಂದ ನೋಡಿ, ನಿಸರ್ಗವನ್ನು ತನ್ನದೇ ಆದ ರೀತಿಯಲ್ಲಿ ಅರಿಯುವ ಪ್ರಯತ್ನ ಮಾಡಿತು. ಪ್ರತಿನಿತ್ಯ ಉದಯಿಸುವ ಸೂರ್ಯ, ಬೀಸುವ ಗಾಳಿ, ಉರಿಯುವ ಬೆಂಕಿ, ಸುರಿಯುವ ಮಳೆಯ ಬಗ್ಗೆ ಜನಪದ ಗುಂಪು ಭಯ, ವಿಸ್ಮಯಗಳನ್ನು ತೋರಿ ಅವುಗಳಲ್ಲಿ ಅತಿಮಾನುಷ ಶಕ್ತಿ ಇದೆ ಎಂದು ಅವುಗಳನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡಿತು. ಇಂತಹ ಅನುಭವಗಳು ವ್ಯಕ್ತಿಗತವಾಗಿ ಮತ್ತು ಸಾಮೂಹಿಕವಾಗಿ ಒಂದೇ ಆದುದರಿಂದ ಇಡೀ ಜನಪದ ವೃಂದ ತನ್ನ ರಕ್ಷಣೆಗಾಗಿ ಒಳಿತಿಗಾಗಿ ಅಗೋಚರ ಶಕ್ತಿಯನ್ನು ಗಾಢವಾಗಿ ನಂಬಿ ದೈವೀಕರಣಗೊಳಿಸಿ ಪೂಜಿಸುವ, ಆರಾಧಿಸುವ ಪರಂಪರೆ ಜಗತ್ತಿನ ಅನೇಕ ಜನಪದ ಗುಂಪುಗಳಲ್ಲಿ ರೂಢಿಗೆ ಬಂದಿತು. ಈ ನಂಬಿಕೆಗಳು ಕ್ರಿಯೆಯ ಮೂಲಕ ಆಚರಣೆಗಳಾಗಿ ಜನಪದ ಸಮುದಾಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡವು.

ಪ್ರಕೃತಿಯ ಈ ಆಟೋಟಪಕ್ಕೆ ಕಾರಣವಾದ ಯಾವುದೋ ಒಂದು ಶಕ್ತಿಯಿದೆ ಎಂದು ಕಲ್ಪನೆ ಮಾಡಿಕೊಂಡ. ಈ ಭಯದಿಂದ ರಕ್ಷಿಸಿಕೊಳ್ಳಲು ಆ ಶಕ್ತಿಯನ್ನು ಪುನಃ ಆರಾಧಿಸಿ ಒಲಿಸಿಕೊಳ್ಳಲು ಯೋಚಿಸಿದನು. ಹೀಗೆ ಪ್ರಕೃತಿ ವೈಚಿತ್ರ್ಯಗಳ ಭಯವೇ ದೇವರ ಕಲ್ಪನೆಗೆ ಕಾರಣವಾಯಿತು. ಭಯದಿಂದ ಭಕ್ತಿ ಹುಟ್ಟಿತು. ವಿಶ್ವದ ಉಗಮ ಕಾರ್ಯಕಾರಣ ಸಂಬಂಧದಿಂದಾದರೆ ಉಳಿದುದ್ದನ್ನು ಸೃಷ್ಟಿಸಿಕೊಂಡಿದ್ದು ಮಾನವನ ಆಲೋಚನ ಶಕ್ತಿಯೇ ಆಗಿದೆ. ಬಿರುಗಾಳಿಗೆ ಮೈಯನ್ನು ಬಲವಾಗಿ ದೂಡಿದರು. ಅದೃಶ್ಯವಾಗಿರುವ ಪರಿ ಹೇಗೆ ಇದ್ದಕ್ಕಿದ್ದಂತೆ ಕೆರಳುವುದರ ರಹಸ್ಯವೇನು ಎಂದು ಆದಿಮಾನವ ಚಿಂತಿಸಿದ. ವರ್ಷ ಧಾರೆಯಾದಾಗ ಹೆದರಿ ಸ್ತೋತ್ರಗಳನ್ನು ಪಠಿಸಿದ. ಹರಕೆಗಳನ್ನು ಹೊತ್ತ. ಪ್ರಕೃತಿ ಮೇಲ್ಮೈ ಲಕ್ಷಣ ಒಂದು ನಿಯಂತ್ರಣಕ್ಕೆ ಬಂದಾಗ ಇವೆಲ್ಲದರ ಫಲಶೃತಿ ಎಂದು ಕೃತಜ್ಞತೆಯಿಂದ ತಲೆಬಾಗಿದ. ತನ್ನ ಜ್ಞಾನ ಬುದ್ಧಿ ಮಟ್ಟಕ್ಕೆ ತನ್ನದೆ ಆದ ಅರ್ಥಕಲ್ಪನೆ, ಸಿದ್ಧಾಂತ, ನಿಯಮಗಳನ್ನು ಹುಡುಕಿಕೊಂಡಾಗ ಪ್ರಪಂಚದ ಆಗುಹೋಗುಗಳ ಮುಂದೆ ತಾನು ನಿಸ್ಸಾಹಾಯಕನೆಂಬ ಅರಿವಿನಿಂದಾಗಿ ಪ್ರಾಕೃತಿಕ ವಿಕೋಪದಿಂದ ಎಲ್ಲವುಗಳನ್ನು ರಕ್ಷಿಸಿಕೊಳ್ಳುವ ಉಪಾಯದ ಬಗ್ಗೆ ದೀರ್ಘಚಿಂತನೆ ಮಾಡಿದನು. ಚಿಂತನೆಗಳ ಪ್ರತಿರೂಪಗಳಾಗಿ ದೇವರಲ್ಲಿ ಪ್ರಾರ್ಥಿಸಿಕೊಂಡವು ಬೇಡಿಕೆಗಳಾದವು. ಪುರಾತನ ಕಾಲದಿಂದ ಆಪತ್ಕಾಲದಲ್ಲಿ ದೇವರು ಅಥವಾ ದೈವ ತನ್ನನ್ನು ರಕ್ಷಿಸುತ್ತದೆ ಎಂದು ನಂಬಿದರು. ಪ್ರಾಚೀನ ಕಾಲದಿಂದ ಆದಿಮಾನವನು ಶುರುಮಾಡಿದ ಶಕ್ತಿಯ ಪರಿಕಲ್ಪನೆ, ನಂಬಿಕೆ, ಆಚರಣೆಗಳು ಬೇರೆ ಬೇರೆ ಪ್ರದೇಶಗಳಲ್ಲಿ ಪರಿಸರ, ಸನ್ನಿವೇಶ, ಪರಿಸ್ಥಿತಿ, ವಿಭಿನ್ನ ವಿಚಾರ, ಸೌಲಭ್ಯಗಳಂತೆ

ಬೇರೆ ಬೇರೆಯಾಗಿ ಬೆಳೆದು ಬಂದವು. ಸಮಾಜದಲ್ಲಿ ಮಾನವನ ಪ್ರಗತಿಯಾದಂತೆ ನಂಬಿಕೆಗಳು ಬೇರೆ ಸ್ವರೂಪದಲ್ಲೋ ಅಥವಾ ಯಥಾವತ್ತಾಗಿ ಮುಂದುವರೆದು ಬಂದವು.

### ೪.೨. ಧರ್ಮ ಮತ್ತು ದೈವಗಳು

ಜನಪದವೆಂಬ ಬಂಡಿಯ ಚಕ್ರವೇ ಆಚರಣೆ. ಚಕ್ರ ಇರದಿದ್ದರೆ ಬಂಡಿ ಅಲ್ಲಿಯೇ ನಿಲ್ಲುತ್ತದೆ. ಬಂಡಿ ಸುಲಭವಾಗಿ ಚಲಿಸಲು ತನ್ನಕಾರ್ಯ ನಿರ್ವಹಿಸಲು ಚಕ್ರಬೇಕು. ಜನಪದ ಸಂಸ್ಕೃತಿಯ ಆ ಚಕ್ರಕ್ಕೆ ನಂಬಿಕೆಯೆನ್ನುವ ಕಡೇಗೀಲು ಇದೆ. ಕಡೇಗೀಲು ಇರದೇ ಚಕ್ರ ಮುಂದೆ ಸಾಗಲಾರದು. ಕಡೆಗೀಲು ಮತು ಚಕ್ರ ಎರಡು ಇದ್ದಾಗ ಬಂಡಿ ಕೆಲಸ ಸಾಗಿಸಬಲ್ಲದು. ಆಚರಣೆಗಳು ಒಂದು ನಿರ್ದಿಷ್ಟ ಸಮಾಜದಲ್ಲಿ ವ್ಯಕ್ತಿಯಿಂದ ಆರಂಭಗೊಂಡಿರುತ್ತವೆ. ವ್ಯಕ್ತಿಯಿಂದ ಇತರರು ಒಳಗೊಂಡು ತನ್ನ ಸುತ್ತಲಿನ ಸಮಾಜ ಕಾಲಕ್ರಮದಲ್ಲಿ ಆರಂಭಗೊಂಡಿರುತ್ತದೆ.

ದ.ರಾ. ಬೇಂದ್ರೆಯವರು ಹೇಳಿರುವ 'ಯುಗಾದಿ' ಪದ್ಯದಲ್ಲಿ ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತ್ತಿದೆ ಹಾಗೂ 'ನಿದ್ದೆಗೊಮ್ಮೆ ನಿತ್ಯ ಮರಣ ಎದ್ದ ಸಲ ನವೀನ ಜನನ' ಎನ್ನುವ ಸಾಲಿನಲ್ಲಿ ಪ್ರತಿವರ್ಷ ಆಚರಿಸಿದಂತಹ ಆಚರಣೆಗಳಾದರೂ ಒಂದಲ್ಲಾ ಒಂದು ರೀತಿಯಲ್ಲಿ ಹೊಸತನ ಕಾಣುತ್ತವೆ.

ಒಂದು ನಿರ್ಧಿಷ್ಟ ನಂಬಿಕೆ ಮತ್ತು ಆಚರಣೆ ವ್ಯಕ್ತಿಗತವಾಗಿ ಅಥವಾ ಸಾಮುದಾಯಿಕವಾಗಿ ಬದ್ಧವಾದಾಗ; ವ್ಯಕ್ತಿ ತನ್ನ ಸ್ವಂತ ಬದುಕನ್ನು ಹೇಗೆ ನಡೆಸುತ್ತಾನೆ ಅಥವಾ ಒಂದು ನಿರ್ದಿಷ್ಟ ಬದ್ಧತೆಯ ಬೆಳಕಿನಲ್ಲಿ ಸ್ವಂತ ಬದುಕು ಹೇಗೆ ನಡೆಯುತ್ತದೆ ಎನ್ನುವುದು ಮುಖ್ಯ. ಜನಪದ ಭಾಷೆಯಲ್ಲಿ ಹೇಳಬೇಕೆಂದರೆ ಜೀವನ ವಿಧಾನ ಎನ್ನುವುದು ವ್ಯಕ್ತಿಯೊಬ್ಬನ ವೈಯಕ್ತಿಕ ಧರ್ಮವಾಗುತ್ತದೆ. 'ನಂಬಿಕೆ' ಎನ್ನುವ ಆಲೋಚನೆಯನ್ನು ಧರ್ಮ ವ್ಯಕ್ತಿಗತವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ನೈತಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ಮೌಲ್ಯಗಳನ್ನು ವ್ಯಕ್ತಿಯ ನಂಬಿಕೆಗಳ ಮೂಲಕ ಧರ್ಮ ಸಂರಕ್ಷಿಸುತ್ತದೆ.

ಧರ್ಮದ ಚೌಕಟ್ಟಿನಲ್ಲಿ ಪ್ರತಿಯೊಬ್ಬ ವ್ಯಕ್ತಿ ಒಳಿತು ಕೆಡುಕನ್ನು ಗುರುತಿಸಿ, ತನ್ನ ಪಂಚೇಂದ್ರಿಯ ಗಳನ್ನು ನಿಗ್ರಹಿಸಿಕೊಂಡು ಒಳ್ಳೆಯ ಗುಣ, ಕಾರ್ಯ, ಸಹಕಾರ, ತ್ಯಾಗ, ಕರುಣೆ ರೂಢಿಸಿಕೊಂಡು ಬರುವಂತೆ ಪ್ರಚೋದಿಸುವ ಮಾರ್ಗವಾಗಿದೆ. 'ಧರ್ಮ' ಎನ್ನುವುದು ಜಗತ್ತಿನಲ್ಲಿ ಅತ್ಯಂತ ಚರ್ಚೆಗೆ ಈಡಾದ ಅತ್ಯಂತ ಹೆಚ್ಚು ತಪ್ಪು ಕಲ್ಪನೆಗೆ ಒಳಗಾದ ಪದವಿದು. ಅದ್ಭುತ ನಾಗರೀಕತೆಗಳ ಉದಯಕ್ಕೂ ಅನಾಗರಿಕ ಮಾರಣಹೋಮ ಹತ್ಯೆಗಳಿಗೂ ಕಾರಣವಾದ ವಿಷಯವಿದು. ಅತಿ ಹೆಚ್ಚಿನ ಜನರಿಂದ ಪಾಲಿಸಲ್ಪಟ್ಟ ತತ್ವವಿದು. ಸಮಸ್ತ ಪ್ರಪಂಚದ ಹಿತಕ್ಕಾಗಿ ಯಾವುದು ಧಾರಣೆ ಮಾಡಲ್ಪಡುತ್ತವೆಯೋ ಅಂತಹ ಮೌಲ್ಯಗಳನ್ನು ಧರ್ಮವೆಂದು ಕರೆಯಲ್ಪಟ್ಟಿವೆ.

'ಧರ್ಮೋ ರಕ್ಷತಿ ರಕ್ಷಿತಃ' ಎನ್ನುವುದು ಧರ್ಮವನ್ನು ನಾವು ರಕ್ಷಿಸಿದರೆ; ನಮ್ಮನ್ನು ಧರ್ಮ ರಕ್ಷಿಸುತ್ತದೆ. ಧರ್ಮ, ಪ್ರಭುತ್ವ ಮತ್ತು ವಿಜ್ಞಾನ ಮೂರು ಮಾನವಮತಿಯ ಸೃಷ್ಟಿಗಳು. ಇವು ಬದುಕಿನ ಸಮಸ್ತ ಸ್ತರಗಳನ್ನು ನಿಯಂತ್ರಿಸುತ್ತವೆ. ಧರ್ಮ ಹುಟ್ಟುಹಾಕುವ ನಂಬಿಕೆಯ ಸ್ಥಾನಕ್ಕೆ 'ಪ್ರಜ್ಞೆ'ಯನ್ನು 'ಭಕ್ತಿ'ಯ ಸ್ಥಾನಕ್ಕೆ, 'ಕರುಣೆ'ಯನ್ನು 'ಭಯ'ದ ಸ್ಥಾನಕ್ಕೆ ಕ್ರಿಯಾಶೀಲತೆಯನ್ನು ಮುಕ್ತ ವಿಚಾರ ಅಥವಾ ಬಂಡಾಯ ತೆರೆಯುತ್ತದೆ. ಇದು ಉತ್ತಮ ಸಮಾಜ ರೂಪುಗೊಳ್ಳಲು ಕಾರಣವಾಗುತ್ತದೆ. ಬಸವಣ್ಣನವರು ಹೇಳಿದ ದಯವೇ ಧರ್ಮದ ಮೂಲವಯ್ಯ ಎಂಬ ನುಡಿ ಸಾರ್ಥಕವಾಗಬೇಕು. ಮನುಷ್ಯ ಜಾತಿ ತಾನೊಂದೆ ವಲಂ ಎಂಬ ಪಂಪನ ಉಕ್ತಿಗೆ ಶಕ್ತಿ ಬರಬೇಕು. ಪ್ರೀತಿ, ದಯೆ, ಸಮಾನತೆ, ಸೋದರತೆ ನಮ್ಮ ನಡವಳಿಕೆಯಲ್ಲಿ ಮೂರ್ತವಾಗಬೇಕು. ಅಂದರೆ ಮಾತ್ರ ಧರ್ಮದ ಅರ್ಥ ಸಾರ್ಥಕವಾಗುತ್ತದೆ. ಅವಿಲ್ಲದಿದ್ದರೆ ಧರ್ಮದ ಮುಖಾಂತರ ನಾವು ದೇವರ ಮನೆಗೆ ಹೋಗುವ ಬದಲು ದೈತ್ಯದ ಮನೆಗೆ ಹೋಗುತ್ತೇವೆ. ಯುಗ ಯುಗಾಂತರಗಳಿಂದ ಧರ್ಮ ಪ್ರವೃತ್ತಿಯು ಧರ್ಮ ಸ್ಫೂರ್ತಿಯು ಮಾನವ ಜೀವನವನ್ನು ವೀಕ್ಷಿಸುತ್ತಾ ಬಂದಿದೆ. ಈ ಹಿಂದಿನ ಶತಮಾನಗಳಲ್ಲಿನ ಧರ್ಮ, ಕುಟುಂಬ ಜೀವನಕ್ಕೂ ಗುಂಪುಗಳ ಜೀವನಕ್ಕೂ ತನ್ಮೂಲಕ ಸಮಾಜ ಜೀವನಕ್ಕೂ ತಳಹದಿಯಾಗಿತ್ತು.

### ೪.೩. ನಡುಗಡ್ಡೆಗಳ ದೈವಗಳ ಪರಿಚಯ

ಪ್ರತಿಯೊಂದು ಗ್ರಾಮಗಳಲ್ಲಿ ಕೂಡ ಹಲವಾರು ರೀತಿಯ ದೈವಗಳಿರುತ್ತವೆ. ಆಯಾ ಸಮಾಜದ ವರ್ಗದ ಜನರು ಈ ರೀತಿಯ ಗ್ರಾಮದ ದೈವಗಳನ್ನು ಹೊಂದಿರುತ್ತಾರೆ. ಒಂದು ಕಲ್ಲುಕೂಡ ನಮ್ಮ ಜನಪದರಿಗೆ ದೇವರೇ. ಹಾಗೆಯೇ ಕೃಷ್ಣಾನದಿ ತೀರದ ನಡುಗಡ್ಡೆಗಳಲ್ಲಿ ಕೂಡ ನಾವು ದೈವಗಳನ್ನು ಕಂಡುಕೊಳ್ಳಬಹುದು. ಪ್ರತಿಯೊಂದು ನಡುಗಡ್ಡೆ ತನ್ನದೇ ಆದ ಕೆಲವು ದೈವಗಳನ್ನು ಹೊಂದಿದೆ. ಅವುಗಳ ಪರಿಚಯ ನೋಡಬಹುದು. ಈ ದೈವಗಳ ಪರಿಚಯವನ್ನು ಕ್ಷೇತ್ರಕಾರ್ಯದ ಮೂಲಕ ತಿಳಿಯಲಾಗಿದೆ.

**ಮೇಲಿನ ಗಡ್ಡೆ**

೧. ಗದ್ದೆಮ್ಮ

೨. ಗಡ್ಡೆ ಮನ್ನಸಾಬ

೩. ಹನುಮಂತ

**ದೇವರ ಗಡ್ಡೆ**

೧. ಗದ್ದೆಮ್ಮ

೨. ಮಾಳಿಂಗರಾಯ ಅಥವಾ ಮಾನಸಯ್ಯ

೩. ದುಗ್ಗಮ್ಮ

೪. ಪಾಲಮ್ಮ

೫. ಹನುಮಪ್ಪ

೬. ಉಟಕನೂರತಾತ

೭. ಚಿಕ್ಕಪ್ಪಮುತ್ತ್ಯಾ

**ಜಲದುರ್ಗ**

೧. ಸಂಗಮನಾಥ

೨. ಯಲ್ಲಮ್ಮ

೩. ಹನುಮಂತ

೪. ಮಾನಪಯ್ಯ ಗದ್ದುಗೆ

೫. ಪ್ರಭುತಾತ ಮಠ

೬. ದ್ಯಾಮವ್ವನ ಕಟ್ಟೆ

**ಹಂಚಿನಾಳ**

೧. ದ್ಯಾವಮ್ಮ

೨. ಯಲ್ಲಮ್ಮ

೩. ಹನುಮಂತ

೪. ಬಕ್ಕಯ್ಯಮುತ್ತ್ಯಾ

**ಯರಗೋಡಿ**

೧. ದ್ಯಾವಮ್ಮ

೨. ಪೀರಸಾಬ

೩. ಹನುಮಪ್ಪ

೪. ಊರದುರಗಮ್ಮ

೫. ಆದಿ ದುರಗಮ್ಮ

೬. ಉಡಿದ ಲಕ್ಷ್ಮೀ

೭. ಪಾಲಕಮ್ಮ

೮. ಉಸುರಗಲ್ಲು

**ಕಡದರಗಡ್ಡೆ**

೧. ಕಂದರಮ್ಮ

೨. ದುರಗಮ್ಮ

೩. ಹುಲಿಗೆಮ್ಮ

೪. ಬಸವಣ್ಣ

**ನೀಲಕಂಠರಾಯನ ಗಡ್ಡೆ**

೧. ನೀಲಕಂಠೇಶ್ವರ

೨. ಹನುಮಪ್ಪ

**ರಾಮಗಡ್ಡೆ**

೧. ರಾಮಲಿಂಗೇಶ್ವರ

೨. ಚೋಳೇಂದ್ರ ಮಹಾಸ್ವಾಮಿ

೩. ನೀಲಮ್ಮನ ಗುಡಿ

೪. ಸಿದ್ಧಲಿಂಗೇಶ್ವರ

೫. ಬಂಡಿಪ್ಪ ದೇವರು

೬. ಬಸವಣ್ಣ ಗುಡಿ

೭. ಲಕ್ಷ್ಮೀ ಗುಡಿ

**ಕುರವಪುರ ಗಡ್ಡೆ**

೧. ದತ್ತಾತ್ರೆಯ

೨. ಸಾವರಮ್ಮ

೩. ಕರಿಯಮ್ಮ

೪. ಮಸಿಯಮ್ಮ

೫. ಬೋನಮ್ಮ

೬. ಸಂಗಮ್ಮ

೭. ಹನುಮಂತ

೮. ಪಾಲಮ್ಮ

೯. ಶಿವಾಲಯ

**ನಾರದ ಗಡ್ಡೆ**

೧. ನಾರದ ಮುನೀಶ್ವರ

೨. ಚೆನ್ನಬಸವೇಶ್ವರ

೩. ಶಿವಾಲಯ

೪. ಲಕ್ಷ್ಮೀದೇವಿ

### ೪.೪. ಪೂಜೆ ಪುನಸ್ಕಾರ ಮತ್ತು ದೇವಸ್ಥಾನ ಆಡಳಿತ

ಜನಪದರು "ನಂಬಿದ ವಿಶ್ವಾಸವಿಟ್ಟ ದೇವರಿಗೆ ಜೀವವಿದೆ. ಅವನು ಅಗೋಚರ. ಸರ್ವಾಂತರ್ಯಾಮಿ ಸರ್ವಶಕ್ತ ಎಲ್ಲ ಕಾಲದಲ್ಲೂ ಎಲ್ಲೆಲ್ಲೋ ಇರುವವನು. ಅವನಿಗೊಂದು ರೂಪ ಇದೆ. ಆ ರೂಪವನ್ನು ಶಿಲೆಯಲ್ಲೋ, ಲೋಹದಲ್ಲೋ ಬಿಂಬವಾಗಿಸಿ ಜೀವಂತ ವ್ಯಕ್ತಿಯಂತೆ ಗೌರವಿಸುವ, ಆದರಿಸುವ, ಪೂಜಿಸುವ ಕ್ರಿಯಾ ನಡೆದು ಬಂದಿದೆ." ಈ ರೀತಿಯಾಗಿ ಉದ್ಭವಿಸಿದ ದೇವರ ವಿಗ್ರಹಗಳನ್ನು ದೇವಾಲಯಗಳನ್ನು ಕಟ್ಟಿಸಿ ವಿಗ್ರಹವನ್ನು ಪ್ರತಿಷ್ಠಾಪಿಸಿ ಆ ಭಾಗಕ್ಕೆ "ಗರ್ಭಗುಡಿ" ಎಂದು ಕರೆದರು. ಗುಡಿಯಲ್ಲಿ ಈ ಸ್ಥಾನ ಪ್ರಧಾನವಾದದ್ದು. ದೇವರ ಮೂರ್ತಿಗಳನ್ನು ಸಾಮಾನ್ಯವಾಗಿ ಅಚಲಮೂರ್ತಿ, ಚಲಮೂರ್ತಿ ಎಂದು ವಿಂಗಡಿಸಬಹುದು. ಅಚಲಮೂರ್ತಿಯು ದೇವಾಲಯದ ಗೃಹದಲ್ಲಿ ಪ್ರತಿಷ್ಠಾಪಿತವಾದ ಮೂರ್ತಿ. ಇದು ಸಾಮಾನ್ಯವಾಗಿ ದೊಡ್ಡ ಪ್ರಮಾಣದಲ್ಲಿ ಇರುತ್ತದೆ. ಮತ್ತು ಶಿಲೆಯಿಂದ ನಿರ್ಮಾಣವಾಗಿರುತ್ತದೆ. ಆರಂಭದ ಶತಮಾನಗಳಲ್ಲಿ ಮೂಲ ದೈವವನ್ನು ಮರದಲ್ಲಿ ನಿರ್ಮಿಸಲಾಗುತ್ತಿತ್ತು. ಒಮ್ಮೊಮ್ಮೆ ಕೇವಲ ಗಾರೆಯಿಂದ ನಿರ್ಮಿಸಲಾಗುತ್ತಿತ್ತು. ದೇವರಿಗೆ ಸಂಬಂಧಿಸಿದ ವಿವಿಧ ಕಾರ್ಯಗಳಿಗೆ ಪ್ರತ್ಯೇಕವಾಗಿ ನಿರ್ದಿಷ್ಟ ಸಮಯಗಳಲ್ಲಿ ಮಾತ್ರ ಉಪಯೋಗಿಸುವ ಸಾಮಾನ್ಯವಾಗಿ ಲೋಹದಿಂದ ನಿರ್ಮಿತವಾದ ಸಣ್ಣ ಪ್ರಮಾಣದ ಪ್ರತಿಮೆಗಳನ್ನು ಚಲಮೂರ್ತಿ ಗಳೆನ್ನುತ್ತಾರೆ. ಈ ನಡುಗಡ್ಡೆಗಳಲ್ಲಿ ಪೂಜಿಸಲ್ಪಡುವ ದೇವರುಗಳೆಲ್ಲ ಅತಿ ಹೆಚ್ಚು ಕಟ್ಟಿಗೆಯಿಂದ ತಯಾರಿಸಿದ ಮೂರ್ತಿಗಳು. ಕಲ್ಲುಗಳಿಂದ ಕೆತ್ತಿದ ಶಿಲ್ಪಗಳು ಪೂಜಿಸಲ್ಪಡುತ್ತವೆ.

ಗಡ್ಡೆಗಳ ದೇವಾಲಯಗಳಲ್ಲಿ ಅಚಲಮೂರ್ತಿ ಪ್ರತಿಷ್ಠಾಪಿಸಿದರೆ, ಜಾತ್ರೆಗಳ ಸಂದರ್ಭಗಳಲ್ಲಿ ಜಾತ್ರೆ ಪ್ರಾರಂಭದಿಂದ ರಥೋತ್ಸವ ಆಚರಣೆ ಮುಗಿಯುವವರೆಗೆ ಚಲಮೂರ್ತಿಗಳನ್ನು ಪಲ್ಲಕ್ಕಿಯಲ್ಲಿಟ್ಟು ಮೆರೆಸುವದು ಪದ್ಧತಿ.

"ಮೂರ್ತಿ ಪೂಜೆಯಲ್ಲಿ ಮೊದಲು ಪಂಚ-ಶುದ್ಧಿ ಕಲಸಗಳು ಆಗಬೇಕು. ಅವುಗಳೆಂದರೆ ಆತ್ಮಶುದ್ಧಿ, ಸ್ಥಾನಶುದ್ಧಿ, ದ್ರವ್ಯಶುದ್ಧಿ, ಲಿಂಗಶುದ್ಧಿ ಮತ್ತು ಮಂತ್ರಶುದ್ಧಿ. ಇವುಗಳಲ್ಲಿ ಮೊದಲನೆಯ ಆತ್ಮಶುದ್ಧಿಯು ಶೌಷ, ಆಚಮನ ಸ್ನಾನ, ಭಸ್ಮರುದ್ರಾಕ್ಷ, ನ್ಯಾಸ, ಮಂತ್ರ ಕಾಲಾನುಸಂಧಾನ ಧ್ಯಾನ ಇವುಗಳಿಂದ ಪೂಜಿಸುವ ವ್ಯಕ್ತಿಗೆ ಶಿವಾತ್ಮಕ ಭಾವ ಲಭ್ಯವಾಗುತ್ತದೆ. ಶೋಧನ, ಸಮ್ಮಾರ್ಜನ, ಅನುಲೇಪನ, ವರ್ಣಕ, ಗಂಧ ಪುಷ್ಪ, ಧೂಪ, ದೀಪ ಪೂಜೋಪಕರಣ ವಾಸ್ತು ಶುದ್ಧ್ಯಾದಿಗಳೇ. ಸ್ನಾನಶುದ್ಧಿ, ಜಲ, ಗಂಧ, ಅಕ್ಷತೆ, ಭಸ್ಮ, ಪುಷ್ಪ, ಯಂತ್ರೋಪದಕಗಳಿಂದ ಪೂಜಾ ವಸ್ತು ಪೂಜೋಪಕರಣ ಇತ್ಯಾದಿಗಳನ್ನು ಸಂಪ್ರೋಕ್ಷಿಸಿದಾಗ ದ್ರವ್ಯಶುದ್ಧಿ ಲಿಂಗದ ಮೇಲಿನ ನಿರ್ಮಾಲ್ಯವನ್ನು ತೆಗೆದು ಲಿಂಗ ಪೀಠ ಮತ್ತು ವಾರಿಯನು ತೊಳೆದು ಲಿಂಗಕ್ಕೆ ಭಸ್ಮೋದ್ಧಾರಣೆ ಮಾಡುವದೇ ಲಿಂಗ ಶುದ್ಧಿ. ನಂತರ ಕಲಶ ಪೂಜೆಯನ್ನು ಸೂಕ್ತ ಮಂತ್ರಗಳಿಂದ ದಶವಾರ ಪ್ರಣವ ಏಕವಾರ ನಿಪುಣವ ಪಂಚಾಕ್ಷರ "ಓಂ ನಮಃ ಶಿವಾಯ" ಸ್ವಾಹ ಎಂಬ ಅಷ್ಟಾಕ್ಷರ ಮಂತ್ರವನ್ನು ಊದುತ್ತ ಮಧ್ಯ ಸ್ವರಿತಾಂತವಾಗಿ ಪಠಿಸುವುದೇ ಮಂತ್ರ ಶುದ್ಧಿ. ಪಂಚ ಸುದ್ದಿಗಳ"(ಚಪ್ಪರ ಬಂದ ಆರ್.ಆಯ್., ೨೦೦೬, ಪು.೫೯) ನಂತರ ಮೂರ್ತಿಯು ಪೂಜೆಗೆ ಸಿದ್ಧವಾಗಿದೆ ಎಂದು ತಿಳಿಯಬಹುದು.

ಈ ಮೇಲಿನ ಉಲ್ಲೇಖಿತ ಪೂಜಾ ವಿಧಾನಗಳು ಶಿಷ್ಟ ದೇವರಿಗೆ ಪೂಜಿಸುವಲ್ಲಿ ಸಹಾಯಕಾರಿ ಯಾದರೆ,. ಜನಪದರ ಪೂಜೆಯಲ್ಲಿ ಈ ವಿಧಾನಗಳನ್ನು ಅನುಕ್ರಮವಾಗಿ ಪಾಲಿಸುವುದಿಲ್ಲ. ನೈಮಿತ್ತಿಕ ಪೂಜೆ ಜರುಗುತ್ತವೆ. ಹಬ್ಬ ಜಾತ್ರೆ ಸಂದರ್ಭದಲ್ಲಿ ದೇವರನ್ನು ಅಲಂಕರಿಸಿ ಜಾತ್ರೆ ಪ್ರಾರಂಭದ ದಿನದಿಂದ ಹಿಡಿದು ಜಾತ್ರೆ ಮುಗಿಯುವವರೆಗೂ ಬೆಳಗ್ಗೆ ಸಾಯಂಕಾಲ ಎರಡು ಸಮಯ ಪೂಜೆ ನೆರವೇರಿಸಲಾಗುತ್ತದೆ. ಗಡ್ಡೆಗಳಲ್ಲಿರುವ ಎಲ್ಲ ದೇವರುಗಳಿಗೆ ಪ್ರತಿನಿತ್ಯ ಪೂಜೆ ನಡೆಯುವುದಿಲ್ಲ. ಕೆಲವು ಪ್ರಮುಖ ದೇವರುಗಳಿಗೆ ಮಾತ್ರ ಪ್ರತಿದಿನ ಪೂಜೆ ನಡೆಯುತ್ತದೆ.

ದೇವರಗಡ್ಡೆ ಮತ್ತು ಮೇಲಿನಗಡ್ಡೆಯಲ್ಲಿರುವ ಗದ್ದೆಮ್ಮ ದೇವಿಯು ಪ್ರತಿದಿನ ಬೆಳಗ್ಗೆ ಮತ್ತು ಸಾಯಂಕಾಲ ಪೂಜಿಸಿಕೊಳ್ಳುತ್ತಾಳೆ. ಈಕೆ ಊರಿನ ಪ್ರಮುಖ ದೇವತೆಯಾಗಿ ಪೂಜೆಗೊಳ್ಳುತ್ತಾಳೆ. ಈ ದೇವತೆಗೆ ಪಾಂಚಾಳ ಸಮುದಾಯದವರು ದಿನನಿತ್ಯ ಪೂಜೆ ಮಾಡುತ್ತಾರೆ. ಈ ದೇವಸ್ಥಾನ ಆಡಳಿತದ ಅಧಿಕಾರ ಸರಕಾರಕ್ಕೆ ಸಂಬಂಧಪಟ್ಟಿರುತ್ತದೆ. ಯಾದಗಿರಿ ಜಿಲ್ಲೆಯ ನಾರಾಯಣಪುರ ಹೋಬಳಿಗೆ ಸಂಬಂಧಿಸಿರುತ್ತದೆ. ಈ ದೇವಿಯನ್ನು ಪಾಂಚಾಳರಷ್ಟೆ ಪೂಜಿಸುವುದಲ್ಲದೆ ಊರಿನ ಎಲ್ಲಾ ಸಮುದಾಯಗಳು ಮತ್ತು ಸುತ್ತಮುತ್ತ ಗ್ರಾಮಗಳಾದ ಹುನಗುಂದ, ಮುದ್ದೇಬಿಹಾಳ, ಯಾದಗಿರಿ ಇಲ್ಲಿಂದ ಹೆಚ್ಚಿನ ಸಂಖ್ಯೆಯಲ್ಲಿ ಈ ದೇವಿಯ ಭಕ್ತರು ಬಂದು ಪೂಜಿಸುತ್ತಾರೆ. ಬಂದಹುಣ್ಣಿಮೆಯಲ್ಲಿ ವರ್ಷಕ್ಕೊಂದು ಬಾರಿ ಜಾತ್ರೆ ನಡೆಯುತ್ತದೆ. ಜಾತ್ರೆ ಸಂದರ್ಭದಲ್ಲಿ ೭ ಗ್ರಾಮಗಳಿಗೆ ಹೋಗಿ ಉಡಿತುಂಬಿಸಿಕೊಂಡು ಅಲ್ಲಿನ ಭಕ್ತರಿಂದ ಪೂಜಿಸಿಕೊಂಡು ಬರುತ್ತಾಳೆ. ನಾಗರಭಟ್ಟ, ಜಂಗಿನಗಡ್ಡಿ,

ರೂಡಲಬಂಡ ಗ್ರಾಮಗಳಿಗೆ ಒಂದು ರಾತ್ರಿ ಹೋಗಿ ತನ್ನ ಗುಡಿಗೆ ಬಂದು ಜಾತ್ರೆ ಮಾಡಿಕೊಳ್ಳುತ್ತಾಳೆ. ಜಾತ್ರೆಗೆ ಪ್ರಾಣಿ ಬಲಿ ಕೊಡುವ ಪದ್ಧತಿ ಇದೆ. ಶ್ರಾವಣದಲ್ಲಿ ಅಮ್ಮನಿಗೆ ತೆಪ್ಪ ಕಟ್ಟಿ ನದಿಗೆ ಬಿಡುತ್ತಾರೆ. ಮತ್ತೆ ಕರೆದುಕೊಂಡು ಬರುತ್ತಾರೆ.

ದೇವರಗಡ್ಡೆಯಲ್ಲಿರುವ ಉಳಿದೆಲ್ಲ ದೇವರಗಳನ್ನು ಸಾಮಾನ್ಯವಾಗಿ ಊರಿನ ಜನರೆಲ್ಲ ಹಬ್ಬ ಹರಿದಿನಗಳಲ್ಲಿ ಮತ್ತು ಅವರವರ ವಾರಗಳಂದು ಪೂಜೆ ಮಾಡುತ್ತಾರೆ. ಹೆಣ್ಣು ದೇವತೆಗಳು ಮಂಗಳವಾರ ಶುಕ್ರವಾರಗಳಂದು, ಹನುಮಪ್ಪ ಶನಿವಾರಗಳಂದು ಸಾಮಾನ್ಯವಾಗಿ ಗಡ್ಡೆಯ ಜನರಿಂದ ಪೂಜಿಸಲ್ಪಡುತ್ತವೆ. ಗಡ್ಡೆಯಲ್ಲಿ ಮಾಳಿಂಗರಾಯ ಅಥವಾ ಮಾನಪ್ಪಯ್ಯ ಎಂದು ಕೂಡ ಕರೆಯುತ್ತಾರೆ. ಕುರುಬ ಸಮುದಾಯದವರು ಮಾಳಿಂಗ ಎಂದು ಪೂಜಿಸುತ್ತಾರೆ. ಗಡ್ಡೆಯ ಎಲ್ಲ ಸಮುದಾಯಗಳು ಮಾನಪ್ಪಯ್ಯ ಎಂದು ಪೂಜಿಸುತ್ತಾರೆ. ಆದರೆ ದಿನನಿತ್ಯ ಪೂಜೆಗೊಳ್ಳವುದಿಲ್ಲ. ಗದ್ದೆಮ್ಮದೇವಿಯ ಜಾತ್ರೆಯ ಸಂದರ್ಭದಲ್ಲಿ ಮೊದಲು ಮಾನಪ್ಪಯ್ಯನಿಗೆ ಪೂಜೆ. ಆ ನಂತರ ಗದ್ದೆಮ್ಮದೇವಿ ಜಾತ್ರೆ ಪ್ರಾರಂಭ ಮಾಡುತ್ತಾರೆ. ಇತನಿಗೆ ಅಂತಹ ಯಾರು ಪೂಜಾರಿಗಳು ಇಲ್ಲ.

ಜಲದುರ್ಗ ನಡುಗಡ್ಡೆಯಲ್ಲಿ ಗಡ್ಡೆಯ ಪ್ರಮುಖ ದೇವರು ಸಂಗಮನಾಥ ಮತ್ತು ಯಲ್ಲಮ್ಮ. ಇಲ್ಲಿ ಸಂಗಮನಾಥನು ಹಂಚಿನಾಳ ಗಡ್ಡೆಯಲ್ಲಿರುವ ಜಂಗಮ ಸಮುದಾಯದವರಿಂದ ಪೂಜೆಗೊಳ್ಳುತ್ತಾನೆ. ಆದರೆ ಅವರು ವರ್ಷಕ್ಕೊಂದು ಬಾರಿ ಮಾತ್ರ ಪೂಜೆ ಮಾಡುತ್ತಾರೆ. ದಿನನಿತ್ಯ ಪೂಜೆಗೊಳ್ಳುತ್ತಿರುವ ಸಂಗಮನಾಥನಿಗೆ ಒಂದು ದಿನಕ್ಕೆ ಎರಡು ಬಾರಿ ಪೂಜೆ ನಡೆಯುತ್ತದೆ. ದಿನ ಪೂಜೆ ಮಾಡುವರು. ಇವರು ದೇವದುರ್ಗ ತಾಲೂಕಿನ ಗಬ್ಬೂರಿನಿಂದ ಬಂದ ಶರಣಮ್ಮರಿಂದ ಪ್ರಾರಂಭವಾಗಿದೆ. ಇದು ಸಂಗಮನಾಥ ಗುಡಿಯ ಪಕ್ಕ ಮಠವನ್ನು ಕಟ್ಟಿಕೊಂಡು ಇಲ್ಲಿ ನೆಲೆಸಿ ಸಂಗಮನಾಥನ ಸೇವೆ ಮಾಡುವುದರ ಮೂಲಕ ಇಲ್ಲಿ ಐಕ್ಯರಾದರು ಎಂದು ಹೇಳುತ್ತಾರೆ. ಈಗ ಇದೇ ಕುಟುಂಬದ ಬಸವರಾಜ ತಾತ ಎನ್ನುವವರು ಸಂಗಮನಾಥನಿಗೆ ದಿನನಿತ್ಯ ಪೂಜೆ ಮಾಡಿಕೊಂಡು ಇಲ್ಲಿ ನೆಲೆಸಿರುತ್ತಾರೆ. ಇವರು ಜಂಗಮ ಸಮುದಾಯದವರು. ಆದರೆ ಸಂಗಮನಾಥನ ಯಾವುದೇ ಅಧಿಕಾರ ಆಡಳಿತ ಇವರಿಗೆ ಸಂಬಂಧಿಸಿಲ್ಲ. ಹಂಚಿನಾಳದಲ್ಲಿರುವವರಿಗೆ ಈ ದೇವಸ್ಥಾನ ಆಡಳಿತ ಸಂಬಂಧಿಸಿದೆ ಎಂದು ಹೇಳಬಹುದು.

ಸಂಗಮನಾಥನ ಒಂದು ವಿಶೇಷವೆಂದರೆ ಹಿಂದೂ ಮುಸ್ಲಿಂ ಭಾವೈಕ್ಯತೆಯ ಕೇಂದ್ರವಾಗಿದೆ. ಏಕೆಂದರೆ ಹಿಂದೆ ಈ ಪ್ರದೇಶ ಹಿಂದೂ ಮತ್ತು ಮುಸ್ಲಿಂ ಆಳ್ವಿಕೆಗೆ ಒಳಪಟ್ಟಿರುವುದು ಜಲದುರ್ಗ ಶಾಸನದಿಂದ ತಿಳಿದುಬರುತ್ತದೆ. ಸಂಗಮನಾಥ ಗುಡಿಯ ಹೊರಭಾಗ ಮುಸ್ಲಿಂ ವಿನ್ಯಾಸ ಗುಡಿಯೊಳಗೆ ಇರುವ ಮೂರ್ತಿ ಹಿಂದೂ ಶಿವಲಿಂಗ ಇದೆ. ಅದಕ್ಕಾಗಿ ಈ ದೇವಸ್ಥಾನಕ್ಕೆ ಎಲ್ಲ ಸಮುದಾಯದವರು ನಡೆದುಕೊಂಡು ಪೂಜೆಮಾಡುತ್ತಾರೆ. ವರ್ಷಕ್ಕೆ ಒಂದು ಬಾರಿ ಶಿವರಾತ್ರಿಗೆ ಜಾತ್ರೆ ನಡೆಯುತ್ತದೆ.

ಛಟ್ಟಿ ಅಮವಾಸ್ಯೆಗೆ ಕಾರ್ತಿಕ ದೀಪೋತ್ಸವ ನಡೆಯುತ್ತದೆ. ಇಲ್ಲಿ ಮಾಂಸಾಹಾರ ನಡೆಯುವುದಿಲ್ಲ. ಸಸ್ಯಹಾರಿ ಎಂದು ಹೇಳಬಹುದು.

ರುಂಡ ಯಲ್ಲಮ್ಮ ದೈವ. ಇದೇ ಗಡ್ಡೆಯಲ್ಲಿರುವ ಇನ್ನೊಂದು ದೈವ ನದಿಯ ದಂಡೆಗಿದೆ. ಈ ದೇವಿಗೆ ಭಾರತ ಹುಣ್ಣಿಮೆಯಲ್ಲಿ ಅತಿ ಹೆಚ್ಚು ಪ್ರಾಣಿಬಲಿಯನ್ನು ಕೊಡುತ್ತಾರೆ. ಶುಕ್ರವಾರ, ಮಂಗಳವಾರ ಅತಿಹೆಚ್ಚು ಜನ ಸುತ್ತಮುತ್ತ ಗ್ರಾಮಗಳಿಂದ ಬರುತ್ತಾರೆ. ಅವರಿಂದ ಪೂಜಿಸಲ್ಪಡುತ್ತಾಳೆ. ಈಕೆಯ ಪೂಜಿಸುವ ಪೂಜಾರಿಗಳು ಹಂಚಿನಾಳ ಗಡ್ಡೆಯಿಂದ ಬಂದು ಮಂಗಳವಾರ, ಶುಕ್ರವಾರ ಅಷ್ಟೆ ಪೂಜೆಮಾಡುತ್ತಾರೆ. ಪೂಜೆ ಮಾಡುವವರು ಅಂಬಿಗೇರ ಸಮುದಾಯದವರು. ದಿನನಿತ್ಯ ಪೂಜೆ ನಡೆಯುವುದಿಲ್ಲ. ಇನ್ನುಳಿದ ದೇವರುಗಳನ್ನು ಸಾಮಾನ್ಯವಾಗಿ ಗಡ್ಡೆಯ ಜನರು ಪೂಜಿಸುತ್ತಾರೆ.

ಹಂಚಿನಾಳ ದ್ಯಾವಮ್ಮ ಊರಿನ ಪ್ರಮುಖ ದೇವತೆಯಾಗಿ ಪೂಜೆಗೊಳ್ಳುತ್ತಾಳೆ. ಈ ದೇವಿಯನ್ನು ಈ ಗಡ್ಡೆಯಲ್ಲಿ ನಾಯಕ ಸಮುದಾಯದವರು ಪೂಜಿಸುತ್ತಾರೆ. ಒಂದು ದಿನಕ್ಕೆ ಎರಡು ಬಾರಿ ಪೂಜೆ ಮಾಡುತ್ತಾರೆ. ಬೆಳಿಗ್ಗೆ ಮತ್ತು ಸಾಯಂಕಾಲ ಪೂಜೆ. ೯ ವರ್ಷಕ್ಕೆ ಅಥವಾ ೧೧ ವರ್ಷಕ್ಕೆ ಒಂದು ಬಾರಿ ಜಾತ್ರೆ ನಡೆಯುತ್ತದೆ. ಈ ದೇವಿಯ ಜಾತ್ರೆ ಮಾಡಬೇಕಾದರೆ ಪಕ್ಕದ ಗ್ರಾಮವಾದ ೫ ಕಿ.ಮೀ ದೂರದಲ್ಲಿರುವ ಹಾಲಭಾವಿ ದ್ಯಾವಮ್ಮನನ್ನು ಕರೆಸಿಕೊಂಡು ಎರಡು ದಿನ ಜಾತ್ರೆ ಮಾಡುತ್ತಾರೆ.

ಈ ದೇವಿಗೆ ಎಲ್ಲ ವರ್ಗದ ಜನರು ನಡೆದುಕೊಳ್ಳುತ್ತಾರೆ. ಮಂಗಳವಾರ, ಶುಕ್ರವಾರ ಗಡ್ಡೆಯ ಜನರು ಗುಡಿಗೆ ತಪ್ಪದೆ ಹೋಗಿ ಪೂಜೆಮಾಡುತ್ತಾರೆ. ಇನ್ನುಳಿದ ದೇವರುಗಳನ್ನು ಹಬ್ಬಹರಿದಿನಗಳಲ್ಲಿ ಪೂಜಿಸುತ್ತಾರೆ. ಈ ದೇವಿಯ ದೇವಸ್ಥಾನದ ಆಡಳಿತ ಗಡ್ಡೆಯ ದೈವಕ್ಕೆ ಒಳಪಟ್ಟಿರುತ್ತದೆ. ಯರಗೋಡಿಯಲ್ಲಿ ಕೂಡ ಅಷ್ಟೆ ದ್ಯಾಮವ್ವನೇ ಊರಿನ ಪ್ರಮುಖ ದೇವಿಯಾಗಿ ಮಾರ್ಪಡುತ್ತಾಳೆ. ಇಲ್ಲಿ ಹಾಲಭಾವಿ ದ್ಯಾಮವ್ವನ ಕರೆಸಿ ಜಾತ್ರೆ ಮಾಡಿಸುತ್ತಾರೆ. ಇನ್ನುಳಿದ ದೇವರುಗಳನ್ನು ವಿಶೇಷ ದಿನಗಳಲ್ಲಿ ಪೂಜಿಸುತ್ತಾರೆ. ಪಾಲಕಮ್ಮ, ಈ ದೇವಿಯನ್ನು ಗಡ್ಡೆಯ ಮಕ್ಕಳಿಗೆ ತಟ್ಟು-ಹೊಟ್ಟು ಎದ್ದಾಗ ಪಾಲಕಮ್ಮನಿಗೆ ಒಂದು ಚರಿಗೆ ನೀರು ಬೇವಿನಕಡ್ಡಿ ಹೋಳಿಗೆ ಮತ್ತು ಕೋಳಿಯನ್ನು ಹಾರಿಸಿ ಪೂಜಿಸಿ ಬರುತ್ತಾರೆ. ಈ ದೇವಿಗೆ ಪೂಜಾರಿ ತಳವಾರ ಇರುತ್ತಾನೆ. ಆದರೆ ಅವರು ದಿನ ಪೂಜಿಸುವುದಿಲ್ಲ. ದೇವಿಗೆ ಎಲ್ಲ ವರ್ಗದ ಸಮುದಾಯದವರು ಪೂಜಿಸುತ್ತಾರೆ. ಪ್ರಾಣಿಗಳು ಸಾಯುತ್ತ ಇದ್ದರೆ ಈ ದೇವಿಗೆ ಹರಕೆ ಪ್ರಾಣಿಗಳನ್ನು ಹರಕೆ ಬಿಡುತ್ತಾರೆ.

ಉಸುರುಗಲ್ಲು ಇದು ದೇವರ ಮೂರ್ತಿ ಅಲ್ಲ. ದ್ಯಾಮವ್ವನ ಗುಡಿಯ ಮುಂದೆ ಇರುವ ಉದ್ದನೆಯ ಸ್ತೂಪಕಂಬದಂತದೇ. ಊರಿನ ಜನ ಇದಕ್ಕೆ ತಮಗೆ ದೇಹದಲ್ಲಿ ಉಸಿರು ಹಿಡಿದಿದ್ದರೆ

ಒಂದು ಮೂರು ಸಲ ಸುತ್ತುಹಾಕಿ ಅದರ ಮೇಲೆ ಎಣ್ಣೆಹಾಕಿ, ನಮಸ್ಕಾರಮಾಡಿದರೆ ಅವರಿಗೆ ಉಸುರ ಬಿಡುತ್ತದೆ. ಎಲ್ಲಾ ಸಮುದಾಯದವರು ಇದನ್ನು ಸುತ್ತುಹಾಕಬಹುದು.

ಕಡದರಗಡ್ಡೆಯಲ್ಲಿರುವ ಕಂದರಮ್ಮದೇವಿ ಗಡ್ಡೆಯ ಪ್ರಮುಖ ದೇವತೆ. ಬೇಡ ಸಮುದಾಯದವರು ಪೂಜಿಸುತ್ತಾರೆ. ಆಗಿಹುಣ್ಣಿಮೆಗೆ ೩ ವರ್ಷಕ್ಕೆ ಒಂದು ಬಾರಿ ಜಾತ್ರೆ ನಡೆಯುತ್ತದೆ. ಪ್ರತಿ ವರ್ಷ ಉಡಿ ತುಂಬುವ ಕಾರ್ಯಕ್ರಮ ನಡೆಯುತ್ತದೆ. ಅಮ್ಮನಿಗೆ ಪ್ರಾಣಿಬಲಿ ನಡೆಯುತ್ತದೆ. ಬೇಡಸಮುದಾಯದವರಷ್ಟೆ ನಡೆದುಕೊಳ್ಳುತ್ತಾರೆ. ಶ್ರಾವಣ ಮಾಸದಲ್ಲಿ ಹನುಮಂತಪ್ಪನ ಪರ್ವ ನಡೆಯುತ್ತದೆ. ಪ್ರತಿವರ್ಷಕ್ಕೆ ಒಂದು ಬಾರಿ ಮಾಡುತ್ತಾರೆ. ಹೋಳಿಗೆ, ಹುಗ್ಗಿ ಪ್ರಸಾದ ಮಾಡುತ್ತಾರೆ. ಮಾಂಸಹಾರ ನಡೆಯುವುದಿಲ್ಲ. ಎಲ್ಲಾ ಸಮುದಾಯದವರು ನಡೆದುಕೊಳ್ಳುತ್ತಾರೆ. ಇನ್ನುಳಿದ ದೇವರುಗಳು ವಾರಗಳಂದು ಪೂಜಿಸಲ್ಪಡುತ್ತವೆ.

ನೀಲಕಂಠರಾಯನಗಡ್ಡೆಯಲ್ಲಿ ನೀಲಕಂಠೇಶ್ವರ ಪ್ರಮುಖ ದೇವರು. ಪ್ರತಿದಿನ ಪೂಜಿಸಲ್ಪಡುವುದಿಲ್ಲ. ಏಕೆಂದರೆ ಗುರಗುಂಟಿಯಿಂದ ಜಂಗಮ ವರ್ಗದ ಪೂಜಾರಿ ಬಂದು ಸೋಮವಾರ, ಅಮವಾಸ್ಯೆ, ಹಬ್ಬಹರಿದಿನಗಳಲ್ಲಿ ಮಾತ್ರ ಪೂಜಿಸುತ್ತಾನೆ. ಅದು ೧ ಬಾರಿ ಪೂಜಿಮಾಡಿ ಹೋಗಿ ಬಿಡುತ್ತಾನೆ. ಗಡ್ಡೆಯ ಜನರು ಸೋಮವಾರದಂದು ಗುಡಿಗೆ ಹೋಗಿ ನಮಸ್ಕಾರ ಮಾಡಿಬರುತ್ತಾರೆ. ವಿಶೇಷ ದಿನಗಳಲ್ಲಿ ಕಾಯಿ, ಕರ್ಪೂರ ಮಾಡಿಸುತ್ತಾರೆ. ಈ ಗಡ್ಡೆಯಲ್ಲಿ ಬೇಡ ಸಮುದಾಯದವರು ಅಷ್ಟೆ ವಾಸವಾಗಿದ್ದಾರೆ. ಬೇರೆ ಸಮುದಾಯ ಇಲ್ಲ.

ಈ ದೇವರ ವಂಶಸ್ಥರು ಸುರಪುರದ ಬೇಡ ನಾಯಕರು ಎಂದು ಹೇಳುತ್ತಾರೆ. ಈ ದೇವಸ್ಥಾನ ಯಾರ ಆಡಳಿತಕ್ಕೆ ಒಳಪಟ್ಟಿಲ್ಲ. ಗಡ್ಡೆಯ ಜನರ ಸಮ್ಮುಖದಲ್ಲಿ ನಡೆಯುತ್ತದೆ. ಹನುಮಪ್ಪನಿಗೆ ಶ್ರಾವಣದಲ್ಲಿ ಎಲೆ ಪೂಜೆ ನಡೆಯುತ್ತದೆ. ಈ ದೇವರಿಗೆ ಪ್ರತಿ ಶನಿವಾರ ಗಡ್ಡೆಯ ಜನರು ನಡೆದುಕೊಳ್ಳುತ್ತಾರೆ. ಇದು ಕೂಡ ಅಷ್ಟೆ ಯಾರೂ ಪೂಜಾರಿಗಳಿಲ್ಲ. ರಾಮಗಡ್ಡೆಯಲ್ಲಿರುವ ಚೋಳೇಂದ್ರ ಮಹಾಸ್ವಾಮಿ ಮತ್ತು ರಾಮಲಿಂಗೇಶ್ವರ ಪ್ರಮುಖ ದೇವರುಗಳು. ಸಂಕ್ರಾಂತಿಗೆ ಪ್ರತಿ ವರ್ಷ ಜಾತ್ರೆ ನಡೆಯುತ್ತದೆ. ಶ್ರಾವಣದಲ್ಲಿ ರುದ್ರಾಭಿಷೇಕ ನಡೆಯುತ್ತದೆ. ಪಲ್ಲಕಿ ಸೇವೆ, ರಥೋತ್ಸವ, ಉಚ್ಚಯ್ಯ, ನಂದಿಕೋಲ ಸೇವೆ ನಡೆಯುತ್ತದೆ.

ಇಲ್ಲಿ ಎಲ್ಲ ದೇವರುಗಳಿಗೆ ಪ್ರತಿದಿನ ಬೆಳಿಗ್ಗೆ ಮತ್ತು ಸಾಯಂಕಾಲ ಪೂಜೆ ನಡೆಯುತ್ತದೆ. ಈ ಮಠದ ಸಂಪೂರ್ಣ ಆಡಳಿತವನ್ನು ನಾಲ್ಕನೇ ಪೀಠಾಧಿಪತಿಯಾದ ಈಗಿನ ಸಿದ್ಧಲಿಂಗಸ್ವಾಮಿ ಆಡಳಿತಕ್ಕೆ ಒಳಪಟ್ಟಿದೆ. ರಾಮಗಡ್ಡೆಯ ೧೨೦ ಎಕರೆಯ ಒಟ್ಟು ಭೂ ವಿಸ್ತೀರ್ಣ ಇವರ ಹೆಸರಿನಲ್ಲಿದೆ ಎಂದು ಹೇಳುತ್ತಾರೆ. ೧೯೬೪ ರಿಂದ ಈ ಮಠದ ಆಡಳಿತವನ್ನು ನಡೆಸುತ್ತಿದ್ದಾರೆ.

ಕುರವಪುರಗಡ್ಡೆಯಲ್ಲಿರುವ ದತ್ತಾತ್ರೇಯ ಮತ್ತು ಸಾವರಮ್ಮ ಗಡ್ಡೆಯ ಪ್ರಮುಖ ದೇವರುಗಳು. ದತ್ತಾತ್ರೇಯನನ್ನು ಬ್ರಾಹ್ಮಣ ಸಮುದಾಯದವರು ಪೂಜಿಸುತ್ತಾರೆ. ೧ ದಿನಕ್ಕೆ ಎರಡು ಬಾರಿ ಪೂಜಿಮಾಡುತ್ತಾರೆ. ಈ ದೇವಸ್ಥಾನದ ಹೊರಭಾಗದಲ್ಲಿ ಊರಿನ ಅಗ್ರಹಾರ ಎಂದು ಕರೆಯುತ್ತಾರೆ. ದತ್ತಾತ್ರೇಯನ ರೂಪವೇ ಶ್ರೀಪಾದವಲ್ಲಭ ದೇವಸ್ಥಾನವಾಗಿ ಪೂಜಿಗೊಳ್ಳುತ್ತದೆ. ಈ ದೇವಸ್ಥಾನದ ಆಡಳಿತವನ್ನು ಅಗ್ರಹಾರದಲ್ಲಿ ವಾಸವಾಗಿರುವ ಎರಡು ಕುಟುಂಬಗಳು ನೋಡಿಕೊಳ್ಳುತ್ತಿವೆ. ಒಂದು ವಾಸುದೇವ ಭಟ್ಟ ಪೂಜಾರ. ಇನ್ನೊಂದು ಕೇಶವ ಭಟ್ಟ ಪೂಜಾರ ಆಡಳಿತಕ್ಕೆ ಒಳಪಟ್ಟಿದೆ. ಇವರು ಈ ದೇವಸ್ಥಾನದ ಪೂಜೆಪುನಸ್ಕಾರ, ಜಾತ್ರೆಗಳನ್ನು ನೋಡಿಕೊಂಡು ಹೋಗುತ್ತಾರೆ.

ವರ್ಷಕ್ಕೆ ೪ ಬಾರಿ ಉತ್ಸವ ಕಾರ್ಯಕ್ರಮ ನಡೆಯುತ್ತದೆ. ಬೆಳಿಗ್ಗೆ ೪.೩೦ ರಿಂದ ೯ ಘಂಟೆಯವರೆಗೆ ಪೂಜೆ ನಡೆಯುತ್ತದೆ. ಸಾಯಂಕಾಲ ೭ ರಿಂದ ೮ ಘಂಟೆಯವರೆಗೆ ಪೂಜೆ ನಡೆಯುತ್ತದೆ. ಭಜನೆ, ಆರತಿ, ಸೇವೆ ನಡೆಯುತ್ತದೆ. ಪ್ರತಿಯೊಂದು ಹುಣ್ಣಿಮೆಗೆ ವಿಶೇಷ ಕಾರ್ಯಕ್ರಮಗಳು, ಪಲ್ಲಕಿ ಸೇವೆ ನಡೆಯುತ್ತದೆ.

ಈ ದೇವಸ್ಥಾನಕ್ಕೆ ಮಹಾರಾಷ್ಟ್ರದಿಂದ ಬರುವ ಅತಿಹೆಚ್ಚು ಭಕ್ತರನ್ನು ಕಾಣಬಹುದು. ಹಾಗೆ ಆಂಧ್ರ, ಕರ್ನಾಟಕದಿಂದ ಕೂಡ ಬ್ರಾಹ್ಮಣ ಸಮುದಾಯದವರೇ ಅತಿ ಹೆಚ್ಚಿನ ಸಂಖ್ಯೆಯಲ್ಲಿ ನಡೆದುಕೊಳ್ಳುತ್ತಾರೆ. ಅಂದರೆ ಗರ್ಭಗುಡಿಯೊಳಗೆ ಬ್ರಾಹ್ಮಣರಿಗಷ್ಟೇ ಪ್ರವೇಶ. ಉಳಿದ ಸಮುದಾಯದ ವರಿಗೆ ಗರ್ಭಗುಡಿಯೊಳಗೆ ಪ್ರವೇಶವಿಲ್ಲ. ಆದರೂ ಎಲ್ಲಾ ಸಮುದಾಯದವರು ನಡೆದುಕೊಳ್ಳುತ್ತಾರೆ.

ಸಾವರಮ್ಮದೇವಿ ಜಾತ್ರೆ ಕೂಡ ನಡೆಯುತ್ತದೆ. ಆದರೆ ದಿನನಿತ್ಯ ಆ ದೇವಿ ಪೂಜಿಸಲ್ಪಡುವುದಿಲ್ಲ. ಜಾತ್ರೆಗಷ್ಟೇ ಪೂಜಿಸಲ್ಪಡುತ್ತಾಳೆ. ೩ ವರ್ಷಕ್ಕೆ ಒಂದು ಬಾರಿ ಜಾತ್ರೆ ನಡೆಯುತ್ತದೆ. ಈ ದೇವಿಯನ್ನು ಪೂಜಿಸಲ್ಪಡುವವರು ಗೊಲ್ಲ ಸಮುದಾಯದವರು. ಈ ದೇವಿಗೆ ಪ್ರಾಣಿ ಬಲಿ ನಡೆಯುತ್ತದೆ. ಮಂಗಳ, ಶುಕ್ರವಾರ ಅಷ್ಟೆ ಪೂಜೆ ಮಾಡುತ್ತಾರೆ. ಊರಿನ ಬ್ರಾಹ್ಮಣ ಸಮುದಾಯ ಬಿಟ್ಟು ಎಲ್ಲಾ ವರ್ಗದವರು ನಡೆದುಕೊಳ್ಳುತ್ತಾರೆ. ಇನ್ನುಳಿದ ದೇವರುಗಳು ಸಾಮಾನ್ಯವಾಗಿ ಪೂಜಿಸಲ್ಪಡುತ್ತವೆ. ನಾರದಗಡ್ಡೆಯಲ್ಲಿರುವ ಚೆನ್ನಬಸವೇಶ್ವರ ಪ್ರಮುಖ ದೇವರು. ಈ ಮಠದಲ್ಲಿರುವ ಎಲ್ಲ ದೇವರುಗಳಿಗೆ ೧ ದಿನಕ್ಕೆ ಎರಡು ಬಾರಿ ಪೂಜೆ ನಡೆಯುತ್ತದೆ. ಮೊದಲು ಈ ದೇವಸ್ಥಾನ ಪೀಠಾಧಿಪತಿಗಳ ಅಧಿಕಾರದಲ್ಲಿರುತ್ತಿತ್ತು. ಕೆಲವು ವರ್ಷಗಳ ಹಿಂದೆ ಉರವಕುಂಡ ಸ್ವಾಮಿಗಳು, ನಾರದಗಡ್ಡೆ ಸ್ವಾಮಿಗಳು ಪೀಠದ ಸಲುವಾಗಿ ಜಗಳವಾಡಿದ ಕಾರಣ ಇದು ಈಗ ಸರಕಾರದ ಅಧೀನಕ್ಕೆ ಒಳಪಟ್ಟಿದೆ. ರಾಯಚೂರು ಜಿಲ್ಲಾ ವ್ಯಾಪ್ತಿಗೆ ಸೇರಿದೆ. ಈಗ ಸರಕಾರವೇ ಒಬ್ಬ ಪೂಜಾರಿಯನ್ನು ನೇಮಿಸಿ ಅದರ ಕಾರ್ಯಭಾರವನ್ನು ನೋಡಿಕೊಳ್ಳುತ್ತದೆ. ವರ್ಷಕ್ಕೆ ಒಂದು ಬಾರಿ ಶಿವರಾತ್ರಿಗೆ ಜಾತ್ರೆ ನಡೆಯುತ್ತದೆ. ಈಶ್ವರಯ್ಯ ಎನ್ನುವ ಲಿಂಗಾಯಿತ ಸಮುದಾಯದ ವ್ಯಕ್ತಿಯನ್ನು ಪೂಜಾರಿಯಾಗಿ ನೇಮಿಸಿದೆ.

ಜಾತ್ರೆಯಲ್ಲಿ ತೇರು, ಉಚ್ಚಯ್ಯ, ಪಲ್ಲಕ್ಕಿ ಸೇವೆ, ನಂದಿಕೋಲ ಸೇವೆ ನಡೆಯುತ್ತದೆ. ಪ್ರತಿ ಅಮವಾಸ್ಯೆಗೆ ರುದ್ರಾಭಿಷೇಕ ನಡೆಯುತ್ತದೆ. ನಾರದಗಡ್ಡೆ ತಪೋ ಸಿದ್ಧಿಗಳ ಭೂಮಿ ಎಂದು ಕರೆಯುತ್ತಾರೆ. ಯಾಕೆಂದರೇ ಇಲ್ಲಿ ಸಾಧುಸಂತರೇ ಹೆಚ್ಚು. ದೂರದೂರದ ಸ್ವಾಮಿಗಳು ಬಂದು ತಮ್ಮ ತಪಸ್ಸನ್ನು ಗಡ್ಡೆಯಲ್ಲಿ ಕೈಗೊಳ್ಳುತ್ತಾರೆ. ತಮ್ಮ ಸಿದ್ಧಿಯನ್ನು ಪಡೆದುಕೊಂಡು ಹೋಗುತ್ತಾರೆ. ಸಾಧುಗಳಿಗೆ ತಪಸ್ಸನ್ನು ಕೈಗೊಳ್ಳಲು, ಪ್ರತ್ಯೇಕವಾದ ನೆಲಮನೆಗಳಿವೆ. ಅಲ್ಲಿಗೆ ಸ್ವಾಮಿಗಳಷ್ಟೇ ಹೋಗುವ ಸ್ಥಳ. ಬೇರೆಯವರು ಹೋಗುವಂತಿಲ್ಲ. ಹೆಣ್ಣು ಮಕ್ಕಳಿಗೆ ಮೊದಲೇ ಪ್ರವೇಶವಿಲ್ಲ. ಒಟ್ಟಿನಲ್ಲಿ ನಾರದಗಡ್ಡೆಗೆ ಆಂಧ್ರ-ಕರ್ನಾಟಕದಿಂದ ಭಕ್ತರು ಅಮವಾಸ್ಯೆ ಮತ್ತು ಶಿವರಾತ್ರಿ, ಜಾಗರಣೆ, ಜಾತ್ರೆಗೆ ಹೆಚ್ಚಿನ ಜನಸಂಖ್ಯೆಯಲ್ಲಿ ಬರುತ್ತಾರೆ. ಎಲ್ಲ ಸಮುದಾಯದವರು ಇಲ್ಲಿ ಬರಬಹುದು ನಡೆದುಕೊಳ್ಳಬಹುದು.

### ೪.೫. ನಡುಗಡ್ಡೆ ದೈವಗಳು ಹಾಗೂ ಇತರೆ ದೈವಗಳೊಂದಿಗೆ ಸಂಬಂಧ

#### ದೇವರಗಡ್ಡೆಯ ಗದ್ದೆಮ್ಮ ಏಳು ಹಳ್ಳಿಗಳು

ಗದ್ದೆಮ್ಮದೇವಿ ತನ್ನ ಊರಿನ ಸುತ್ತ ಮುತ್ತಲ ಏಳು ಬಾಬುಗಾರ ಹಳ್ಳಿಗಳೊಂದಿಗೆ ಸಂಬಂಧವನ್ನು ಹೊಂದಿರುವುದನ್ನು ನೋಡಬಹುದು. ಜಂಗಿರಾಂಪೂರ, ರೋಡಲಬಂಡ, ಮೇಲಿನಗಡ್ಡೆ, ನಾಗರಭಟ್ಟ, ರೋಡಲಬಂಡ ತಾಂಡ ಹೀಗೆ ಈ ಹಳ್ಳಿಗಳಿಗೆ ತನ್ನ ಜಾತ್ರೆಯ ಸಂದರ್ಭದಲ್ಲಿ ಪ್ರತಿವರ್ಷ ಉಡಿತುಂಬಿಕೊಂಡು ಬರಲು ಹೋಗುತ್ತಾಳೆ. ಆ ಊರಿನ ಜನರು ಕೂಡ ಈ ದೇವಿಯೊಂದಿಗೆ ಗಾಢವಾದ ಭಕ್ತಿಯನ್ನು ಇಟ್ಟುಕೊಂಡಿರುತ್ತಾರೆ. ಈ ೭ ಹಳ್ಳಿಗಳಿಗಷ್ಟೇ ಅಲ್ಲ ಸುತ್ತಮುತ್ತಲ ಪ್ರದೇಶಗಳಿಗೆ ಈ ದೇವಿಯ ಪ್ರಭಾವ ಅತಿಹೆಚ್ಚು ಇದೆ ಎನ್ನುತ್ತಾರೆ. ಸುತ್ತಮುತ್ತಲ ಜನರ ನಾಮಕರಣದ ಹೆಸರುಗಳನ್ನು ನೋಡಿದರೆ ಗೊತ್ತಾಗುತ್ತದೆ. ಹೆಣ್ಣು ಮಕ್ಕಳಿಗೆ, ಗಂಡುಮಕ್ಕಳಿಗೆ, ಅದು ಮನೆಯ ಹಿರಿಯ ಮಕ್ಕಳಿಗೆ, ಕಿರಿಯ ಮಕ್ಕಳಿಗೆ, ಗದ್ದೆಮ್ಮ, ಗದ್ದೆಪ್ಪ ಹೆಸರು ಇಡುವ ವಾಡಿಕೆ ಇಲ್ಲಿದೆ ಮತ್ತು ದೇವರ ಗಡ್ಡೆಯಲ್ಲಿ ದೇವಿಯ ಹೆಸರಿನಿಂದಲೇ ತಮ್ಮ ಮಕ್ಕಳಿಗೆ ನಾಮಕರಣ ಮಾಡುತ್ತಾರೆ. ಇದನ್ನು ಎಲ್ಲಾ ಸಮುದಾಯಗಳಲ್ಲಿ ಕಾಣಬಹುದಾಗಿದೆ.

#### ಅಯ್ಯನಗುಡಿ ಶ್ರೀ ಗಂಗಾಧರೇಶ್ವರ

ಈ ದೇವಿಯು ಪ್ರತಿವರ್ಷ ಅಯ್ಯನಗುಡಿ ಶ್ರೀ ಗಂಗಾಧರೇಶ್ವರ ಜಾತ್ರೆಗೆ ಹೋಗಿ ಬರುತ್ತಾಳೆ. ಗಂಗಾಧರೇಶ್ವರ ಗದ್ದೆಮ್ಮದೇವಿ ಅಣ್ಣ ಅಥವಾ ತಂದೆ ಎಂದು ಹೇಳುತ್ತಾರೆ. ಗಂಗಾಧರೇಶ್ವರ ಕೂಡ ಗದ್ದೆಮ್ಮ ಮತ್ತು ಹಾಲಭಾವಿ ದ್ಯಾಮವ್ವನನ್ನು ಕರೆಸಿಕೊಂಡು ತನ್ನ ಜಾತ್ರೆಯನ್ನು ಮಾಡಿಸಿಕೊಳ್ಳುತ್ತಾನೆ ಎಂದು ಅಲ್ಲಿನ ವ್ಯಕ್ತಿ ಹೇಳುತ್ತಾರೆ. ಹಾಲಭಾವಿ ದ್ಯಾಮವ್ವ ಮತ್ತು ಗಡ್ಡೆಗದ್ದಮ್ಮ ಇಬ್ಬರು ಅಕ್ಕ ತಂಗಿಯರು. ಐತಿಹ್ಯ ಕಥೆ ಪ್ರಕಾರ ಒಂದಾನೊಂದು ಕಾಲದಲ್ಲಿ ಹಿಂದಕ್ಕೆ ಗದ್ದೆಮ್ಮದೇವಿ ಸಹೋದರಿ

ಅಥವಾ ದ್ಯಾಮವ್ವ ಇಬ್ಬರು ಅಯ್ಯನ ಗುಡಿಯ ಗಂಗಪ್ಪಯ್ಯನ ಜಾತ್ರೆಗೆ ಭಕ್ತಿ ಸೇವೆ ಪಡೆಯಲು ಹೋದಾಗ ಅವರಲ್ಲಿ ಪರಸ್ಪರ ಕಲಹ ಉಂಟಾಗಿ ಇಬ್ಬರು ಜಗಳವಾಡಿ ದೂರವಾಗಿರುತ್ತಾರೆ. ಗಂಗಾಧರೇಶ್ವರ ಜಾತ್ರೆಯ ಸಂದರ್ಭದಲ್ಲಿ ಭೇಟಿಯಾಗುತ್ತಾರೆ.

**ಜಲದುರ್ಗದ ಸಂಗನಾಥ**

ಈ ಕ್ಷೇತ್ರಕ್ಕೆ ಕಪ್ಪಡಿ ಕೂಡಲ ಸಂಗಮ ಎಂದು ಕರೆಯುವರು. ಈ ಹೆಸರು ಬರಲು ಕಾರಣ ಕೃಷ್ಣಾ ಮತ್ತು ಮಲಾಪಹಾರಿ ನದಿಗಳು ಒಂದಕ್ಕೊಂದು ಕೂಡಿದ್ದ ಕಾರಣ ಸಂಗಮ ಎಂದು, ಸಂಗಮನಾಥನಲ್ಲಿ ಬಸವೇಶ್ವರನು ಕೂಡಿದ್ದರಿಂದ(ಐಕ್ಯ) ಕೂಡಲಸಂಗಮವೆಂದೂ ಹೆಸರು. ಕೃಷ್ಣಾ ನದಿಯಲ್ಲಿ ಕೆಲವು ಕಾಲ ಸ್ನಾನಮಾಡಲು ಮೈಬಣ್ಣವು ಕಪ್ಪು ಆಗುವುದರಿಂದ "ತಪ್ಪದಿ ಸಂಗಮ" (ಕಪಿಲ) ಕ್ಷೇತ್ರವೆಂದೂ ಅನ್ನುವರು. ಆದರೆ ಅನೇಕರು ತಮಗೆ ಇಚ್ಛಾನುಸಾರವಾಗಿ ಕರೆಯುತ್ತಾರೆ. ರೂಢಿಯಲ್ಲಿ ಕೂಡಲಸಂಗಮವೆಂದು ಕರೆಯುತ್ತಾರೆ.

ಈ ಕ್ಷೇತ್ರವು ಪೂರ್ವಕಾಲದಿಂದಲೂ ಪ್ರಸಿದ್ಧಿ ಇತ್ತೆಂದು ಶ್ರೀಛಾಯ ಭಗವತಿ ಮಹಾತ್ಮೆಯ ಸ್ಕಂದ ಪುರಾಣಗಳು ಸಾರಿ ಹೇಳುತ್ತವೆ. ಇದು ಹೇಗೆಂದರೆ, ಕೃತಯುಗದಲ್ಲಿ ಈ ಕ್ಷೇತ್ರಕ್ಕೆ "ಭಾಸ್ಕರ ಕ್ಷೇತ್ರ"ವೆಂದೂ ಈಶ್ವರನಿಗೆ "ಅಮರೇಶ್ವರ"ನೆಂದೂ ಅನ್ನುತ್ತಿದ್ದರು. ತ್ರೇತಾಯುಗದಲ್ಲಿ ಈ ಕ್ಷೇತ್ರಕ್ಕೆ "ಪರಶುರಾಮಕ್ಷೇತ್ರ"ವೆಂದೂ, ಈಶ್ವರನಿಗೆ ಯಜ್ಞೇಶ್ವರನೆಂದೂ ಅನ್ನುತ್ತಿದ್ದರು. ದ್ವಾಪರಯುಗದಲ್ಲಿ ಈ ಕ್ಷೇತ್ರಕ್ಕೆ "ಕಪಿಲಕ್ಷೇತ್ರ"ವೆಂದೂ, ಈಶ್ವರನಿಗೆ ಸಿದ್ದೇಶ್ವರನೆಂದೂ ಅನ್ನುತ್ತಿದ್ದರು. ಕಲಿಯುಗದಲ್ಲಿ ಈ ಕ್ಷೇತ್ರಕ್ಕೆ ಸಂಗಮ (ಕೂಡಲ ಸಂಗಮ) ಕ್ಷೇತ್ರವೆಂದೂ ಈಶ್ವರನಿಗೆ ಸಂಗಮೇಶ್ವರನೆಂದೂ ಅನ್ನುತ್ತಾರೆ. ಇನ್ನು ಭಾಸ್ಕರ ಕ್ಷೇತ್ರವೆಂದು ಹೆಸರು ಬರಲಿಕ್ಕೆ ಕಾರಣ, ಈ ಸ್ಥಳದಲ್ಲಿ ಸೂರ್ಯ ತೀರ್ಥವು ಇದ್ದು, ಇಲ್ಲಿ ಋಷಿಗಳು ಸ್ನಾನಮಾಡಿ ಚಂಡೇಶ್ವರನನ್ನು ಪೂಜಿಸಿ ಮುಕ್ತಿಯನ್ನು ಹೊಂದಿದರಂತೆ. ಸೂರ್ಯ ಅಂದರೆ ಭಾಸ್ಕರ, ಆದ್ದರಿಂದ ಈ ಹೆಸರು ಕೃತಯುಗದಲ್ಲಿ ಬಂದಿತು. ಪರಶುರಾಮ ಕ್ಷೇತ್ರವೆಂದು ಹೆಸರು ಬರಲು ಕಾರಣವೇನೆಂದರೆ ತ್ರೇತಾಯುಗದೊಳಗೆ ಪರಶುರಾಮ ದೇವರು ಕೃಷ್ಣಾ ನದಿಯಲ್ಲಿ ಸ್ನಾನ ಮಾಡಿಕೊಂಡು ಲಿಂಗಪೂಜೆಯನ್ನು ಮಾಡಿಕೊಳ್ಳುವ ಕಾಲದಲ್ಲಿ, ತನ್ನ ಹಸ್ತದಲ್ಲಿಯ ಲಿಂಗ ಈಶ್ವರನಲ್ಲಿ (ಅಮೃತೇಶ್ವರನಲ್ಲಿ) ಕೂಡಿಕೊಂಡಿದ್ದರಿಂದ ಈ ಕ್ಷೇತ್ರವು ಪರಶುರಾಮನ ಕ್ಷೇತ್ರವೆಂದು ಕರೆಯಲ್ಪಟ್ಟಿತು. ಕಪಿಲ ಕ್ಷೇತ್ರವೆಂದರೆ ಆ ಕಾಲದಲ್ಲಿ ಗೋವುಗಳ ಸಮುದಾಯದಿಂದ ಋಷಿವರ್ಯರು ಇರುತ್ತಿದ್ದರು. ಅವರು ಆ ಕಾಲಕ್ಕೆ ಐರಾವತ ತೀರ್ಥದ ಪಶ್ಚಿಮಕ್ಕೆ ಇರುವ ಕಲ್ಲಿನ ಹತ್ತಿರ ಸ್ನಾನ, ಜಪ-ತಪ ಮಾಡಿಕೊಂಡು ಸಿದ್ದೇಶ್ವರನನ್ನು ಪೂಜಿಸುತ್ತಿದ್ದರಿಂದ ಈ ಕ್ಷೇತ್ರಕ್ಕೆ (ಗೋವು) ಕಪಿಲ ತೀರ್ಥವೆಂದು ಹೆಸರು ದ್ವಾಪರ ಯುಗದಲ್ಲಿ ಬಂದಿತ್ತೆಂದು ಅನ್ನುವರು.

"ಕೂಡಲಸಂಗಮ ಕ್ಷೇತ್ರವೆಂದು ಹೆಸರು ಬರಲು ಕಾರಣವೇನೆಂದರೆ ಕಲಿಯುಗದಲ್ಲಿ ಬಸವೇಶ್ವರನು ಅವತರಿಸಿ ಶ್ರೀ ಸಂಗಮನಾಥನ ಪ್ರೇರಣೆಯಿಂದ ಕೆಲವು ಮಹತ್ವದ ಪವಾಡಗಳನ್ನು ತೋರಿಸಿದನು. ಈ ಮಹಿಮಾಕ್ಷೇತ್ರ ಸಂಗಮನಾಥನಲ್ಲಿ ಕೂಡಿಕೊಂಡಿದ್ದರಿಂದ ಕೂಡಲಸಂಗಮ ಕ್ಷೇತ್ರವೆಂದು ಅನ್ನುತ್ತಾರೆ"(ಚಪ್ಪರದ ಬಂದ ಆರ್.ಆಯ್., ೨೦೦೬, ಪು.೧೩೩-೧೩೪).

ಇದೇ ಸಂಗಮನಾಥನೇ ಜಲದುರ್ಗದಲ್ಲಿರುವ ಸಂಗಮನಾಥ. ತನ್ನ ಜೀವಿತ ಅವಧಿಯಲ್ಲಿ ಜಲದುರ್ಗದಲ್ಲಿ ಕೆಲವು ದಿನಗಳ ಕಾಲ ನೆಲೆಸಿದ ಕುರುಹಾಗಿ ಸಂಗಮನಾಥನ ಕ್ಷೇತ್ರ ಇದೆ. ಸುತ್ತಮುತ್ತಲ ಪ್ರದೇಶದ ಜನರು ಯಾರು ಕೂಡಲಸಂಗಮಕ್ಕೆ ಹೋಗದೆ ಜಲದುರ್ಗವೇ ಕೂಡಲಸಂಗಮವೆಂದು ನಂಬಿ ಸಾವಿರಾರು ಭಕ್ತರು ದಿನನಿತ್ಯ ಬಂದು ಹೋಗುತ್ತಾರೆ ಮತ್ತು ಶಿವರಾತ್ರಿ ಜಾಗರಣೆಯಂದು ಜಾತ್ರೆ ನಡೆಯುತ್ತದೆ. ಅಂದು ವಚನಗಳ ಹೇಳಿಕೆ ಕೂಡ ಇರುತ್ತದೆ. ಇಲ್ಲಿನ ಸುತ್ತಮುತ್ತ ಪ್ರದೇಶದಲ್ಲಿ ಸಂಗಮನಾಥನ ಪ್ರಭಾವವಿದೆ. ಹುಟ್ಟಿದ ಮಕ್ಕಳಿಗೆ ಸಂಗಣ್ಣ, ಸಂಗಪ್ಪ, ಸಂಗಮ ಎಂದು ನಾಮಕರಣ ಹೆಸರುಗಳನ್ನು ಕೇಳಬಹುದು.

ಮೇಲಿನ ಎಲ್ಲ ಅಂಶಗಳನ್ನು ನೋಡಿದಾಗ ಈ ಎಲ್ಲವುಗಳನ್ನು ಜಲದುರ್ಗದಲ್ಲಿ ಕಾಣಬಹುದಾಗಿದೆ. ಅಂದರೆ ಭಾಸ್ಕರ ಕ್ಷೇತ್ರ, ಪರಶುರಾಮ ಕ್ಷೇತ್ರ, ಕಪಿಲ ಕ್ಷೇತ್ರ, ಸಂಗಮ ಕ್ಷೇತ್ರ ಉದಾ: ಛಾಯ ಭಗವತಿ ಕ್ಷೇತ್ರ, ಇಲ್ಲಿ ೯ ತರದ ಕೊಂಡ ಕ್ಷೇತ್ರಗಳನ್ನು ನೋಡಬಹುದು. "ಛಾಯ" ಎಂದರೇ "ಸೂರ್ಯ" ಎಂದರ್ಥ.

**ಶ್ರೀ ಛಾಯಾ ಭಗವತಿ**

ನಮ್ಮ ಭಾರತ ದೇಶದಲ್ಲಿ ಅನೇಕ ತೀರ್ಥ ಯಾತ್ರಾ ಸ್ಥಾನಗಳಿದ್ದು, ಅವು ಭಗವಂತನ ಸನ್ನಿಧಾನದ ವಿಶೇಷ ಸಂಕೇತಗಳನ್ನು ಸೂಚಿಸುತ್ತವೆ. ಅವುಗಳಲ್ಲಿ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ನಾರಾಯಣಪುರದ ಈ ಛಾಯಭಗವತಿ ಕ್ಷೇತ್ರವು ಒಂದು. ಈ ಸುಕ್ಷೇತ್ರವು ನಾರಾಯಣಪುರದಿಂದ ೨ ಕಿ.ಮೀ. ಕೊಡೇಕಲ್‌ನಿಂದ ೯ ಕಿ.ಮೀ ಹತ್ತಿರದಲ್ಲಿ ಕೃಷ್ಣಾ ನದಿತೀರದಲ್ಲಿದೆ. ಈ ಕ್ಷೇತ್ರ "ದಕ್ಷಿಣಕಾಶಿ ಎಂದೇ" ಪ್ರಸಿದ್ಧಿ ಪಡೆದಿದೆ.

ಈ ಕ್ಷೇತ್ರಕ್ಕೆ ಕೊಡೇಕಲ್ ಗ್ರಾಮದ ಜೋಯಿಷರೇ ಕ್ಷೇತ್ರ ಪುರೋಹಿತರು. ಇವರ ನೇತೃತ್ವದಲ್ಲಿಯೇ ಪ್ರತಿವರ್ಷ ವೈಶಾಖಶುದ್ಧ ಪ್ರತಿಪದೆಯಿಂದ ವೈಶಾಖ ಶುದ್ಧ ತೃತೀಯಾ (ಅಕ್ಷಯ ತೃತೀಯಾ)ದವರೆಗೂ ಒಳ್ಳೆಯ ವಿಜೃಂಭಣೆಯಿಂದ ಕಾರ್ಯಕ್ರಮಗಳು ಜರುಗುವವು. ಈ ಕ್ಷೇತ್ರಕ್ಕೆ ಬೇರೆ ಬೇರೆ ರಾಜ್ಯಗಳಿಂದ ಯಾತ್ರಾರ್ಥಿಗಳು ಬರುತ್ತಾರೆ. ಯಾತ್ರಾರ್ಥಿಗಳು ಮೊದಮೊದಲು ತಮ್ಮ ಊಟದ ಅನುಕೂಲತೆಯನ್ನು ತಾವೇ ಮಾಡಿಕೊಂಡು ಹೋಗಬೇಕಾಗಿತ್ತು. ಆದರೆ ಈಗ ಭಕ್ತರ ಸಹಕಾರದಿಂದ ಅನ್ನಸಂತರ್ಪಣೆ ಕಾರ್ಯಕ್ರಮವು ಇಂದಿಗೂ ನಡೆದು ಬಂದಿದೆ.

ಈ ಅನ್ನಸಂತರ್ಪಣೆ ಕಾರ್ಯವು ಪ್ರಾರಂಭದಲ್ಲಿ ನಡೆಯಲು ಮುಖ್ಯ ಪ್ರೇರಕರೆಂದರೇ ಶ್ರೀ ದಿ. ಮಲಿರಾವ ಕುಲ್ಕರ್ಣಿ ನಾರಾಯಣಪುರ ಹಾಗೂ ಶ್ರೀ ದಿ. ಹನುಮದಾಸರು ಹಿರೂರ ಇವರ ಮಾರ್ಗದರ್ಶನವೇ ಮುಖ್ಯ ಕಾರಣವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಈ ಕ್ಷೇತ್ರದಲ್ಲಿ ಮುಖ್ಯವಾಗಿ ಪಿತೃಗಳ ಪಿಂಡೋದಕವು ಒಂದು ಮುಖ್ಯ ಕಾರ್ಯವಾಗಿದೆ. ಪ್ರತಿಪದೆ ದಿವಸ ಕ್ಷೇತ್ರೋಪವಾಸ ಬಿದಿಗೆ (೨)ನೇ ದಿವಸ ಪಿತೃಗಳನ್ನು ಕುರಿತು ಪಿಂಡೋವತ (ಶ್ರಾದ್ಧವಿಧಿ) ತೃತೀಯಾ, ಅಕ್ಷಯ ತೃತೀಯಾ ದಿವಸ ೧೮ ಕೊಂಡೆಗಳು ಅಥವಾ ತೀರ್ಥಗಳಲ್ಲಿ ಬಂದ ಯಾತ್ರಾರ್ಥಿಗಳು, ಮಂಗಲ ಸ್ನಾನವನ್ನು ಮಾಡಿ, ಸಕಲ ಕಷ್ಟಗಳಿಂದ ಮುಕ್ತರಾಗಬಯಸಿ ಅಕ್ಷಯ ಫಲವನ್ನು ಹೊಂದುವ ತವಕದಿಂದ ದೇವಿಯ ಸನ್ನಿಧಿಯಲ್ಲಿ ನೈವೇದ್ಯ, ಮಂಗಳಾರತಿ, ಶ್ರವಣ ಮೊದಲಾದ ದೇವತಾ ಕಾರ್ಯ ಮಾಡಲುದ್ಯುಕ್ತರಾಗುವರು. ಇದು ಕ್ಷೇತ್ರದಲ್ಲಿ ನಡೆಯಬಹುದಾದ ಕಾರ್ಯಕ್ರಮದ ಮುಖ್ಯ ಉದ್ದೇಶ. ಕ್ಷೇತ್ರದಲ್ಲಿ ಕಾರ್ಯಸಾಧನೆ ಹಾಗೂ ಉದ್ದೇಶ ಇವುಗಳನ್ನು ತಿಳಿಯುವದರೊಂದಿಗೆ ಸ್ವಲ್ಪ ಕ್ಷೇತ್ರ ಮಹಿಮೆ ಮತ್ತು ತೀರ್ಥಗಳ ಮಹಿಮೆಯನ್ನು ನೋಡಬೇಕಾಗಿದೆ.

ಛಾಯಾದೇವಿಯ ಕ್ಷೇತ್ರದ ಮೂಲ

"ಸ್ತೋತ್ರ: ತಪೋನಿಷ್ಠ ಸ್ವಭಾವಯೆ ಛಾರ್ಯಾಯ್ಯೆ ಚವಿವೆಸ್ವತಃ

ಭಕ್ತಾಭೀಷ್ಟ ಪ್ರದಾಯಿನ್ಯೆ ವಾಯಾಯ್ಯೆ ಸತತಂ ನಮಃ"

ಶ್ರೀ ಛಾಯಾದೇವಿಯ ಮಂದಿರವನ್ನು ಪೇಶ್ವೆಯ ರಾಜವಂಶಜರು ಕಟ್ಟಿಸಿರುವರೆಂದು ಹೇಳುತ್ತಾರೆ. ಈ ಕ್ಷೇತ್ರದಲ್ಲಿ ಮುಖ್ಯವಾಗಿ ಶ್ರೀ ಛಾಯಾದೇವಿಯು ಸೂರ್ಯನಾರಾಯಣನನ್ನು ಕುರಿತು ತಪಸ್ಸು ಮಾಡಿದ ಸ್ಥಳ. ಶ್ರೀ ಸೂರ್ಯನಾರಾಯಣನೇ ತನಗೆ ಪತಿಯಾಗಿ ದೊರಕಲೆಂದು ಈ ಕ್ಷೇತ್ರವು ತನ್ನ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದು, ಭಕ್ತರ ಇಷ್ಟಾರ್ಥಗಳು ನೆರವೇರಲೆಂದು ಹಾಗೂ ಕಲಿಯುಗದಲ್ಲಿ "ದಕ್ಷಿಣಕಾಶಿ" ಎಂದು ಪ್ರಸಿದ್ಧಿಯನ್ನು ಪಡೆಯಲೆಂದು ಶ್ರೀ ಮಾತೆಯ ಮುಖ್ಯ ಉದ್ದೇಶವಾಗಿತ್ತೆಂದು ಪುರಾಣದ ಆಧಾರದಿಂದ ತಿಳಿದುಬರುತ್ತದೆ(ಛಾಯಾ ಭಗವತಿ ಸ್ಕಂದ ಪುರಾಣ).

ಶ್ರೀ ಛಾಯಾಭಗವತಿ ಮಹಾತ್ಮೆಯು ಸ್ಕಂದ ಪುರಾಣದಲ್ಲಿ ಅಂತರ್ಗತವಾಗಿದೆ. ಸ್ಕಂದ ಪುರಾಣದಲ್ಲಿ ಕೃಷ್ಣ ಭಗೀರಥಿ ಮಹಿಮೆಯನ್ನು ವರ್ಣಿಸಿರುವ ಸಂದರ್ಭದಲ್ಲಿ ಛಾಯಾಭಗವತಿ ಮಹಿಮೆಯು ವರ್ಣಿಸಲ್ಪಟ್ಟಿದೆ. ಅದನ್ನು ಬ್ರಹ್ಮದೇವರು ಮಾರ್ಕಂಡೇಯ ಮುನಿಗಳಿಗೆ, ಅವರು ನಾರದರಿಗೆ, ನಾರದರು ಶ್ರೋತ್ರವೊಂದಕ್ಕೆ ಸಾದರಪಡಿಸಿರುವಂತೆ ಪರಂಪರೆ ಇರುವುದು. ಈ ಕ್ಷೇತ್ರದಲ್ಲಿ ಒಟ್ಟು ೧೮ ತೀರ್ಥಗಳಿರುವವು.

## ೧೮ ತೀರ್ಥಗಳು ಹಾಗೂ ಅವುಗಳ ಮಹಿಮೆ

೧. ಉತ್ತರವಾಹಿನಿ ೨. ಸೋಮ ೩. ಸೂರ್ಯ ೪. ಬ್ರಹ್ಮಯೋನಿ, ೫. ವಿಷ್ಣುಯೋನಿ, ೬. ರುದ್ರಯೋನಿ ೭. ಗೋಮುಖ ೯. ಬ್ರಹ್ಮಜ್ಞಾನ ೧೦. ಯಮ ೧೧. ಗಧಾ ೧೨. ಪದ್ಮ ೧೩. ರಾಮತೀರ್ಥ ೧೪. ಧನುಕೋಟಿ ೧೫. ಕನ್ಯಾಹೃದಯ ೧೬. ಶಂಖ ೧೭. ಚಕ್ರ ೧೮. ದೇವಹೃದಯ.

ಈ ಪ್ರಕಾರವಾಗಿ ಇರುವುದಲ್ಲದೆ ಕಪಿಲ ತೀರ್ಥ, ದಂಡಕಾಷ್ಟ, ಗೋಪಾದ, ಇಂದ್ರಪ್ರಸ್ಥ ಮೊದಲಾದವುಗಳು ಇರುವವು. ಶ್ರೀಮಾತೆಯು ಮೊದಲು ಕನ್ಯಾಹೃದಯದಲ್ಲಿ ತಪಶ್ಚರ್ಯವನ್ನು ಗೈದು ಭಗವಂತನಿಂದ ನಾಲ್ಕು ವರಗಳನ್ನು ಪಡೆದುಕೊಳ್ಳುತ್ತಾಳೆ. ಆ ವರಗಳ ಪ್ರಭಾವದಿಂದಲೇ ಈ ಸ್ಥಳದ ಮಾಹಾತ್ಮೆಯು ಮುಖ್ಯವಾಗಿದೆ. ಈ ದೇವಿಗೆ ಮೊದಲನೆಯ ಹೆಸರು "ಛಾಯಾ" ಎರಡನೆಯದು "ಸಂಜ್ಞಾ" ಮೂರನೆಯದು "ವಡವಾ" ಎಂಥಲೂ ಇರುವುದು. ಆರು ಜನ ಪುತ್ರರನ್ನು ಪಡೆದು ತ್ರೇತಾಯುಗದಲ್ಲಿ "ವಡವಾ" ಎಂಬ ಹೆಸರನ್ನು, ದ್ವಾಪಾರದಲ್ಲಿ "ಸಂಜ್ಞಾ" ಕಲಿಯುಗದಲ್ಲಿ "ಛಾಯಾ" ಎಂಬ ಹೆಸರನ್ನು ಪಡೆದುದಲ್ಲದೆ, ಕಲಿಯುಗದಲ್ಲಿ ಹೆಚ್ಚಿನ ಮಹತ್ವವಿರುತ್ತದೆ ಎಂದು ಪರಮಾತ್ಮನು ವರದಾನವನ್ನು ಕೊಟ್ಟು ಈ ಕ್ಷೇತ್ರದಲ್ಲಿ ವಿಶೇಷ ಸನ್ನಿದಾನವನ್ನು ಹೊಂದಿದನು. ಎಂದು ಶ್ಲೋಕ ೨೭-೨೮ ಛಾಯಾ ಮಹಾತ್ಮೆಯ ಗ್ರಂಥದಿಂದ ಗೊತ್ತಾಗುವುದು(ಶಿವನಗೌಡ ಪಾಟೀಲ(ಸಂ), ಪು.೧೯-೨೦).

ಅಕ್ಷಯ ತೃತೀಯಾ ದಿವಸ ಬೆಳಗಿನ ಜಾವದಲ್ಲೆದ್ದು ಪ್ರಾತಃ ವಿಧಿಗಳನ್ನು ಮುಗಿಸಿಕೊಂಡು ತೀರ್ಥ ಸ್ನಾನಕ್ಕೆ ಹೊರಡಲುದ್ಯುಕ್ತರಾಗಬೇಕು. ಅಂದಿನ ದಿವಸ ೧೮ ತೀರ್ಥಗಳಲ್ಲಿ ಸ್ನಾನ ಮಾಡಿದರೆ ಅಕ್ಷಯ ಫಲವನ್ನು ಹೊಂದುವನು ಎಂದು ಭಗವಂತನು ಮಾನವರಿಗೆ ತಿಳಿಸಿಕೊಟ್ಟಿದ್ದಾನೆ. ಮೊದಲು ಉತ್ತರವಾಹಿನಿಯಲ್ಲಿ ನಿಂದು, ಸೋಮ, ಸೂರ್ಯ ತೀರ್ಥನಂತರ ಬ್ರಹ್ಮಯೋನಿಯಲ್ಲಿ ಬ್ರಹ್ಮನನ್ನು ಪೂಜಿಸಿ ಪಾರಾಗಬೇಕು. ನಂತರ ವಿಷ್ಣುಯೋನಿ, ರುದ್ರಯೋನಿ ಈ ಪ್ರಕಾರವಾಗಿ ಒಂದೊಂದರಂತೆ ಸ್ನಾನ ಮಾಡಬೇಕು. ವಿಷ್ಣುಯೋನಿ, ರುದ್ರಯೋನಿ ಇವೆರಡು ಅಪಾಯದ ಸ್ಥಳವಾದ ಪ್ರಯುಕ್ತ ಆ ಎರಡು ತೀರ್ಥಗಳಲ್ಲಿ ಯಾರು ಸ್ನಾನ ಮಾಡುವುದಿಲ್ಲ. ಆಮೇಲೆ ಗೋಮುಖಕ್ಕೆ ಸ್ನಾನಮಾಡಿ ನಂತರ ಪರಮಪಾವನವಾದ ಬ್ರಹ್ಮಜ್ಞಾನ ತೀರ್ಥಕ್ಕೆ ಹೋಗಬೇಕು. ಈ ತೀರ್ಥದಲ್ಲಿ ವಶಿಷ್ಟ ಮಹರ್ಷಿಗಳು ಸ್ನಾನಮಾಡಿ ದಂಡೆಯ ಮೇಲೆ ಧ್ಯಾನಮಗ್ನರಾಗಿ ಕುಳಿತಿರುವಾಗ ವಿಶ್ವಾಮಿತ್ರ ಮಹರ್ಷಿಗಳು ಇವರ ತಲೆಯ ಮೇಲೆ ಒಂದು ದೊಡ್ಡ ಬಂಡೆಕಲ್ಲನ್ನು ಎಸೆಯಬೇಕೆನ್ನುವಷ್ಟರಲ್ಲಿ ಜ್ಞಾನೋದಯವಾಗಿ ವಿಶ್ವಾಮಿತ್ರರು ತಮ್ಮ ತಲೆಯ ಮೇಲಿದ್ದ ಕಲ್ಲುಬಂಡೆಯನ್ನು ಅಲ್ಲಿಯೇ ತೀರ್ಥಕ್ಕೆ ಎಸೆದುಬಿಟ್ಟರು. ಆ ಕಲ್ಲು ಇಂದಿಗೂ ಅಲ್ಲಿಯೇ ಇರುವುದು. ಕಾರಣ ಈ ತೀರ್ಥಕ್ಕೆ ಬ್ರಹ್ಮಜ್ಞಾನವೆಂದು ಹೆಸರು ಬಂದಿದೆ(ಅದೇ, ಪು.೨೨).

ನಂತರ ಗೋಪಾದ ಸ್ವರ್ಗ, ಯಮ ಮತ್ತು ಗಧಾ, ಪದ್ಮ ತೀರ್ಥಗಳಲ್ಲಿ ಮಿಂದು ಪುನಿತರಾಗ ಬೇಕು. ಆ ಮೇಲೆ ರಾಮತೀರ್ಥಕ್ಕೆ ತೆರಳಬೇಕು. ಈ ತೀರ್ಥದಲ್ಲಿ ದಶರಥನೆಂದಸಿ ಶ್ರೀ ರಾಮಚಂದ್ರನು ಅಲ್ಲಿಗೆ ಬಂದು ಶ್ರಾದ್ಧ ಮಾಡಿರುವದರಿಂದ ಹೆಚ್ಚಿನ ಮಹತ್ವ ಬಂದಿರುವದು. ಯಾತ್ರಾರ್ಥಿಗಳು ಇಲ್ಲಿ ತಮ್ಮ ಮಾತಾ ಪಿತೃಗಳನ್ನು ಕುರಿತು ಪಿಂಡಪ್ರಧಾನ ತರ್ಪಣಾದಿಗಳನ್ನು ಮಾಡಿಕೊಳ್ಳುತ್ತಾರೆ. "ಶ್ರೀ ರಾಮನ ಅಪ್ಪಣೆಯಂತೆ ಹನುಮಂತನು ಕೂಡಾ ಈ ತೀರ್ಥದಲ್ಲಿ ಸ್ನಾನ ಮಾಡಿದನು. ಮತ್ತು ಸೀತಾಮಾತೆಯು ಇಲ್ಲಿ ಮರದ ಬಾಗಿಣವನ್ನು ಕೊಟ್ಟಳು ಎಂಬ ಉಲ್ಲೇಖವಿದೆ. ಕಾರಣ ಇಂದಿಗೂ ಸುಮಂಗಲೆಯರು ಅಲ್ಲಿ ಮರದ ಬಾಗಿಣ, ದಕ್ಷಿಣ ಮೊದಲಾದವುಗಳನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಾರೆ. ನಂತರ ಧನುಕೋಟಿಗೆ ತೆರಳಿ ಅಲ್ಲಿ ಸ್ನಾನ ಮಾಡಿದರೆ, ಮಾನವನ ಪಾಪಗಳು ಜಲರೂಪವಾಗಿ ನಶಿಸಿ ಹೋಗುವವು ಎಂಬ ಉಲ್ಲೇಖವಿರುವುದು. ಆ ಮೇಲೆ ಕನ್ಯಾಹೃದಯಕ್ಕೆ ಬಂದು ಸ್ನಾನಮಾಡಿ ಸುಮಂಗಲೆಯರು ದಾನ, ಧರ್ಮಮಾಡುವುದರಿಂದ ಮುತ್ತೈದೆ ಭಾಗ್ಯ ಪಡೆಯುವರು ಎಂಬ ಪುರಾಣ ನಿದರ್ಶನವಿರುವುದು"(ಅದೇ, ಪು.೨೩).

ನಂತರ ಇಂದ್ರ ಪ್ರಸ್ಥಕ್ಕೆ ತೆರಳಿ ಅಲ್ಲಿ ಶ್ರೀ ಛಾಯಾ ಭಗವತಿ ಮಹಾತ್ಮೆಯನ್ನು ಕೇಳಬೇಕು. ಹಿಂದೆ ಅಲ್ಲಿ ದೇವತೆಗಳು ಕುಳಿತು ಮಹಾತ್ಮೆಯನ್ನು ಕೇಳಿದ ಸ್ಥಳವಾಗಿದೆ. ನಂತರ ದೇವಹೃದಯಕ್ಕೆ ಬಂದು ಸ್ನಾನಮಾಡಿ ಶ್ರೀ ಛಾಯಾ ಭಗವತಿ ಮಂದಿರಕ್ಕೆ ಬಂದು ತಾಯಿಗೆ ನಮಸ್ಕರಿಸಿ ಧೂಪ, ದೀಪ, ನೈವೇದ್ಯಗಳನ್ನು ಮಾಡಿ ಮಾನವ ಜನ್ಮದಿಂದ ಮುಕ್ತರಾಗಬಲ್ಲೆವು ಎಂಬ ದೃಢ ವಿಶ್ವಾಸದಿಂದ ದೇವಿಯಲ್ಲಿ ಅನನ್ಯ ಭಾವದಿಂದ ಬೇಡಿಕೊಳ್ಳುವರು.

**ಕೊಡೆಕಲ್ಲು ಬಸವಣ್ಣ**

ಜಲದುರ್ಗಕ್ಕೆ ಮತ್ತು ಕೊಡೆಕಲ್ಲಿಗೆ ಗುರು ಶಿಷ್ಯರ ಸಂಬಂಧವಿದೆ. ಕೊಡೆಕಲ್ಲು ಬಸವೇಶ್ವರ ಗುರು ಸಂಗಮನಾಥ. ಆದ್ದರಿಂದ ಕೊಡೆಕಲ್ಲಿನಲ್ಲಿ ನಡೆಯುವ ಜಾತ್ರೆಯ ಪ್ರಸಾದವನ್ನು ಜಲದುರ್ಗಕ್ಕೆ ತಂದುಕೊಡುವ ಸಂಪ್ರದಾಯವಿದೆ. ಮತ್ತು ಪ್ರತಿ ವರ್ಷಕ್ಕೊಮ್ಮೆ ಒಂದು ಡಬ್ಬಿ ಅಥವಾ ಒಂದು ಕೊಡ ಮೀಸಲು ತುಪ್ಪವನ್ನು ತಂದುಕೊಡುವ ಪದ್ಧತಿ ಇದೆ. ಅದೇ ತುಪ್ಪವನ್ನು ಪ್ರತಿದಿನ ಜಲದುರ್ಗದ ಸಂಗಮನಾಥನಿಗೆ ದೀಪ ಹಚ್ಚುವುದು. ಇದು ಇಂದಿಗೂ ನಡೆದುಕೊಂಡು ಬಂದಿರುವ ಸಂಪ್ರದಾಯ ವಾಗಿದೆ. ಮತ್ತು ಅಲ್ಲಿ ನಡೆಯುವ ಪೂಜಾ ನಿಯಮಗಳು ಇಲ್ಲಿ ನಡೆಯುವ ಪೂಜಾ ನಿಯಮಗಳು ಒಂದೇ ರೀತಿಯಾಗಿರುತ್ತವೆ.

ಕೊಡೆಕಲ್ಲು ಇದು ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ೩೫ ಕಿ.ಮೀದಲ್ಲಿದೆ. "ಕೊಡೆಕಲ್ಲು" ಎಂದು ಹೆಸರು ಬರಲು ಕಾರಣ ಬಸವೇಶ್ವರ ದೇಶ ಸಂಚಾರ ಮಾಡಿ ಆ ಸ್ಥಳದಲ್ಲಿ ವಿಶ್ರಾಂತಿ ಪಡೆಯಬೇಕೆಂದು ಬಂದು ಕಲ್ಲಿನ ನೆರಳಿಗೆ ಕುಳಿತುಕೊಂಡಾಗ ಆ ಕಲ್ಲು ಬಸವೇಶ್ವರನಿಗೆ

ಛತ್ರಿಯಾಗಿ ಅಥವಾ ಕೊಡೆಯಾಗಿ ಮಾರ್ಪಟ್ಟಿತು. ಆದ್ದರಿಂದ ಆ ಸ್ಥಳಕ್ಕೆ "ಕೊಡೆಕಲ್ಲು" ಎಂಬ ನಾಮಕರಣ ಮಾಡಿದರು ಎಂದು ತಿಳಿದುಬರುತ್ತದೆ. ಕೊಡೆಕಲ್ಲಿನಿಂದ ಜಲದುರ್ಗ ಸುಮಾರು ೨೦ ಕಿ.ಮೀ ದೂರದಲ್ಲಿದೆ. ಹಿಂದೆ ಬಸವೇಶ್ವರ ತನ್ನ ಭಕ್ತ ಗಣಗಳನ್ನು ಕೂಡಿಕೊಂಡ ತನ್ನ ಗುರುವಾದ ಸಂಗಮನಾಥನಲ್ಲಿಗೆ ಬಂದು ಕೆಲವು ದಿನಗಳ ಕಾಲ ತಂಗಿದ್ದ ಎಂದು ಅಲ್ಲಿನ ಇತಿಹಾಸ ಹೇಳುತ್ತದೆ.

ಬಸವೇಶ್ವರ ಬರೆದ ಕೆಲವು ವಚನಗಳು ಜಲದುರ್ಗದಲ್ಲಿವೆ. ಹಂಚಿನಾಳ ಗ್ರಾಮದ ಜಂಗಮ ಸಮುದಾಯದವರ ಮನೆಯಲ್ಲಿವೆ. ಅವರು ಸಂಗಮನಾಥನ ಪೂಜಾರಿಗಳು. ಅವನ್ನು ವರ್ಷಕ್ಕೆ ಒಂದು ಬಾರಿ ಶಿವರಾತ್ರಿಯಂದು ತೆರೆದು ಭವಿಷ್ಯವಾಣಿ ಹೇಳಲಾಗುತ್ತದೆ.

ಇನ್ನೊಂದು ಐತಿಹ್ಯ ಪ್ರಕಾರ ಸಂಗಮನಾಥನ ಎಡಬದಿಯಲ್ಲಿರುವ ಹಿರಿಹೊಳೆಯೊಳಗೆ ಪೆಟ್ರಿಕೆ ಗುಂಡು ಇದೆ. ಅದರಲ್ಲಿ ವಚನಗಳ ಕಟ್ಟು ಇದೆ. ಅದನ್ನು ಮತ್ತೆ ಬಸವೇಶ್ವರರೇ ಹುಟ್ಟಿ ಬಂದು ತೆರೆಯುತ್ತಾರೆ ಎನ್ನುವ ನಂಬಿಕೆ ಇಲ್ಲಿನ ಜನರದ್ದು. ಇದಕ್ಕೆ ನದಿ ದಡದಲ್ಲಿರುವ ರುಂಡದ ಎಲ್ಲಮ್ಮನೇ ಕಾವಲು ಎಂದು ಹೇಳುತ್ತಾರೆ. ದಿಂಬ ಕೊಡೆಕಲ್ಲಲ್ಲಿ ಇದ್ದು, ರುಂಡ ಜಲದುರ್ಗದಲ್ಲಿದೆ. ಅದಕ್ಕೆ ಇಲ್ಲಿ ರುಂಡದ ಎಲ್ಲಮ್ಮನಾಗಿ ಈ ದೇವಿ ಸುತ್ತಮುತ್ತಲ ಗ್ರಾಮಗಳಿಂದ ಕೊಡೆಕಲ್ಲು ಬಸವೇಶ್ವರ ಮನೆ ದೇವರಾದವರೆಲ್ಲಾ ಸಮುದಾಯಕ್ಕೂ ರುಂಡದ ಎಲ್ಲಮ್ಮ ಮನೆ ದೇವತೆಯಾಗಿ ಪೂಜಿಸಲ್ಪಡುತ್ತಾಳೆ. ಹೀಗಾಗಿ ಕೊಡೆಕಲ್ಲಿಗೆ ಜಲದುರ್ಗಕ್ಕೆ ನಿಕಟವಾದ ಸಂಬಂಧವಿದೆಯೆಂದು ತಿಳಿದುಬರುತ್ತದೆ.

ಜಲದುರ್ಗದಲ್ಲಿ ಬಸವೇಶ್ವರ ಬರೆದ ಹಸ್ತಾಕ್ಷರಗಳ ಒಂದು ಕರಿಕಲ್ಲಿನ ಶಾಸನ ಪರಿಪಾಠವಿದೆ. ಅದು ಈಗ ಕಾಣುವುದಿಲ್ಲ. ಸಂಪೂರ್ಣವಾಗಿ ನದಿಯಲ್ಲಿ ಮುಳಗಿ ಹೋಗಿದೆ. ಬಸವೇಶ್ವರರ ಹೇಳಿಕೆಯಂತೆ ದೇಶ ಅಳಿದು ಜಲದುರ್ಗದಿಂದಲೇ ಮತ್ತೊಂದು ಲೋಕ ಸೃಷ್ಠಿಯಾಗುತ್ತದೆ ಎಂದು ಸ್ಥಳೀಯರ ನಂಬಿಕೆಯಾಗಿದೆ.

**ಹಂಚಿನಾಳ ಯರಗೋಡಿ ದ್ಯಾವಮ್ಮ ಹಾಲಭಾವಿ ದ್ಯಾವಮ್ಮ**

ಇಲ್ಲಿ ದ್ಯಾಮವ್ವ ಅಥವಾ ದ್ಯಾವಮ್ಮ ಎಂದು ಕರೆಯುತ್ತಾರೆ. ಈ ದೇವಿಯರು ಮೂಲ ಹಾಲಭಾವಿ ದ್ಯಾವಮ್ಮ ರೂಪವೇ. ಈ ಗಡ್ಡೆಗಳ ದೇವಿಗಳು ಹಾಲಭಾವಿ ದ್ಯಾವಮ್ಮ ಇವರ ಸಂಬಂಧವನ್ನು ಕಾಣಬಹುದು. ಈ ಗಡ್ಡೆಗಳಿಗೆ ಸುತ್ತಲೂ ನದಿ ಇರುವುದರಿಂದ ಅಲ್ಲಿಗೆ ಹೋಗಿ ಅಂದೇ ಹಾಲಭಾವಿಗೆ ಹೋಗಿಬರಲು ಆಗದೇ ಇರುವಂತಹ ಸಂದರ್ಭಗಳಲ್ಲಿ ತಮ್ಮ ನಡುಗಡ್ಡೆಗಳಲ್ಲಿ ಆ ದೇವಿಯ ಹೆಸರಿನಲ್ಲಿ ಗುಡಿಗಳನ್ನು ಮೂರ್ತಿಗಳನ್ನು ಮಾಡಿಕೊಂಡು ಪೂಜಿಸುವುದು ಕಂಡುಬರುತ್ತದೆ.

ಇನ್ನೊಂದು ಹೇಳಿಕೆಯ ಪ್ರಕಾರ ಇವರೇ ಹಾಲಭಾವಿಯಿಂದ ಈ ನಡುಗಡ್ಡೆಗಳಿಗೆ ಹೋಗಿ ವಾಸಮಾಡಿರಬಹುದು ಎಂದು ತಿಳಿಯಬರುತ್ತದೆ. ಹಾಗಾಗಿ ಇವರು ಇವತ್ತಿಗೂ ಹಾಲಭಾವಿಯಿಂದ

ದ್ಯಾವಮ್ಮ ದೇವಿಯನ್ನು ಕರೆಸಿ ಜಾತ್ರೆ ಮಾಡುತ್ತಾರೆ. ೯-೧೧ ವರ್ಷಗಳಿಗೊಮ್ಮೆ ಆಗಿಹುಣ್ಣಿಮೆಗೆ ದೇವಿಯನ್ನು ಕರೆಸಿ, ತಾವು ಬೇಡಿಕೊಂಡಿರುವ ಹರಕೆಗಳನ್ನು ತೀರಿಸಿ ೨ ದಿನಗಳ ಕಾಲ ತಮ್ಮ ಗದ್ದೆಯಲ್ಲಿ ಇರಿಸಿಕೊಂಡು ಉಡಿತುಂಬಿ ಕಳಿಸುತ್ತಾರೆ. ಈ ಗ್ರಾಮಗಳಲ್ಲಿ ಈ ದೇವಿಯ ಪ್ರಭಾವ ಅತಿಹೆಚ್ಚು. ಹುಟ್ಟಿದ ಮಕ್ಕಳಿಗೆ ಪ್ರತಿಯೊಬ್ಬರ ಮನೆಯಲ್ಲಿ ದ್ಯಾವಪ್ಪ , ದ್ಯಾಮಪ್ಪ, ದ್ಯಾವಪ್ಪ ಮತ್ತು ದ್ಯಾವಮ್ಮ ದ್ಯಾಮಮ್ಮ ಎನ್ನುವ ಹೆಸರುಗಳನ್ನು ಕಾಣಬಹುದು.

**ರಾಮಗಡ್ಡೆ ನೀಲಮ್ಮ ರಾಯಚೂರಿನ ಸೂಗೂರೇಶ್ವರ**

ಈ ಗಡ್ಡೆಯ ದೇವತೆಯಾದ ನೀಲಮ್ಮನಿಗೂ ಮತ್ತು ರಾಯಚೂರಿನ ಪ್ರಸಿದ್ಧ ದೇವಾಲಯವಾದ ಸೂಗೂರೇಶ್ವರನಿಗೂ ಸಂಬಂಧವಿದೆ ಎಂದು ಅಲ್ಲಿನ ಪೀಠಾಧಿಪತಿಯಿಂದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬರುತ್ತದೆ. ಹಿಂದೇ ಚೋಳೇಂದ್ರ ಮಹಾಸ್ವಾಮಿಗಳು ಸೂಗೂರೇಶ್ವರ ದೇವಾಲಯಕ್ಕೆ ಹೋದಾಗ ಸೂಗೂರೇಶ್ವರನ ಭಕ್ತಳಾದ ನೀಲಮ್ಮ ಗುಡಿಯಲ್ಲಿದ್ದುಕೊಂಡು ಸೂಗೂರೇಶ್ವರರ ಧ್ಯಾನ ಪೂಜೆಯನ್ನು ಮಾಡುತ್ತಿದ್ದಳು. ನೀಲಮ್ಮನನ್ನು ಕಂಡು ಚೋಳೇಂದ್ರ ಗುರುಗಳು ಸಂತಸಪಟ್ಟರು. ಆಕೆಯ ಭಕ್ತಿ, ಆಕೆಯ ಆದರ್ಶ ಗುಣಗಳನ್ನು ನೋಡಿದ ಚೋಳೇಂದ್ರ ಗುರುಗಳು ತಮ್ಮ ಮನಸ್ಸಿನಲ್ಲಿ ಆನಂದ ವ್ಯಕ್ತ ಪಡಿಸಿದರು. ಚೋಳೇಂದ್ರ ಸ್ವಾಮಿಯ ಗುಣಭಕ್ತಿಯನ್ನು ಕಂಡ ನೀಲಮ್ಮ ಚೋಳೇಂದ್ರ ಸ್ವಾಮಿಯ ಹಿಂದೆ ಬಂದರು. ರಾಮಗಡ್ಡೆಗೆ ಬಂದಾಗ ಚೋಳೇಂದ್ರರ ಕಂಬಳಿಯನ್ನು ನೀರು ಮೇಲೆ ಹಾಸಿ ನದಿಯನ್ನು ದಾಟಿಸಿದರು. ತನ್ನ ಧ್ಯಾನ ಪೂಜೆಯನ್ನು ಈ ಗಡ್ಡೆಯಲ್ಲಿ ಕೈಗೊಂಡಳು. ಸೂಗೂರೇಶ್ವರನ ಪೂಜಿ ಸಮಯದಲ್ಲಿ ಸೂಗೂರ ಗ್ರಾಮದ ಜನರು ಕರೆಯಲೆಂದು ಬಂದರು. ಕೃಷ್ಣಾ ನದಿ ತುಂಬಿ ಹರಿಯುತ್ತಿದ್ದ ಸಮಯದಲ್ಲಿ ಆ ಜನರು ನೀಲಮ್ಮನನ್ನು ನೋಡಕ್ಕಾಗದೆ ಇರುವಂತಹ ಸಂದರ್ಭದಲ್ಲಿ ಚೋಳೇಂದ್ರ ಗುರುಗಳು ಕಂಬಳಿಯನ್ನು ಹಾಸಿ ಆ ಕಂಬಳಿಯ ಮೇಲೆ ಜನರನ್ನು ಕೂಡಿಸಿಕೊಂಡು ಗಡ್ಡೆಗೆ ಕರೆತರುತ್ತಾರೆ. ಅವರು ನೀಲಮ್ಮನ ದರ್ಶನ ಪಡೆದು ಮತ್ತೆ ಸೂಗೂರೇಶ್ವರ ಪೂಜೆಗೆ ಅಥವಾ ಜಾತ್ರೆಗೆ ಕರೆದುಕೊಂಡು ಹೋಗುತ್ತಾರೆ. ಮತ್ತೆ ಅವರನ್ನು ಗುರುಗಳು ಕಂಬಳಿಯ ಮೇಲೆ ನದಿಯನ್ನು ದಾಟಿಸುತ್ತಾರೆ. ಜಾತ್ರೆ ಪೂಜೆಯನ್ನು ಮುಗಿಸಿಕೊಂಡು ನೀಲಮ್ಮ ಮತ್ತೆ ರಾಮಗಡ್ಡೆಗೆ ಬಂದು ಸಂಪೂರ್ಣ ತನ್ನ ಜೀವನವನ್ನು ರಾಮಗಡ್ಡೆ ಸೂಗೂರೇಶ್ವರನ ಭಕ್ತಳಾಗಿ ಚೋಳೇಂದ್ರ ಗುರುಗಳ ಶಿಷ್ಯಳಾಗಿ ರಾಮಗಡ್ಡೆಯಲ್ಲಿ ನೆಲೆಸಿ ಐಕ್ಯಳಾಗುತ್ತಾಳೆ. ಇವತ್ತಿಗೂ ಐತಿಹ್ಯ ಪ್ರಕಾರ ಆಕೆ ಅಮವಾಸ್ಯೆ, ಹುಣ್ಣಿಮೆಗೆ ಆ ಗಡ್ಡೆಯಲ್ಲಿ ಪ್ರತ್ಯೇಕ್ಷವಾಗಿ ಓಡಾಡುತ್ತಾಳೆ ಎಂದು ಸ್ಥಳೀಯರ ನಂಬಿಕೆಯಾಗಿದೆ. ಮತ್ತು ನೀಲಮ್ಮನ ಸಣ್ಣದಾದ ಸಮಾದಿ ಗುಡಿ ಇದೆ. ಇದರ ಮೇಲೆ ಒಂದು ಗುಂಡು ಇದೆ. ಇದಕ್ಕೆ ನೀಲಮ್ಮನ ಗುಂಡು ಎಂದು ಕರೆಯುತ್ತಾರೆ. ಭಕ್ತರು ತಮ್ಮ ಬೇಡಿಕೆಗಳನ್ನು ಈ ಗುಂಡು ಎತ್ತುವುದರ ಮೂಲಕ ಭವಿಷ್ಯವಾಣಿಯನ್ನು ತಿಳಿದುಕೊಳ್ಳುತ್ತಾರೆ. ಕೆಲಸ ಆಗುವುದು ಇದ್ದರೆ ಗುಂಡು ಮೇಲಕ್ಕೆ

ಎದ್ದೇಳುತ್ತದೆ. ಆಗುವುದಿಲ್ಲ ಎಂದರೆ ಎದ್ದೇಳುವುದಿಲ್ಲವೆಂದು ಇಲ್ಲಿನ ಸ್ಥಳೀಯ ಜನರು ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ.

ಪ್ರತಿವರ್ಷ ಸೂಗೂರೇಶ್ವರ ಜಾತ್ರೆಗೆ ನೀಲಮ್ಮನನ್ನು ಕರೆಯಲು ರಾಮಗಡ್ಡೆಗೆ ಸೂಗೂರೇಶ್ವರ ಪೂಜಾರಿಗಳು ಬಂದು ಪೂಜೆಯನ್ನು ಸಲ್ಲಿಸಿ ಆಕೆಯನ್ನು ಕರೆದುಕೊಂಡು ಹೋಗುವ ನಿಯಮವಿದೆ ಎಂದು ಸಿದ್ಧಲಿಂಗಸ್ವಾಮಿಗಳು ಹೇಳುತ್ತಾರೆ. ಈ ರೀತಿಯಾಗಿ ಸೂಗೂರೇಶ್ವರನಿಗೆ ರಾಮಗಡ್ಡೆಗೆ ಗುರು ಶಿಷ್ಯರ ಸಂಬಂಧವನ್ನು ನೋಡಬಹುದು. ಅಲ್ಲಿಯ ಪೂಜಾ ಪರಂಪರೆಯ ರೀತಿಯೇ ಇಲ್ಲಿ ನಡೆಯುತ್ತದೆ(ಸಿದ್ಧಲಿಂಗಸ್ವಾಮಿಗಳ ರಾಮಗಡ್ಡೆ, ಮಾಹಿತಿದಾರರು).

**ಕುರವಪೂರಗಡ್ಡೆ ಶ್ರೀಪಾದವಲ್ಲಭ-ದತ್ತಾತ್ರೇಯ ಗಾಣಗಪುರ**

ಗುಲಬರ್ಗಾ ಜಿಲ್ಲೆಯಲ್ಲಿ ಬರುವ ಗಾಣಗಪುರ ದತ್ತಾತ್ರೇಯನೇ ಶ್ರೀಪಾದ ವಲ್ಲಭ ಎಂದು ಹೇಳುತ್ತಾರೆ. ದತ್ತಾತ್ರೇಯ ದೇಶ ಸಂಚಾರ ಮಾಡುತ್ತಾ ಅನೇಕ ರೂಪಗಳನ್ನು ಅವತರಿಸಿದನು. ಆ ಒಂದು ರೂಪವೇ ಶ್ರೀಪಾದ ವಲ್ಲಭನ ರೂಪವನ್ನು ಈ ನಡುಗಡ್ಡೆಯಲ್ಲಿ ಅವತರಿಸಿ ತಪಗೈದು ಪವಾಡಗಳನ್ನು ಮಾಡಿ ಭಕ್ತರನ್ನು ಸಂಪಾದಿಸಿ ಇಲ್ಲಿಯೇ ಐಕ್ಯರಾದರು ಎಂದು ಹೇಳುತ್ತಾರೆ. ಇವತ್ತಿಗೂ ಈ ನಡುಗಡ್ಡೆ ಕ್ಷೇತ್ರಕ್ಕೆ ಮೂರು ರಾಜ್ಯಗಳ ಭಕ್ತರು ಆಗಮಿಸುತ್ತಾರೆ. ಮಹಾರಾಷ್ಟ್ರ, ಆಂಧ್ರ, ಕರ್ನಾಟಕ ಇಷ್ಟೇ ಅಲ್ಲದೆ ಇಡೀ ಭಾರತದ ಜಾಗೃತದತ್ತ ದೇವಸ್ಥಾನಗಳಲ್ಲಿವೆಯೋ ಅಲ್ಲಿ ಪೂಜೆನಡೆಯುತ್ತದೆ.

**ದತ್ತ ಸಂಪ್ರದಾಯ ಸಂಬಂಧ**

ಶ್ರೀಶೈಲ, ಜಾದುಂಬರ, ನರಸಿಂಹವಾಡಿ, ಬಾಬಾಬುಡನಗಿರಿ, ಪೀಠಾಪುರ ನರಸಿಂಹವಾಡಿ, ಈ ಸಂಪ್ರದಾಯಗಳ ಬಗ್ಗೆ ಒಂದು ಇತಿಹಾಸವಿದೆ. ಬ್ರಹ್ಮ, ವಿಷ್ಣು, ಮಹೇಶ್ವರರು(ಉತ್ಪತ್ತಿ, ಸ್ಥಿತಿ, ಲಯ) ಪತಿವ್ರತಾ ಶಿರೋಮಣಿಯಾದ ಅನುಸೂಯಾಳನ್ನು ಪರೀಕ್ಷಿಸಲು ಭೂಲೋಕಕ್ಕೆ ಬರುತ್ತಾರೆ. ಮೂರೂ ಜನ ಅನುಸೂಯಾಳಿಗೆ ನೀನು ನಗ್ನವಾಗಿ ನಮಗೆ ಊಟಕ್ಕೆ ಬಡಿಸಬೇಕೆಂದಾಗ ಅವಳು ತನ್ನ ತಪಸ್ಸಿನ ಫಲದಿಂದ ಮತ್ತು ಪತಿವ್ರತಾ ಧರ್ಮದಿಂದ ಅವರನ್ನು "ಕೂಸು"ಗಳನ್ನಾಗಿ ಮಾಡಿ ಊಟಕ್ಕೆ ನೀಡುತ್ತಾಳೆ. ನಂತರ ಅವರು ಪ್ರಸನ್ನರಾಗಿ ಏನು ವರಬೇಕೆಂದು ಕೇಳಲಾಗಿ ನೀವು ಮೂರು ಜನ ಒಂದಾಗಿರೆಂದು ಹೇಳುತ್ತಾಳೆ. ನಿಮ್ಮನ್ನು ಪೂಜಿಸುತ್ತೇನೆ. ದೇಹ ಒಂದು ಮುಖ ಮೂರು. "ಈ ದತ್ತ ಸಂಪ್ರದಾಯದವರು ಆರತಿ, ಭಜನೆ, ಸ್ತೋತ್ರಗಳಿಂದ ಆ ಕಾಲದಿಂದ ಇದು ಮುಂಚೂಣಿಯಲ್ಲಿತ್ತು"(ಚೌಗಲಾ ಜಿ.ಎ., ಪು.೧೨೬).

ಈ ನಡುಗಡ್ಡೆಯ ಶ್ರೀಪಾದ ವಲ್ಲಭನ ದೇವಸ್ಥಾನಕ್ಕೆ ಮಹಾರಾಷ್ಟ್ರದ ಭಕ್ತರ ಸಂಬಂಧ ಅತಿಹೆಚ್ಚು ಎಂದು ಹೇಳಬಹುದು. ಅಲ್ಲಿನ ಶ್ರೀಪಾದವಲ್ಲಭರ ಪೂಜಾರಿಯಾದ ಶ್ರೀ ವಾಸುದೇವ ಭಟ್ಟಾಚಾರ್ಯರಿಂದ ತಿಳಿಯಲಾಗಿದೆ.

**ನಾರದಗಡ್ಡೆ ಮಠ ಮತ್ತು ಉರವಕೊಂಡ ಮಠ ಸಂಬಂಧ**

ತೋಂಟದ ಸಿದ್ದಲಿಂಗ ಯತಿಯ ದಿವ್ಯಪ್ರಭಾವದಿಂದಾಗಿ ಅವರು ನಾಡಿನ ತುಂಬ ತನ್ನ ಗಾಢವಾದ ಶಕ್ತಿ ಪ್ರಭಾವದ ಮುದ್ರೆಯನ್ನೊತ್ತಿದ್ದರು. ಸಿದ್ದಲಿಂಗ ಯತಿಯ ಅಸಂಖ್ಯಾತ ಶಿಷ್ಯರು, ಅನುಯಾಯಿಗಳು ವೀರಶೈವ ಪರಂಪರೆಗೆ ಉಜ್ವಲ ಚರಿತ್ರೆಯೊದಗಿಸಿದರು.

ಆಂಧ್ರದ ಉರವಕೊಂಡ ಮಠದ ಗವಿಯಲ್ಲಿ ಎಡೆಯೂರ ಸಿದ್ದಲಿಂಗೇಶ್ವರರು ಲಿಂಗರೂಪದಲ್ಲಿ ದರ್ಶನ ನೀಡಿದರು ಎಂದು ನಂಬಿಕೆ ಇದೆ. "ತೋಂಟಾದಾರ್ಯ ರಗಳೆ" ಎಂಬ ಕೃತಿ ಈ ಸಂಗತಿಯನ್ನು ತಿಳಿಸುತ್ತದೆ. ಈ ಸ್ಥಳದಲ್ಲಿಯೇ ಮಠ ಸ್ಥಾಪನೆಯಾಯಿತಂತೆ. ಅಲ್ಲಮ ಪ್ರಭು ಸಂಪ್ರದಾಯದ ಎಡೆಯೂರು ಸಿದ್ದಲಿಂಗೇಶ್ವರರ ಪರಂಪರೆಯಲ್ಲಿ ಬಂದ ಉರವಕೊಂಡ ಗವಿಮಠದ ಅಧಿಪತಿಗಳಿಗೆ "ಶಿವಾನುಭವಚರ ಚಕ್ರವರ್ತಿ" ಎಂಬ ಬಿರುದು ಇದೆ.

ನಿರಂಜನ ವಂಶ ರತ್ನಮಾಲಿಕೆಯಲ್ಲಿ ಹೇಳಿದಂತೆ ತೋಂಟದಾರ್ಯರ ಪರಂಪರೆಯ ಶಿವಾನುಭವ ಚಾರ್ಯ ಗುರುಸಿದ್ಧ ಸ್ವಾಮಿಗಳು ೧. ಆದವಾನಿಯ ಯದುವೀರರ ಇಚ್ಛೆಯಂತೆ ಆದವಾನಿಯಲ್ಲಿ ಒಂದು ಮಠ ಸ್ಥಾಪಿಸಿದರಂತೆ. ಗುರುಸಿದ್ಧ ಸ್ವಾಮಿಗಳವರ ಕರಸಂಜಾತರಾದ ನಿರ್ಮಾಯ ಚೆನ್ನಬಸವೇಶ್ವರ ಸ್ವಾಮಿಗಳು ೨. ಮಹಾ ಮಹಿಮಾಶಾಲಿಗಳಾಗಿದ್ದರು. ಆದವಾನಿಯ ಪೀಠಾಧಿಪತಿ ಗಳಾಗಿದ್ದ ಈ ಸ್ವಾಮಿಗಳು ರಾಯಚೂರು ಸಮೀಪದ ನಾರದಗಡ್ಡೆ ಕ್ಷೇತ್ರಕ್ಕೆ ಆಗಮಿಸಿದರು. ಕೃಷ್ಣಾನದಿಯ ಮಧ್ಯದಲ್ಲಿರುವ ನಾರದಗಡ್ಡೆಗೆ ಹುಲಿಯ ಚರ್ಮದ ಮೇಲೆ ಕುಳಿತು ತೇಲುತ್ತಾ ಹೋದಾಗ ಇವರಿಗೆ ಗಡ್ಡೆಸ್ವಾಮಿಗಳು ಎಂದು ಹೆಸರು. ಇವರು ಇಲ್ಲಿಯೇ ನೆಲೆಸಿದರು. ಅಲ್ಲಿ ಬೋಳ ಬಸವಸ್ವಾಮಿಗಳು ಆದವಾನಿ ಪೀಠವನ್ನು ಅಲಂಕರಿಸಿದರು ಎಂದು ತಿಳಿದುಬರುತ್ತದೆ. ಉರವಕೊಂಡ ಮಠದಿಂದ ೭೭೦ ಶಾಖಾ ಮಠಗಳು ಸ್ಥಾಪನೆಯಾದವು.

ಆಂಧ್ರದ ಉರವಕೊಂಡ ಮಠಕ್ಕೂ ಕರ್ನಾಟಕದ ನಾರದಗಡ್ಡೆ ಮಠಕ್ಕೂ ಗುರುಶಿಷ್ಯರ ಸಂಬಂಧವಿದೆ ಎಂದು ಹೇಳಬಹುದು. ಈ ಮಠದ ಸ್ವಾಮಿಗಳು ಆ ಮಠಕ್ಕೆ ಪೀಠಾಧಿಕಾರಿಯಾಗ ಬಹುದು. ಆದರೆ ಇತ್ತೀಚಿಗೆ ಪೀಠಾಧಿಕಾರದ ಸಲುವಾಗಿ ಸ್ವಾಮಿಗಳು ಜಗಳವಾಡಿದ್ದಾರೆ. ಈಗ ಮಠಗಳು ಸಂಪೂರ್ಣ ಸರಕಾರಿ ಆಡಳಿತದಲ್ಲಿ ನಡೆಯುತ್ತವೆ. ಸರಕಾರವೇ ಮಠಕ್ಕೆ ಒಬ್ಬ ಪೂಜಾರಿಯನ್ನು ತಾತ್ಕಾಲಿಕವಾಗಿ ನೇಮಿಸಿದೆ. ಅವರೆ ಮಠದ ಎಲ್ಲ ಪೂಜೆ, ಜಾತ್ರೆ ನೋಡಿಕೊಂಡು ಹೋಗುತ್ತಿದ್ದಾರೆ. ಜಾತ್ರೆಯ ಸಂದರ್ಭದಲ್ಲಿ ಉರವಕೊಂಡ ಮಠದ ಧ್ವಜಗಳನ್ನು ತಂದು ತೇರಿಗೆ

ಇಟ್ಟ ಮೇಲೆ ನಾರದಗಡ್ಡೆ ಜಾತ್ರೆಮಾಡುತ್ತಾರೆ. ಮತ್ತೆ ಉರವಕೊಂಡ ಮಠದಲ್ಲಿಯೂ ಅಷ್ಟೆ ನಾರದ ಗಡ್ಡೆಯಿಂದ ಧ್ವಜ ತೆಗೆದುಕೊಂಡು ಹೋದ ಮೇಲೆ ಜಾತ್ರೆ ಕಾರ್ಯಕ್ರಮಗಳು ನಡೆಯುತ್ತವೆ. ಈ ರೀತಿಯಾಗಿ ಈ ಮಠಗಳ ಸಂಬಂಧವನ್ನು ಕಾಣಬಹುದು.

ನಾರದಗಡ್ಡೆ ಮಠ ತನ್ನ ಸುತ್ತ ಪ್ರದೇಶದಲ್ಲಷ್ಟೆ ಹೆಸರು ವಾಸಿಯಾಗಿರದೆ, ಕರ್ನಾಟಕ, ಆಂಧ್ರ ರಾಜ್ಯಗಳಲ್ಲಿ ತನ್ನ ವಿರಕ್ತ ಶಾಖಾ ಮಠಗಳನ್ನು ಸ್ಥಾಪಿಸಿದೆ. ಆ ಮಠಗಳನ್ನು ಈ ಕೆಳಗಿನಂತೆ ನೋಡಬಹುದು.

**ನಾರದಗಡ್ಡೆ ಸಂಸ್ಥಾನ ಮಠದ ವಿರಕ್ತ ಶಾಖಾ ಮಠಗಳು**

| ಕ್ರ | ಗ್ರಾಮದ ಹೆಸರು | ಜಾತ್ರೆ | ಗುಡಿ | ಗದ್ದುಗೆ | ಮಠ | ಭಾವಿ | ವ್ಯವಸ್ಥಾಪಕ | ವಿವರ |
|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ |
| **ಕರ್ನಾಟಕ ರಾಜ್ಯ** | | | | | | | | |
| **೧ ತಾಲೂಕು ರಾಯಚೂರು ಜಿಲ್ಲೆ ರಾಯಚೂರು** | | | | | | | | |
| ೧ | ನಡುಗಡ್ಡೆ | ಜಾತ್ರೆ | – | ೬ | ೧ | – | ೧೦ | – |
| ೨ | ನಾರದಗಡ್ಡೆ | – | – | – | ೧ | ೨ | ೮ | – |
| | **ರಾಯಚೂರು** | | | | | | | |
| ೩ | ಮರ್ಚೇಡ್ | – | – | ೨ | ೧ | ೧ | – | – |
| ೪ | ಪೂರತಿಪ್ಲಿ | – | – | – | ೧ | ೧ | ೧ | – |
| ೫ | ಬಿಚ್ಚಾಲಿ | – | – | ೧ | ೧ | – | ೧ | – |
| ೬ | ಕಲ್ಮಾಲ | – | – | – | ೧ | – | ೧ | – |
| **೨ ತಾಲೂಕು ಮಾನ್ವಿ** | | | | | | | | |
| ೭ | ಕಪಗಲ್ | – | – | – | ೧ | – | ೧ | – |
| ೮ | ಚೀಕಲಪರ್ವಿ | – | – | ೧ | ೧ | – | ೧ | – |
| ೯ | ಕೊಟ್ನೆಕಲ್ | – | – | – | ೧ | – | – | – |
| ೧೦ | ಭೋಗಾವತಿ | – | – | – | ೧ | ೧ | – | – |
| ೧೧ | ಅಮರಾವತಿ | – | – | ೪ | ೧ | ೧ | ೧ | – |
| **೩ ತಾಲೂಕಾ ಯಾದಗಿರಿ ಜಿಲ್ಲಾ ಕಲಬುರ್ಗಿ** | | | | | | | | |
| ೧೨ | ಸಿಂಧನೂರ | – | – | ೩ | ೧ | ೨ | ೧ | – |
| ೧೩ | ಜವಳಗೇರಾ | – | – | ೨ | ೧ | ೨ | ೧ | – |

| | | | | | | | | |
|---|---|---|---|---|---|---|---|---|
| ೧೪ | ಬಳಗಾನೂರ | – | ೧ | ೩ | ೧ | ೨ | ೨ | – |
| ೧೫ | ಉಪ್ಪ | – | – | ೧ | ೧ | – | – | – |
| ೪ ತಾಲೂಕಾ ಯಾದಗಿರಿ ಜಿಲ್ಲಾ ಕಲಬುರ್ಗಿ | | | | | | | | |
| ೧೬ | ನೀಲಹಳ್ಳಿ | – | – | – | ೧ | – | ೧ | – |
| ಆಂಧ್ರ ಪ್ರದೇಶ | | | | | | | | |
| ೧೭ | ಬಳಿಗೇರಾ | – | – | – | – | ೧ | – | – |
| ೧೮ | ಗಟ್ಟು | – | – | ೨ | ೧ | ೨ | ೧ | – |
| ೧೯ | ಐಜಿ | – | – | – | ೧ | ೨ | ೧ | – |
| ೨೦ | ಆಲೂರು | – | – | ೧ | ೧ | ೧ | ೧ | – |
| ೨೧ | ನೆಂಟಂಪಾಡ | – | – | – | ೧ | – | ೩ | – |
| ೨೨ | ದರೂರು | – | – | – | ೧ | ೧ | ೧ | – |
| ೨೩ | ಅನಂತಪೂರ | – | – | – | ೧ | ೧ | – | – |
| ೬ ತಾಲೂಕಾ ಆಲಂಪೂರ | | | | | | | | |
| ೨೪ | ರಾಜೋಳಿ | – | – | – | ೧ | – | – | – |
| ೭ ತಾಲೂಕಾ ಮೊಕ್ತಲ್ | | | | | | | | |
| ೨೫ | ಮೊಕ್ತಲ್ | – | – | – | ೧ | – | ೧ | – |
| ೨೬ | ಗುಡೆಬಲ್ಲೂರು | – | – | ೧ | ೧ | ೧ | – | ೧ |
| ೮ ತಾಲೂಕಾ ವನಪರ್ತಿ | | | | | | | | |
| ೨೭ | ಹುನಗುಂಡಿ | – | – | – | ೧ | ೨ | – | – |
| ೯ ತಾಲೂಕಾ ಉಮ್ಮಿಗನೂರು | | | | | | | | |
| ೨೮ | ನಂದವಾರಂ | – | – | ೧ | ೧ | ೧ | – | – |
| ೧೦ ತಾಲೂಕಾ ಆದೋನಿ | | | | | | | | |
| ೨೯ | ಹೂನೂರು | – | ೧ | ೧ | ೧ | – | ೧ | – |
| ತಾಲೂಕಾ ಹೈದ್ರಾಬಾದ್ | | | | | | | | |
| ೩೦ | ಮಲ್ಲೇಪಲ್ಲಿ | – | – | ೨ | ೧ | – | – | – |

## ೪.೬. ನಡುಗಡ್ಡೆಗಳ ಜಾತ್ರೆಗಳು

"ಜಾತ್ರೆ" ಎಂಬ ಪದ "ಯಾತ್ರೆ"ಯ ತದ್ಭವ. ಯಾತ್ರಾ ಸ್ಥಾನಗಳೆಲ್ಲ ಜಾತ್ರೆಯ ಸ್ಥಳಗಳಾಗಲಿಕ್ಕಿಲ್ಲ. ಆದರೆ ಜಾತ್ರೆಯ ಸ್ಥಳಗಳೆಲ್ಲ ಸಾಮಾನ್ಯವಾಗಿ ಯಾತ್ರಾಸ್ಥಳಗಳಾರುತ್ತವೆ. ಇದಕ್ಕೆ ಸಮಂಜಸವಾಗಿ ಸಂಸ್ಕೃತದ ಒಂದು ಉಕ್ತಿಯು ಹೀಗಿದೆ. "ಯಾನೇನ ತ್ರಾಯತ್ ಇತಿ ಯಾತ್ರಾ"(ಶಾಂತವ್ವ ನಾಗಪ್ಪ, ೨೦೧೩, ಪು.೧೦೮) ಇದರ ಅರ್ಥ ಪೂರ್ಣ ಕ್ಷೇತ್ರ ದರ್ಶನಕ್ಕೆ ಹೋಗುವವರ ರಕ್ಷೆಯೇ ಯಾತ್ರೆಯಾಗಿದೆ. ನಿಘಂಟುಗಳು ಸಹ ಜಾತ್ರೆಯ ಕುರುತಾಗಿ ಪುಣ್ಯಕ್ಷೇತ್ರದ ದರ್ಶನ ಮಾಡುವ ಯಾತ್ರೆಯೆಂದೇ ಉಲ್ಲೇಖಿಸಿದ್ದು ಗಮನಾರ್ಹ ವಿಷಯ. ಯಾಕೆಂದರೆ ಯಾತ್ರೆ ಅಂದರೆ ಯಾವುದೇ ಕಾರ್ಯದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ಪುಣ್ಯಕ್ಷೇತ್ರಗಳ ದರ್ಶನ ಪಡೆಯುವುದಾಗಿದೆ. ಇದಕ್ಕೆ ನಿದರ್ಶನವಾಗಿ ನಮ್ಮ ಪೂರ್ವಜರು ವರ್ಷದಲ್ಲಿ ಹರಕೆಗಳನ್ನು ಸಲ್ಲಿಸಲು ಇಂತಹ ಸ್ಥಳಗಳಿಗೆ ಹೋಗುತ್ತಿದ್ದರು. ಈ ಸ್ಥಳದಲ್ಲಿ ನೆರೆಯುವ ಜನಸಮೂಹಕ್ಕೆ "ಜಾತ್ರೆ" ಎಂದು ಕರೆಯುತ್ತಾರೆ.

ಭಾರತ ದೇಶವು ವಿಶಾಲವಾದುದರಿಂದ ಹಲವಾರು ಬುಡಕಟ್ಟುಗಳನ್ನು ಹೊಂದಿದುದರ ಪ್ರಯಕ್ತ ಪ್ರತಿಯೊಂದು ಗ್ರಾಮದಲ್ಲೂ ಒಂದಿಲ್ಲೊಂದು ದೇವರ ಗುಡಿ-ಗುಂಡಾರ ಊರ ಹೊರಗೆ ಆಗಲಿ, ಊರ ಮಧ್ಯದಲ್ಲಿಯಾಗಲಿ ಇರುವುದು ಕಂಡುಬರುತ್ತದೆ. ಈ ದೇವರುಗಳ ಆರಾಧನೆ, ಆಚರಣೆ, ಜಾತ್ರೆ-ಉತ್ಸವಗಳು ಒಂದು ನಿರ್ದಿಷ್ಟ ಕಾಲದಲ್ಲಿ ನಿಯಮಿತವಾಗಿ ಊರ ಜನರು ಸೇರಿ ನೆರವೇರಿಸುವ ಆಚರಣೆಗೆ "ಜಾತ್ರೆ" ಎನ್ನುತ್ತಾರೆ.

ಜನ ಸೇರಿದರೆ ಜಾತ್ರೆ, ಗುಂಪು ಸಮೂಹ ಜನರಾಶಿಯೇ ಜಾತ್ರೆ, ಒಟ್ಟಿನಲ್ಲಿ ಬೃಹತ್ ಪ್ರಮಾಣದ ಸಂಖ್ಯೆಯಲ್ಲಿ ಜನ ಕೂಡುವುದು. ಅದಕ್ಕೆ ಜಾತ್ರೆ ಎನ್ನುತ್ತಾರೆ. ಈ ಸಂದರ್ಭದಲ್ಲಿ ಸೇರಿದ ಸಮೂಹ ರಥದ ಸುತ್ತಲೂ ಪ್ರದಕ್ಷಿಣೆ ಮಾಡುವುದು ಅಂಗಡಿಗಳ ಹಾಗೂ ಮನರಂಜನೆ ಆಟದ ಅಂಗಡಿಗಳ ಸುತ್ತ ಜನ ಅಲೆಯುವುದು ನೋಡಿದರೆ ಜಾತ್ರೆಗೆ ಜನ ಬಂಡವಾಳ ಎನ್ನುವ ಮಾತು ಸೂಕ್ತವೆನಿಸಬಹುದು. ಆದ್ದರಿಂದಲೇ ಜನಸಮೂಹವನ್ನು ಗಮನಿಸಿ ಕೆಲವೊಂದು ಸೂತ್ರಗಳು ಜನಪದರ ನಾಲಿಗೆ ಅಂಚಿನಿಂದ ಉದುರಿ ಬೀಳುವದನ್ನು ಕಾಣುತ್ತವೆ. 'ಜನಜಾತ್ರೆ', 'ಜನ ಮರುಳೊ ಜಾತ್ರೆ ಮರುಳೊ'. ಇವುಗಳನ್ನು ಗಮನಿಸಿದಾಗ ಇಲ್ಲಿ ನೆರೆಯುವಂತಹ ಸಮೂಹ ತಂಟೆ-ತಕರಾರಕ್ಕಾಗಿಯೂ ಅಲ್ಲ ಅಥವಾ ಬೇರೆ ಉದ್ದೇಶಕ್ಕಾಗಿಯೂ ಅಲ್ಲ, ಒಂದು ಪುಣ್ಯ ಕ್ಷೇತ್ರದ ದರ್ಶನಕ್ಕೆ ಕೂಡಿದೆ ಎಂದು ಸೂಚಿಸುತ್ತದೆ.

ಜಾತ್ರೆ ಎಂಬುದು ಮೋಜು, ಉಲ್ಲಾಸ. ಮನರಂಜನೆಯ ಚಟುವಟಿಕೆಯ ಒಂದು ಅಂಗವಾದರೆ ಅದು ಸಾಮರಸ್ಯ ಕಾಪಾಡಿಕೊಂಡು ಎಲ್ಲ ಧರ್ಮೀಯರಲ್ಲಿ ಪ್ರೀತಿ- ಪ್ರೇಮದ ಸಂಕೋಲೆಯ

ಭದ್ರ–ಬುನಾದಿ ರೂಪಿಸುವಲ್ಲಿ ಗ್ರಾಮೀಣ ಕಲೆಗಳನ್ನು ಪ್ರೋತ್ಸಾಹಿಸುವುದರಲ್ಲಿಯೂ ಅಬಾಲ–ವೃದ್ಧರಾಗಿ, ಸ್ತ್ರೀ–ಪುರುಷರಲ್ಲಿ ಸರ್ವತೋಮ್ಮುಖವಾಗಿ ಸಂತೋಷ ಪಡುವುದಕ್ಕೆ ಇದು ಪೂರಕವಾಗಿದೆ. ಇದನ್ನು ಕಂಡ ಜನಪದರು ಸಾಮಾನ್ಯವಾಗಿ ಈ ಗಾದೆಯನ್ನು ಹೇಳುತ್ತಾರೆ. ಹಬ್ಬ ಊಟಕ್ಕೆ ಚಂದ, ಜಾತ್ರೆ ನೋಟಕ್ಕೆ ಚಂದ.

**ಜಾತ್ರೆಗಳ ಉಗಮ**

ಜಾತ್ರೆಗಳ ಉಗಮದ ಬಗ್ಗೆ ನಿಖರವಾಗಿ ಹೇಳುವುದು ಕಷ್ಟದ ಕೆಲಸ. ಆದರೆ ಲಭ್ಯವಿರುವ ಇತಿಹಾಸ ಜ್ಞಾನದಿಂದಲೂ ಊಹೆ ಮತ್ತು ಕಲ್ಪನೆಗಳಿಂದಲೂ ಇದರ ಕುರಿತು ಬಹುಮಟ್ಟಿಗೆ ಹೇಳಲು ಪ್ರಯತ್ನ ಮಾಡಬಹುದಾಗಿದೆ. "ಪಾಶ್ಚಿಮಾತ್ಯದಲ್ಲಿ ಭಾಷೆಯ Feirae ಎಂಬ ಲ್ಯಾಟಿನ್ ಶಬ್ಧದ ತದ್ಭವ Fair ಎಂದು ಪರಿವರ್ತನೆಗೊಂಡು ವ್ಯಾಪಾರ ಕೇಂದ್ರಗಳನ್ನಾಗಿ ಜನರು ಸೇರಿ ತಮ್ಮ ವಹಿವಾಟುಗಳನ್ನು ಸಾದರಪಡಿಸಿಕೊಳ್ಳುತ್ತಿದ್ದರು. ಇವುಗಳು ವರ್ಷದ ನಿರ್ಧಿಷ್ಟ ಕಾಲಾವಧಿಯಲ್ಲಿ ಜರುಗುವುದು ಕಂಡು ಪಾಶ್ಚಿಮಾತ್ಯ ಇತಿಹಾಸಕಾರರು ಇವುಗಳಿಗೆ ತಾತ್ಕಾಲಿಕ ಮಾರುಕಟ್ಟೆಗಳೆಂದು ವ್ಯಾಖ್ಯಾನಿಸಿದ್ದಾರೆ"(ಚಪ್ಪರಬಂದ ಆರ್.ಆಯ್., ೨೦೦೬, ಪು.೩೪). ಆದರೆ ಅಲ್ಲಿಯೂ ಪ್ರಾಚೀನ ಕಾಲದಲ್ಲಿ ಜಾತ್ರೆಗಳು ದೈವ ಸನ್ನಿಧಿಯಲ್ಲಿ ನಡೆಯುತ್ತಿದ್ದವು ಮುಂದೆ ಅದೊಂದು ಧಾರ್ಮಿಕ ಸಂಪ್ರದಾಯವಾಗಿ ಬೆಳೆಯದೇ ಆರ್ಥಿಕ ಚಟುವಟಿಕೆಯಾಗಿ ಬೆಳೆಯಿತು.

ಇಂತಹ ಸಂಪ್ರದಾಯಗಳು ಮಂದಗತಿಯಲ್ಲಿ ಸಾಗಿಬೆಳೆದು ಮುಂದೆ ಜಾತ್ರೆಯ ರೂಪ ತಾಳಿತು. ಇದು ಪಾಶ್ಚಿಮಾತ್ಯರಲ್ಲಿ ಜಾತ್ರೆಗಳ ಉಗಮದ ಬಗ್ಗೆ ಉಲ್ಲೇಖಿಸಿದರೆ ಭಾರತೀಯರಿಗೆ ಧರ್ಮವೇ ಮೂಲ ಪ್ರೇರಣೆ ಎನ್ನುವುದು ಸರಿಯಾದೀತು. "ಇದರ ಹಿನ್ನೆಲೆಯಾಗಿ ಭಾರತೀಯ ಸಂಸ್ಕೃತಿಯು ಬೆಳೆದುಬಂದ ಪರಂಪರೆ, ಇಲ್ಲಿ ವಾಸಿಸುವ ಜನ, ಇವರ ಬದುಕಿನ ವೈಶಿಷ್ಟ್ಯಗಳ ಆಧಾರದ ಮೇಲೆ ಡಾ. ಶಿವಾನಂದ ಗುಬ್ಬಣ್ಣನವರ ಕಲ್ಪನೆ ಇದಕ್ಕೆ ಸಮಂಜಸವಾಗುವುದೇನೋ. ಮನುಷ್ಯ ಪ್ರಾಣಿಗೆ ದೇವರ ಕಲ್ಪನೆಯ ಸೃಷ್ಟಿಯಲ್ಲಿ ನಡೆಯುತ್ತಿರುವ ಹಗಲು–ರಾತ್ರಿ, ಬಿಸಿಲು–ಮಳೆ–ಚಳಿ, ಗುಡುಗು–ಮಿಂಚು, ಭೂಕಂಪ ಮುಂತಾದ ಅದ್ಭುತ ಕಾರ್ಯಗಳನ್ನು ನೋಡಿಯೆ ಮೊದಲು ಉಂಟಾಯಿತೆಂದು ಆಧುನಿಕ ಪ್ರಾಣಿಶಾಸ್ತ್ರಜ್ಞರ ಅಭಿಮತವಾಗಿದೆ."(ಅದೇ, ಪು.೩೪) ಮನುಷ್ಯ ಪ್ರಾಣಿಯು ಬಾಲ್ಯಾವಸ್ಥೆಯಲ್ಲಿದ್ದಾಗ ಸೃಷ್ಟಿಯ ಈ ಅದ್ಭುತ ಕಾರ್ಯಗಳ ಕಾರಣವನ್ನು ಕಂಡುಹಿಡಿಯುವುದು ಆತನ ಬುದ್ಧಿಶಕ್ತಿಗೆ ನಿಲುಕಲಿಲ್ಲ. ಇದನ್ನೆಲ್ಲ ಮಾಡುವವನು ಕಣ್ಣಿಗೆ ಕಾಣದಿದ್ದಾಗ ಅವನನ್ನೇ ದೇವರೆಂದು ನಂಬಿ ತಮಗೆ ಉಂಟಾದ ತೊಂದರೆ ಸಮಯದಲ್ಲಿ ಪೂಜಿಸುತ್ತಿದ್ದರು. ಇನ್ನು ಹಲವಾರು ಇಂತಹ ನಂಬಿಕೆಗಳನ್ನು ಅವರು ಸೃಷ್ಟಿಸಿಕೊಂಡು ಮುಂದೆ ಇವುಗಳು ಧಾರ್ಮಿಕ ಇತಿ–ಮಿತಿ ಒಳಗೆ ಬೆಳೆದು ಹೆಮ್ಮರವಾಗಿ ಸಮಾಜದ ಸ್ವಾಸ್ಥ್ಯಗೆ ಸ್ವಲ್ಪಮಟ್ಟಿಗೆ ದಕ್ಕೆಯನ್ನುಂಟು ಮಾಡಿತು. ಹೀಗೆ ಜಾತ್ರೆಗಳು ಧಾರ್ಮಿಕ ಹಿನ್ನೆಲೆಯಲ್ಲಿ ಹುಟ್ಟಿಕೊಂಡವು.

ಜಾತ್ರೆಗಳ ಉಗಮದ ಬಗ್ಗೆ ವಿದ್ವಾಂಸರ ಹೇಳಿಕೆಗಳನ್ನು ಗಮನಿಸಿದಾಗ, ಕರ್ನಾಟಕದಲ್ಲಿ ಜಾತ್ರೆಗಳ ಹುಟ್ಟು ಬೆಳವಣಿಗೆ ಬಗ್ಗೆ ಹೇಳುವುದು ಅತೀ ಮುಖ್ಯವಾದ ಅಂಶವಾಗಿದೆ. ಇದರ ಕುರಿತು ದೇಜಗೌರು ಕರ್ನಾಟಕದ ಜಾತ್ರೆಗಳು ವಿಚಾರ ಸಂಕಿರಣ ಸಮಾರೋಪ ಭಾಷಣದಲ್ಲಿ ಹೀಗೆ ಹೇಳಿದ್ದಾರೆ. ಕನ್ನಡ ನಾಡಿನಲ್ಲಿ ಜಾತ್ರೆಗಳು ಎಂದು ಆರಂಭವಾದವು ಎಂದು ಹೇಳಲಾಗದು ಮೊಟ್ಟಮೊದಲಿಗೆ ಬ್ರಹ್ಮ ಶಿವನ ಸಮಯ ಪರೀಕ್ಷೆ ಮತ್ತು ಯಶೋಧರ ಚರಿತ್ರೆಗಳಲ್ಲಿ ಜಾತ್ರೆಗಳ ವಿವರಣೆ ಬರುತ್ತದೆ. ತೇರು ಎನ್ನುವ ಪದ ಪ್ರಪ್ರಥಮವಾಗಿ ಪಂಪನಲ್ಲಿ ದೊರೆಯುತ್ತದೆ. "ತೇರು" ಜಾತ್ರೆಗಳ ಅನಿವಾರ್ಯ ಅಂಗವಾಗಿದ್ದರಿಂದ ಒಂದು ಸಾವಿರ ವರ್ಷಗಳ ಹಿಂದಕ್ಕೆ ಜಾತ್ರೆಗಳ ಇತಿಹಾಸವನ್ನು ಒತ್ತರಿಸಲು ಸಾಧ್ಯವಿದೆ.

ಈ ರೀತಿಯಾಗಿ ಜಾತ್ರೆಗಳು ಈ ನಾಡಿನಲ್ಲಿ ಹುಟ್ಟಿ ಬೆಳೆದುಕೊಂಡು ಜನಪದರಿಗೆ ಮತ್ತು ನಗರವಾಸಿಗಳಿಗೆ ಆಕರ್ಷಣೆ ನೀಡಿ ದೇವರಲ್ಲಿ ಭಕ್ತಿ ಮೂಡಿಸುವುದರ ಜೊತೆಗೆ ಮನೋರಂಜನೆಯ ಉತ್ಕೃಷ್ಟ ಊಟ ಬಡಿಸುವಲ್ಲಿ ಸಹಾಯಕಾರಿಯಾಗಿವೆ. ಈ ಜಾತ್ರೆಗಳು ಸೂಕ್ತ ಸಮಯದಲ್ಲಿ ನಿರ್ದಿಷ್ಟ ಸ್ಥಳದಲ್ಲಿ ಜರುಗುವಂತೆ ಜನಪದರು ಅವುಗಳ ಕುರಿತು ನಿರ್ಧಿಷ್ಟ ಉಪಾಯ ಕಂಡುಕೊಂಡದ್ದು ಗಮನಾರ್ಹವಾಗಿದೆ. ಸುಗ್ಗಿ ಮುಗಿದ ನಂತರ ರೈತರು ತಮ್ಮ ಕೆಲಸಕಾರ್ಯಗಳಿಂದ ಬಿಡುವು ಹೊಂದಿ ಪೂರ್ವಜರು ಸೂಚಿಸಿದ ಸ್ಥಳದಲ್ಲೇ ಜಾತ್ರೆಗಳನ್ನು ಇಂದಿಗೂ ನೆರವೇರಿಸುತ್ತಾ ಬರುವರು. ನಡುಗಡ್ಡೆಗಳಲ್ಲಿ ಈ ಸನ್ನಿವೇಶ ಕಂಡುಬರುತ್ತದೆ.

## ಗಡ್ಡೆ ಗದ್ದೆಮ್ಮನ ಜಾತ್ರೆ

ಮಕರ ಸಂಕ್ರಮಣದ ಪೂರ್ವೋತ್ತರ ದಿನಗಳೆಂದರೆ ಭರ್ಜರಿ ಜಾತ್ರೆಯ ದಿನಗಳು. ಈ ದಿನಗಳಲ್ಲಿ ಉತ್ತರ ಕರ್ನಾಟಕದಲ್ಲಿ ಜರುಗುವ ಪ್ರಮುಖ ಜಾತ್ರೆಗಳಲ್ಲಿ ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ದೇವರಗಡ್ಡಿಯ ಗದ್ದೆಮ್ಮದೇವಿ ಜಾತ್ರೆಯೂ ಒಂದಾಗಿದೆ. ಈ ಊರಿಗೆ ಜಂಗಿನಗಡ್ಡಿ ಎಂದು ಹೆಸರಿದೆ. ಇದು ಕಲಬುರ್ಗಿ, ರಾಯಚೂರು, ಬಾಗಲಕೋಟೆ ಮತ್ತು ಬಿಜಾಪುರ ಜಿಲ್ಲೆಗಳ ಮಾಲೆಯಲ್ಲಿರುವ ಒಂದು ಪುಟ್ಟ ಗ್ರಾಮ. ನಾರಾಯಣಪುರದ ಬಸವಸಾಗರಕ್ಕೆ ಬಂದ ಮೇಲೆ ಸೇತುವೆಯ ಮೇಲೆ ನಿಂತು ಪೂರ್ವಕ್ಕೆ ನೋಡಿದಾಗ ಬೆಳ್ಳಗೆ ಕಣ್ಣು ಕುಕ್ಕುವಂತೆ ಒಂದು ದೇವಾಲಯ ಶಿಖರ ಕಂಡುಬರುವುದು ಅದುವೆ ಗಡ್ಡಿ ಗದ್ದೆಮ್ಮನ ದೇವಸ್ಥಾನ.

## ಪೂರ್ವವೃತ್ತಾಂತ

ಇಲ್ಲಿನ ಸುತ್ತಮುತ್ತಲಿನ ಗ್ರಾಮದ ಜನಪದರಲ್ಲಿ ಒಂದು ಕಥೆ ಕೇಳಿ ಬರುತ್ತದೆ. ಅದೇನೆಂದರೆ ಒಮ್ಮೆ ತಿಂಥಣಿಯ ಮೌನೇಶ್ವರರು, ಸ್ಥಳೀಯ ಮಾಳಪ್ಪಯ್ಯನವರು, ಗಂಗಾಧರರು ಮತ್ತು ಬಡೇಮಿಯಾ ಎಂಬ ನಾಲ್ಕು ಪವಾಡ ಪುರುಷರು ಕೃಷ್ಣೆಯ ನಡುಗಡ್ಡೆಯೊಂದರಲ್ಲಿ ಕುಳಿತು ಆನಂದ ಸಾಗರದಲ್ಲಿ

ತೇಲುತ್ತಿದ್ದಾಗ ಆಕಸ್ಮಿಕವಾಗಿ ತುಂಬಿದ ಹೊಳೆಯಲ್ಲಿ ಪ್ರವಾಹದ ವಿರುದ್ಧ ಒಂದು ಬೃಹತ್ ಮರದ ದಿಮ್ಮೆಯೊಂದು ಚಲಿಸುವುದನ್ನು ಕಂಡರು. ಮಳಿಯಪ್ಪಯ್ಯನವರ ಸಲಹೆಯಂತೆ ಗಂಗಾಧರ ಮತ್ತು ಬಡೇಮಿಯಾ ಈಜಿ ಆ ದಿಮ್ಮೆಯನ್ನು ದಡಕ್ಕೆ ತಂದರಂತೆ. ಆ ಮರವನ್ನು ಕಂಡು ಮೌನೇಶ್ವರರಿಗೆ ಸಾಕ್ಷಾತ್ ಆದಿ ಶಕ್ತಿಯ ರೂಪವೇ ಅದರಲ್ಲಿ ಕಂಡಿತಂತೆ. ವೃತ್ತಿಯಿಂದ ಬಡಗಿಯಾಗಿದ್ದ ಅವರು ಈ ಕಟ್ಟಿಗೆಯಿಂದ ದೇವಿಯನ್ನು ಹೊರಗೆ ಕರೆಯಬೇಕು. ಆ ತಾಯಿ ನಮ್ಮನ್ನು ದಾಟಿ ಹೊರಟಿದ್ದಳು. ಹೋಗಬೇಡ ತಾಯಿ! ಇದಕ್ಕಿಂತ ಪವಿತ್ರ ಸ್ಥಳ ನಿನಗೆಲ್ಲಿದೆ? ಉತ್ತರ ಮುಖಿಯಾಗಿ ಕೃಷ್ಣೆಯನ್ನು ಇಲ್ಲಿ ನೀನೇ ಹರಿಸಿದೆ, ನಿನ್ನನ್ನು ಇಲ್ಲಿ ಪ್ರತಿಷ್ಠಾಪಿಸಲು ನಮಗೆ ಹರಸಲಾರೆಯಾ? ಎಂದರಂತೆ ಆ ದಿಮ್ಮೆಯನ್ನು ತಿರುಗಿಸಿ ನೋಡಿದಾಗ ಅದರ ಮೈತುಂಬ "ಗದ್ದೆಮ್ಮ" "ಗದ್ದೆಮ" "ಗದ್ದೆಮ್ಮ" ಎಂದು ಬರೆದಂತೆ ತೋರಿತಂತೆ. ದಿಮ್ಮಿಗೆ ಕಿವಿಗೊಟ್ಟು ಕೇಳಿದರೆ ದೇವಿಯ ಮಂತ್ರ ಪಠಣ ಕೇಳಿಸಿತಂತೆ. ತಡಮಾಡದೇ ಕಾರ್ಯ ಪ್ರವೃತ್ತರಾದ ಶ್ರೀಮೌನೇಶ್ವರರು ತಮ್ಮ ಸಂಗಡಿಗರ ಸಹಾಯದಿಂದ ಆ ಕಟ್ಟಿಗೆ ಬಳಸಿ ಒಂದು ಸುಂದರವಾದ ದೇವಿಯ ಮೂರ್ತಿಯನ್ನು ಸಿಂಹಾರೂಢ ಶೈಲಿಯಲ್ಲಿ ಕೆತ್ತಿ ಶ್ರಾವಣಮಾಸದ ಶುಕ್ಲಪಕ್ಷದ ದಿನದಂದು ಆ ತಾಯಿಯನ್ನು ಅದೇ ನಡುಗಡ್ಡೆಯಲ್ಲಿಯೇ ಎಲ್ಲರೂ ಸೇರಿ ಪ್ರತಿಷ್ಠಾಪಿಸಿದರಂತೆ. ಅಂಥಹ ಧರ್ಮೈಕ್ಯ, ಭಾವೈಕ್ಯ ಪುರುಷರಿಂದ ಪ್ರತಿಷ್ಠಾಪಿತವಾದ ಮೂರ್ತಿಗೆ ಸುತ್ತಮುತ್ತಲಿನ ಗ್ರಾಮದ ಜನರು ಭಕ್ತಿಭಾವದಿಂದ ಕೈಮುಗಿದು ದೇವಿಗೆ ಬನದ ಹುಣ್ಣಿಮೆ ದಿನ ಬಣ್ಣ ಕೊಟ್ಟು ಉಡಿತುಂಬಿ ಜಾತ್ರೆ ಮಾಡಿದರಂತೆ. ಅಂದಿನಿಂದ ಇಂದಿನವರೆಗೂ ಗಡ್ಡಿ ಗದ್ದೆಮ್ಮದೇವಿಯ ಮೂಢರ ಮೌಢ್ಯ ಕಳೆಯುತ್ತ ನೆಲೆನಿಂತಿದ್ದಾಳೆ.

### ಗದ್ದೆಮ್ಮ ದೇವಿಯ ಮೂಲ

ಹೈದರಾಬಾದ ಹತ್ತಿರವಿರುವ ಯಾಣಾಗೊಂದಿಯಿಂದ ಆಗಮಿಸಿದ ಅರಸನ ಮಗಳೆಂಬ ಪ್ರತೀತಿಯೂ ಇದೆ. ಅಲ್ಲದೆ ವಿಜಯ ನಗರದ ಅರಸರ ಕಾಲದವು ಎನ್ನಬಹುದಾದ ಕೆಲವು ಲಿಖಿತ ಮೂಲಾಧಾರಗಳು ಹಳ್ಳಿಯಲ್ಲಿ ಲಭ್ಯ ಇವೆ ಎಂದು ಹೇಳುತ್ತಾರೆ. ಅವುಗಳನ್ನು ಸಂಶೋಧಿಸುವ ಕಾರ್ಯ ಇನ್ನೂ ಆಗಬೇಕಾಗಿದೆ.

ಆರಂಭದಲ್ಲಿ ಚಿಕ್ಕ ಗುಡಿಯನ್ನು ಹೊಂದಿದ್ದ ಗುಡಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಇಲ್ಲಿನ ಜನರು ಕೃಷಿ, ಮೀನುಗಾರಿಕೆಗೆ ಹೆಸರಾದವರು. ಕ್ರಮೇಣ ಗ್ರಾಮ ಬೆಳೆಯಿತಾದರೂ ಮೂಲ ದೇವಾಲಯದ ಜೀರ್ಣೋದ್ಧಾರವಾಗಲಿಲ್ಲ. ಈ ಕಾರ್ಯವನ್ನು ಕೈಗೂಡಿಸಲೆಂದು ತಾಯಿ, ಶ್ರೀ ಶಿವನಗೌಡ ವೀರನಗೌಡ ಪಾಟೀಲ್ ಎಂಬ ಶಿಕ್ಷಕರನ್ನು ತನ್ನ ಸನ್ನಿಧಾನಕ್ಕೆ ಕರೆಸಿಕೊಂಡಂತಿದೆ. ಅವರ ಪರಿಶ್ರಮದ ಫಲವಾಗಿ ಅಪಾರ ಪ್ರಮಾಣದಲ್ಲಿ ಭಕ್ತರಿಂದ ಸಂಗ್ರಹವಾದ ಧನ, ಕನಕ, ರಾಶಿಯಿಂದ ಸುಂದರ ದೇವಾಲಯ ಮೈದಳೆದು ನಿಂತಿದೆ.

### ಕಾರ್ತಿಕೋತ್ಸವ

ಜಾತ್ರೆಯ ಆರಂಭಕ್ಕೆ ಒಂದು ವಾರ ಮುಂಚೆ ದೇವಿಗೆ ಕಾರ್ತಿಕೋತ್ಸವ ನಡೆಯುತ್ತದೆ. ಭಕ್ತರು ಒಂದು ವಾರ ಕಾಲ ತಮ್ಮ ಹೊಲಗದ್ದೆಯ ಕಾರ್ಯಗಳಿಗೆ ಹೋಗದೆ ಮನೆಗಳನ್ನು ಸಾರಿಸಿ ಸಿಂಗರಿಸಿ ಮಡಿಯಿಂದ ಕಾರ್ತಿಕೋತ್ಸವಕ್ಕೆ ಸೇರುತ್ತಾರೆ. ಭಕ್ತರೇ ದೇವಿಗೆ ಬೇಡಿಕೊಂಡು ಎಣ್ಣೆ, ಪ್ರಣತಿ, ಬತ್ತಿ ತಂದು ಭಕ್ತಿಯಿಂದ ದೀಪಾರಾಧನೆ ಮಾಡುತ್ತಾರೆ. ದೇವಾಲಯದ ತುಂಬ ರಾತ್ರಿ ಹೊತ್ತು ದೀಪ ಹಚ್ಚಿ ವೀಳ್ಯೆದೆಲೆಗಳಿಂದ ದೇವಿಯನ್ನು ಅಲಂಕರಿಸಿ ಪೂಜೆ, ಆರತಿ, ಪ್ರಸಾದ, ಜಾಗರಣೆ ಮಾಡುತ್ತಾರೆ. ಮರುದಿನ ಕಾರ್ತೀಕಕ್ಕೆ ಸಿಂಗರಿಸಿದ್ದ ವೀಳ್ಯೆದೆಲೆಗಳನ್ನು ಸಂಗ್ರಹಿಸಿ ದೇವಿಯ ಏಳು ಬಾಬುಗಾರ ಹಳ್ಳಿಗಳಾದ ರೋಡಲಬಾಂಡಾ. (ತವರಮನೆ) ಹೋರೆ ಬಾವೂರು, ಜಂಗಿರಾಂಪುರ ಮತ್ತು ತಾಂಡಾ, ಗುಡಿಜಾನೂರ, ರಾಂಪೂರು, ಮೇಲಿನಗಡ್ಡಿ ಮತ್ತು ಬಂಗಿನಗಡ್ಡಿ ಬಾಬುಗಾರ ಭಕ್ತರಿಂದ ಅಮ್ಮನ ಸೇವೆ ಮತ್ತು ಜಾತ್ರೆಗಾಗಿ ಸಂಪತ್ತು ಸಂಗ್ರಹಿಸುವ ಸಲುವಾಗಿ ಮತ್ತು ಜಾತ್ರೆಯ ರೂಪು ರೇಷೆಗಳನ್ನು ತಿಳಿಯಪಡಿಸುವದಕ್ಕಾಗಿ ಆ ವೀಳ್ಯ ಹಂಚುತ್ತಾರೆ.

### ಗಂಗಾಸ್ಥಳಕ್ಕೆ ಹೋಗುವ ಕಾರ್ಯಕ್ರಮ

ದೇವಿಯ ಮಜಲಿ ಬಿಂದಿಗೆ (ಮಜಲುಗಳೊಂದಿಗೆ ಹೊರಡುವ ಚಿತ್ತಾರದ ನವಕುಂಭ) ಹೊತ್ತ ಪೂಜಾರಿಗಳು ಹಾಗೂ ಗ್ರಾಮಸ್ಥರು ದೇವಾಲಯದಿಂದ ಹೊರಟು ಕೃಷ್ಣೆಯ ಪೂರ್ವಾಭಿಮುಖ ಚಲನೆಯ ತಟದಲ್ಲಿರುವ ಗೆಜ್ಜಿಗುಂಡಿಗೆ (ಇದನ್ನೆ ಸಾದೇವಮ್ಮ ಹಾಗೂ ಛಾಯಾಭಗವತಿ ಸ್ಥಳ ಎನ್ನುತ್ತಾರೆ) ಹೋಗುತ್ತಾರೆ. ಇಡೀ ಹಗಲು ವಾದ್ಯಗಳ ಮೆರವಣಿಗೆ, ಕಳಸಗಿತ್ತಿಯರು ಹಿಡಿದ ಕಳಸಾರತಿ, ಮಂಗಳಾರತಿ, ಡೊಳ್ಳಿನವರ ವಿಶಿಷ್ಟ ನೃತ್ಯ, ಮಾರ್ಧನಿಗಳೊಂದಿಗೆ ಸಾಗಿ, ಮಡಿಯಿಂದ ಕುಂಭದಲ್ಲಿ ನೀರು ತುಂಬಿಕೊಂಡು ರಾತ್ರಿ ಪಂಜುಗಳ ಬೆಳಕಿನಲ್ಲಿ ಮರುಳುತ್ತಾರೆ. ಗಂಡಸರು ತಯಾರಿಸಿಕೊಂಡ ಮಡಿಬಟ್ಟೆಯ ಒಳ್ಳೆಣ್ಣಿ ಪಂಜುಗಳು ಸಾಲು ಅಗ್ನಿದೇವನೇ ದೇವಿಯ ಸೇವೆಗೆ ಹೊರಟು ಬರುವಂತಿರುತ್ತದೆ. ಸುಮಾರು ೪ ಕಿ.ಮೀಗಳ ಈ ಹಾದಿಯು ಕಲ್ಲುಗಳಿಂದ ಕೂಡಿದ್ದು, ಕೃಷ್ಣೆಯ ಪ್ರವಾಹದಿಂದ ದುರ್ಗಮವಾಗಿದೆ. ಇಂತಹ ಹಾದಿಯಲ್ಲಿ ಇಡೀ ಹಗಲು ಹಾಗೂ ರಾತ್ರಿಯವರೆಗೆ ಮಹಿಳೆಯರು, ಮಕ್ಕಳು, ಮುದಕರು ಹುರುಸಿನಿಂದ ನಡೆದುಬರುವುದು ಅಶ್ಚರ್ಯವೆನಿಸಿದೆ.

### ಅಕ್ಕಿ ಪಾಯಸದ ಕಾರ್ಯಕ್ರಮ

ಜಾತ್ರೆಯ ಕುತೂಹಲಕರ ಕಾರ್ಯಕ್ರಮಗಳು ಆರಂಭವಾಗುವುದು ಅಕ್ಕಿ ಪಾಯಸ ಮಾಡುವದರಿಂದ. ಅಂದು ಬೆಳಗ್ಗೆ ಮೂರು ಗಂಟೆಗೆ ದೇವಿಯ ಪೂಜಾರಿ ವರ್ಗದವರು ಮತ್ತು

ವಾದ್ಯವೃಂದದವರು ಸ್ನಾನಮುಗಿಸಿ ಮಡಿಯಿಂದ ಅರ್ಧ ಕಿಲೋಮೀಟರ್ ದೂರದಲ್ಲಿರುವ ಮಾಳಪ್ಪಯ್ಯ ಮನೆತನಗಳಿಂದ ತಂದಿರುವ ಹೊಸ ಕುಂಭವನ್ನು ತುಂಬಿಕೊಂಡು ಮರಳಿ ದೇವಾಲಯಕ್ಕೆ ಬರುತ್ತಾರೆ. ನಂತರ ಉಪ್ಪಾರ ಸಮುದಾಯದವರು ಚಿಕ್ಕ ಒಲೆಯೊಂದನ್ನು ಹೂಡಿ, ಅಗ್ನಿಮಾಡಿ, ಹೊಸ ಗಡಿಗೆ ಇಟ್ಟು ಮೀಸಲು ನೀರು ಹಾಕಿ ಅಕ್ಕಿ ಹಾಕುತ್ತಾರೆ ಹಾಗೂ ಪಂಚ ಪಕ್ವಾನ್ನಗಳಾದ ಹಾಲು, ತುಪ್ಪ, ಕಲ್ಲುಸಕ್ಕರೆ, ಲಿಂಬೆ ಮತ್ತು ಅರಿಷಿಣ ಹಾಕುತ್ತಾರೆ. ಅಕ್ಕಿಯು ಕುದಿಯುವಾಗ ಪೂಜಾರಿಗಳು ದೇವಿಯನ್ನು ಸ್ಮರಿಸುತ್ತ ಕುದಿಯುತ್ತಿರುವ ಅನ್ನದ ಕುಂಭದೊಳಗೆ ಹುಟ್ಟಿನ ಸಹಾಯವಿಲ್ಲದೆ ಬರಿಗೈಯಿಂದ ತಿರುವಿ ಅಕ್ಕಿಬೆಂದದ್ದನ್ನು ಜನರಿಗೆ ಪ್ರದರ್ಶಿಸುತ್ತಾರೆ. ಈ ಚಾತುರ್ಯದ ಕಾರ್ಯವನ್ನು ಒಂದೆರಡು ಸಲ ಮಾಡಿದ ಮೇಲೆ ಕೈಯಿಂದ ಅದನ್ನು ಬೆಳ್ಳಿಯ ತಾಟಿಗೆ ಹಾಕಿ ನೈವೇದ್ಯಕ್ಕಾಗಿ ದೇವಿಗೆ ಅರ್ಪಿಸುತ್ತಾರೆ. ನೋಡುತ್ತಿರುವ ಭಕ್ತಾದಿಗಳು ಅನ್ನ ಬೆಂದಿರುವ ಪ್ರಮಾಣದ ಮೇಲೆ ಮುಂಬರುವ ತಮ್ಮ ಭೂಮಿಯ ಇಳುವರಿ ನಿರೀಕ್ಷಿಸುತ್ತಾರಂತೆ. ಪೂಜೆಯ ನಂತರ ಎಲ್ಲರೂ ಪ್ರಸಾದ ಸ್ವೀಕರಿಸುತ್ತಾರೆ. ನಂತರ ದೇವಿಯು ಬಣ್ಣದ ಸೇವೆಗೆ ಸಜ್ಜಾಗುತ್ತಾಳೆ.

### ಬಣ್ಣ ಹಾಗೂ ಏಳು ಗ್ರಾಮಗಳ ಉಡಿತುಂಬುವ ಕಾರ್ಯಕ್ರಮ

ಬಣ್ಣಗಾರಿಕೆಯಲ್ಲಿ ಹೆಸರು ವಾಸಿಯಾಗಿರುವ ಪಾಂಚಾಳ ಸಮುದಾಯದವರು ದೇವಿಯ ಕಟ್ಟಿಗೆಯ ಮೂರ್ತಿಗೆ ಬಣ್ಣ ಹಚ್ಚುತ್ತಾರೆ. ಈ ಕಾರ್ಯಮುಗಿದಾಗ ದೇವಿಯ ಮುಖದ ಗಾಂಭೀರ್ಯ ಎದ್ದು ಕಾಣುತ್ತದೆ. ಒಂದೆರಡು ಗಂಟೆ ನಂತರ ಹಸಿ ಬಣ್ಣವು, ಆರಿದೊಡನೆ ದೇವಿಯನ್ನು ಸುತ್ತಲಿನ ಏಳು ಬಾಬುಗಾರ ಹಳ್ಳಿಗಳಿಗೆ ಉಡಿ ತುಂಬಲು ಕರೆದೊಯ್ಯುತ್ತಾರೆ. ಸಾಯಂಕಾಲ ಮೂಲ ಗುಡಿಯಿಂದ ಹೊರಟ ಮೆರವಣಿಗೆ ಸರದಿಯಂತೆ ಮೊದಲು ತಿಳಿಸಿದ ಏಳೂ ಹಳ್ಳಿಗಳಿಗೆ ಹೊರಡುತ್ತಾಳೆ. ದೇವಿಯ ದರ್ಶನಕ್ಕೆಂದು ತಂದ ಕಂಟ್ಲಿ ಎತ್ತುಗಳ ಮೇಲೆ ನಗಾರಿ ಹೇರಿಕೊಂಡು ಬಾರಿಸುತ್ತ ಉದ್ದನೆಯ ಸಾಲುಗಳಲ್ಲಿ ಮೆರವಣಿಗೆ ಸಾಗುತ್ತದೆ. ಎರಡು ಮೂರು ಕಿಲೋ ಮೀಟರ್‌ವರೆಗೂ ಜನಸ್ತೋಮ ಬೆಳಕಿನ ಪಂಜುಗಳಿಂದ ಝುಗ ಝುಗಿಸುತ್ತಿರುತ್ತದೆ.

ಗ್ರಾಮಕ್ಕೆ ಆಗಮಿಸಿದ ದೇವಿಯನ್ನು ಕೈಮುಗಿದು ಬರಮಾಡಿಕೊಂಡು ಊರದೈವ ಭಕ್ತಿಯಿಂದ ಅಮ್ಮನನ್ನು ಗದ್ದೆಮ್ಮನ ಕಟ್ಟೆಯ ಮೇಲೆ ಕುಳ್ಳಿರಿಸಿ ಫಲಪುಷ್ಪಧನ ಕನಕಗಳಿಂದ ಉಡಿತುಂಬಿ ಕಾಯಿ ಒಡೆದು ಹರಕೆ ತೀರಿಸಿ ಕುಂಬಾಭಿಷೇಕ ಮಾಡಿ, ವಸ್ತ್ರಾಭರಣ ನೀಡಿ ಮುಂದಿನ ಊರಿಗೆ ಕಳಿಸುತ್ತಾರೆ. ಇದೆಲ್ಲವೂ ಪೂರ್ವನಿಯೋಜಿತವೆಂಬಂತೆ ಸಾಂಗೋಪಸಾಂಗವಾಗಿ ನೆರವೇರುತ್ತದೆ. ಇಡೀ ರಾತ್ರಿ ಏಳು ಹಳ್ಳಿಗಳಿಂದ ದೇವಿಯು ಉಡಿ ತುಂಬಿಕೊಂಡು, ತುಂಬಿದ ಉಡಿಯಿಂದ ತನ್ನ ಮೂಲಸ್ಥಳಕ್ಕೆ ಹಿಂತಿರುಗುತ್ತಾಳೆ. ಆಗಮನ ಸಮಯದಲ್ಲಿ ಧೂಳಗಾಯಿ (ದಾರಿಯಲ್ಲಿ ಒಡೆಯುವ) ಒಡೆದು

ಗುಡಿಗೆ ಬಂದು ದೇವಿಗೆ ಗ್ರಾಮದ ಸೀರೆ ಉಡಿಸುತ್ತಾರೆ. ವಸ್ತ್ರಾಭರಣ ನಂತರ ದೇವಿಯನ್ನು ತಾಳಿಕಟ್ಟೆಗೆ ತರಲಾಗುತ್ತದೆ. ಪುರೋಹಿತರು ದೇವಿಗೆ ಮಂಗಳ ಸೂತ್ರ ತೊಡಿಸಿ, ಪೂಜೆ, ಮಂಗಳಾರತಿ ಎತ್ತಿ ನಂತರ ಊರ ಹೊರಗಿನ ಅಗ್ನಿಕುಂಡದ ಎದುರಿನ ಸಾರ್ವಜನಿಕ ಕಟ್ಟೆಗೆ ತಂದು ಕುಳ್ಳಿರಿಸುತ್ತಾರೆ.

**ಅಗ್ನಿಪ್ರವೇಶ (ಕೊಂಡದ ಕಾರ್ಯಕ್ರಮ)**

ಐವರು ಪೂಜಾರಿಗಳು (ಚಿಕ್ಕ ಮಕ್ಕಳು ಇರಬಹುದು) ಹೊಳಗೆ ಹೋಗಿ ನೀರಲ್ಲಿ ಮಿಂದು, ಮಡಿಯಾಗಿ ದೇವಿಯ ಖಡ್ಗಕ್ಕೆ ಲಿಂಬೆ ಹಣ್ಣು ಚುಚ್ಚಿ ಕೈಯಲ್ಲಿ ಹಿಡಿದುಕೊಂಡು ಒದ್ದೆ ಮೈಯಿಂದ ಬರುತ್ತಾರೆ. ಸಾವಿರಾರು ಭಕ್ತರು ಅವರ ಬರುವಿಕೆಯನ್ನು ನೋಡುತ್ತಿರುತ್ತಾರೆ. ಪೂಜಾರಿಗಳು ದೇವಿಗೆ ನಮಿಸಿ ಅಗ್ನಿ ಕುಂಡದ ದಂಡೆಯ ಮೇಲೆ ಬಂದು ನಿಲ್ಲುತ್ತಾರೆ. ಅದು ಸಾಮಾನ್ಯ ಅಗ್ನಿಕುಂಡದಲ್ಲಿ ಸುಮಾರು ಇಪ್ಪತ್ತೈದು ಚದುರಡಿಯ ಕುಂಡದಲ್ಲಿ ಬೆಳಿಗ್ಗೆಯಿಂದಲೂ ಭಕ್ತರು ಹಾಕಿದ ಕಟ್ಟಿಗೆಗಳು ಉರಿದು ಹೋಗಿ ನಿಗಿ ನಿಗಿ ಕೆಂಡವಾಗಿರುತ್ತದೆ. ಅದು ಆರಿಲ್ಲವೆಂಬುದನ್ನು ಪೂಜಾರಿಗಳು ಭಕ್ತರಿಗೆ ತೋರಿಸಲು ಬೆಂಕಿಗೆ ತುಪ್ಪ ಸುರಿಯುತ್ತಾರೆ.ಆಗ ಮುಗಿಲೆತ್ತರ ಅಗ್ನಿದೇವ ಎದ್ದು ಕುಣಿಯುತ್ತಾನೆ. ಮೂರೂ ಸುತ್ತುಸುತ್ತಿದ ನಂತರ ಪೂಜಾರಿಗಳೂ ಮೆಲ್ಲಗೆ ಅಗ್ನಿಕುಂಡದಲ್ಲಿ ಪಶ್ಚಿಮಾಭಿಮುಖವಾಗಿ ಪ್ರವೇಶಿಸಿ ಮೇಲೇರಿ ಬರುವಷ್ಟರಲ್ಲಿ ನೂರಾರು ಹುಂಜಗಳು ಬೆಂಕಿಯತ್ತ ಹಾರಿ ಬರುತ್ತಿರುವ ದೃಶ್ಯ ಕಾಣುತ್ತದೆ. ಬೇಡಿಕೊಂಡ ಭಕ್ತರು ಬೆಂಕಿಗೆ ತಾವು ತಂದ ಹುಂಜಗಳನ್ನು ಎಸೆಯುತ್ತಾರೆ. ಆ ಹುಂಜಗಳನ್ನು ಬೇರೊಬ್ಬರ ಮಧ್ಯದಲ್ಲಿಯೇ ಜಗಿಜಿಗಿದು ಹಿಡಿಯಲೆತ್ನಿಸುತ್ತಾರೆ. ಈ ಹುಂಜದ ಬಲಿಯನ್ನು ತಡೆಯಲು (ಪೊಲೀಸರು) ಸಾಕಷ್ಟು ಪ್ರಯತ್ನಿಸಿದರೂ ಅದು ಮುಂದುವರೆದುಕೊಂಡೇ ಬಂದಿದೆ. ಕುರಿಗಳ ಬಲಿ ಅತಿಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತದೆ.

**ಕಾಯಿ ಒಡೆಸುವದು**

ಪ್ರತಿಯೊಂದು ಜಾತ್ರೆಯಲ್ಲಿ ಕಾಯಿ ಒಡೆಯುವ ಕಾರ್ಯಕ್ರಮ ಇದ್ದೇ ಇರುತ್ತದೆ. ದೇವಿಯು ಕುಳಿತ ಕಟ್ಟೆಗೆ ಭಕ್ತರು ನಾಮುಂದು ತಾಮುಂದು ಎಂದು ಕಾಯಿ ಒಡೆಸುತ್ತಾರೆ. ಸಾಮಾನ್ಯವಾಗಿ ಮಂಗಳವಾರ ಮತ್ತು ಶುಕ್ರವಾರವೇ ಕಾಯಿ ಒಡೆಯುವ ಸಂಪ್ರದಾಯ ಬೆಳೆದು ಬಂದಿದೆ. ದೇವಸ್ಥಾನ ಸಮಿತಿಯವರು ಕಾಯಿ ಮಾರಲು ಟೆಂಡರು ಕರೆದು ದೇವಸ್ಥಾನಕ್ಕೆ ಉತ್ಪನ್ನ ಪಡೆಯುತ್ತಾರೆ. ಅಂದು ರಾತ್ರಿ ಬೇಡಿಕೊಂಡ ಭಕ್ತರು ಕುಂಬಾಭಿಷೇಕ ಮಾಡಿಕೊಳ್ಳುತ್ತಾರೆ.

**ರಥೋತ್ಸವ**

ಕೊಂಡದ ಮರುದಿನ ರಥೋತ್ಸವ. ಸಾಯಂಕಾಲ ಹೊತ್ತಿಗೆ ರಥ ಎಳೆಯುತ್ತಾರೆ. ರಥವನ್ನು ಹೂಗಳಿಂದ ಬಣ್ಣದ ನಿಶಾನೆ ಪತಾಕೆಗಳಿಂದ ಕಳಸದಿಂದ ಅಲಂಕರಿಸುತ್ತಾರೆ. ಕಲ್ಲಿನ ಚಕ್ರದ

ರಥವನ್ನು ಹಗ್ಗದಿಂದ ಭಕ್ತರು ಎಳೆಯುತ್ತಾರೆ. ರಥವು ರಥಸ್ಥಳದಿಂದ ಉತ್ತರಾಭಿಮುಖವಾಗಿ ಎಳೆಯಲ್ಪಡುತ್ತದೆ. ರಥದಲ್ಲಿ ದೇವಿಯ ಭಾವಚಿತ್ರ ಮಾತ್ರ ಇರಿಸುತ್ತಾರೆ. ಭಕ್ತರು ಉತ್ತುತ್ತಿ, ಬಾಳೆಹಣ್ಣು, ಬೆಂಡು, ಬೆತ್ತಾಸು, ಕಲ್ಲುಸಕ್ಕರೆ ಎಸೆಯುತ್ತಾರೆ. ಪಾದಗಟ್ಟೆಯವರೆಗೆ ಚಲಿಸಿದ ರಥವು, ಪುನಃ ನಿಂತ ಸ್ಥಳಕ್ಕೆ ಹಿಂತಿರುಗುತ್ತದೆ. ನಾಲ್ಕು ಜಿಲ್ಲೆಗಳಿಂದ ನೆರೆದ ಜನಸಮೂಹ ಕತ್ತಲಾದಂತೆ ಕಡಿಮೆಯಾಗುತ್ತದೆ.

**ಜಾತ್ರೆಯ ಸನ್ನಿವೇಶ**

ತಿರುಗುವ ತೊಟ್ಟಿಲು, ಮಿಠಾಯಿ ಅಂಗಡಿಗಳ ಸಾಲು, ಬಳೆಯ ಅಂಗಡಿ ಸಾಲುಗಳು, ಅರಿಷಿಣ ಕುಂಕುಮ, ಕಾಯಿ ಹಣ್ಣು ಅಂಗಡಿಗಳು, ಆಟಿಕೆ ಸಾಮಾನು ಅಂಗಡಿಗಳು, ಹೋಟೆಲುಗಳು ಮುಂತಾದವು ಜನರ ಸೇವೆಯಲ್ಲಿರುತ್ತವೆ. ಅಂಗಡಿಯವರು ಭೂಬಾಡಿಗೆ ಸಲ್ಲಿಸುವ ಮೂಲಕ ದೇವಸ್ಥಾನಕ್ಕೆ ಶುಲ್ಕ ಸಂದಾಯ ಮಾಡುತ್ತಾರೆ. ಒಂದು ವಾರಕಾಲ ನಾರಾಯಣಪುರ ಆರಕ್ಷಕ (ಪೋಲೀಸ್) ಠಾಣೆಯವರು ಠಿಕಾಣಿಹೂಡಿ ಶಾಂತತೆ ಕಾಪಾಡುತ್ತಾರೆ. ಜಾತ್ರೆಯಲ್ಲಿ ಕೆಲವು ಸಾರಿ ಕೃಷಿ ವಸ್ತು ಪ್ರದರ್ಶನಗಳನ್ನು, ಕಲ್ಲು ಎತ್ತುವ ಸ್ಪರ್ಧೆಗಳನ್ನು, ಟಗರಿನ ಕಾಳಗಳನ್ನು ಏರ್ಪಡಿಸಲಾಗುತ್ತದೆ. ಮಾರುಕಟ್ಟೆಗೆ ಹೊಂದಿಕೊಂಡಂತೆ ಇರುವ ಸರಕಾರಿ ಕಿರಿಯ ಪ್ರಾಥಮಿಕ ಶಾಲೆಯ ಉದ್ಯಾನದಿಂದ ಕಂಗೊಳಿಸುತ್ತಿದೆ. ಅದಕ್ಕೆ "ಗದ್ದೆಮ್ಮದೇವಿ ಉದ್ಯಾನವನ" ಎಂದು ಹೆಸರಿಟ್ಟಿದ್ದಾರೆ. ಶಾಲೆಯ ಮಕ್ಕಳು ತಮ್ಮ ಗಿಡಗಳ ರಕ್ಷಣೆಗಾಗಿ ಅರಣ್ಯ ಪೋಷಣಾ ಫಲಕಗಳನ್ನು ನೇತು ಹಾಕಿರುತ್ತಾರೆ. ಆರೋಗ್ಯ ದೃಷ್ಟಿಯಿಂದ ವಿಚಾರಿಸಿದಾಗ ಜಾತ್ರೆಯ ಜನರನ್ನು ಕಾಲರಾ ಮುಂತಾದ ರೋಗಗಳ ವಿರುದ್ಧ ರಕ್ಷಿಸಲು ಸ್ಥಳದಲ್ಲಿ ಲಸಿಕೆ ಹಾಕುವ ವ್ಯವಸ್ಥೆ ಇಲ್ಲದಿರುವದು ದುರದೃಷ್ಟಕರ.

**ಗುಡಿ ಪ್ರವೇಶ ಹಾಗೂ ಹಂದರ ಮಂಗಳ ಕಾರ್ಯ**

ರಥೋತ್ಸವದ ಮರುದಿನ ಬಾಬುಗಾರರು, ಹಳ್ಳಿಯ ವಾದ್ಯದವರು ಡೊಳ್ಳಿನ ಪದ ಹಾಡುತ್ತಾ ಡೊಳ್ಳು ಕುಣಿತ ಮಾಡುತ್ತ ಬೆಳಗ್ಗೆಯಿಂದ ಸಾಯಂಕಾಲದವರೆಗೂ ಮೆರವಣಿಗೆ ಹೊರಟು ದೇವಿಯನ್ನು ಗುಡಿಗೆ ತರುತ್ತಾರೆ. ಐದನೆಯ ದಿನಕ್ಕೆ ಮಂಗಳ ಕಾರ್ಯಕ್ರಮದಂತೆ ಹಂದರಕ್ಕೆ ಕಟ್ಟಿದ ಹಣ್ಣು ಕಾಯಿಗಳನ್ನು ಭಕ್ತರು ತೆಗೆದುಕೊಳ್ಳುತ್ತಾರೆ. ನಂತರ ಎಲ್ಲ ಭಕ್ತರು ಹೋಳಿಗೆ ತುಪ್ಪದ ಊಟ ಮಾಡುತ್ತಾರೆ. ರಾತ್ರಿ ಅಂದು ಪೂಜಾರಿಗಳಿಂದ ಮಳೆ ಬೆಳೆ ಕುರಿತು ಹೇಳಿಕೆಗಳು ನಡೆಯುತ್ತವೆ. ಹಂದರ ಮಂಗಲದೊಂದಿಗೆ ಜಾತ್ರೆಯು ಪರಿಸಮಾಪ್ತಿಗೊಳ್ಳುವುದು.

ಪ್ರಸ್ತುತ ಜಾತ್ರೆಗೆ ಸುರಪುರ ಶಾಸಕರು ಕೊಡೇಕಲ್ ಭಾಗದ ದೊರೆಗಳು ಲಿಂಗಸೂರ ಶಾಸಕರು, ಮುದ್ದೇಬಿಹಾಳ ಶಾಸಕರು ಅಪಾರ ಭಕ್ತಿಯಿಂದ ಸೇವೆ ಸಲ್ಲಿಸುತ್ತಾರೆ. ಉದಾರಿಗಳಾದ ಅವರು ಸಾಕಷ್ಟು ಹಣವನ್ನು ದೇವಾಲಯದ ಜೀರ್ಣೋದ್ಧಾರಕ್ಕಾಗಿ ನೀಡಿದ್ದಾರೆ. ಸಣ್ಣಪುಟ್ಟ ಬಸ್ಸಿನ

ಸೌಕರ್ಯದಿಂದ ವಂಚಿತವಾಗಿರುವ ಈ ಊರಿನ ಜಾತ್ರೆಗೆ ಟೆಂಪೋಗಳ ಸಹಾಯದಿಂದ ಜನ ತಲುಪುತ್ತಾರೆ. ರಸ್ತೆ ದುರಸ್ತಿ ನಡೆದಿದ್ದು, ಬಸವ ಸಾಗರದ ಮುಂದೆ ನಿರ್ಮಿಸುತ್ತಿರುವ ಸೇತುವೆ ಆಗಬೇಕಾಗಿದೆ. ಇನ್ನು ಜಾತ್ರೆಯ ವೈಭವ ಹೆಚ್ಚುತ್ತದೆ.

**ದೇವಿಯನ್ನು ಕುರಿತು ಜನಪದರಿಂದ ಸಂಗ್ರಹಿಸಿದ ಕೆಲವು ಅಂಶಗಳು**

೧. **ಅಕ್ಕತಂಗಿಯ ಜಗಳ:** ೧. ಒಂದಾನೊಂದು ಕಾಲದಲ್ಲಿ ಹಿಂದಕ್ಕೆ ಗಡ್ಡಿಯ ಗದ್ದೆಮ್ಮದೇವಿ ಹಾಗೂ ಸಹೋದರಿ ತಂಗಿ ದ್ಯಾಮವ್ವದೇವಿ (ಹಾಲಭಾವಿ) ಇಬ್ಬರೂ ಐನಗುಡಿಯ ಶ್ರೀ ಗಂಗಪ್ಪಯ್ಯನ ಜಾತ್ರೆಗೆ, ಭಕ್ತರ ಸೇವೆ ಪಡೆಯಲು ಹೋದಾಗ ಅವರಲ್ಲಿ ಪರಸ್ಪರ ವ್ಯಾಜ್ಯ ಉಂಟಾಗಿ ದ್ಯಾಮವ್ವ ದೇವಿಯ ಅಕ್ಕನ ಬಲಕೆನ್ನೆಗೆ ಚೂರಿದಳಂತೆ. ಅದಕ್ಕೆ ಪ್ರತಿಯಾಗಿ ಗದ್ದೆಮ್ಮ ದೇವಿಯು ತಂಗಿಯ ಸೀರೆ ಹರಿದಳಂತೆ. ಹಾಗೆಯೇ ಇಬ್ಬರು ಮುನಿಸಿಕೊಂಡು ತಮ್ಮ ತಮ್ಮ ತಾಣಗಳಿಗೆ ತೆರಳಿದರಂತೆ. ಅಂದಿನಿಂದ ಇಂದಿನವರೆಗೂ ಹಾಲಬಾವಿಯ ಪೂಜಾರಿಗಳು ದ್ಯಾಮವ್ವನಿಗೆ ಹೊಸ ಸೀರೆ ಉಡಿಸುವಾಗ ಸೀರೆಯನ್ನು ಒಂದೆರಡು ಎಳೆ ಕತ್ತರಿಸಿ ಹರಿದಂತೆ ಮಾಡಿ ಉಡಿಸುತ್ತ ಬಂದಿದ್ದಾರಂತೆ. ಇನ್ನು ಶ್ರೀ ಗದ್ದೆಮ್ಮ ದೇವಿಯ ಮುಖವನ್ನು ನಾವು ವೀಕ್ಷಿಸಿದಾಗ ಬಲಕೆನ್ನೆಯ ಮೇಲೆ ತಂಗಿ ಚೂರಿದ ಕೆಂಪು ರೇಖೆ ಇಂದಿಗೂ ಅಚ್ಚಳಿಯದೇ ಉಳಿದಿದೆ.

**೨. ಪವಾಡ**

೧. ಆಂಧ್ರ ಪ್ರದೇಶದ ಆದೋನಿ ಊರಿನ ನೇಕಾರ ಕುಟುಂಬದ ವ್ಯಕ್ತಿಯೊಬ್ಬರು ಭಕ್ತಿಯಿಂದ ಶ್ರೀ ದೇವಿಗೆಂದು ಹದಿನಾರು ಮೊಳ ಉದ್ದ ನೇಯ್ದ ಸೀರೆ ತಂದಿದ್ದರಂತೆ. ಅದು ಅದರ ಎರಡುಪಟ್ಟು ಉದ್ದವಾಗಿತ್ತಂತೆ ಈ ವಿಚಿತ್ರ ಅವರಿಗೆ ಆಶ್ಚರ್ಯ ಉಂಟು ಮಾಡಿತಂತೆ. ಅದನ್ನು ಮಡಿಯಿಂದ ಗಳಿಗೆ ಮಾಡಿ ತರುವಾಗ ಒಂದು ಜಂಗಮ ಮನೆಯಿಂದ ದೇವಸ್ಥಾನದವರೆಗೂ ಕರೆತಂದಿದ್ದರಂತೆ. ಅವರ ಕುಟುಂಬ ಪರಿವಾರದೊಡನೆ ಬಂದು ದೇವಾಲಯದ ಶಿಖರಕ್ಕೆ ಸುಣ್ಣ ಬಳಿದು ಗರ್ಭ ಗುಡಿಯಲ್ಲಿ ದೇವಿಯ ಚಿತ್ರಬಿಡಿಸಿ ಬಣ್ಣದ ಸೇವೆ ಮಾಡಿ ದೇವಿಗೆ ತಾವು ತಂದ ಸೀರೆ ಅರ್ಪಿಸಿಹೋದರು.

೨. ಎರಡನೇ ಪವಾಡ ಇತ್ತೀಚೆಗೆ ನಡೆದದ್ದು. ನಾಲತವಾಡ ನಿವಾಸಿಯೊಬ್ಬರು ದೇವಾಲಯದ ಮುಖ್ಯದ್ವಾರದ ಕಬ್ಬಿಣದ ಗೇಟು ಹಾಗೂ ಗರ್ಭ ಗುಡಿಯ ಮುಂದಿನ ಕಟಾಂಜನ ತಯಾರಿಸಿ ಮಾಡಿದ ಕೆಲಸಕ್ಕೆ ಪೂರ್ತಿ ಹಣವನ್ನು ತ್ವರಿತವಾಗಿ ಸಂದಾಯ ಮಾಡುವಲ್ಲಿ, ದೇವಸ್ಥಾನದವರಿಗೆ ಅಸಾಧ್ಯವಾಯಿತು. ಕೆಲಸ ಮಾಡಿಕೊಟ್ಟವರು ತಮಗೆ ತುರ್ತಾಗಿ ಹಣ ಬೇಕೆಂದು ಬೇಡಿಕೆ ಇಟ್ಟಾಗ ದೇವಸ್ಥಾನದ ಲೆಕ್ಕ ಪತ್ರ ನೋಡಿಕೊಳ್ಳುವ ಶಿಕ್ಷಕ ಶ್ರೀ ಶಿವನಗೌಡರು ಅನಿವಾರ್ಯವಾಗಿ

ದೇವಿಯ ಭಕ್ತರು ಮುಡುಪಿನ ರೂಪದಲ್ಲಿ ಅರ್ಪಿಸಿದ್ದ ನಾಣ್ಯಗಳನ್ನು (ಸುಮಾರು ರೂ ೧೫೦೦) ಕಬ್ಬಿಣದ ಕೆಲಸದವರಿಗೆ ನೀಡಿದರು. ಅದನ್ನು ತೆಗೆದುಕೊಂಡು ದ್ವಿಚಕ್ರ ವಾಹನದಲ್ಲಿ ನಾಲತವಾಡಕ್ಕೆ ವಾಪಾಸಾಗುವಾಗ ಬಸವಸಾಗರ ಅಣೆಕಟ್ಟೆಯ ಮೇಲೆ ಭಯಂಕರ ಸರ್ಪವೊಂದು ಹೆಡೆಯತ್ತಿ ನಿಂತಿತು. ಕೆಲಕ್ಷಣ ದಿಗ್ಮೂಢರಾದ ಅವರು ಕಣ್ಮುಚ್ಚಿ ಅಮ್ಮನನ್ನು ನೆನೆದು ತಾಯಿ! ಈ ದುಡ್ಡನ್ನು ಶಬರಿಮಲೈಗೆ ಹೊರಟಿರುವ ನನ್ನ ಮಗನಿಗೆ ಕೊಡಬೇಕಾಗಿದೆ. ಬೇರಾವುದಕ್ಕೂ ಬಳಸುವುದಿಲ್ಲ ಎಂದಾಗ ಹಾವು ಮಾಯವಾಯಿತಂತೆ. ಮುಂದೆ ಸಾಗಿ ತಮ್ಮ ಗ್ರಾಮ ತಲುಪಿದಾಗ ಮನಸ್ಸು ಕಸಿವಿಸಿಗೊಂಡು ಮನೆಯೊಳಗೆ ಹೋಗಲಾಗದೆ ದೇವಿಯ ದುಡ್ಡನ್ನು ತಮ್ಮ ಮಗನ ಕೈಯಲ್ಲಿ ಕೊಟ್ಟು ತಕ್ಷಣವೆ ಹಿಂತಿರುಗಿಸಿದರು. ಆ ನಾಣ್ಯಗಳು ಈಗಲೂ ಹಾಗೆಯೇ ಉಳಿದಿವೆ.

೪. ನೀವು ಗದ್ದೆಮ್ಮ ದೇವಿಯ ಬಲಪಕ್ಕದಲ್ಲಿ ಒಂದು ಲೋಹದ ಕೋರೆ ಹಲ್ಲಿನ ಮೂರ್ತಿಯನ್ನು ಕೋಲಿಗೆ ಜೋಡಿಸಿ ಕುಲಾಯಿ ಕಟ್ಟಿರುವದನ್ನು ಕಾಣಬಹುದು. ಇದು ಸಂತಾನಭಾಗ್ಯ ಕರುಣಿಸುವ "ಮಾರುಮಾಂತಪ್ಪ". ಮಕ್ಕಳಾಗದ ಮುತ್ತೈದೆಯರು ಈತನಿಗೆ ಬೇಡಿಕೊಳ್ಳುತ್ತಾರೆ. ನಂತರ ಅದಕ್ಕೆ ಕಟ್ಟಿರುವ ಕುಲಾಯಿಯನ್ನು ಉಲ್ಟಾ ಕಟ್ಟುತ್ತಾರೆ ಹಾಗೂ ಬಾಯಿಯ ಮೂಲಕ ನಾಣ್ಯ ಹಾಕುತ್ತಾರೆ. ತದನಂತರ ಪೂಜಾರಿಗಳು ಕುಲಾಯಿಯನ್ನು ಮೂಲಸ್ಥಿತಿಯಲ್ಲಿ ಕಟ್ಟುತ್ತಾರೆ. ಬರುವ ವರ್ಷದೊಳಗೆ ಅವರಿಗೆ ಸಂತಾನ ಭಾಗ್ಯ ಲಭಿಸುತ್ತದೆ. ಮರುವರ್ಷ ಅವರು ಹೊಸ ಕುಲಾಯಿ ಯೊಂದನ್ನು ಹೊಲಿಸಿಕೊಂಡು ಬಂದು ಮಾರಮಾಂತೆಪ್ಪನಿಗೆ ಹಾಕಿ ದೇವಿಗೆ ಕೂಸನ್ನು ನಮಿಸಿ ಹೋಗುತ್ತಾರೆ. ಬಹಳಷ್ಟು ಜನರು ಸಂತಾನ ಭಾಗ್ಯವನ್ನು ಈ ಮಾರಮಾಂತೆಪ್ಪನಿಂದ ಪಡೆದಿದ್ದನ್ನು ಭಕ್ತರನ್ನು ಸಂದರ್ಶಿಸುವ ಮೂಲಕ ನಾನು ಕಂಡುಕೊಂಡಿದ್ದೇನೆ. ಒಟ್ಟಾರೆ ಹೇಳುವುದಾದರೆ ದೇವರಗಡ್ಡಿಯು ಒಂದು ಜಾಗೃತ ಕ್ಷೇತ್ರವಾಗಿದ್ದು, ದೇವಿಯ ಭಕ್ತರಿಗೆ ವರವನ್ನು ನೀಡುವ ಮೂಲಕ ತನ್ನ ಶಕ್ತಿಯನ್ನು ತೋರಿಸುತ್ತ ಬಂದಿದ್ದಾಳೆ. ಇಲ್ಲಿಯೂ 'ಸಿಡಿ' ಸಂಪ್ರದಾಯ ಬಹುದಿನಗಳ ಹಿಂದೆ ಇತ್ತಂತೆ. ಆದರೆ ಅದು ಈಗ ಅಸ್ತಿತ್ವದಲ್ಲಿಲ್ಲ.

೫. ಇತ್ತೀಚೆಗೆ ನಡೆದ ಪವಾಡ. ಪಕ್ಕದ ಊರಿನ ಕಳ್ಳರಿಬ್ಬರು ರಾತ್ರಿಯಲ್ಲಿ ಬಂದು ದೇವಿಯ ಆಭರಣಗಳನ್ನು ಬಿಚ್ಚಿಕೊಂಡು ಹೋಗುವಾಗ ಅವರಿಗೆ ತಮ್ಮ ಊರಿಗೆ ಹೋಗುವ ದಾರಿಯೇ ಕಾಣಲಿಲ್ಲ. ಅವರಿಬ್ಬರಿಗೆ ಕಣ್ಣು ಕಾಣಲಾರದಂತೆ ಮಾಡಿದಳು. ಸುತ್ತಲ ದಾರಿ ಹುಡುಕಿದರೆ ದಾರಿ ಕಾಣುವುದಿಲ್ಲ. ಗುಡಿಯ ಕಡೆಗೆ ನೋಡಿದಾಗ ಮಾತ್ರ ದಾರಿ ಕಾಣುವುದು. ಅವರು ಬೆಳಗಿನವರೆಗೆ ಸಾಕಷ್ಟು ಪ್ರಯತ್ನ ಪಟ್ಟರು ಆಗಲಿಲ್ಲ. ಬೆಳಗಿನವರೆಗೂ ಅಮ್ಮನ ಗುಡಿಯಿಂದನೇ ಸುತ್ತುವರಿದರು. ಕೊನೆಗೆ ತಮ್ಮ ತಪ್ಪಿನ ಅರಿವಾಗಿ ಅಮ್ಮನ ಹತ್ತಿರ ಬೇಡಿಕೊಂಡು ತಾವು ಕಳವು ಮಾಡಿದ ದೇವಿಯ ಆಭರಣಗಳನ್ನು ದೇವಿಯ ಗುಡಿಯ ಬಾಗಿಲು ಮೇಲಿಟ್ಟಾಗ ಅವರಿಗೆ

ತಮ್ಮ ಊರಿನ ದಾರಿ ಕಾಣಿಸಿತು. ಅಲ್ಲಿಂದ ಓಡಿ ಹೋದರು. ಅದನ್ನು ಬೆಳಗಿನ ಜಾವದಲ್ಲಿ ಊರೊಳಗಿನ ಕೆಲವು ವ್ಯಕ್ತಿಗಳು ಹೋಗಿ ನೋಡಿದಾಗ ಅಮ್ಮನ ಆಭರಣಗಳ ಗಂಟು ಇಟ್ಟಿದ್ದರು. ಇದನ್ನು ತಿಳಿದು ಸುತ್ತಮುತ್ತ ನೋಡಿದಾಗ ಕಳ್ಳರ ಕೆಲವು ವಸ್ತುಗಳು ಗುಡಿಯ ಸ್ವಲ್ಪ ದೂರದಲ್ಲಿ ಬಿದ್ದಿದ್ದವು. ಅದನ್ನು ಗಮನಿಸಿದ ಊರಿನ ಜನರು ದೇವಿಯ ಶಕ್ತಿಯನ್ನು ಮೆಚ್ಚಿಕೊಂಡರು. ಈ ಎಲ್ಲ ಪವಾಡಗಳನ್ನು ನಾನು ಊರಿನ ಹಿರಿಯ ವ್ಯಕ್ತಿಗಳಾದ ಗದ್ದೆಪ್ಪ ಮತ್ತು ಜಕ್ಕಪ್ಪ ಮಕಾಶಿಯವರನ್ನು ಕ್ಷೇತ್ರಕಾರ್ಯಕ್ಕೆ ಹೋದಾಗ ಭೇಟಿಮಾಡಿ ತಿಳಿದಂತಹ ವಿಷಯಗಳು.

**ಹಂಚಿನಾಳ ಮತ್ತು ಯರಗೋಡಿ ದ್ಯಾಮವ್ವನ ಜಾತ್ರೆ**

**ಜಾತ್ರೆ ತಯಾರಿ:** ೯–೧೦ ವರ್ಷಕ್ಕೆ ಒಂದು ಭಾರಿ ಹಾಲಬಾವಿ ದ್ಯಾಮವ್ವನ ಕರೆಸಿ ಜಾತ್ರೆ ಮಾಡುವ ನಿಯಮ. ಊರಿನ ಭಕ್ತರ ಸಂಕಲ್ಪದಂತೆ ಊರ ಮುಖಂಡರು ಸೇರಿ ದೇವಿ ಜಾತ್ರೆ ಮಾಡುವುದಾಗಿ ತೀರ್ಮಾನಿಸಿ, ಜಾತ್ರೆ ಒಂದು ವಾರ ಮುಂದೆ ಇರುವಾಗಲೇ ಡಂಗುರ ಸಾರಿ ಜಾತ್ರೆಯ ಬಗ್ಗೆ ಮಾತನಾಡಲು ಗುಡಿಯಲ್ಲಿ ಇಂತಾ ದಿನಾ ಸಭೆ ಸೇರುತ್ತದೆ. ತಾವೆಲ್ಲಾ ಬರಬೇಕು ಅಂತಾ ಸಾರುವರು. ಈ ಸಭೆ ಸೇರಿದ ದಿನದಂದು ಜಾತ್ರೆಯ ಬಗ್ಗೆ ಮಾತುಕಥೆಗಳು ನಡೆಯುತ್ತವೆ. ಅಲ್ಲಿ ಯಾವ ದಿನಾ ಜಾತ್ರೆ ಮಾಡಬೇಕು ಎಂದು, ಊರ ಜನರ ಅನುಕೂಲವನ್ನು ನೋಡಿಕೊಂಡು ಜಾತ್ರೆಯ ಸಮಯವನ್ನು ನಿಗದಿ ಪಡಿಸುವರು. ಈ ಸಭೆಯು ಅಲ್ಲಿಯೇ ಜಾತ್ರಾ ಕಮಿಟಿಯನ್ನು ರಚಿಸಿಕೊಂಡು ಜಾತ್ರೆಯ ಕೆಲಸ ಕಾರ್ಯಗಳಲ್ಲಿ ಯಾರ್‍ಯಾರು ಯಾವ ಯಾವ ಕಾರ್ಯನಿರ್ವಹಿಸ ಬೇಕೆಂದು ಕೆಲಸಗಳನ್ನು ಹಂಚಿಕೊಂಡು ಜಾತ್ರೆ ಮಾಡುತ್ತಾರೆ.

ಹಂಚಿನಾಳ ಮತ್ತು ಯರಗೋಡಿ, ಹತ್ತಿರ ಅಕ್ಕ ಪಕ್ಕ ಇರುವುದರಿಂದ ಮತ್ತೆ ಒಂದೇ ದೇವರಿಗೆ ಜಾತ್ರೆ ಮಾಡುವುದರಿಂದ ಒಂದೇ ರೀತಿಯಾಗಿದೆ. ದೇವಿಯನ್ನು ಜಾತ್ರೆಯ ಸಂದರ್ಭದಲ್ಲಿ ಊರಿನಲ್ಲಿ ಪಟ್ಟಿ ಎತ್ತುವ ಕಾರ್ಯ ನಡೆಯುತ್ತದೆ. ಊರಿನಲ್ಲಿ ಎಲ್ಲರೂ ತಮ್ಮ ತಮ್ಮ ಮನೆಗಳನ್ನು ಸುಣ್ಣ ಬಣ್ಣಗಳಿಂದ ಸಾರಿಸಿಕೊಂಡು ಶುಚಿಗೊಳಿಸಿಕೊಳ್ಳುವರು. ಜಾತ್ರೆಬರುವ ಒಂದು ವಾರ ದೇವಿಗೆ ವಾರ ಮಾಡುವುದು. ವಾರ ಮಾಡಿದ ದಿನ ಮನೆಯಲ್ಲಿ ಯಾರು ಕುಟ್ಟುವುದು, ಬೀಸುವುದು ಹಾಗೂ ರೊಟ್ಟಿ ಸುಡುವುದು ಮಾಡುವಂತಿಲ್ಲ. ರೈತರುಗಳು ಬೇಸಾಯ ಹೂಡುವ ಹಾಗಿಲ್ಲ. ಇದನ್ನೆ ವಾರ ಮಾಡೋದು ಎನ್ನಲಾಗುವುದು. ವಾರ ಮಾಡಿದ ಕೊನೆಯ ದಿನ ಉಡಿ ತುಂಬುವ ಕಾರ್ಯಕ್ರಮ ಎಂದು ಹಮ್ಮಿಕೊಳ್ಳುವರು. ಊರಿನ ಜನರೆಲ್ಲಾ ಸೇರಿಕೊಂಡು ಸಕಲ ವಾದ್ಯಗಳೊಂದಿಗೆ ಸಕಲ ಉಡಿ ತುಂಬುವ ಸಾಮಾನುಗಳನ್ನು ತೆಗೆದುಕೊಂಡು ಊರಿನ ಎಲ್ಲಾ ದೇವಸ್ಥಾನಗಳಿಗೂ ಹೋಗಿ ಉಡಿ ತುಂಬಿ ಬರುವರು. ದೇವಿಗೆ ಸಂಬಂಧಪಟ್ಟ ಕೆಲವು ವಿಧಿ ವಿಧಾನಗಳನ್ನು ಮಾಡಲು ಊರಿನ ಹರಿಜನರಿಗೆ ಜಾತ್ರೆಯ ಮೊದಲೇ ಹೇಳಿ ಬರುವುದು.

ಊರಿನ ಎಲ್ಲಾ ಮನೆಯವರು ತಮ್ಮ ತಮ್ಮ ಬಂಧು ಬಳಗದವರನ್ನು, ಸಂಬಂಧಿಕರನ್ನು, ಸ್ನೇಹಿತರನ್ನು ಜಾತ್ರೆಗೆಂದು ಕರೆಸಿಕೊಳ್ಳುವರು. ಅದರಲ್ಲೂ ಮನೆಯ ಹೆಣ್ಣು ಮಕ್ಕಳನ್ನು ಯಾರು ಕರಿಯದೇ ಇರಲಾರರು.

ತಮ್ಮ ಊರಿನ ದ್ಯಾಮವ್ವನೇ ಹಾಲಬಾವಿ ದ್ಯಾವಮ್ಮ ಎಂದು ತಮ್ಮ ಊರಿನಲ್ಲಿ ೯-೧೦ ವರ್ಷಕ್ಕೆ ಕರೆಸಿದ ನಿಯಮವನ್ನು ಇಟ್ಟುಕೊಂಡು ಬಂದಿದ್ದಾರೆ. ಹಾಗೆಯೇ ಪೂರ್ವಜರ ಆದಿಯಂತೆ ಈಗಲೂ ಕೂಡ ಇವರು ಹಾಲಬಾವಿ ದ್ಯಾಮವ್ವನ ಕರೆಸಿ ಜಾತ್ರೆ ಮಾಡುತ್ತಾರೆ. ಆದರೆ ಪ್ರಾಣಿ ಬಲಿ ಇಲ್ಲ. ಹೋಳಿಗೆ, ಹುಗ್ಗಿ ಮುಂತಾದವನ್ನು ನೈವೇದ್ಯ ಮಾಡಿ ಹರಕೆ ತೀರಿಸುತ್ತಾರೆ. ಇದು ಹಾಲಬಾವಿ ಗ್ರಾಮದಲ್ಲಿ. ಆದರೆ ಹಂಚಿನಾಳ ಯರಗೋಡೆಗೆ ಬಂದ ದ್ಯಾಮವ್ವನಿಗೆ ಪ್ರಾಣಿ ಬಲಿ ನಡೆಯುತ್ತದೆ. ಆದರೆ ನೈವೇದ್ಯ ಮಾತ್ರ ಸಸ್ಯಾಹಾರ. ಹೋಳಿಗೆ, ಹುಗ್ಗಿ ಮಾಡಿ ಕಾಯಿ ಕರ್ಪೂರಗಳನ್ನು ಕೊಡುತ್ತಾರೆ. ಪ್ರಾಣಿ ಬಲಿ ದ್ಯಾಮವ್ವಗೆ ಹರಕೆ ಮಾಡಿಕೊಂಡವರು ತಮ್ಮ ಮನೆಯಲ್ಲಿ ಆಕೆಯ ಹೆಸರಿನಲ್ಲಿ ಪ್ರಾಣಿ ಬಲಿ ಕುರಿ ಕಡಿಯುತ್ತಾರೆ. ಆಕೆಗೆ ಸಸ್ಯಾಹಾರಿ ನೈವೇದ್ಯ ನೀಡಿ, ಮಾಂಸಾಹಾರ ತಾವು ಊಟ ಮಾಡುತ್ತಾರೆ.

**ದ್ಯಾಮವ್ವನ ಕಟ್ಟೆ**

ಊರ ಹೊರಗಿನ ಬಯಲಿನಲ್ಲಿ ದ್ಯಾಮವ್ವನ ಕಟ್ಟೆ ಇದೆ. ಹಂಚಿನಾಳದಿಂದ ೧೦ ಕಿ. ಮೀ ದೂರದಲ್ಲಿರುವ ಹಾಲಬಾವಿ ಗ್ರಾಮದಿಂದ ದ್ಯಾಮವ್ವ ಬರುವುದನ್ನು ಕಾಯುತ್ತಾ ದ್ಯಾಮವ್ವನ ಕಟ್ಟೆಯನ್ನು ಬಣ್ಣ ಸುಣ್ಣಗಳಿಂದ, ತಳಿರು ತೋರಣಗಳಿಂದ ಅಲಂಕರಿಸಿ ಮತ್ತು ತಮ್ಮ ಗಡ್ಡೆಯ ದ್ಯಾಮವ್ವನ ಗುಡಿಕೂಡ ಅಲಂಕರಿಸಿ ಜಾತ್ರೆಗೆ ಸಿದ್ಧತೆ ಮಾಡಿಕೊಂಡಿರುತ್ತಾರೆ.

**ದ್ಯಾಮವ್ವನ ಗಡ್ಡೆಯ ಪ್ರವೇಶ**

ಗಡ್ಡೆಯ ಜನರು ದೇವಿ ಆಗಮನಕ್ಕೆ ದಾರಿ ಕಾಯುತ್ತಿರುವುದು. ಗ್ರಾಮಕ್ಕೆ ಆಗಮಿಸಿದ ದೇವಿಯನ್ನು ಕೈಮುಗಿದು ಬರಮಾಡಿಕೊಂಡು ಊರು ದೈವ ಭಕ್ತಿಯಿಂದ ಅಮ್ಮನನ್ನು ದ್ಯಾಮವ್ವ ಗುಡಿಗೆ ಕರೆದುಕೊಂಡು ಮೆರವಣಿಗೆ ಮೂಲಕ ಹೋಗಿ ಊರಿನ ದ್ಯಾಮವ್ವನಿಗೆ ಭೇಟಿಯಾಗಿ ಮತ್ತೆ ಊರಿನ ಗಡ್ಡೆಯ ದ್ಯಾಮವ್ವನ ಕಟ್ಟೆಗೆ ಕರೆದುಕೊಂಡು ಬಂದು ಕಟ್ಟೆಯ ಮೇಲೆ ಕುಳ್ಳಿರಿಸಿ ಫಲಪುಷ್ಪ ಧನ ಕನಕಗಳಿಂದ ಉಡಿತುಂಬಿ ಕಾಯಿ ಒಡೆದು ಹರಕೆ ತೀರಿಸಿ ಕುಂಬಾಭಿಷೇಕ ಮಾಡುತ್ತಾರೆ. ಎರಡು ದಿನ ಕಾಲದ ಸಾಯಂಕಾಲ ದೇವಿ ತನ್ನ ಮೂಲ ಗ್ರಾಮವಾದ ಹಾಲಬಾವಿಗೆ ಬರುತ್ತಾಳೆ. ಎರಡು ದಿನಗಳ ಕಾಲ ಹಂಚಿನಾಳ, ಯರಗೋಡಿ ಜನ ತಮ್ಮ ಹರಕೆಗಳ ದೇವಿಗೆ ಮಾಡಿಸಿ ಜಾತ್ರೆ ಮಾಡಿಕಳಿಸಿಕೊಡುತ್ತಾರೆ.

## ಜಲದುರ್ಗ ಎಲ್ಲಮ್ಮ ಜಾತ್ರೆ

ಶಕ್ತಿ ದೇವತೆಯಾದ ಪಾರ್ವತಿಯ ಒಂದು ರೂಪವೇ ಎಲ್ಲರ ಅಮ್ಮ ಎಲ್ಲಮ್ಮ ಅರ್ಥ ವಿವರಣೆ ನಿಘಂಟಿನಲ್ಲಿದೆ(ನರಸಿಂಹಾಚಾರ ೧೯೭೦: ೧೧೦೭). ಜಲದುರ್ಗ ನಡುಗಡ್ಡೆಯಲ್ಲಿ ಕೋಟೆಯ ಒಳಗೆ ನದಿಯ ದಡಕ್ಕೆ ಒಂದು ಸಣ್ಣ ಗುಡಿ ಇದೆ. ಅಮ್ಮನ ಹಳೆಯ ದೈವ ಗುಡಿಯಲ್ಲಿದೆ. ಒಂದೇ ಒಂದು ಗರ್ಭಗುಡಿಯಿದೆ. ಈ ದೇವಿಗೆ ರುಂಡದ ಎಲ್ಲಮ್ಮ ಎಂದು ಕರೆಯುತ್ತಾರೆ. ಐತಿಹ್ಯ ಪ್ರಕಾರ ಈ ದೇವಿಯ ದಿಬ್ಬ ಕೊಡೆಕಲ್ಲು ಗ್ರಾಮದಲ್ಲಿ ಎಂದು ಹೇಳುತ್ತಾರೆ. ಅಲ್ಲಿ ದಿಂಬ ಪೂಜೆಗೊಳ್ಳುತ್ತದೆ. ಇಲ್ಲಿ ರುಂಡ ಪೂಜೆಗೊಳ್ಳುತ್ತದೆ. ಹಿಂದೆ ಬಸವಣ್ಣ ಮತ್ತು ಸಂಗಮೇಶ್ವರರ ಆಜ್ಞೆಯಂತೆ ಬಸವಣ್ಣನವರ ವಚನಗಳ ಮತ್ತು ಜಲದುರ್ಗವನ್ನು ಕಾಯುವುದಕ್ಕೆ ಎಲ್ಲಮ್ಮನ ರುಂಡವನ್ನು ಇಲ್ಲಿ ಪ್ರತಿಷ್ಠಾಪಿಸಿದರು ಎಂದು ಅಲ್ಲಿನ ಪೂಜಾರಿಗಳು ಹೇಳುತ್ತಾರೆ.

ಹೀಗೆ ಮುಂದುವರೆದು ಪ್ರತಿ ಮಂಗಳವಾರ ಮತ್ತು ಶುಕ್ರವಾರ ಪೂಜೆಗೊಳ್ಳುತ್ತ ಪ್ರತಿ ವರ್ಷ ಭಾರತ ಹುಣ್ಣಿಮೆಗೆ ಜಾತ್ರೆ ನಡೆಯುತ್ತದೆ. ಜಾತ್ರೆ ಅಂದರೆ ತಮ್ಮ ಬೇಡಿಕೆಗಳ ಹರಕೆಗಳನ್ನು ಪ್ರಾಣಿಬಲಿ ಕೊಡುವುದರ ಮೂಲಕ ಹರಕೆಗಳನ್ನು ಮುಟ್ಟಿಸುತ್ತಾರೆ. ಕರ್ನಾಟಕದ ಬೇರೆ ಬೇರೆ ಊರುಗಳಿಂದ ಭಕ್ತಾದಿಗಳಿಗೆ ಇಷ್ಟಾರ್ಥಗಳನ್ನು ಕೊಡುವಳೆಂದು ಹೆಸರಾಗಿರುವ ಎಲ್ಲಮ್ಮನಿಗೆ ಎಲ್ಲಾ ಜಾತಿ, ಮತ, ಪಂಥದವರಲ್ಲೂ ಭಕ್ತರ ವರ್ಗವಿದೆ. ಭಾರತ ಹುಣ್ಣಿಮೆಯ ದಿನಗಳಲ್ಲಿ ಮಂಗಳವಾರ ಶುಕ್ರವಾರ ಭಕ್ತರು ಬಂದು ಪ್ರಾಣಿ ಬಲಿಯನ್ನು ಮತ್ತು ಅಂದು ವಿಶೇಷ ಪೂಜೆಪುನಸ್ಕಾರಗಳಾಗುವುದರಿಂದ ಜನಸಂದಣಿಯು ಹೆಚ್ಚುತ್ತದೆ. ಆಡು, ಹೋತಗಳ ಬಲಿ ಪದ್ಧತಿ ಇಲ್ಲಿದೆ. ಕೆಲವರು ಅಲ್ಲಿಗೆ ಹೋಗದೆ ಆಕೆಯ ಹೆಸರಿನಲ್ಲಿ ತಮ್ಮ ಗ್ರಾಮದ ಮನೆಯಲ್ಲಿ ದೇವರು ಮಾಡುತ್ತಾರೆ. ಆಗ ಅಲ್ಲಿ ಕೂಡ ಪ್ರಾಣಿ ಬಲಿ ಪದ್ಧತಿ, ಬೇವಿನುಡುಗೆ ಸೇವೆ, ದೇವರ ಕಟ್ಟುವುದು ಮಾಡುತ್ತಾರೆ.

ಪ್ಲೇಗು, ಸಿಡುಬು, ಕಾಲರಾ, ಮಕ್ಕಳು ಆಗದೆ ಇರುವಾಗ ಭಕ್ತರು ಎಲ್ಲ ಹರಕೆಗೈದು ಮಂಗಳವಾರ, ಶುಕ್ರವಾರದಂದು ನದಿ ಮುಳುಗಿ ತಾಯಿಯ ದರ್ಶನ ಪಡೆದು ಹರಕೆ ಕಾರ್ಯ ಮುಗಿಸಿ ತಮ್ಮ ಮನೆಗೆ ಹೋಗುವ ವಿಶಿಷ್ಟ ಪರಿಪಾಠ ಇಲ್ಲಿದೆ.

ಅರೆಕಾಲಿಕ ಚಿಕ್ಕ ಪುಟ್ಟ ಅಂಗಡಿಗಳು ತಲೆ ಎತ್ತುತ್ತವೆ. ಸಾವಿರಾರು ಜನರು ತಮ್ಮ ತಮ್ಮ ಹರಕೆ, ಅರ್ಚನೆ ಮುಂತಾದ ಧಾರ್ಮಿಕ ಅವಧಿಗಳಲ್ಲಿಯೇ ತೊಡಗಿರುತ್ತಾರೆ. ಕೆಲವರು ತಾಯಿಯ ದೇಗುಲದ ಎದುರಿನಲ್ಲಿಯೇ ಪ್ರಾಣಿ ಬಲಿಮಾಡಿ ಅಡಿಗೆ ಮಾಡಿ ತಾಯಿಗೆ ಅರ್ಪಿಸಿ ಊಟ ಮಾಡುತ್ತಾರೆ.

## ಬೇವಿನುಡಿಗೆ ಸೇವೆ

ಇದಕ್ಕೆ ಉಟಿಗೆ ಸೇವೆಯೆಂದು ಕರೆಯುತ್ತಾರೆ. ಬೆತ್ತಲೆಯಾಗಿ ಅಥವಾ ಬೆತ್ತಲೆಯಾದ ದೇಹಕ್ಕೆ ಬೇವಿನ ಸೊಪ್ಪಿನಿಂದ ದೇಹದ ಕೆಲವು ಅಂಗಾಂಗಗಳನ್ನು ಮುಚ್ಚಿಕೊಂಡು ಭಕ್ತಿಯಿಂದ ದೇವರಿಗೆ ಒಪ್ಪಿಸುವ ಹರಕೆ ಇದು. ಜಲದುರ್ಗ ನಡುಗಡ್ಡೆ ಎಲ್ಲಮ್ಮನಿಗೆ ಈ ಸೇವೆ ನಡೆಯುತ್ತದೆ. ಈ ಬೇವಿನುಡಿಗೆ ಸೇವೆಯನ್ನು ಗುಡಿಗೆ ಹೋಗಿ ಹರಕೆ ತೀರಿಸುವರು. ಮನೆಯಲ್ಲಿ ದೇವರು ಮಾಡುವವರು ಈ ಸೇವೆಯನ್ನು ಮಾಡುತ್ತಾರೆ.

ಈ ಸಂದರ್ಭದಲ್ಲಿ ಹೆಂಗಸರೂ ಸಹ ರವಿಕೆ ತೊಡದೆ ಬೇವಿನ ಉಡಿಗೆಯನ್ನು ಸಂಪೂರ್ಣ ಕಟ್ಟಿಕೊಂಡು ತಲೆಯ ಕೂದಲುಗಳನ್ನು ಹರವಿಕೊಂಡು ಎಲ್ಲಮ್ಮನ ಗುಡಿಯಿಂದ ವಾದ್ಯ ವೈಭವಗಳೊಂದಿಗೆ ಮಾತಂಗಿ ಗುಡಿಯ ಪ್ರದಕ್ಷಿಣೆ ಮಾಡಿ, ಪೂಜೆಸಲ್ಲಿಸಿ ತಾವುಗಳು ಬೇಡಿಕೊಂಡ ಹರಕೆಯನ್ನು ಬೇವಿನುಡಿಗೆಯಿಂದ ಸಲ್ಲಿಸುವ ಪದ್ಧತಿ. ಇಲ್ಲಿ ಪ್ರತಿವರ್ಷ ತಮ್ಮ ತಮ್ಮ ಮನೆಗಳಲ್ಲಿ ಮಾಡಿಕೊಳ್ಳುತ್ತಾರೆ. ಮನೆಯಲ್ಲಿ ಮಾಡಿದರೆ ಮಾತಂಗಿಯರನ್ನು ಕರೆಸಿ ಅವರಿಂದ ಎಲ್ಲ ಕಾರ್ಯಗಳನ್ನು ಮಾಡಿಸುತ್ತಾರೆ.

## ಹಡಲಿಗೆ ಸೇವೆ

ಮಾತಂಗಿಯರನ್ನು ಕರೆಸಿ ಅವರು ತಂದಿರುವ ಬಿದಿರಿನ ಕಡ್ಡಿಯಿಂದ ಮಾಡಿದ ಸಣ್ಣ ಎರಡು ಬುಟ್ಟಿಗಳಿಗೆ ತಾವು ಮಾಡಿದ ನೈವೇದ್ಯ ಹೋಳಿಗೆ, ತಾವು ಬೆಳೆದ ಬೇಳೆಕಾಳು, ಪಲ್ಯ, ಹಿಂಡಿಗಳನ್ನು ಹಡಲಿಗೆ ತುಂಬಿ ಅವರಿಂದ ಎಲ್ಲಮ್ಮ ತಾಯಿ ಉಧೋ ಉಧೋ ಎಂದು ಉದೋ ಹಾಕಿಸಿ ಅವರಿಗೆ ಕಾಣಿಕೆಯನ್ನು ಕೊಟ್ಟು ಕಳಿಸುತ್ತಾರೆ.

ಸಾಮಾಜಿಕ, ಧಾರ್ಮಿಕ, ನೈತಿಕ ದೃಷ್ಟಿಯಿಂದ ಎಲ್ಲಮ್ಮ ತುಂಬಾ ಪ್ರಭಾವ ಬೀರಿದ ಶಕ್ತಿ ದೇವತೆಯಾಗಿದ್ದಾಳೆ. ಅನೇಕರು ಭಕ್ತರಾಗಿ ಸೇವೆಸಲ್ಲಿಸುತ್ತಾರೆ. ಜೋಗಯ್ಯನೋ (ಭೂತೇರ) ಆಗಿ ದೀಕ್ಷೆ ಪಡೆದುಕೊಳ್ಳುತ್ತಾರೆ. ಅವರು ಶಾಸ್ತ್ರೋಕ್ತವಾಗಿ ಮದುವೆಯಾಗುವಂತಿಲ್ಲ. ದೇವದಾಸಿಯರಂತೆ ಪಡೆದುಕೊಳ್ಳಲು ಅವಕಾಶವಿದೆ. ಎಲ್ಲಮ್ಮ ಆರಾಧನೆಯಲ್ಲಿ ಚೌಡಿಕೆ ಜೋಗತಿ ಕುಣಿತ ಕೂಡ ನೋಡಬಹುದು.

## ಕಡದರ ಗಡ್ಡೆಯ ಕಂದರಮ್ಮ

ಆಗಿಹುಣ್ಣಿಮೆಗೆ ೩ ವರ್ಷಕ್ಕೆ ಒಂದು ಬಾರಿ ಜಾತ್ರೆ ನಡೆಯುತ್ತದೆ. ಈ ದೇವಿಗೆ ಊರಿನ ಜನಸೇರಿ ಮಾಡುವ ಜಾತ್ರೆಯಾಗಿದೆ. ಬೇರೆ ಊರುಗಳಿಂದ ಜನ ಬರುವುದಿಲ್ಲ. ಊರಿನ ಗ್ರಾಮಸ್ಥರು ಮಾತ್ರ ಅದು ಬೇಡ ಸಮುದಾಯದವರು ಮಾಡುತ್ತಾರೆ. ಬೇರೆ ವರ್ಗದ ಜನರು ನಡೆದುಕೊಳ್ಳುವುದಿಲ್ಲ.

ಕಡದರ ಗಡ್ಡೆಯ ನಡುಗಡ್ಡೆಯ ನದಿದಡದಲ್ಲಿ ಈ ದೇವಿಯ ಸಣ್ಣದೊಂದು ಗುಡಿಯಿದೆ. ಗರ್ಭ ಗುಡಿ ಒಂದೇ ಇದೆ. ಗಡ್ಡೆಯ ನಾಯಕರು ಸೇರಿ ಆಗಿಹುಣ್ಣಿಮೆಗೆ ಪ್ರತಿವರ್ಷ ಉಡಿ ತುಂಬುತ್ತಾರೆ. ಎರಡು ದಿನಗಳ ಕಾಲ ನಡೆಯುತ್ತದೆ. ಹುಣ್ಣಿಮೆ ಮಂಗಳವಾರ ಕಂದರಮ್ಮ ಜಾತ್ರೆ ಎಂದು ತೋಟಿ ತಮ್ಮಟೆಯ ಮೂಲಕ ಜನರಿಗೆ ಸಾರುತ್ತಾರೆ. ದೇವರ ಸಾರು ಕೇಳಿಸಿಕೊಂಡ ಮೇಲೆ ಜಾತ್ರೆಗೆ ಕಡ್ಡಾಯವಾಗಿ ನಾಯಕರು  ಎಲ್ಲರೂ ಸೇರಿ ಜಾತ್ರೆಗೆ ಬೇಕಾಗುವ ಎಲ್ಲ ವಸ್ತುಗಳ ತಯಾರಿ ಮಾಡುತ್ತಾರೆ.

ಕಂದರಮ್ಮನಿಗೆ ಬಣ್ಣ ಹಾಕಿ ಅಲಂಕಾರ ಮಾಡುವ ಪದ್ಧತಿ ಇಲ್ಲಿದೆ. ಬಣ್ಣ ಹಾಕದೇ ಅಲಂಕಾರಕ್ಕೆ ಶೋಭೆ ಇಲ್ಲ ಎಂಬುದೇ ಇಲ್ಲಿನ ನಂಬಿಕೆ. ಅದರಂತೆ ಒಂದು ಎರಡು ದಿನಗಳ ಅಲಂಕಾರ ಮಾಡುತ್ತಾರೆ. ಜೊತೆಗೆ ದೇವಿಯ ದರ್ಶನವೂ  ನಿಷಿದ್ಧ. ಪೂಜೆಯು ಇಲ್ಲ.

**ಗಂಗಾಪೂಜೆ**

ದೇವಿಯನ್ನು ನದಿಯಲ್ಲಿ ಕರೆದುಕೊಂಡು ಹೋಗಿ ಸಕಲ ಭಕ್ತಾದಿಗಳೊಂದಿಗೆ ಮತ್ತು ವಾದ್ಯದೊಂದಿಗೆ ದೇವತೆಯನ್ನು ನೀರಿನಲ್ಲಿ ಮುಳುಗಿಸಿ ತೊಳೆದು ಸೀರೆ ಉಡಿಸುತ್ತಾರೆ. ಗುಡಿಗೆ ತಂದು ಕೂಡಿಸುತ್ತಾರೆ. ಮಂಗಳವಾರ ರಾತ್ರಿ ದಿನ ಪೂಜಾರಿ ಮನೆತಯಿಂದ ಹೊರಡುತ್ತಾರೆ. ದೇವಸ್ಥಾನಕ್ಕೆ ಸೇರಿದ ವಾದ್ಯಗಾರರು, ವಾದ್ಯ ಸಮೇತ ಆರತಿ ಹೊರಡಿಸಿಕೊಂಡು ಗಡ್ಡೆಯ ಜನರೆಲ್ಲ ಬರುತ್ತಾರೆ. ನಾಯಕ ವರ್ಗದವರು ಕಳಸವನ್ನು ಹೊರುವ ಪದ್ಧತಿ ಇದೆ. ಇದರ ಜೊತೆಯಲ್ಲಿ ತಮ್ಮ ಹರಕೆಯ ಕುರಿಗಳನ್ನು ಹಿಡಿದುಕೊಂಡು ಹೋಗುತ್ತಾರೆ.

ಹೀಗೆ ಕೂಡಿಕೊಂಡು ಬಂದ ಮೇಲೆ ಮೆರವಣಿಗೆ ಮೂಲಕ ದೇವಿ ಗುಡಿಯ ಮುಂದಕ್ಕೆ ಬರುತ್ತಾರೆ. ಅಪಾರ ಉತ್ಸಾಹ ಸಡಗರಗಳಿಂದ ತುಂಬಿದ ಜನಸ್ತೋಮದ ಮಧ್ಯೆ ವಾದ್ಯ ವಿಶೇಷಗಳೊಂದಿಗೆ ಗುಡಿಗೆ ಸೇರಿ ಅಮ್ಮನಿಗೆ ಪ್ರಾಣಿ ಬಲಿ ಕೊಡುತ್ತಾರೆ. ಈ ಸಂದರ್ಭದಲ್ಲಿ ಪೂಜಾರಿಕೆಯ ಹೊಣೆ ನಾಯಕರದೇ. ಗುಡಿಯ ದೂರದ ಜಾಗದಲ್ಲಿ ಮೇಕೆಗಳನ್ನು ಬಲಿಕೊಡುವುದು. ಅದರ ಜೊತೆಗೆ ತಾವು ಬೇಡಿಕೊಂಡ ಕೆಲವು ಹರಕೆಗಳನ್ನು ಒಪ್ಪಿಸುವುದು. ಸೀರೆ, ದವಸ, ಧಾನ್ಯ ಮುಂತಾದ ಹರಕೆಗಳು.

**ದಾಸೋಹ ಮತ್ತು ಅನ್ನಸಂತರ್ಪಣೆ**

ಜಾತ್ರೆ ಸಮಯದಲ್ಲಿ ಆಯಾ ಊರಿನ ಪ್ರಮುಖರು ವಂತಿಕೆ ಪಡೆಯುವುದಾಗಲಿ ಅಥವಾ ದೇವರ ಹೆಸರಿನಲ್ಲಿ ಭಕ್ತರು ಕೊಟ್ಟ ಕಾಳು-ಕಡಿಯಿಂದಾಗಲೀ ಜಾತ್ರೆಗೆ ಬಂದಂತಹ ಎಲ್ಲ ಧರ್ಮದ

ಭಕ್ತರಿಗೆ ಊಟ ಬಡಿಸುವುದು ಅಥವಾ ಅನ್ನ ಸಂತರ್ಪಣೆ ಮಾಡಿ ದೇವರ ಭಕ್ತಿಗೆ ಪಾತ್ರರಾಗುತ್ತಾರೆ. ಇಂತಹ ಒಂದು ಸೇವೆಗೆ "ಅನ್ನ ಸಂತರ್ಪಣೆ" ಎಂದು ಕರೆಯುತ್ತಾರೆ. ದಿನಲೂ ಮತ್ತು ಜಾತ್ರೆ ಸಂದರ್ಭದಲ್ಲಿ ಸಹ "ದಾಸೋಹ" ಪದ್ಧತಿ ನಡೆಯುತ್ತದೆ. ಅನ್ನ ಸಾರು, ಸಿರಾ ಮೊದಲು ಮಾಡುತ್ತಾರೆ. ಜಲದುರ್ಗದಲ್ಲಿ ಎರಡು ಮಠಗಳಿವೆ. ಕೆಳಗಿನ ಮಠ ಮತ್ತು ಮೇಲಿನ ಮಠ. ಈ ಎರಡರಲ್ಲಿ ದಾಸೋಹ ಕಾರ್ಯ ನಡೆಯುತ್ತದೆ.

**ಜಾತ್ರೆಯಲ್ಲಿ ಸಾಮೂಹಿಕ ವಿವಾಹಗಳು**

ಇತ್ತೀಚೆಗೆ ಈ ಜಾತ್ರೆಯಲ್ಲಿ ಸಾಮೂಹಿಕ ವಿವಾಹಗಳು ನಡೆಯುತ್ತವೆ. ೫೧ ತಾಳಿ ೧೦೧ ಅಥವಾ ೧೧-೨೧ ತಾಳಿಗಳನ್ನು ಇಟ್ಟು ವಿವಾಹಗಳನ್ನು ಕೆಳಗಿನ ಮಠದ ಪ್ರಭುಸ್ವಾಮಿ ತಾತಾನವರು ನೆರವೇರಿಸಿ ಕೊಡುತ್ತಾರೆ. ಇದಕ್ಕೆ ಹಾಲಬಾವಿ ಮಠ ಎಂದು ಕೂಡ ಕರೆಯುತ್ತಾರೆ. ಏಕೆಂದರೆ ಇವರ ಮೂಲಕ ದೇವರು ಹಾಲಬಾವಿಯಿಂದ ಬಂದು ಜಲದುರ್ಗದಲ್ಲಿ ನೆಲೆಸಿರುತ್ತಾರೆ. ಅದಕ್ಕಾಗಿ ಈ ಹೆಸರಿನಿಂದ ಕರೆಯುತ್ತಾರೆ. ಭಕ್ತರ ಸಹಾಯ ಸಹಕಾರದಿಂದ ವಿವಾಹಗಳನ್ನು ನಡೆಸಿಕೊಡುವುದಾಗಿ ತಾತಾನವರು ಹೇಳುತ್ತಾರೆ.

**ಸಾಧು ಸಂತರು**

"ಸಂತ" ಶಬ್ದವನ್ನು ನಮ್ಮ ಸಾಹಿತ್ಯ ಪರಂಪರೆಯಲ್ಲಿ ಬಹು ಆಯಾಮಿ ಅರ್ಥಗಳಲ್ಲಿ ಬಳಸಲಾಗಿದೆ. ಸಜ್ಜನ, ಪವಿತ್ರತ್ವ, ಪರೋಪಕಾರಿ, ಸದಾಚಾರಿ, ಸರ್ವಭೂತಹಿತ ಬಯಸುವವ, ಜಪ-ತಪ, ದಾನ-ಧರ್ಮಾದಿಗಳಲ್ಲಿ ನಿರತನಾಗಿರುವ, ಆಧ್ಯಾತ್ಮ ಚಿಂತನೆಯನ್ನು ಬದುಕಿನ ಅವಿಭಾಜ್ಯ ಅಂಗವಾಗಿರಿಸಿಕೊಂಡಿರುವ, ನಡೆನಡಿಯಲ್ಲಿ ಸಾಂಗತ್ಯವುಳ್ಳವ, ನಿಷ್ಕಾಮಿಯಾಗಿರುವ, ಸೇವಾಭಾವ ಮತ್ತು ಮಾನವೀಯ ಅಂತಃಕರಣವನ್ನು ಆತ್ಮೀಕರಿಸಿಕೊಂಡಿರುವ ವ್ಯಕ್ತಿಯನ್ನು ಸಾಧಕನನ್ನು ಸಂತ ಎಂದು ವ್ಯಾಪಕಾರ್ಥವಿದೆ.

"ಸಂತ" ಶಬ್ದ ಸಂಸ್ಕೃತ ಸತ್‌ನಿಂದ ರೂಪುಗೊಂಡಿದ್ದು, ಇದರ ಅರ್ಥ ಶುದ್ಧ ಅಸ್ತಿತ್ವವುಳ್ಳದ್ದು. ಎಂದೂ ನಾಶವಾಗದ ಶಾಶ್ವತವಾದ ಅವಿಕೃತ ರೂಪದಲ್ಲಿರುವ ಪರತತ್ವವೇ ಸತ್, ಈ 'ಸತ್'ನ ಚಿಂತನೆಯಲ್ಲಿ ತೊಡಗಿರುವವನೆ ಸಂತ. ಹೀಗೆ ಸಂತರು ಪರಮಾರ್ಥ ಚಿಂತಕರು ಸತ್‌ತತ್ವದ ಅನ್ವೇಷಕರು ಪ್ರಾಚೀನ ಸಾಹಿತ್ಯಕ್ಕೆ ಸಂತ ನಿರ್ವೈರಿಯಾಗಿರಬೇಕು, ಕಾಮನಾರಹಿತವಾಗಿರಬೇಕು, ಪರಮಾತ್ಮನಲ್ಲಿ ಅನುರಾಗವುಳ್ಳವನಾಗಿರಬೇಕು, ವಿಷಯಾಸಕ್ತಿಯಿಂದ ದೂರವಾಗಿರಬೇಕು. ಅಂತು ಸಂತರ ಸಾಲಿನಲ್ಲಿ ನಡುಗಡ್ಡೆಯ ಅನೇಕ ಸಂತರು ಸೇರುತ್ತಾರೆ.

## ಜಲದುರ್ಗ ಸಂಗಮನಾಥ ಮತ್ತು ನಾರದಗಡ್ಡೆ ಚೆನ್ನಬಸವೇಶ್ವರ ಜಾತ್ರೆ

ಈ ಎರಡು ಜಾತ್ರೆಗಳು ಶಿವರಾತ್ರಿ ಶುಭಪ್ರದವಾದ ದಿನ ನಡೆಯುತ್ತವೆ. ಶಿವರಾತ್ರಿಯಂದು ಸಂಗಮನಾಥನ ಜಾತ್ರೆ ನಡೆಯುತ್ತದೆ. ಶಿವರಾತ್ರಿ ದಿನದಿಂದ ಹಿಡಿದು ಐದು ದಿನಕ್ಕೆ ಚೆನ್ನಬಸವೇಶ್ವರ ಜಾತ್ರೆ ನಡೆಯುತ್ತದೆ.

ಶಿವರಾತ್ರಿ ಅಂದರೆ ನಿತ್ಯದಂತೆ ಉಂಡು ಮಲಗುವ ರಾತ್ರಿಯಲ್ಲ. ಮನಃಶುದ್ಧಿಗಾಗಿ ಸಾಯಂಕಾಲ ದವರೆಗೆ ಉಪವಾಸ ಮಾಡಿ ಸೂರ್ಯಾಸ್ತ ಸಮಯದಲ್ಲಿ ಸ್ನಾನ ಮಾಡಿ ಲಿಂಗವನ್ನು ಪೂಜಿಸಿ ಶಿವಯೋಗದಲ್ಲಿ ಶಿವನೇ ತಾನಾಗುವ ರಾತ್ರಿ. ಹೀಗೆ ಶಿವ ಭಕ್ತಿಯಿಂದ ಶಿವಯೋಗದಲ್ಲಿ ಜಾಗೃತ ರಾಗಿದ್ದು, ಶಿವನ ಅಪಾರವಾದ ಮಹಿಮೆಯನ್ನು ಕಾಣುವರೋ ಅವರ ಪುಣ್ಯಕ್ಕೆ ಎಣೆಯಿಲ್ಲ. ಯಾರು ಸಂಪೂರ್ಣ ಶಿವರಾತ್ರಿಯಲ್ಲಿ ಎಚ್ಚರನಾಗಿದ್ದು ಚಿತ್ತೈನಿಷ್ಠೆಯಿಂದ ಶಿವಪೂಜೆಯಲ್ಲಿ ರಾತ್ರಿಯನ್ನು ಕಳೆಯುವರೋ ಅವರು ಮಾಡಿದ ಪಾಪಗಳೆಲ್ಲ ಸುಟ್ಟ ಬೂದಿಯಾಗುವವು. ಅಲ್ಲದೇ ಸಾವಿರ ವರ್ಷಗಳವರೆಗೆ ಮಾಡಿದ ತಪಸ್ಸಿನ ಫಲವನ್ನು ಪಡೆಯುವರು.

ಶಿವರಾತ್ರಿ ಶಿವನ ಆರಾಧನೆಯ ರಾತ್ರಿ. ಶಿವಯೋಗದ ರಾತ್ರಿ. ಈ ರಾತ್ರಿ ಶಿವನಿಗೆ ಅತ್ಯಂತ ಪ್ರಿಯವಾದ ರಾತ್ರಿಯೆಂದರಿತು ಇಲ್ಲಿನ ಜನಗಳು ದೇವಸ್ಥಾನಕ್ಕೆ ಹೋಗಿ ಭಜನೆ, ಶಿವನ ಧ್ಯಾನ ಮಾಡಿ ಜಾತ್ರೆ ಮಾಡುತ್ತಾರೆ. ಹಿಂದೆ ಅಖಿಲ ಮನುಷ್ಯರು, ನರಪುರ ಗಂಧರ್ವರು ಈ ರಾತ್ರಿಯಲ್ಲಿಯೇ ಶಿವನನ್ನು ಪೂಜಿಸಿ ಶಿವನ ಕೃಪೆ ಪಡೆದರೆಂಬುದಾಗಿ ಪುರಾಣ ಪುಣ್ಯ ಕಥೆಗಳು ಸಾರುತ್ತವೆ.

ಈ ಪುರಾಣ ಸಂಭ್ರಮವು ಭಾರತ ದೇಶದ ಎಲ್ಲಾ ಸ್ಥಳಗಳಲ್ಲಿ ನಡೆಯುವ ಸಂಪ್ರದಾಯ. ಬಹು ಕಾಲದಿಂದ ನಡೆದು ಬಂದಿದೆ. ವ್ಯಾಸ, ವಶಿಷ್ಠ, ವಿಶ್ವಾಮಿತ್ರ, ಇಂದ್ರ, ಯಮ ಮೊದಲಾದ ಅಷ್ಟದಿಕ್ಪಾಲಕರೂ ಈ ರಾತ್ರಿಯಲ್ಲಿ ಬೇಡಿದ ಫಲವನ್ನು ಕೊಡುವ ಭಕ್ತ ವತ್ಸಲನಾದ ಶಿವನನ್ನು ಪೂಜಿಸಿ ತಮ್ಮ ಇಚ್ಚಿತ ಫಲವನ್ನು ಪಡೆದು ಧನ್ಯರಾಗಿದ್ದಾರೆ. ಅಂತೆ ಮಾಘ, ಕೃಷ್ಣ ಚತುದರ್ಶಿಯ ರಾತ್ರಿಯು ಮಹಾಶಿವರಾತ್ರಿ ಎಂಬುದಾಗಿ ಲೋಕಾಚರಣೆಯಲ್ಲಿ ಬಂದು ಬಿಟ್ಟಿದೆ.

ಈ ಮಹಾ ಶಿವರಾತ್ರಿಯಲ್ಲಿ ಯಾರು ಶಿವಲಿಂಗಕ್ಕೆ ಅಷ್ಟೋತ್ತರ ಶತ ಶಿವನಾಮಗಳಿಂದ ೧೦೮ ಬಿಲ್ವ ದಳಗಳನ್ನು ಅರ್ಪಿಸುವರೋ, ಸಹಸ್ರನಾಮಾವಳಿಗಳಿಂದ ಸಹಸ್ರ ಬಿಲ್ವ ದಳಗಳನ್ನು ಧರಿಸುವರೋ ಅವರು ಇಹ ಪರಭೋಗ ಭಾಗ್ಯಗಳನ್ನು ಪಡೆದು ಧನ್ಯರಾಗುವರು. ಶಿವರಾತ್ರಿಯಲ್ಲಿ ಬಿಲ್ವದಳಗಳಿಂದಲೇ ಪೂಜೆ ಮಾಡಬೇಕು, ಎನ್ನುವುದು ಇಲ್ಲಿಯ ಜನರ ನಂಬಿಕೆ. ಅದಕ್ಕಾಗಿ ಶಿವರಾತ್ರಿಯಂದು ಶಿವನ ಪೂಜೆಗೆ ಯೋಗ್ಯವಾದ ದಿನ ಎಂದು ತಿಳಿದ ಸಾವಿರ ಸಾವಿರ ಜನ ಎರಡು ಜಾತ್ರೆಗಳಲ್ಲಿ ಭಾಗಿಗಳಾಗುತ್ತಾರೆ. ಮೂರು ದಳಗಳು ಬಿಲ್ವ ಪತ್ರೆಯನ್ನು ಅರ್ಪಿಸಿ ಮೂರು ಜನ್ಮದಲ್ಲಿ ಮಾಡಿದ ಪಾಪವನ್ನು ದೂರ ಮಾಡು ಎಂದು ಬೇಡಿಕೊಳ್ಳುತ್ತಾರೆ..

**ಸಂಗಮನಾಥನದು ಒಂದು ದಿನಜಾತ್ರೆ**

ಬಂದ ಭಕ್ತರಿಂದ ಮೀಸಲು ನೈವೇದ್ಯ. ಈ ಜಾತ್ರೆಗೆ ಬಂದು ಭಕ್ತರು ವಿಶೇಷವಾಗಿ ಮನೆಯಿಂದ ಒಣ ಭತ್ತವನ್ನು ತಂದು ಸಂಮಗಮನಾಥನಲ್ಲಿ ಅಡಿಗೆ ಮಾಡುವುದನ್ನು ಕಾಣುತ್ತೇವೆ. ಅಡಿಗೆ ಮಾಡಬೇಕಾದರೆ ನದಿಯಲ್ಲಿ ಮಿಂದು ಮೀಸಲು ನದಿಯ ನೀರಿನಿಂದ ನೈವೇದ್ಯ ತಯಾರಿಸಿ ಸಿರಾ, ಹೋಳಿಗೆ, ಕಡಬ, ಬೆಲ್ಲದನ್ನ ಈ ತರದ ಸಿಹಿ ಪದಾರ್ಥವನ್ನು ಮಾಡಿ ಸಂಗಮನಾಥನಿಗೆ ನೈವೇದ್ಯ ಅರ್ಪಿಸುತ್ತಾರೆ. ಈ ರೂಢಿ ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿದೆ.

**ಪಲ್ಲಕ್ಕಿ ಸೇವೆ**

ಪಲ್ಲಕ್ಕಿಯ ಸೇವೆ ಕೂಡ ನಡೆಯುತ್ತದೆ. ಪಲ್ಲಕ್ಕಿಯು ತೊಟ್ಟಿಲಾಕಾರದಲ್ಲಿದ್ದು, ನಾಲ್ಕು ಕಿರುಕಾಲುಗಳು ಕಾಮನಬಿಲ್ಲಿನಾಕಾರದ ಕಟ್ಟಿಗೆಯ ಕಮಾನು ಮತ್ತು ಉದ್ದನೆಯ ಹೆಗಲಗಂಭ ಹೊಂದಿರುತ್ತದೆ. ಇಂತಹ ರಚನೆಗೆ 'ಪಲ್ಲಕ್ಕಿ' ಎಂದು ಕರೆಯುತ್ತಾರೆ. ಆಯಾ ದೇವರ ಐತಿಹಾಸಿಕ ಹಿನ್ನೆಲೆ ಆಧಾರದ ಮೇಲೆ ಪಲ್ಲಕ್ಕಿಯ ತೊಟ್ಟಿಲದ ಮೇಲೆ ಕೆತ್ತನೆಯ ಕೆಲಸವನ್ನು ಮಾಡಿರುತ್ತಾರೆ. ಹಾಗೂ ಮುತ್ತು ಗೊಂಡೆಗಳಿಂದ ಅಲಂಕೃತ ಕುತನಿ ಬಟ್ಟೆಯನ್ನು ಹೊದಿಸಿ, ಮೇಲೆ ಚಿಕ್ಕ ಕಳಸ ಇಟ್ಟಿರುತ್ತಾರೆ. ಈ ರೀತಿಯಾಗಿ ಅಲಂಕರಿಸಿದ ಪಲ್ಲಕ್ಕಿಯಲ್ಲಿ ದೇವರ ಉತ್ಸವ ಮೂರ್ತಿಯನ್ನು ಮೆರವಣಿಗೆ ತೆಗೆಯುತ್ತಾರೆ. ಆದರೆ ಇಲ್ಲಿ ಸಂಗಮೇಶ್ವರರ ವಚನಗಳ ಕಟ್ಟು ಇಟ್ಟು ಮೆರವಣಿಗೆ ಮಾಡುತ್ತಾರೆ. ಹಂಚಿನಾಳದಿಂದ ಜಲದುರ್ಗಕ್ಕೆ ಬರುವಾಗ ಪಲ್ಲಕ್ಕಿಯಲ್ಲಿ ಪೂಜಾರಿ ಚಾಮರ ಹಿಡಿದು ಪಲ್ಲಕ್ಕಿಯಲ್ಲಿ ವಚನಗಳ ಕಟ್ಟು ಇಟ್ಟುಕೊಂಡು ಮೆರವಣಿಗೆ ಮೂಲಕ ಜಲದುರ್ಗದಲ್ಲಿರುವ ಸಂಗಮೇಶ್ವರ ಗುಡಿಗೆ ಬರುತ್ತಾರೆ. ಬಂದ ನಂತರ ದೇವಸ್ಥಾನದಲ್ಲಿ ಒಂದು ವರ್ಷದ ವಚನದ ಹೇಳಿಕೆ ನಡೆಯುತ್ತದೆ. ಈ ಹೇಳಿಕೆ ಒಂದು ವರ್ಷದ ಭವಿಷ್ಯದ ನಿರ್ಧಾರವನ್ನು ಅಲ್ಲಿನ ಜನರು ಮುಂದಿನ ದಿನಗಳ ಆಗಹೋಗಗಳನ್ನು ನಿರ್ಧರಿಸಿಕೊಳ್ಳುತ್ತಾರೆ. ನಂತರ ವಚನಗಳ ಕಟ್ಟು ಕಟ್ಟಿ ಮತ್ತೆ ಪಲ್ಲಕಿಯಲ್ಲಿಟ್ಟು ಕೊಂಡು ಹಂಚಿನಾಳಕ್ಕೆ ಮೆರವಣಿಗೆ ಮುಖಾಂತರ ಹೋಗುತ್ತಾರೆ. ಛತ್ರಿ ಚಾಮರ ಹಿಡಿದವರ ಹಾಗೂ ಪಲ್ಲಕ್ಕಿ ಹಿಂದೆ ಆರತಿ ಹಿಡಿದ ಮುತ್ತೈದೆಯರು ಇರುತ್ತಾರೆ. ಈ ಮೆರವಣಿಗೆಯು ಪ್ರಮುಖ ಓಣಿಯಲ್ಲಿ ಸಾಗುತ್ತಿರುವಾಗ ಭಕ್ತರು ತುಂಬಿದ ಕೊಡಗಳಿಂದ ನೀರನ್ನು ಪಲ್ಲಕ್ಕಿ ಹೊತ್ತವರ ಪಾದಗಳಿಗೆ ಸುರಿದು ಅವರ ಪಾದಕ್ಕೆ ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ. ಈ ರೀತಿಯಾಗಿ ಪಲ್ಲಕ್ಕಿ ತೇರಿನ ಜಾತ್ರೆಗಳಿಗೆ ಒಂದು ಪ್ರಮುಖ ಅಂಗವಾಗಿದೆ. ಜಾತ್ರೆ ಮುಗಿದ ನಂತರ ಪಲ್ಲಕ್ಕಿಯನ್ನು ಹಂಚಿನಾಳಕ್ಕೆ ತೆಗೆದುಕೊಂಡು ಹೋಗುತ್ತಾರೆ.

**ತೇರು**

ಜಲದುರ್ಗದಲ್ಲಿರುವ ತೇರು ಮರದ ಹಲಗೆಗಳಿಂದ ಮಾಡಿದ ತೇರು. ತೇರಿನಲ್ಲಿ ಕೆಳಭಾಗ ಮಧ್ಯಭಾಗ ತುದಿಯ ಭಾಗಗಳನ್ನಾಗಿ ವಿಂಗಡಿಸಬಹುದು. ತೇರಿನ ಕೆಳಭಾಗವು ಸ್ಥಾಯಿಯಾಗಿದ್ದು, ಈ ಭಾಗದಲ್ಲಿ ರಥದ ಗಾಲಿಗಳು ಹಾಗು ಪೀಠ ಇರುತ್ತದೆ. ಇದರ ಕೆಳಭಾಗದ ದಿಂಡುಗಳಿಗೆ ಮಿಣಿಕಲ್ಲು ಉಪಯೋಗಿಸುವ ದಪ್ಪವಾದ ಅಗಲವಾದ ಕಬ್ಬಿಣ ಬಳೆಗಳಿರುತ್ತವೆ. ತೇರಿಗೆ ಮರದ ಹಲಗೆಗಳನ್ನು ಜರುಗುದಂತೆ ಜೋಡಿಸಿ ಕಬ್ಬಿಣದ ಪಟ್ಟಿಗಳನ್ನು ಹೊಡೆದು, ದಪ್ಪಗಾತ್ರದಲ್ಲಿ ಮಾಡಿದ ಗಾಲಿಗಳಿದ್ದರೆ, ಕೆಲವು ತೇರುಗಳಿಗೆ ಬೃಹತ್ ಆಕಾರದ ದಪ್ಪವಾದ ಕಲ್ಲಿನ ಗಾಲಿಗಳಿರುತ್ತವೆ. ಇಲ್ಲಿ ಇದಕ್ಕೆ ಮರದ ಗಾಲಿಗಳಿರುತ್ತವೆ. ತೇರಿನ ಮಧ್ಯ ಭಾಗಕ್ಕಿಂತ ವಿಶಾಲವಾಗಿ ಹೊರಡುತ್ತಾ ಗೋಪುರಾಕಾರ ತಾಳುತ್ತದೆ. ಈ ಭಾಗದಲ್ಲಿ ಚಿಕ್ಕ ಕೋಣೆಗಳಿದ್ದು ಒಂದೊಂದು ಅಂತಃಸ್ತಿನಲ್ಲಿ ಸುಮಾರು ಹತ್ತಾರು ಮೂರು ಜನರು ನಿಲ್ಲಲು ಕೂಡಲು ಕಳಸ ತೆಗೆದುಕೊಂಡು ಗೋಪುರಕ್ಕೆ ಹೋಗುವಂತೆ ಪೊಳ್ಳಾಗಿ ನಿರ್ಮಾಣ ಮಾಡಿರುತ್ತಾರೆ. ಈ ಭಾಗದ ಹೊರಮೈಯಲ್ಲಿ ದೇವರ ಚಿತ್ರಗಳನ್ನು ಹಾಕಿರುತ್ತಾರೆ. ಒಂದು ದಿನದ ಕಾಲ ಈ ಜಾತ್ರೆ ನಡೆಯುತ್ತದೆ. ಒಂದು ದಿನ ಮಟ್ಟಿಗೆ ಸಣ್ಣ ಪ್ರಮಾಣದಲ್ಲಿ ಅಂಗಡಿಗಳು ಇರುತ್ತವೆ. ಜನರು ಒಂದು ದಿನದ ಜಾತ್ರೆಯನ್ನು ಮುಗಿಸಿಕೊಂಡು ಅಂದೇ ಸಾಯಂಕಾಲ ತಮ್ಮ ಊರುಗಳಿಗೆ ತೆರಳುತ್ತಾರೆ.

**ನಾರದಗಡ್ಡೆ ಚನ್ನಬಸವಸ್ವಾಮಿಗಳ ಜಾತ್ರೆ**

ಈ ಜಾತ್ರೆ ಶಿವರಾತ್ರಿಯಂದು. ಗುಡಿಗೆ ಸುಣ್ಣ ಬಣ್ಣ ಕೊಡಲಾಗುತ್ತದೆ. ತೇರಿನ ತಯಾರಿ ಮಾಡಿಕೊಳ್ಳಲಾಗುತ್ತದೆ. ಜಾತ್ರೆಯ ಹಿಂದಿನ ದಿನದಂದು ಭಕ್ತರು ನಡುಗಡ್ಡೆಗೆ ಆಗಮಿಸುತ್ತಾರೆ. ರಾತ್ರಿಯಿಡಿ ಶಿವಧ್ಯಾನ ಮಾಡುತ್ತಾರೆ. ಬೆಳಗ್ಗೆ ನದಿಯಲ್ಲಿ ಮಿಂದು ದೇವರಿಗೆ ತಮ್ಮ ಹರಕೆಗಳನ್ನು ಸಲ್ಲಿಸುತ್ತಾರೆ. ಮತ್ತೆ ಹರಕೆಗಳನ್ನು ಕಟ್ಟಿಕೊಳ್ಳುತ್ತಾರೆ. ಪ್ರತಿವರ್ಷ ಶಿವರಾತ್ರಿಯಾದ ಐದನೇ ದಿನ ಜಾತ್ರೆ ಕಾರ್ಯ ನಡೆಯುತ್ತದೆ. ಅಂದು ಬೆಳಗ್ಗೆ ಗಂಗೆ ಪೂಜೆ ಚನ್ನಬಸವೇಶ್ವರನಿಗೆ. ನದಿಗೆ ಕರೆದು ಕೊಂಡು ಹೋಗಿ ನದಿಯಲ್ಲಿ ಗಂಗೆಸ್ನಾನ ಮುಗಿಸಿಕೊಂಡು ನೇರವಾಗಿ ಗುಡಿಗೆ ಬಂದು ಎಲ್ಲಾ ದೇವರುಗಳಿಗೆ ಪೂಜೆ ಕಾರ್ಯನಡೆಯುತ್ತದೆ.

**ಆರತಿ ಪೂಜೆ**

ಭಕ್ತರ ದರ್ಶನಕ್ಕೆ ಈ ಪೂಜೆ ನಡೆಯುತ್ತದೆ. ಬಂದ ಭಕ್ತರು ದೇವರ ದರ್ಶನ ಪಡೆದು ಧನ್ಯರಾಗುತ್ತಾರೆ. ಆರತಿ ತೆಗೆದು ಕಾಣಿಕೆ ಹಾಕಿ ನಮಸ್ಕಾರ ಮಾಡುತ್ತಾರೆ.

**ಗೂಳಿ ಬಿಡುವುದು**

ಚೆನ್ನಬಸವೇಶ್ವರನಿಗೆ ಭಕ್ತರು ತಮ್ಮ ಹಸುಗಳಿಂದ ಹುಟ್ಟಿದ ಕರುವನ್ನು ತಂದು ಗೂಳಿ ಬಿಟ್ಟರೆ ತಮ್ಮ ಹರಕೆಗಳು ನೆರವೇರುತ್ತವೆ ಎನ್ನುವ ಬಲವಾದ ನಂಬಿಕೆ ಇದೆ. ಅದಕ್ಕಾಗಿ ಭಕ್ತರು ಜಾತ್ರೆಯಲ್ಲಿ ತಮ್ಮ ಮನೆಯಲ್ಲಿ ಹಸು ಹಾಕಿದ ಕರುವನ್ನು ಗೂಳಿ ಬಿಟ್ಟುಬಿಡುತ್ತಾರೆ. ಅವುಗಳನ್ನು ಪೂಜಾರರು ಯಾವ ಕಾರಣಕ್ಕೂ ಮಾರುವುದಿಲ್ಲ ಮತ್ತು ಅವುಗಳನ್ನು ಯಾರು ಕಟ್ಟುವುದಿಲ್ಲ. ತಾವೇ ಮೇದು ತಾವೇ ಗಡ್ಡೆಯಲ್ಲಿ ವಾಸ ಮಾಡುತ್ತವೆ ಮತ್ತು ನದಿ ದಾಟಿ ಯಾವ ಊರಿಗೂ ಹೋಗುವುದಿಲ್ಲ.

**ಜಾಂಡೇವು ಏರಿಸುವುದು**

ಉರವಕೊಂಡ ಮಠದಿಂದ ತಂದು ಜಾಂಡೇವನ್ನು ಚೆನ್ನಬಸವೇಶ್ವರ ಗುಡಿಗೆ ಮತ್ತು ತೇರಿಗೆ ಏರಿಸುವುದು. ನಂತರ ಪಲ್ಲಕ್ಕಿ ಸೇವೆ ನಡೆಯುತ್ತದೆ. ಜಾಂಡೇವು ತರುವವರು ತೇರು ಎಳೆಯುವಂತೆ ಇಲ್ಲ. ಪ್ರತಿ ವರ್ಷ ಇದು ನಡೆದುಕೊಂಡು ಬಂದ ಸಂಪ್ರದಾಯ.

**ಪಲ್ಲಕ್ಕಿ ಸೇವೆ**

ಶಿವರಾತ್ರಿ ನಾಲ್ಕನೆಯ ದಿನಕ್ಕೆ ಪಲ್ಲಕ್ಕಿ ಸೇವೆ ನಡೆಯುತ್ತದೆ. ಇದನ್ನು ಪೂಜಾರಿಗಳೇ ನೆರವೇರಿಸುತ್ತಾರೆ. ಮಠದ ಮಾಮೂಲಿನ ದಿನ ಪಲ್ಲಕ್ಕಿಯನ್ನು ವಿಶೇಷವಾದ ಹೂವುಗಳಿಂದ ಅಲಂಕಾರ ಮಾಡುತ್ತಾರೆ. ಹೀಗೆ ಅಲಂಕಾರಗೊಂಡ ಪಲ್ಲಕ್ಕಿಯ ಒಳಗೆ ಚೆನ್ನಬಸವೇಶ್ವರಮೂರ್ತಿ ಇಟ್ಟು ಮೆರವಣಿಗೆ ಮಾಡುತ್ತಾರೆ. ಶಿವರಾತ್ರಿ ಜಾಗರಣೆಯ ಹಿನ್ನೆಲೆಯಲ್ಲಿ ಅಪಾರ ಭಕ್ತಸ್ತೋಮವು ಅಂದು ಸೇರಿರುತ್ತದೆ.

**ನಂದಿಧ್ವಜ ಸೇವೆ**

'ನಂದಿ ಧ್ವಜ'ವನ್ನು ನಂದಿಕಂಬ, ನಂದಿಕೋಲು, ಬರಡೆ ಕಂಬಿ, ವ್ಯಾಸಗೋಲು, ನಂದಿಪಟ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ನಂದಿಕೋಲು ಸೇವೆ ಚೆನ್ನಬಸವೇಶ್ವರ ಜಾತ್ರೆಯಲ್ಲಿ ನಡೆಯುತ್ತದೆ.

ಸದ್ಯಕ್ಕೆ ಕರ್ನಾಟಕದಲ್ಲಿ ವೀರಶೈವರು, ನಾಯಕರು, ಮೈಸೂರು ಅರಸರ ಸಂಬಂಧಿಗಳು ಹಾಗೂ ಇತರೆ ಕೆಲವು 'ವೀರ'ಮನೆತನಗಳು ಧಾರ್ಮಿಕ ಉತ್ಸವಗಳ ಸಂದರ್ಭದಲ್ಲಿ ಈ ನಂದಿ ಧ್ವಜವನ್ನು ಪ್ರದರ್ಶಿಸುತ್ತಾರೆ. ವೀರಶೈವರ ಪ್ರಕಾರ ಇದು ವೀರಭದ್ರನು ತನ್ನ ವಿರೋಧಿಯಾದ ದಕ್ಷಬ್ರಹ್ಮನ ಮೇಲೆ ಸಾಧಿಸಿದ ವಿಜಯದ ಸಂಕೇತವಾದರೆ, ನಾಯಕ ಸಮುದಾಯದವರಿಗೆ ತಮ್ಮ ಸಾಂಸ್ಕೃತಿಕ ವೀರನಾದ ನಾಯಕನಹಟ್ಟಿಯ ತಿಪ್ಪೇಸ್ವಾಮಿಯ ಸಂಕೇತವಾಗಿ ದಸರಾ ಉತ್ಸವದಲ್ಲಿ

ಪ್ರದರ್ಶಿಸಲಾಗುವ ಮೈಸೂರಿನ ಬೃಹತ್ ನಂದಿಕಂಬ ಯದುವಂಶದ ಅರಸರ ವಿಜಯದ ಸಂಕೇತ ಎಂದು ಹೇಳಲಾಗುತ್ತದೆ.

ಚನ್ನಬಸವೇಶ್ವರ ಜಾತ್ರೆಯಲ್ಲಿ ಉಪಯೋಗಿಸುವ ನಂದಿಧ್ವಜದ ಎತ್ತರವು ಸುಮಾರು ೩೦ ರಿಂದ ೪೦ ಅಡಿ ಎತ್ತರ ಇದೆ. ನಂದಿಧ್ವಜ ಕೆಳಗಿನ ಜಾಗಕ್ಕೆ ತಾಳುಗಂಬಿ ಎಂದು ಕರೆಯುವರಲ್ಲದೇ ಈ ಭಾಗದಲ್ಲಿ ಚಿಕ್ಕ ಮಂಟಪವನ್ನು ಮಾಡಿ ಪೀಠದಂತೆ ರಚಿಸಿ ಇದರ ಮೇಲೆ ಚಿಕ್ಕ ನಂದಿಯಮೂರ್ತಿಯನ್ನು ಕೂಡಿಸಿರುತ್ತಾರೆ. ಇದರ ಮೇಲಿನ ಭಾಗವನ್ನು ಬಣ್ಣ ಬಣ್ಣದ ಬಟ್ಟೆಗಳಿಂದ ಸುತ್ತಿ ಅಲಂಕರಿಸಿ ತುದಿಯ ಭಾಗದಲ್ಲಿ ಕಾವಿ ಬಣ್ಣದ ಚಿಕ್ಕ ಧ್ವಜಗಳನ್ನು ಕಟ್ಟಿ ತುತ್ತತುದಿಗೆ ಪುಟ್ಟ ಛತ್ರಿ ಕಟ್ಟಿ ಅಲಂಕರಿಸುತ್ತಾರೆ.

ನಂದಿಧ್ವಜ ಹೊರುವವರು ಸಾದಾ ಉಡುಪು ಧರಿಸಿ, ಕಾಲಿಗೆ ಗೆಜ್ಜೆ ಕಟ್ಟಿ, ಹೆಗಲಿಗೆ ನಂದಿ ಕಂಬವನ್ನು ಹಿಡಿದಿಟ್ಟುಕೊಳ್ಳುವ ಚೀಲ ದರಿಸುತ್ತಾರೆ. ಸಾಮಾನ್ಯವಾಗಿ ನಂದಿಧ್ವಜ ಹೊರುವವರು ಬಲಶಾಲಿಗಳಾಗಿದ್ದು, ಡೊಳ್ಳು, ತಾಳ ಮತ್ತು ಶಹನಾಯಿಗಳ ವಾದ್ಯಕ್ಕನುಗುಣವಾಗಿ ಕುಣಿಯುವುದು ವೈಶಿಷ್ಟ್ಯಪೂರ್ಣವಾಗಿರುತ್ತದೆ. ಈ ಸಂದರ್ಭದಲ್ಲಿ ನಂದಿಧ್ವಜ ಯಾವ ಕಾರಣಕ್ಕೂ ಕೆಳಗೆ ಬೀಳಬಾರದು ಒಂದು ವೇಳೆ ಬಿದ್ದರೆ ಅಶುಭ ಸೂಚಕ ಎನ್ನುವ ನಂಬಿಕೆ ಈ ಜನರಲ್ಲಿದೆ.

**ನಂದಿ ಧ್ವಜದ ಮೆರವಣಿಗೆ**

ಗಡ್ಡೆಯ ಒಂದು ಕೀಲೋ ಮೀಟರ್‌ನಲ್ಲಿ ಲಕ್ಷ್ಮಿ ಕಟ್ಟೆ ಇದೆ. ಅಲಂಕೃತವಾದ ನಂದಿಧ್ವಜ ಹಾಗೂ ಇತರೆ ವಾದ್ಯಗಳೊಂದಿಗೆ ಮೆರವಣಿಗೆ ಮೂಲಕ ಆ ಕಟ್ಟೆಗೆ ಹೋಗಿ ಪೂಜೆಸಲ್ಲಿಸಿ ಬರುತ್ತಾರೆ. ನಂದಿಕೋಲನ್ನು, ಭಕ್ತರು ಕೂಡ ಹೊತ್ತು ಕುಣಿಯುತ್ತಾರೆ ಮತ್ತು ವಿಶೇಷವಾಗಿ ಹರಕೆ ಬೇಡಿಕೊಂಡವರು ನಂದಿಕೋಲು ಹಿಡಿದು ಕುಣಿಯುತ್ತಾರೆ. ಮುಂದೇ ನಂದಿಕೋಲು ಸೇವೆ ಹಿಂದೆ ತೇರು ಸಾಗಿರುತ್ತದೆ.

**ತೇರು**

ಜಲದುರ್ಗದ ತೇರು ಹೊಂದಿದ ವಿನ್ಯಾಸವನ್ನೆ ನಾರದಗಡ್ಡೆ ತೇರಿನ ವಿನ್ಯಾಸವಿದೆ. ಆದರೆ ನಾರದಗಡ್ಡೆ ತೇರು ಜಲದುರ್ಗದ ತೇರಿಗಿಂತ ದೊಡ್ಡ ತೇರು ಎಂದು ಹೇಳಬಹುದು. ಸುಮಾರು ೨೦ರಿಂದ ೪೦ ಅಡಿ ಎತ್ತರ ಕೆತ್ತಿದ್ದಾರೆ. ತೇರು ಸುಮಾರು ೨೫ರಿಂದ ೪೫ ಅಡಿ ಎತ್ತರವಾಗಿದೆ. ಇದರ ಮಧ್ಯಭಾಗದಲ್ಲಿ ಎರಡುವರಿ ಮೂರು ಅಗಲ ದಪ್ಪವಿರುವ ಗೋಲಾಕಾರದ ಕಬ್ಬಿಣದ ಹಾರಿಗಳನ್ನು ಬಳಸಿದ್ದಾರೆ. ಇದರಿಂದ ರಥ ಜರಗುವ ಸಮಯದಲ್ಲಿ ಎಷ್ಟೇ ಅಲುಗಾಡಿದರೂ ಮುರಿಯದಂತೆ ಈ ಹಾರಿಗಳು ಸಮತೋಲನವನ್ನು ಕಾಪಾಡುತ್ತವೆ.

ತೇರಿನ ಮೂರನೆಯ ಭಾಗವೇ ತುದಿಯು. ಈ ಭಾಗದ ರಚನೆಯು ಮಧ್ಯಭಾಗದಿಂದ ಅಗಲದಲ್ಲಿ ಕಡಿಮೆಯಾಗುತ್ತ ಬಂದು ಕಿರಿದಾಗುವ ಕಾರಣದಿಂದ ತೇರು ಗೋಪುರದಂತೆ ಕಾಣುತ್ತದೆ. ಇದರ ಮೇಲೆ ಕಳಸವಿಡುತ್ತಾರೆ. ಇಂತಹ ಪ್ರತಿಯೊಂದು ತೇರಿಗೆ ತೇರಿನ ಪಕ್ಕ ತೇರಿನ ಮನೆ ಇರುತ್ತದೆ. ಆದರೆ ಇಲ್ಲಿ ಇನ್ನು ತೇರಿಗೆ ಯಾವುದೇ ರೀತಿಯ ಮನೆಯಿಲ್ಲ. ತಗಡುಗಳಿಂದ ಕೂಡಾ ಮಾಡಿರುವುದಿಲ್ಲ. ವರ್ಷಪೂರ್ತಿ ಹಾಗೆ ಇರುತ್ತದೆ.

### ತೇರಿನ ಅಲಂಕಾರ

ಈ ತೇರು ಸಣ್ಣ ಗಾತ್ರದಲ್ಲಿದೆ. ತೇರಿಗೆ ಕಬ್ಬು, ತೆಂಗಿನ ಗರಿಗಳು ಮಾವಿನ ಎಲೆ ತಳಿರು-ತೋರಣ, ಹೂಮಾಲೆಗಳನ್ನು ಕಟ್ಟಿ, ಬಣ್ಣ ಬಣ್ಣದ ಪರಾರಿ(ಹಾಳೆ)ಗಳನ್ನು ಹಚ್ಚಿ ಅಲಂಕಾರ ಮಾಡಿ ಧ್ವಜಗಳನ್ನು ಕಟ್ಟಿರುತ್ತಾರೆ. ಗೋಪುರಕ್ಕೆ ಕಳಸವಿಟ್ಟು, ಅದರ ಮೇಲೆ ಬಣ್ಣದ ಛತ್ರಿ ಕಟ್ಟಿ, ಹೂವಿನ ಹಾರ ಹಾಕಿ ಅಲಂಕಾರ ಮಾಡುತ್ತಾರೆ. ಬಂಗಾರದ ಕಳಸ ಇಲ್ಲ. ಕಂಚಿನ ಕಳಸ ಇಡುತ್ತಾರೆ. ಎಲ್ಲಾ ಅಲಂಕಾರ ಮಾಡಿ ನಿಲ್ಲಿಸಿರುತ್ತಾರೆ. ವಚನ ಹೇಳಿಕೆಯ ನಂತರ ತೇರು ಸಾಗುತ್ತದೆ. ಸಂಗಮೇಶ್ವರನ ಮೂರ್ತಿ ಇಟ್ಟಿರುತ್ತಾರೆ. ಪೂಜೆ ಮಾಡಲು ತೇರಿನ ಮೇಲೆ ಪೂಜಾರಿಗಳು ಕುಳಿತಿರುತ್ತಾರೆ. ಎಲ್ಲ ಸಮುದಾಯದ ಜನರು ತೇರನ್ನು ಎಳೆಯುತ್ತಾರೆ. ಪಾದಗಟ್ಟೆಗೆ ಹೋಗಿ ಬಂದು ಮತ್ತೆ ಅಲ್ಲಿ ನಿಲ್ಲುತ್ತದೆ. ಭಕ್ತರು ಹೂ-ಬಾಳೆಹಣ್ಣುಗಳನ್ನು ಎಸೆಯುತ್ತಾರೆ. ಈ ತೇರನ್ನು ರಾಯಚೂರಿನ ತಿಪ್ಪರಾಜು ಹವಾಲ್ದಾರ ಶಾಸಕರಾಗಿದ್ದಾಗ ೧೦ ಲಕ್ಷ ಖರ್ಚು ಮಾಡಿ ತೇರನ್ನು ಮಠಕ್ಕೆ ಮಾಡಿಸಿ ಕೊಟ್ಟಿರುವುದು ತಿಳಿದುಬರುತ್ತದೆ. ಅಂದಿನಿಂದ ಈ ಗಡ್ಡೆಯಲ್ಲಿ ರಥೋತ್ಸವ ನಡೆಯುತ್ತದೆ. ಗಡ್ಡೆಯಲ್ಲಿ ರಥೋತ್ಸವದ ದಿನ ಅಂಗಡಿಮುಂಗಟ್ಟುಗಳು ಹೇರಳವಾಗಿರುತ್ತವೆ.

### ಜಾತ್ರೆಯ ದಾಸೋಹ

ಈ ಜಾತ್ರೆಗೆ ಆಂಧ್ರ ಕರ್ನಾಟಕದಿಂದ ಭಕ್ತಾದಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಾರೆ. ಎರಡು ದಿನಗಳ ಕಾಲ ಜಾತ್ರೆ ನಡೆಯುತ್ತದೆ. ಈ ಎರಡು ದಿನ ದಾಸೋಹ ನಡೆಯುತ್ತದೆ. ಇದನ್ನು ಭಕ್ತರೆ ನಡೆಸಿಕೊಡುತ್ತಾರೆ. ಜಾತ್ರೆಯಲ್ಲಿ ಸಿರಾ, ಅನ್ನಸಾಂಬಾರಿನ ದಾಸೋಹ ನಡೆಯುತ್ತದೆ. ನಾರದ ಗಡ್ಡೆ ಜಾತ್ರೆ ಸಂಪೂರ್ಣವಾಗಿ ಈ ಮಠ ಸರಕಾರಕ್ಕೆ ಒಳಪಟ್ಟ ಕಾರಣ ಸರಕಾರ ಮತ್ತು ಪೊಲೀಸ್ ಇಲಾಖೆ ಮುಂದೆ ನಿಂತು ಜಾತ್ರೆಯನ್ನು ನಡೆಸಿಕೊಡುತ್ತದೆ.

ಕೃಷ್ಣಾನದಿ ಸುತ್ತುವರಿದಿರುವ ಒಂದು ಸುಂದರ ದ್ವೀಪ ಮತ್ತು ಪುಣ್ಯಕ್ಷೇತ್ರ, ರಾಯಚೂರು ನಗರಕ್ಕೆ ಈಶಾನ್ಯದಲ್ಲಿ ೨೯ ಕಿ.ಮೀ.ದೂರದಲ್ಲಿದೆ. ನಾರದ ಮಹರ್ಷಿ ಈ ಸ್ಥಳದಲ್ಲಿ ಪ್ರಾರ್ಥನೆ ಸಲ್ಲಿಸಿ ಇಲ್ಲಿಯೇ ಐಕ್ಯರಾದರು. ನಾರದ ದೇವಾಲಯವೂ ಒಂದು. ವೀರಶೈವ ಮಠವೂ ವೈರಾಗ್ಯ ಚೆನ್ನಬಸವಸ್ವಾಮಿಯ ಸಮಾಧಿಯೂ, ಶಿವಯೋಗಿ ಪೀಠ ಮತ್ತು ಬಸವಣ್ಣ ದೇವಾಲಯವೂ

ಇದೆ. ಪ್ರತಿ ಫಾಲ್ಗುಣ ಶಿವರಾತ್ರಿಯಾದ ೫ನೇ ದಿನಕ್ಕೆ ಜಾತ್ರೆ ನಡೆಯುತ್ತದೆ. ನಡೆಯುವ ಜಾತ್ರೆಗೆ ಸಾವಿರಾರು ಮಂದಿ ಸೇರುತ್ತಾರೆ. ದನದ ಜಾತ್ರೆ ನಡೆಯುತ್ತದೆ. ಕಂಬಳಿ, ಹಿತ್ತಾಳೆ ಪಾತ್ರೆಗಳು, ಎತ್ತಿನ ಬಂಡಿ ಮತ್ತು ಅನೇಕ ವಸ್ತುಗಳ ಮಾರಾಟ ಎರಡು ದಿನ ನಡೆಯುತ್ತದೆ. ಇಲ್ಲಿ ಯಾವುದೇ ಮಾಂಸಾಹಾರ ಪದ್ಧತಿ ಇಲ್ಲ. ಸಸ್ಯಹಾರಿ ಪದ್ಧತಿ ಇದೆ. ಜಾತ್ರೆಯಲ್ಲಿ ಹೋಳಿಗೆ, ಹುಗ್ಗಿ, ಅನ್ನಸಾರು ಮಾಡುತ್ತಾರೆ.

**ಜಾನುವಾರಗಳ ಮಾರಾಟ**

ಇಂದಿನ ಆಧುನಿಕ ಕಾಲದ ಭರಾಟೆಯ ನಡುವೆಯೂ ಗಡಿ ಭಾಗದ ಜಾತ್ರೆಗಳಲ್ಲಿ, ನಾರದ ಗಡ್ಡೆ ಜಾತ್ರೆ ರೈತರಿಗೆ ಬೆನ್ನುಲುಬಾಗಿರುವ ದುಡಿಯುವ ಎತ್ತುಗಳ ಮಾರಾಟವಾಗುತ್ತವೆ. ಗಡಿಭಾಗದ ರೈತರು ಪ್ರಾಣಿ ಪ್ರಿಯರಾಗಿರುವುದು ಸಾಕ್ಷಿಯಾಗಿದೆ.

**ರಾಮಗಡ್ಡೆಯ ಚೋಳೇಂದ್ರಸ್ವಾಮಿ ಜಾತ್ರೆ**

ಸಂಕ್ರಾಂತಿ ಹಬ್ಬದಂದು ಈ ಜಾತ್ರೆ ನಡೆಯುತ್ತದೆ. ಈ ನಡುಗಡ್ಡೆಗೆ ಸಂಕ್ರಾಂತಿಗೆಂದು ಸಾವಿರ ಸಾವಿರ ಜನಸಂಖ್ಯೆ ಸೇರುತ್ತದೆ. ಸುತ್ತಲು ನದಿ ಇರುವುದರಿಂದ ಪುಣ್ಯಸ್ನಾನಕ್ಕೆಂದು ಈ ಗಡ್ಡೆಗೆ ಆಗಮಿಸಿ ಪುಣ್ಯಸ್ನಾನ ಮಾಡಿ ರಾಮಲಿಂಗೇಶ್ವರ ದರ್ಶನ ಪಡೆದು ಚೋಳೇಂದ್ರಸ್ವಾಮಿ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಾರೆ. ಈ ಜಾತ್ರೆ ಎರಡು ದಿನ ನಡೆಯುತ್ತದೆ. ಒಂದು ದಿನ ಉಚ್ಚಯ, ಮಾರನೆಯ ದಿನ ತೇರು ಇರುತ್ತದೆ ಹಾಗೂ ಪಲ್ಲಕ್ಕಿ ಸೇವೆ ಮತ್ತು ನಂದಿಕೋಲು ಸೇವೆ ಇರುತ್ತದೆ.

ಪಲ್ಲಕ್ಕಿ ಸೇವೆ, ನಂದಿಕೋಲು ಸೇವೆ ನಾರದಗಡ್ಡೆ ಜಾತ್ರೆಯಲ್ಲಿ ಇರುವಂತೆ ಇರುತ್ತದೆ. ಈ ಜಾತ್ರೆಯನ್ನು ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು ನಡೆಸಿಕೊಡುತ್ತಾರೆ. ಅವರೇ ಈಗ ಇರುವ ಪೀಠಾಧಿಪತಿಗಳು. ಮಠದ ಎಲ್ಲಾ ಅಧಿಕಾರಗಳು ಅವರಿಗೆ ಸೇರಿರುತ್ತವೆ.

ಈ ಜಾತ್ರೆಯು ಸಂಕ್ರಮಣ ದಿನದಂದು ನಡೆಯುವುದರಿಂದ ಈ ನಡುಗಡ್ಡೆ ಅತ್ಯಂತ ಜನಪ್ರಿಯ ಮಠವಾಗಿ ಬೆಳೆದಿದೆ. ದೂರ ದೂರದ ಊರಿಂದ ಭಕ್ತರು ಮತ್ತು ಪ್ರವಾಸಿಗಳು ಆಗಮಿಸುತ್ತಾರೆ. ಏಕೆಂದರೆ ಈ ಗಡ್ಡೆಯನ್ನು ಪ್ರವಾಸಿತಾಣವನ್ನಾಗಿ ಸರ್ಕಾರ ನಿರ್ಮಾಣ ಮಾಡಿದೆ. ಅದರಿಂದ ಇದು ಈಗ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದೆ.

**ಉಚ್ಚಯ**

ಜಾತ್ರೆಯ ಪ್ರಾರಂಭದ ಸೂಚನೆಯಾಗಿ ಊರಿನ ಜನರನ್ನು ಜಾತ್ರೆಯೆಡೆಗೆ ಗಮನ ಸೆಳೆಯಲು ಕೆಲವು ಕಾರ್ಯಕ್ರಮಗಳು ಪ್ರಾರಂಭವಾಗುತ್ತವೆ. ಉಚ್ಚಯ ಎಂದರೆ, ಸಣ್ಣ ತೇರುಗಳಿಗೆ ಉಚ್ಚಯ

ಎಂದು ಕರೆಯತ್ತಾರೆ. ನಾಲ್ಕು ಕಟ್ಟಿಗೆಯ ಗಾಲಿಗಳನ್ನು ಹೊಂದಿದ್ದು ನೋಡಲು ಸಣ್ಣ ಗಡ್ಡಿ ತೇರಿನ ಆಕಾರದಂತಿದೆ. ಇದರಲ್ಲಿ ಕೆತ್ತನೆಯ ವಿನ್ಯಾಸಗಳು ಇಲ್ಲ. ಒಂದು ತರ ಬಂಡಿಯಾಕಾರದಲ್ಲಿರುತ್ತದೆ.

ಉಚ್ಚಯ ಅಲಂಕರಿಸಿ ಅದರೊಳಗೆ ಖುರ್ಜಿ ಹಾಕಿ ಸಿದ್ದಲಿಂಗಸ್ವಾಮಿಯವರನ್ನು ಕೂಡಿಸಿ ಚೋಳೇಂದ್ರಸ್ವಾಮಿಯ ಮೂರ್ತಿ ಇಟ್ಟು ಈ ಮೆರವಣಿಗೆಯ ಮುಂಚೂಣಿಯಲ್ಲಿ ಡೊಳ್ಳು ಮೇಳ, ಬಾಜಾ, ಶಹನಾಯಿ ಮೇಳ ಹಾಗೂ ಭಜನಾ ಮೇಳಗಳಿದ್ದರೆ ಉಚ್ಚಯ ಹಿಂದೆ ಮಹಿಳೆಯರು ಆರತಿ ಹಿಡಿದು ಬರುತ್ತಾರೆ. ಈ ಮೆರವಣಿಗೆ ದೇವಸ್ಥಾನದಿಂದ ಪಾದಗಟ್ಟೆಯವರೆಗೆ ಸಾಗಿ, ಪಾದಗಟ್ಟೆಗೆ ಪೂಜೆ ಸಲ್ಲಿಸಿ, ಮರಳಿ ದೇವಸ್ಥಾನದ ಮುಂದೆ ಅಂಗಳದಲ್ಲಿ ಬಂದು ನಿಲ್ಲುತ್ತದೆ. ಈ ಕಾರ್ಯಕ್ರಮವು ಸಂಜೆ ವೇಳೆಯಲ್ಲಿ ನಡೆಯುತ್ತದೆ. ನಂತರ ಎರಡನೆ ದಿನ ರಥೋತ್ಸವ ಜರುಗುತ್ತದೆ.

### ರಥೋತ್ಸವ

ಉಚ್ಚಾಯ ಆದ ಎರಡನೇ ದಿನ ತೇರು ಎಳೆಯುತ್ತಾರೆ. ಇಲ್ಲಿ ಯಾವುದೇ ರೀತಿಯ ತೇರು ಮಾಡಿಸಿರುವುದಿಲ್ಲ. ಕೇವಲ ನಾಲ್ಕು ಕಟ್ಟಿಗೆಯ ಗಾಲಿಗಳು ಮಾತ್ರ ಇದ್ದು, ಇದನ್ನು ಜಾತ್ರೆ ದಿನ ತೇರಿನ ರೂಪವಾಗಿ ಅಲಂಕಾರ ಮಾಡಿ ತೇರನ್ನು ಎಳೆಯುತ್ತಾರೆ. ಇದಕ್ಕೆ ಚಟ್ಟಿ ತೇರು ಅಥವಾ ಹಂದರ ತೇರು ಎಂದು ಕರೆಯುತ್ತಾರೆ. ಚಟ್ಟಿ ಎಂದರೆ 'ಗಾಡಿಯ ಚೌಕಟ್ಟು ಒಳತೊಟ್ಟಿಲು' ಎನ್ನುವ ವಿವರಣೆ ಕನ್ನಡ ನಿಘಂಟಿನಲ್ಲಿದೆ. ಈ ರಥದ ಕೆಳಗಿನ ಭಾಗವಷ್ಟೆ ಗಡ್ಡಿಯ ತೇರನ್ನು ಹೋಲುತ್ತದೆ. ಆದರೆ ಗಾಲಿಗಳು ಒಡ್ಡರ ಗಾಡಿಯ ಗಾಲಿಗಳಂತಿರುತ್ತವೆ. ಮಧ್ಯಭಾಗ ಹಾಗೂ ಗೋಪುರದ ಭಾಗವನ್ನು ರಥೋತ್ಸವಕ್ಕಿಂತ ಮುಂಚೆ ಊರ ಜನರು ಸೇರಿ ಬನ್ನಿಗಿಡದ ಕಟ್ಟಿಗೆಯನ್ನು ಕಡಿದು ತಂದು ಹಳೆಯ ಕಟ್ಟಿಗೆಗಳೊಂದಿಗೆ ಕೂಡಿಸಿ ಗಡ್ಡಿಯ ತೇರಿನ ರಚನೆ ಹೋಲುವಂತೆ ಹಗ್ಗಗಳಿಂದ ಚಟ್ಟ ಸಿದ್ಧಪಡಿಸುತ್ತಾರೆ. ನಂತರ ಹೊಸ ಹಸಿರು ಸೀರೆಗಳಿಂದ ಸಂಪೂರ್ಣವಾಗಿ ತೇರಿಗೆ ಸುತ್ತಿ ಅಲಂಕರಿಸುತ್ತಾರೆ ಹಾಗೂ ಗೋಪುರದ ಮೇಲೆ ಕಳಸ ಇಡುತ್ತಾರೆ. ಇಲ್ಲಿ ಮಹಾಭಾರತದ ಹಿನ್ನೆಲೆಯಾಗಿ ಬನ್ನಿ ಕಟ್ಟಿಗೆಗಳನ್ನು ಬಳಸಿದರೆ, ಸಿದ್ದುಟಿಕೆ ಮಠಗಳ ಪರಂಪರೆಯಂತೆ ರಥಕ್ಕೆ ಸೀರೆ ಸುತ್ತುವುದು ಇಲ್ಲಿಯ ವೈಶಿಷ್ಟ್ಯ.

ಜಾತ್ರೆಗೆ ಬಂದ ಎಲ್ಲಾ ಸಮುದಾಯದವರು ಈ ತೇರನ್ನು ಎಳೆಯುತ್ತಾರೆ. ಇದು ಕೂಡ ಪಾದಗಟ್ಟೆಗೆ ಹೋಗಿ ಪೂಜೆ ಸಲ್ಲಿಸಿ ಮತ್ತೆ ಬಂದು ತನ್ನ ಜಾಗಕ್ಕೆ ನಿಂತುಕೊಳ್ಳುತ್ತದೆ. ಪೂಜಾರಿ ಇದರೊಳಗೆ ಚೋಳೇಂದ್ರಸ್ವಾಮಿ ಮೂರ್ತಿಯನ್ನು ಹಿಡಿದುಕೊಂಡು ಕುಳಿತಿರುತ್ತಾರೆ. ಎಲ್ಲಾ ಭಕ್ತಾದಿಗಳು ಬಾಳೆಹಣ್ಣು, ಉತ್ತತ್ತಿ, ಅಡಿಕೆ, ಮಂಡಾಳು ಎಸೆಯುತ್ತಾರೆ.

# ಅಧ್ಯಾಯ ಐದು

## ನಡುಗಡ್ಡೆಗಳ ಆಚರಣೆಗಳು

ಜನಪದರು ತಮ್ಮ ಬದುಕಿನಲ್ಲಿ ಹುಟ್ಟಿನಿಂದ ಸಾವಿನವರೆಗೆ ಜೀವಿತದ ಅವಧಿಯಲ್ಲಿ ಮಾನವನು ತನ್ನ ಸುಖ ದುಃಖಕ್ಕೆ ಅನುಸಾರವಾಗಿ ಅನೇಕ ಆಚರಣೆಗಳನ್ನು ಮಾಡಿಕೊಂಡು ಬರುತ್ತಾನೆ. ಪ್ರತಿಯೊಂದು ಸಮಾಜದಲ್ಲಿ ತಮ್ಮ ತಮ್ಮ ಸಂಸ್ಕೃತಿಗೆ ಅನುಸಾರವಾಗಿ ಇಂತಹ ಅನೇಕ ಆಚರಣೆಗಳು ಮನುಷ್ಯನಿಗೆ ಒಂದು ರೀತಿಯ ತಿಳುವಳಿಕೆಯನ್ನು ನೀಡುವುದರ ಜೊತೆಗೆ ಸಾಂಸ್ಕೃತಿಕವಾಗಿ ಅವರನ್ನು ಸಾಕಾರಗೊಳಿಸುತ್ತವೆ.

ಆಚರಣೆಗಳು ಮಾನವನ ಸೃಷ್ಟಿಗಳಾಗಿವೆ. ಕೆಲವು ಆಚರಣೆಗಳು ಭಯದ ಮತ್ತು ಆರಾಧನೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡರೆ ಇನ್ನು ಕೆಲವು ಆಚರಣೆಗಳನ್ನು ಮಾನವನು ತನ್ನ ಆತ್ಮ ಸಂತೋಷಕ್ಕಾಗಿ ಆಚರಿಸುತ್ತಾನೆ. ಈ ಆಚರಣೆಗಳು ನಮ್ಮ ಪೂರ್ವಿಕರಿಂದಲೂ ರೂಢಿಯಲ್ಲಿರುವುದನ್ನು ಕಾಣಬಹುದು. ಕೆಲವು ಆಚರಣೆಗಳ ಹಿಂದೆ ಉನ್ನತ ಮೌಲ್ಯಗಳು ಆದರ್ಶಗಳು ಇವೆ. ಹಾಗೆ ಕೆಲವು ಆಚರಣೆಗಳಲ್ಲಿ ಮೌಢ್ಯತೆಯು ಇದೆ. ಈ ಆಚರಣೆಗಳು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬರುವುದು ನಮ್ಮೆಲ್ಲರಿಗೂ ಗೊತ್ತಿರುವ ಸಂಗತಿಯೆ. ಹೀಗೆ ಸಾಗಿ ಬರುವ ಆಚರಣೆಗಳು ಕಾಲಕ್ಕೆ ತಕ್ಕಂತೆ ಸಂದರ್ಭಕ್ಕೆ ತಕ್ಕಂತೆ ಬದಲಾಗುತ್ತಾ ಆಧುನಿಕತೆಯಲ್ಲಿ ತಮ್ಮ ಸ್ಥಾನವನ್ನು ಉಳಿಸಿಕೊಳ್ಳಲು ಯತ್ನಿಸುತ್ತಿರುತ್ತವೆ(ಸುಮಂಗಲಾ ಬಿ.ಅತ್ತಿಗೇರಿ, ೨೦೦೩, ಪು.೨೨). ಈ ಬಗೆಯ ಬದಲಾವಣೆ ಅನಿವಾರ್ಯ ಕೂಡಾ. ಅದನ್ನು ಒಪ್ಪಿ ನಡೆಯಬೇಕಾಗಿರುವುದು ನಮ್ಮ ಕಾಲದ ಅಗತ್ಯತೆಯಾಗಿವೆ. ಆಚರಣೆ ನಮ್ಮ ಸಮಕಾಲೀನತೆಗೆ ಎಷ್ಟು ಪ್ರಸ್ತುತ ಮತ್ತು ಅದರ ಹಿಂದಿರುವ ಮೌಲ್ಯ ವ್ಯವಸ್ಥೆ ಏನು ಎಂದು ಅರಿಯುವ ಜವಾಬ್ದಾರಿ ನಮ್ಮದಾಗಬೇಕು. ಏಕೆಂದರೆ ಕೆಲವು ಆಚರಣೆಗಳನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಯಾವ ಅರ್ಥವೂ ಇಲ್ಲ. ಉದಾ: ಸತಿ ಸಹಗಮನ ಪದ್ಧತಿ, ಬಾಲ್ಯ ವಿವಾಹ, ದೇವರ ಹೆಸರಿನಲ್ಲಿ ಮಾಡುವ ಬೆತ್ತಲೆ ಸೇವೆ, ಬಲಿಕೊಡುವುದು ಈ ಬಗೆಯ ಕೆಲವು ಆಚರಣೆಗಳನ್ನು ಖಂಡಿತವಾಗಿಯೂ ಕೈ ಬಿಡುವ ಅವಶ್ಯಕತೆ ಇದೆ.

"ಮನುಷ್ಯ ಎಂದು ಈ ಪ್ರಕೃತಿಯ ವೈಚಿತ್ರಗಳನ್ನು ಕಂಡು ಬೆರಗಾಗಿ ಬೆದರಿ ತನಗಿಂತ ಯಾವುದೋ ಒಂದು ಅಗೋಚರವಾದ ಶಕ್ತಿಯನ್ನು ಗುರುತಿಸಿ ಈ ಪ್ರಕೃತಿಯಲ್ಲಿ ಪ್ರತಿಯೊಂದು ಗಿಡ, ಮರ, ಪ್ರಾಣಿ, ಪಕ್ಷಿ, ಸೂರ್ಯ, ಚಂದ್ರ, ನದಿ, ಬೆಟ್ಟ, ಗುಡ್ಡ, ಪರ್ವತ ಹೀಗೆ ಈ ಪ್ರಕೃತಿಯನ್ನು ಆರಾಧಿಸಲು ಪ್ರಾರಂಭಿಸಿದನೋ ಅಂದೇ ಆಚರಣೆಗಳು ಹುಟ್ಟಿಕೊಂಡವು"(ನಿಂಗಪ್ಪ ಎಸ್.ಮಾದಣ್ಣನವರ, ೨೦೧೪, ಪು.೧೩೯) ಎಂದು ಹೇಳಬಹುದು. ಮನುಷ್ಯ ತನ್ನ ಕಲ್ಪನೆಯ ಮೂಲಕ ಪ್ರಕೃತಿಯಲ್ಲಿ ಪ್ರತಿಯೊಂದಕ್ಕೂ ಜೀವ ತುಂಬುತ್ತ ಈ ಪ್ರಕೃತಿಯನ್ನು ಆರಾಧಿಸುತ್ತ ಅದರ ಸುತ್ತ ಪುರಾಣ, ಕಥೆ, ಅವತಾರ, ರೂಪಗಳನ್ನೆಲ್ಲಾ ಕಟ್ಟಿಕೊಂಡು ದೇವರನ್ನು ಸೃಷ್ಟಿಸಿದ. ನಂತರ ಆ ದೇವರನ್ನು ಹಲವು ಹೆಸರುಗಳಲ್ಲಿ ಪೂಜಿಸಿದರು. ನಂತರ ದೇವರನ್ನು ಸಂತೃಪ್ತಿಗೊಳಿಸಲು ಹಲವು ಆಚರಣೆಗಳು, ನಂಬಿಕೆ, ಬೇಡಿಕೆ ಹೀಗೆ ಹಲವನ್ನು ಸೃಷ್ಟಿಸಿದ. ಮನುಷ್ಯನ ಇಂದಿನ ಆಚರಣೆಗಳಲ್ಲಿ ಮೂಲ ಆರಾಧನೆಯ ಈ ಸೃಷ್ಟಿ ಶಕ್ತಿಯ ಛಾಯೆಗಳು ಎದ್ದು ಕಾಣುತ್ತವೆ. ಈ ಹಿನ್ನೆಲೆಯಲ್ಲಿ ಕೃಷ್ಣಾನದಿ ತೀರದ ನಡುಗಡ್ಡೆಗಳ ಜನರ ಬದುಕಿನಲ್ಲಿ ಆಚರಣೆಗಳ ವಿವರ, ಅವುಗಳ ಪ್ರಾಮುಖ್ಯತೆ, ಹಿನ್ನೆಲೆ ಮುಂತಾದ ವಿಶ್ಲೇಷಣೆಯನ್ನು ಮತ್ತು ಈ ಅಧ್ಯಯನದಲ್ಲಿ ನಡುಗಡ್ಡೆಗಳ ಜನರು ವಿಶಿಷ್ಟವಾಗಿ ಆಚರಿಸುವ ಜೀವನಾವರ್ತನದ ಹಾಗೂ ವಾರ್ಷಿಕಾವರ್ತನದ ಆಚರಣೆಗಳನ್ನು ಅಧ್ಯಯನ ಮಾಡಲಾಗಿದೆ. "ಆಚರಣೆಗಳು ಭಾವನಾತ್ಮಕ ಸಂಬಂಧಗಳನ್ನು ಗಟ್ಟಿಗೊಳಿಸುತ್ತಾ ಕೇಂದ್ರಿತ ನೆಲೆಗಳಲ್ಲಿ ಮನುಷ್ಯನನ್ನೂ ಕಟ್ಟಿ ಹಾಕುತ್ತವೆ. ಆಚರಣೆಗಳಿಂದ ಸಂಪ್ರದಾಯಬದ್ಧವಾದ ಸಮುದಾಯ ಶೋಷಣೆ ದೇವಾಲಯಗಳ ಪ್ರವೇಶಕ್ಕೆ ತೊಡಕು ಹಾಗೂ ಸಾಮಾಜಿಕ ಅಸ್ತಿತ್ವದ ಅಲುಗಾಡುವಿಕೆಗೆ ನಾಂದಿಯಾಗಿಬಿಡುತ್ತವೆ. ಆಚರಣೆಗಳಲ್ಲಿ ಜೀವಂತಿಕೆಯ ಲಕ್ಷಣಗಳು ಕಂಡುಬರುತ್ತವೆ ನಿಜ, ಆದರೆ ಕೆಲವು ವೇಳೆ ಅವು ಸಮ್ಮತವಾದಂತೆ ಕಂಡು ಬರುಬರುತ್ತಾ ನಿರ್ಲಿಪ್ತತೆಯನ್ನುಂಟುಮಾಡುತ್ತವೆ. ಆಚರಣೆಯಲ್ಲಿ ವೈಯಕ್ತಿಕ ಆಚರಣೆಗಳು, ಸಾಮಾಜಿಕ ಆಚರಣೆಗಳು. ಹೀಗೆ ವ್ಯವಸಾಯಾತ್ಮಕ ಆಚರಣೆಗಳು, ಧಾರ್ಮಿಕ ಆಚರಣೆಗಳು"(ಶಾಂತವ್ವ ನಾಗಪ್ಪ, ೨೦೧೩, ಪು.೮೮). ವಿವಿಧ ಆಚರಣಾ ಪದ್ಧತಿಗಳು ಇಂಡಿಯಾದ ಸಂಸ್ಕೃತಿಯೊಳಗೆ ಬೆರೆತುಕೊಂಡಿವೆ.

ನಮ್ಮ ಸಂಸ್ಕೃತಿಯ ಆಚರಣೆಗಳಲ್ಲಿ ಮುಖ್ಯವಾಗಿ ರೋಗನಿವಾರಕ ಆಚರಣೆಗಳು, ಮಳೆ, ಬೆಳೆ, ಭೂಮಿಗೆ ಸಂಬಂಧಿಸಿದ ಆಚರಣೆಗಳು, ಹಬ್ಬ, ಜಾತ್ರೆ, ಉತ್ಸವ, ತೇರುಗಳಿಗೆ ಸಂಬಂಧಿಸಿದ ಆಚರಣೆಗಳು ಇನ್ನು ಕೆಲವು ವಿಶಿಷ್ಟ ಆಚರಣೆಗಳು ಕಂಡುಬರುತ್ತವೆ.

ಅದೇ ರೀತಿಯಾಗಿ ವಿದೇಶಗಳಲ್ಲಿ ಕೆಲವು ಆಚರಣೆಯ ವೈಶಿಷ್ಟತೆಯನ್ನು ಗಮನಿಸಿದಾಗ ಈ ರೀತಿಯಾಗಿ ಕಂಡುಬರುತ್ತವೆ. ಮಳೆಯಾಗದ ಸಂದರ್ಭದಲ್ಲಿ ಗುಲಾಮರನ್ನು ಬಲವಂತವಾಗಿ ಸುಡುವುದರ ಮೂಲಕ ಮಳೆಯನ್ನು ಒಲಿಸಿಕೊಳ್ಳುವ ಆಚರಣೆಗಳು ಚೈನಾದೇಶದಲ್ಲಿ ರೂಢಿಯಲ್ಲಿದ್ದವು

ಎಂದು(ಎಫ್. ಕರೋವಿನ್, ೧೯೮೭) ದಾಖಲಿಸಿದ್ದಾರೆ. ಮಳೆ ತರಿಸುವುದಕ್ಕಾಗಿ ಪ್ರಾಚೀನ ಟಿಬೇಟಿಯನ್ನರು ಬೆತ್ತಲೆಯಾದ ಹುಡುಗಿಯ ಮೇಲೆ ನೀರನ್ನು ಸುರಿಸುವ ವಿಧಿಯೊಂದನ್ನು ಆಚರಿಸುತ್ತಿದ್ದರು. ಪ್ರಾಚೀನ ಸ್ಪ್ಯಾನಿಷ್ ಪುರೋಹಿತರು ಮಳೆಬರಿಸುವುದಕ್ಕಾಗಿ ಮೆರವಣಿಗೆಯಲ್ಲಿ ಒಂದು ಪವಿತ್ರಬಾವಿ ಅಥವಾ ಮಾಂತ್ರಿಕ ಚಿಲುಮೆಯ ಬಳಿ ಹೋಗುತ್ತಿದ್ದರು. ಹಾಗೂ ನೀರಿನ ಮೇಲ್ಮೈಯನ್ನು ಕೋಲುಗಳಿಂದ ಬಡಿಯುತ್ತಿದ್ದರು. ಹೀಗೆ ಮಾಡುವುದರಿಂದ ಮಳೆ ಬರುವುದೆಂದು ನಂಬಿದ್ದರು. ಮಳೆಯನ್ನು ಕುರಿತಂತೆ ಇರುವ ಆಚರಣೆಗಳಲ್ಲಿ ರಕ್ತಾರ್ಪಣೆ ಮತ್ತು ಬಲಿಗಳು ಅತ್ಯಂತ ಪ್ರಧಾನ ಪಾತ್ರವಹಿಸುತ್ತಿದ್ದುದನ್ನು ಫ್ರೇಜರ್ ತಮ್ಮ ಗೋಲ್ಡನ್ ಬೋ ಪುಸ್ತಕದಲ್ಲಿ ವಿವರಿಸಿದ್ದಾರೆ(ಮಂಜುನಾಥ ಬೇವಿನಕಟ್ಟಿ, ೨೦೦೭, ಪು.೧೧೬).

ಇಂತಹ ಆಚರಣೆಗಳನ್ನು ಕುರಿತು ತಿಳಿದಾಗ ವಿಸ್ಮಯ ಹಾಗೂ ವಿಪರ್ಯಾಸಗಳೆರಡು ಉಂಟಾಗುತ್ತವೆ. ಕೇವಲ ಭಾರತೀಯ ನೆಲದಲ್ಲಿಯೇ ಮಾತ್ರ ನಿಕೃಷ್ಟ ಹಾಗೂ ನಿರ್ಲಿಪ್ತ ಸ್ಥಿತಿಯ ಆಚರಣೆಗಳು ಕಂಡುಬರುತ್ತವೆ ಎನ್ನುವಂತಿಲ್ಲ.

ಹೀಗೆ ಮಾನವನ ಬದುಕಿನುದ್ದಕ್ಕೂ ಹಲವಾರು ಆಚರಣೆಗಳು ನಡೆಯುತ್ತಲೇ ಇರುತ್ತವೆ. "ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ"( ಸಿದ್ಧಲಿಂಗಯ್ಯ, ೧೯೯೭, ಪು.೭೧). ಸಿದ್ಧಲಿಂಗಯ್ಯನವರು ಗ್ರಾಮದೇವತೆಗಳು ಎಂಬ ಪುಸ್ತಕದಲ್ಲಿ ವ್ಯಾಖ್ಯಾನ ನೀಡಿದ್ದಾರೆ. ಇಂತಹ ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವಂತೆ, ಮೇಲಿನ ಎಲ್ಲ ರೀತಿಯ ಆಚರಣೆಯ ಒಳನೋಟವನ್ನು ಗಮನಿಸಿದಾಗ ಪ್ರತಿಯೊಂದು ಆಚರಣೆಯ ಉದ್ದೇಶ ಭಿನ್ನವಾಗಿರುತ್ತದೆ.

ಆಚರಣೆಗಳನ್ನು ಮೊದಲುಗೊಂಡು ಮಳೆ ಬೆಳೆಗಾಗಿ ನಡೆಸುವ ಈ ಆಚರಣೆಗಳಲ್ಲಿ ಊರುಕೇರಿಯ ಒಳಿತಿಗೆ ಸಂಬಂಧಿಸಿದ ಧ್ಯೇಯೋದ್ದೇಶಗಳಿವೆ. ಸುಖ, ಸಂಮೃದ್ಧಿ, ಶಾಂತಿಯ ಸಂಕೇತವಾಗಿವೆ. ಹಳ್ಳಿಯ ಜನ ಸುಗ್ಗಿ ಆಚರಿಸುವ ಕಾಲವಿದು. ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆಗಳೇ ಹೆಚ್ಚು. ಇವು ಸಂಸ್ಕೃತಿಯನ್ನು ಬಿಂಬಿಸುವುದರ ಜೊತೆಗೆ ಮನೋಲ್ಲಾಸವನ್ನು ನೀಡುತ್ತಾ ಬಂದಿವೆ. ದೇವ ಸ್ಮರಣೆಯ ಜೊತೆ ಜೊತೆಗೆ ಬಂಧು ಬಾಂಧವರ ಸಾಮೀಪ್ಯವನ್ನು ಒದಗಿಸುತ್ತವೆ.

ಇಂತಹ ಆಚರಣೆಗಳು ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ. ಡಾ. ದೇ.ಜ.ಗೌ ಹೇಳುವಂತೆ ಮಾನವ ಜೀವನವನ್ನು ರೂಪಿಸುವಲ್ಲಿ ಬಾಳಿನ ಅವಿಭಾಜ್ಯ ಅಂಗಗಳಾಗಿವೆ. ಸಮಾಜವನ್ನು ಒಂದುಗೂಡಿಸುವ ಮತ್ತು ಮುಂದಕ್ಕೊಯ್ಯುವ ಶಕ್ತಿಪುಂಜಗಳಾಗಿವೆ. ಅವನ ನಡಾವಳಿ ಹಾಗೂ ವ್ಯವಹಾರಗಳು ಸಂಪ್ರದಾಯ ಬದ್ಧವಾಗಿಯೇ ಜರುಗುತ್ತವೆ. ಭೌಗೋಳಿಕ ಮತೀಯ ಹಾಗೂ ಸಾಂಸ್ಕೃತಿಕ ಪರಿಸರದ ಹಿನ್ನೆಲೆಯಲ್ಲಿ ಆಯಾ ಜನರ ಮನೋಧರ್ಮವನ್ನವಲಂಬಿಸಿ

ಸಂಪ್ರದಾಯಗಳು ಅಥವಾ ಆಚರಣೆಗಳು ಉಗಮಗೊಳ್ಳುತ್ತವೆ. ಇವುಗಳನ್ನು ಜೀವನಾವರ್ತನ ಆಚರಣೆಗಳು ಹಾಗೂ ವಾರ್ಷಿಕಾವರ್ತನ ಆಚರಣೆಗಳೆಂದು ವಿಂಗಡಿಸಿಕೊಂಡು ಅಧ್ಯಯನಕ್ಕೊಳ ಪಡಿಸಲಾಗಿದೆ.

## ೫.೧. ಜೀವನಾವರ್ತನದ ಆಚರಣೆಗಳು

ಆಚರಣೆಗಳಿಲ್ಲದೆ ಮನುಷ್ಯನಿಲ್ಲ. ಹುಟ್ಟಿದ ಮಗುವಿನಿಂದ ಹಿಡಿದು ಸಾಯುವವರೆಗೂ ನಾವು ಆಚರಿಸುವ ಜನಪದ ಆಚರಣೆಗಳೆಲ್ಲಾ ವೈಜ್ಞಾನಿಕತೆಗೆ ಸಂಬಂಧಿಸಿದ್ದಾಗಿವೆ. ನಾವು ಯಾವುದನ್ನೂ ತುಚ್ಚ ಎಂದು ಹೇಳಲಿಕ್ಕಾಗುವುದಿಲ್ಲ. ಹುಟ್ಟಿದಾಗ ೩ ದಿನಕ್ಕೆ, ೫ ದಿನಕ್ಕೆ, ೯ ದಿನ, ೧೬ ದಿನದ ತನಕ, ಹಾಗೆಯೇ ದೊಡ್ಡವರಾದಾಗ ೫, ೯–೧೬ ಹಾಗೆಯೇ ಮದುವೆ ಸಂದರ್ಭದಲ್ಲಿ ಗರ್ಭಿಣಿಯಾದ ಸಂದರ್ಭದಲ್ಲಿ ಮತ್ತು ಬಾಣಂತಿಯಾದ ಸಂದರ್ಭದಲ್ಲಿ ದಿವಸಗಳಾಗಲೀ, ಬಳಸಲ್ಪಡುವ ವಸ್ತುಗಳಾಗಲೀ, ದಿನಿಸುಗಳಾಗಲಿ ಯಾವುದನ್ನೇ ತೆಗೆದುಕೊಂಡರೂ ಲೆಕ್ಕಾಚಾರದ ಸಂಕೇತವಾಗಿ ಸರಿ ಬೆಸಸಂಖ್ಯೆಯ ಲೆಕ್ಕವಾಗಿ ಮನಸ್ಸಿನ ಆಸೆಗಳನ್ನು ಈಡೇರಿಸುವ, ಮನಸ್ಸಿನ ತೃಪ್ತಿ ಹೊಂದುವ ಮತ್ತು ವೈಜ್ಞಾನಿಕತೆಗೆ ಸಂಬಂಧಿಸಿದಂತೆ ಅವುಗಳನ್ನೇ ಕಾಣುತ್ತೇವೆ. ಆರೋಗ್ಯದ ದೃಷ್ಟಿಯಿಂದ ಹಾರೈಕೆಯ ದೃಷ್ಟಿಯಿಂದ ಕೆಟ್ಟ ದೃಷ್ಟಿತಾಕದೇ ಒಳ್ಳೆತನದ ಹಾದಿಯ ದೃಷ್ಟಿಯಿಂದ ಕಾಣುವ ದೃಷ್ಟಿಯಿಂದ ಪ್ರಕೃತಿಗೆ ಹೊಂದಿಕೊಳ್ಳುವ ದೃಷ್ಟಿಯಿಂದ ಇವುಗಳನ್ನು ಕಾಣುವುದಾಗಿದೆ. ಒಂದಕ್ಕೊಂದು ಪೂರಕ ಅಂಶಗಳನ್ನು ಜೀವನಾವರ್ತನದ ಆಚರಣೆಗಳಲ್ಲಿ ಕಾಣುತ್ತೇವೆ.

ಊರಿನ ಪ್ರತಿಯೊಂದು ಮನೆಯಲ್ಲಿ ಸಮುದಾಯಗಳಲ್ಲಿ ಮಂಗಳ ಕಾರ್ಯ ನಡೆದರೆ ಮೊದಲಿಗೆ ಮನೆಯದೇವರಿಗೆ ಪೂಜೆಸಲ್ಲಿಸಿ ಕಾರ್ಯವನ್ನು ಮುಂದುವರೆಸುತ್ತಾರೆ. ಅಪಾಯ ಹಾಗೂ ಸಂಕಷ್ಟದ ಪರಿಸ್ಥಿತಿಯಲ್ಲಿ ಮಾನವ ದೇವರ ಮೊರೆ ಹೋಗುವುದು ಸಾಮಾನ್ಯವಾಗಿದೆ. ಆಗ ಅವರ ದೇವರಿಗೆ ಹರಕೆ ಹೊರುತ್ತಾರೆ. ಹರಕೆ ಅಂದರೆ ಅಂದುಕೊಂಡಿದ್ದನ್ನು ತೀರಿಸುವುದು. ಹೊತ್ತ ಹರಕೆಯನ್ನು ಒಳ್ಳೆಯ ಸಂದರ್ಭದಲ್ಲಿ ತೀರಿಸುತ್ತಾರೆ. ಜನನ, ನಾಮಕರಣ, ಜವಳ ಕಾರ್ಯಕ್ರಮ, ಮೈನೆರೆದಾಗ, ವಿವಾಹದ ಸಂದರ್ಭದಲ್ಲಿ ಹಾಗೂ ಮರಣ ಇಂತಹ ಸನ್ನಿವೇಶಗಳು ಹರಕೆಯನ್ನು ತೀರಿಸಲು ಸಹಕಾರಿಯಾಗಿವೆ. ಆದರೆ ಕೆಲವೊಮ್ಮೆ ತನ್ನೂರ ದೈವಗಳಿಗೆ ಮಾಡಿಕೊಂಡ ಹರಕೆ ವಿಫಲವಾದರೆ, ಬೇರೆ ಊರಿನ ಮತ್ತೊಂದು ದೇವತೆಗೆ ಹರಕೆ ಹೊರುತ್ತಾರೆ. ಉದಾ: ಧರ್ಮಸ್ಥಳ ಮಂಜುನಾಥ, ಮಂತ್ರಾಲಯ ರಾಘವೇಂದ್ರ, ಸವದತ್ತಿ ಎಲ್ಲಮ್ಮ ಮುಂತಾದ ದೈವಗಳಿಗೆ ಹರಕೆ ಹೊರುವ ಜನರಿದ್ದಾರೆ.

ಯಾವುದೋ ಒಂದು ಅಗೋಚರವಾದ ಶಕ್ತಿ ನಮ್ಮನ್ನು ಕಾಯುತ್ತಿರುತ್ತದೆ ಎಂದು ಪ್ರತಿಯೊಬ್ಬ ಮನುಷ್ಯರು ಆಚರಣೆಯನ್ನು ಕೈಗೊಳ್ಳುತ್ತಾರೆ. ಹಾಗಂತ ಆಚರಣೆಗಳಿಗೂ ಅಗೋಚರ ಶಕ್ತಿಗೂ

ಸಂಬಂಧವಿಲ್ಲ ಎಂದು ಹೇಳಲಿಕ್ಕಾಗುವುದಿಲ್ಲ ಅಥವಾ ಇದೆ ಎಂದು ಸಹ ಹೇಳಲಿಕ್ಕಾಗುವುದಿಲ್ಲ. ಹಾಗೇಯೇ ಆಚರಣೆಯಿಲ್ಲದ ಜೀವನವಿಲ್ಲ. ಮನುಷ್ಯ ಸತ್ತ ಮೇಲೂ ಆಚರಣೆಗಳಿರುವುದನ್ನು ಕಾಣುತ್ತೇವೆ. ಏಕೆಂದರೆ ಸತ್ತ ಮೇಲೆ ಮತ್ತೆ ಮರು ಹುಟ್ಟುವಿಕೆಗೆ. ಅಲ್ಲಿಂದ ಮತ್ತೆ ಆಚರಣೆಗಳನ್ನು ಕಾಣುವುದಕ್ಕಾಗಿದೆ. ನಡುಗಡ್ಡೆಗಳಲ್ಲಿ ಸಣ್ಣ ಗುಂಪು ಜನರು ಇದ್ದರೂ ಅಲ್ಲಿರುವ ಸಮುದಾಯಗಳು ಸ್ವಲ್ಪ ಇದ್ದರು ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ ಆಚರಣೆಗಳಿದ್ದರೂ ಅಷ್ಟೊಂದು ಭಿನ್ನವಾಗಿ ಕಂಡುಬರುವುದಿಲ್ಲ. ಸ್ವಲ್ಪ ವ್ಯತ್ಯಾಸ ಕಂಡರು ಸಾಮಾನ್ಯವಾಗಿ ಆಚರಣೆಗಳು ಒಂದು ಸಮುದಾಯದಿಂದ ಇನ್ನೊಂದು ಸಮುದಾಯದಲ್ಲಿ ನೋಡಿದಾಗ ಒಂದೇ ರೀತಿಯಲ್ಲಿರುತ್ತವೆ. ಏಕೆಂದರೆ ಕೆಲವೊಂದು ಆಹಾರ ಪದಾರ್ಥಗಳಲ್ಲಿ ಆಚರಿಸುವ ವಿಧಾನದಲ್ಲಿ ಬೇರೆ ಬೇರೆ ವಿಧಾನದಲ್ಲಿ ಕಂಡು ಬಂದರೂ ಇನ್ನುಳಿದುದೆಲ್ಲಾ ಸಾಮಾನ್ಯವಾಗಿ ಇರುತ್ತವೆ.

**ನಾಮಕರಣ:** ಹುಟ್ಟಿದ ಮಗುವಿಗೆ ನಾಮಕರಣ ಮಾಡುವುದು ಮೊದಲ ಸಂಪ್ರದಾಯ. ಹುಟ್ಟಿದ ಮಗುವು ಸಮಾಜದಲ್ಲಿ ಬೆಳೆಯಲು ಅದಕ್ಕೆ ಒಂದು ನಾಮ ಅಥವಾ ಹೆಸರು ಬೇಕು. ಇಡುವ ಹೆಸರು ಸುಂದರ ಹಾಗೂ ಆಧುನಿಕವಾಗಿರಬೇಕೆಂಬುದು ಈಗಿನ ಕಾಲದ ಬಯಕೆ. ಈ ಪ್ರಕಾರ ದೇವರ ಹೆಸರನ್ನು ಮಗುವಿಗೆ ಇಟ್ಟು ದೀರ್ಘ ಆಯಸ್ಸನ್ನು ಕೋರುವ ವಿಧಿಯೇ ನಾಮಕರಣವಾಗಿದೆ. ನಾಮಕರಣವು ಪ್ರತಿಯೊಂದು ವರ್ಗದಲ್ಲಿ ನಡೆಯುವಂತಹದ್ದಾಗಿದೆ. ಆದರೆ ನಾಮಕರಣ ಮಾಡುವ ವಿಧಾನಗಳು ಸ್ವಲ್ಪ ಬೇರೆ ಬೇರೆಯಾಗಿ ಕಾಣುತ್ತವೆ. ಕೂಸು ಹುಟ್ಟಿದ ೧೫ ದಿನಕ್ಕೋ, ೩ ತಿಂಗಳಿಗೋ, ೫ ತಿಂಗಳಿಗೆ ಅಥವಾ ೨ ವರ್ಷಕ್ಕೆ ಹೀಗೆ ಅವರವರ ಅನುಕೂಲಕ್ಕೆ ತಕ್ಕಂತೆ ನಾಮಕರಣ ಮಾಡುತ್ತಾರೆ. ಸಾಮಾನ್ಯವಾಗಿ ಮಗುವಿಗೆ ನಾಮಕರಣ ಮಾಡಬೇಕಾದರೆ ಒಂದು ಶುಭ ದಿನವನ್ನು ಹುಡುಕಿ ಮನೆಯನ್ನು ಸಾರಿಸಿ ಮನೆಗೆ ತಮ್ಮ ಸುತ್ತಲೂ ಜನರನ್ನು ಕರೆಯಿಸಿ ನೆಂಟರನ್ನು ಕರೆಯಿಸಿ ನಾಮಕರಣ ಮಾಡುತ್ತಾರೆ. ಕೆಲವೊಂದು ಸಮಾಜದಲ್ಲಿ ವಿಶೇಷವಾದ ಅಡುಗೆ ತಯಾರಿಸಿ ಊಟವನ್ನು ಸಹ ಹಾಕುತ್ತಾರೆ. ಲಿಂಗಾಯಿತರ ಸಮಾಜದಲ್ಲಿ ಮಗುವಿಗೆ ನಾಮಕರಣ ಮಾಡಲು ಅಯ್ಯನವರನ್ನು ಕರೆಸುತ್ತಾರೆ. ಅವರು ಪಂಚಾಕ್ಷರಿ ಮಂತ್ರವನ್ನು ಬೋಧಿಸಿ ಮಗುವಿಗೆ ಹೆಸರನ್ನು ಇಡುತ್ತಾರೆ. ಸಾಮಾನ್ಯವಾಗಿ ಗುರುಬಸಯ್ಯ, ರುದ್ರಯ್ಯ, ಲಿಂಗಯ್ಯ, ಮಹಾದೇವಿ, ನೀಲಮ್ಮ ಇಂತಹ ಹೆಸರುಗಳನ್ನು ಇಡುತ್ತಾರೆ. ಇವರು ಕೂಸು ಹುಟ್ಟಿದ ಐದು ತಿಂಗಳು ಇಲ್ಲವೇ ಒಂಬತ್ತು ತಿಂಗಳಿಗೆ ನಾಮಕರಣ ಮಾಡುತ್ತಾರೆ. ನಾಮಕರಣವಾದ ಮೇಲೆ ತೊಟ್ಟಿಲಲ್ಲಿ ಹಾಕುತ್ತಾರೆ.

ಕೆಳವರ್ಗದಲ್ಲಿ ತಂದೆ, ಸೋದರ ಮಾವ ಮೂರು ತಿಂಗಳ ಹದಿನಾರು ದಿವಸದವರೆಗೆ ಮುಖ ನೋಡಬಾರದೆಂದು ಹೇಳುತ್ತಾರೆ. ಅದಕ್ಕೆ ತೊಟ್ಟಲು ಶಾಸ್ತ್ರದ ದಿನದಂದು ಏನಾದರೂ ದಾನ ಮಾಡಬೇಕು. ಕೆಲವರು ಹೆಚ್ಚಾಗಿ ದವಸ, ಧಾನ್ಯ, ಬೆಳ್ಳಿ, ಬಂಗಾರ, ವಸ್ತ್ರ, ಗೋವುಗಳನ್ನು

ದಾನಮಾಡುತ್ತಾರೆ. ಇವರಲ್ಲಿ ಹೆಸರು ಇಡುವಾಗ ಸೋದರ ಮಾವ ಸೋದರ ಅತ್ತೆಯವರು ನಾಮಕರಣ ಮಾಡುತ್ತಾರೆ. ತೊಟ್ಟಿಲಲ್ಲಿ ಹಾಕಿ ಮಗುವಿಗೆ ಕಿವಿಯಲ್ಲಿ ಮೂರು ಸಾರಿ ಹೇಳುತ್ತಾರೆ. ಬಂದವರು ತಟ್ಟೆಯಲ್ಲಿ ಅಕ್ಕಿಯನ್ನು ತಂದಿರುತ್ತಾರೆ. ಹನುಮಪ್ಪ, ಗದ್ದೆಮ್ಮ, ದ್ಯಾಮವ್ವ, ದುರಗಮ್ಮ, ಸಂಗಮನಾಥ, ನೀಲಕಂಠ, ಗಂಗಮ್ಮ, ಗೌರಮ್ಮ ಮುಂತಾದ ಹೆಸರುಗಳನ್ನು ಇಡುತ್ತಾರೆ. ಅಂದು ಸಮೀಪದ ಬಾವಿಗಳಿಗೆ ಅಥವಾ ನದಿಗಳಿಗೆ ಬಾಣಂತಿಯನ್ನು ಕರೆದುಕೊಂಡು ಹೋಗಿ ಗಂಗೆ ಪೂಜೆ ಮಾಡಿ ನಾಲ್ಕು ಜನ ಮುತ್ತೈದೆಯರಿಗೆ ಕುಂಕುಮಹಚ್ಚಿ ಬಾಣಂತಿಗೂ ಉಡಿ ತುಂಬಿ ಬಾಣಂತಿಯ ಕೈಯಲ್ಲಿ ತುಂಬಿದ ಕೊಡ ಹೊರಸಿಕೊಂಡು ಬರುತ್ತಾರೆ. ಅಲ್ಲಿಯವರೆಗೂ ಮನೆಯಲ್ಲಿ ಅಡುಗೆ ಮನೆಗೆ, ದೇವರ ಮನೆಗೆ ಹೋಗುವಂತಿಲ್ಲ. ಮನೆಯಲ್ಲಿ ಹೂವಿನಿಂದ ಅಲಂಕಾರ ಮಾಡಿದ ತೊಟ್ಟಿಲ ಕೆಳಗೆ ಸ್ವಲ್ಪ ಜೋಳಹಾಕಿ ಅದರ ಮೇಲೆ ಗಂಗೆ ಪೂಜೆ ಮಾಡಿ ತಂದ ಕೊಡವನ್ನು ಇಡುತ್ತಾರೆ. ತೊಟ್ಟಿಲಲ್ಲಿ ಮಂಡಾಳು ಮತ್ತು ನೆನಸಿದ ಕಡ್ಲೆಕಾಳನ್ನು ಗಂಟು ಕಟ್ಟಿ ಮಗುವಿನ ಕಾಲ ಬಳಿ ಇಟ್ಟಿರುತ್ತಾರೆ. ಎಲ್ಲಾ ಸಮುದಾಯಗಳಲ್ಲಿ ಸೊದರ ಮಾವನೋ ಸೋದರತ್ತೆಯೋ ಹೆಸರನ್ನು ಮಗುವಿನ ಕಿವಿಯಲ್ಲಿ ಕೂಗುತ್ತಾರೆ. ಆಗ ಜನರು ಬೆನ್ನಿಗೆ ಗುದ್ದುತ್ತಾರೆ. ಎಲ್ಲಾ ವರ್ಗಗಳಲ್ಲಿ ಮೊದಲು ಮನೆಯ ದೇವರ ಹೆಸರು ಕರೆದು ಹಿರಿಯರ ಹೆಸರು ಜನ್ಮನಾಮದ ಹೆಸರನ್ನು ಕರೆದು ನಂತರ ಪ್ರೀತಿಯಿಂದ ಬೇರೆ ಬೇರೆ ಹೆಸರು ಕರೆಯುತ್ತಾರೆ.

ಮುಸಲ್ಮಾನರಲ್ಲಿ ಅನೇಕ ಸಂಪ್ರದಾಯಗಳಿವೆ. ಮಗು ಹುಟ್ಟಿದ ಕೂಡಲೇ ಕಿವಿಯಲ್ಲಿ ಬಾಂಗ್ ನಮಾಜ್ ಮಾಡುತ್ತಾರೆ. ಆ ತಕ್ಷಣವೇ ಹೆಸರನ್ನು ಇಡುತ್ತಾರೆ. ಹೆಸರನ್ನು ಮುಂದೆ ಬದಲಾಯಿಸಲು ಅವಕಾಶವಿದೆ. ಮಗು ಹುಟ್ಟಿದ ಐದನೇ ದಿನ ಮಗುವಿಗೆ ಅರಿವೆಯನ್ನು ಹಾಕಿ ದೃಷ್ಟಿ ಬೀಳದ ಹಾಗೆ ಮಗುವನ್ನು ಅಲಂಕರಿಸುತ್ತಾರೆ. ಇದಕ್ಕೆ ಛಟ್ನಿ ಎಂದು ಕರೆಯುತ್ತಾರೆ.

**ಋತುಮತಿ:** ಋತುಮತಿ ಎನ್ನುವುದು ಹೆಣ್ಣಿನ ಜೀವನದಲ್ಲಿ ಬರುವ ಮಹತ್ವದ ಘಟ್ಟವಾಗಿದೆ. ಹೆಣ್ಣಿಗೆ ಪ್ರೌಢ ಬರುವುದು. ಈ ಋತುಮತಿ ಆದಾಗ ನಡುಗಡ್ಡೆಗಳಲ್ಲಿ ಋತುಮತಿಯಾದವಳು ಎನ್ನುವುದಕ್ಕೆ "ದೊಡ್ಡವಳಾದಳು" ಎನ್ನುತ್ತಾರೆ. ಋತುಮತಿ ಆದಾಗ ಆಚರಿಸುವಂತಹ ಆಚರಣೆಗಳು ಎಲ್ಲಾ ವರ್ಗದಲ್ಲಿ ಕಂಡುಬರುತ್ತವೆ. ಹೆಣ್ಣು ಋತುಮತಿಯಾದಾಗ ಸೂತಕವನ್ನು ಆಚರಿಸುತ್ತಾರೆ.

ಬ್ರಾಹ್ಮಣರು, ಲಿಂಗಾಯಿತರು ಋತುಮತಿಯಾದ ಹೆಣ್ಣನ್ನು ಮನೆಯ ಒಂದು ಕೋಣೆಯಲ್ಲಿ ಕೂಡಿಸುತ್ತಾರೆ. ನಾಯಕರು, ಹರಿಜನರು, ಕುರುಬರು ಋತುಮತಿಯಾದ ಹೆಣ್ಣನ್ನು ಒಂದು ಮೂಲೆಯಲ್ಲಿ ಕೂಡಿಸುತ್ತಾರೆ.

ಬೇಡರಲ್ಲಿ, ಬ್ರಾಹ್ಮಣರಲ್ಲಿ, ಲಿಂಗಾಯತರಲ್ಲಿ ಹುಡುಗಿಗೆ ನೀರು ಹಾಕುವ ಸಂದರ್ಭದಲ್ಲಿ ಸೋದರ ಅತ್ತೆಯರು ನೀರು ಹಾಕುತ್ತಾರೆ. ಸ್ನಾನ ಮಾಡಿಸುವ ಮೊದಲು ಮುತ್ತೈದೆಯರು ಹಾಲು,

ತುಪ್ಪ ತಲೆಗೆ ಹಚ್ಚಿ ಎಣ್ಣೆ ಹಾಕಿ ಅರಿಶಿನ ಹಚ್ಚಿ ಸ್ನಾನ ಮಾಡಿಸುತ್ತಾರೆ. ಆಕೆಯ ಬಟ್ಟೆಯನ್ನು ಅಗಸರು ಒಗೆದು ತಂದಿರುತ್ತಾರೆ. ಆ ಬಟ್ಟೆಯನ್ನು ಹಾಕಿ ಪೂರ್ವ ದಿಕ್ಕಿಗೆ ಮುಖ ಮಾಡಿಕೂಡಿಸುತ್ತಾರೆ. ಆಕೆಯನ್ನು ಮುಟ್ಟದೇ ಎಲೆ, ಅಡಿಕೆ, ಉಡಿ ತುಂಬಿ ಆರತಿ ಮಾಡುತ್ತಾರೆ. ಋತುಮತಿಯಾದ ಹುಡುಗಿಯನ್ನು ಬಿಟ್ಟು ಬೇರೆ ಯಾರು ಜೊತೆಗೆ ಕುಳಿತುಕೊಳ್ಳುವುದಿಲ್ಲ. ಋತುಮತಿ ಉಟ್ಟ ಬಟ್ಟೆಯನ್ನು ಅಗಸರಿಗೆ ಕೊಡುತ್ತಾರೆ. ಅಕ್ಕಿ, ಗೋಧಿ, ಬೆಲ್ಲ, ಕಾಯಿ, ಎಲೆ, ಅಡಿಕೆ, ಕುಂಕುಮ, ದಕ್ಷಿಣೆ ಕೊಡುತ್ತಾರೆ.

ಹುಡುಗಿ ದೊಡ್ಡವಳಾದಾಗ ಕೊಬ್ಬರಿ, ಬೆಲ್ಲ, ಎಳ್ಳನ್ನು ತಿನ್ನಲು ಎಲ್ಲಾ ಸಮುದಾಯದಲ್ಲಿ ಕೊಡುವುದು ಕಂಡು ಬರುತ್ತದೆ. ಐದು ದಿನದವರೆಗೆ ಮುತ್ತೈದೆಯರೆಲ್ಲಾ ಸೇರಿ ಆರತಿ ಮಾಡುತ್ತಾರೆ. ಎಲ್ಲಾ ಸಮುದಾಯದಲ್ಲಿ ಐದು ದಿನದವರೆಗೆ ಯಾರು ಮುಟ್ಟಿಸಿಕೊಳ್ಳುವುದಿಲ್ಲ. ಐದು ದಿನಕಳೆದ ನಂತರ ಅಂದು ಮನೆ ದೇವರಿಗೆ ಪೂಜೆ ಮಾಡಿ ಆಕೆಯನ್ನು ಮನೆಯೊಳಗೆ ಕರೆದುಕೊಳ್ಳುತ್ತಾರೆ. ಐದನೇ ದಿನದಂದು ಆಕೆಗೆ ವಿವಿಧ ಬಗೆಯ ವೇಷ ಭೂಷಣಗಳನ್ನು ಹಾಕಿ ಕೂಡಿಸುವ ಸಂಪ್ರದಾಯ ಬ್ರಾಹ್ಮಣ, ಲಿಂಗಾಯತರಲ್ಲಿ ಕಂಡುಬರುತ್ತದೆ. ಉಳಿದ ನಾಯಕರು, ಹರಿಜನರಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ಇದಕ್ಕೆ ಅವರ ಆರ್ಥಿಕ ಪರಿಸ್ಥಿತಿಯೂ ಕಾರಣ. ಚೆನ್ನಾಗಿ ಇರುವವರು ಈ ವರ್ಗದಲ್ಲಿ ವೇಷಭೂಷಣ ಹಾಕಿ ಭರ್ಜರಿಯಾಗಿ ಆಚರಿಸುತ್ತಾರೆ. ಕೆಲವರು ಒಂಭತ್ತು, ಹನ್ನೊಂದು, ಹದಿನಾರು ದಿನಗಳವರೆಗೆ ಕೂಡಿಸುತ್ತಾರೆ. ಹೆಚ್ಚಾಗಿ ಒಂಭತ್ತು ದಿನಗಳವರೆಗೆ ಕೂಡಿಸುತ್ತಾರೆ. ಕೊನೆಗೆ ಸೀರೆ, ಕುಪ್ಪಸ ತಂದು ಹುಡುಗಿ ಕೈಯಿಂದ ಮುಟ್ಟಿಸಿ ಆರತಿ ಮಾಡುತ್ತಾರೆ. ಮೈನೆರತ ಹಾಡು ಹೇಳಿ ಆರತಿ ಮಾಡಿ ಗಡ್ಡೆಯಲ್ಲಿರುವ ಪ್ರಮುಖ ದೇವಸ್ಥಾನಕ್ಕೆ ಕಳಿಸಿ ಪೂಜೆ ಮಾಡಿಸಿ ಮನೆಗೆ ಕರೆದುಕೊಂಡು ಬರುತ್ತಾರೆ. ನಡುಗಡ್ಡೆಗಳಲ್ಲಿ ಬಹಳಷ್ಟು ಜನ ದೇವರಿಗೆ ಕಳಿಸುವ ಬದಲು ನದಿಗೆ ಕಳಿಸಿ ಗಂಗೆ ಪೂಜೆ ಮಾಡಿಸಿ ಮನೆಗೆ ಕರೆದುಕೊಂಡು ಬರುತ್ತಾರೆ.

**ವಿವಾಹ:** ಕುಟುಂಬ ರಚನೆಯ ಚಾಲನಾಶಕ್ತಿಯೇ ಮದುವೆ. ಹೊಸ ಸಂಬಂಧವಾದಲ್ಲಿ ವಿಭಿನ್ನ ಗೋತ್ರದಲ್ಲಿ ಮದುವೆ ನಡೆಯುತ್ತದೆ. ಅಕ್ಕನ ಮಗಳು, ಸೋದರಮಾವನ, ಸೋದರತ್ತೆಯ ಮಗಳು ಮದುವೆಗೆ ಹಿಂದೂ ಸಮಾಜದಲ್ಲಿ ಒಪ್ಪಿಗೆ ಇದೆ. ಅಣ್ಣ ತಂಗಿಯರ ಮಧ್ಯೆ ಮದುವೆ ನಿಷಿದ್ಧ. ಗಂಡು ಹೆಣ್ಣುಗಳ ಜಾತಕ ಸರಿಬಂದರೆ ಮದುವೆಗೆ ಒಪ್ಪಿಗೆ ಸಿಗುತ್ತದೆ ಮತ್ತು ಇವರಿಬ್ಬರ ಕುಲಗಳು ಒಂದೇ ಆಗಬಾರದು ಬೇರೆ ಬೇರೆ ಆಗಿರಬೇಕು. ಹಿಂದೆ ರಕ್ತಸಂಬಂಧದಲ್ಲಿ ಹೆಚ್ಚಾಗಿ ಮದುವೆಗಳು ನಡೆಯುತ್ತಿದ್ದವು. ಇದರಿಂದ ಸಂಬಂಧ ಗಟ್ಟಿಗೊಳ್ಳುತ್ತದೆ ಎಂಬ ನಂಬಿಕೆ ಜನಪದರಲ್ಲಿತ್ತು. ನಡುಗಡ್ಡೆಗಳಲ್ಲಿ ಈಗಲೂ ಬಾಲ್ಯವಿವಾಹಗಳು ಅತಿಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತವೆ. ಹಿಂದೂಗಳಲ್ಲಿ ಮದುವೆಗಳನ್ನು ಮದುಮಗನಿಗೆ ಕನ್ಯಾದಾನವೆಂದು ಕೊಡುಗೆಯ ರೂಪದಲ್ಲಿ ಮದುವೆ ಮಾಡಿಕೊಡುವ ಸಂಪ್ರದಾಯವಿದೆ. ಮದುವೆಯು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ಅಥವಾ ಕೆಲವು ಗಂಡಿನ

ಮನೆಯಲ್ಲಿ, ಕೆಲವು ಸಮುದಾಯಗಳಲ್ಲಿ ಮೊದಲೇ ನಿಶ್ಚಯಿಸಿದಂತೆ ನಡೆಸುವದು ಸಂಪ್ರದಾಯವಾಗಿದ್ದು, ಇತ್ತೀಚಿನ ದಿನಗಳಲ್ಲಿ ದೇವಸ್ಥಾನಗಳಲ್ಲಿ, ಮಠಗಳಲ್ಲಿ ಇಲ್ಲವೆ ಸಾಮೂಹಿಕ ವಿವಾಹಗಳಲ್ಲಿ ಮದುವೆಗಳು ನಡೆಯುತ್ತವೆ.

ಲಿಂಗಾಯಿತರು ನೆರವೇರಿಸುವ ಮದುವೆಗಳಲ್ಲಿ ಹೋಮಕ್ಕೆ ಅವಕಾಶವಿರುವುದಿಲ್ಲ. ಇದಕ್ಕೆ ಬದಲಾಗಿ ಪಂಚಕಲಶ ಅಂದರೆ ಪವಿತ್ರ ಬಿಂದಿಗೆಗಳ ಪ್ರತಿಷ್ಠಾಪನೆಯಾಗುತ್ತದೆ. ವೀರಭದ್ರ ಕುಲದೇವತೆಯನ್ನು ಆರಾಧಿಸುವ ಕೆಲವು ಕುಟುಂಬಗಳು ಮದುವೆಯ ಮೊದಲು ಗುಗ್ಗಳ ಸೇವೆಯನ್ನು ಕೈಗೊಳ್ಳುವರು. ಆದರೆ ನಡುಗಡ್ಡೆಗಳಲ್ಲಿ ಯಾವ ಗುಗ್ಗಳ ಮದುವೆಗಳು ನಡೆದಿಲ್ಲ ಎಂದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ಬೇಡ, ಕುರುಬ, ಒಕ್ಕಲಿಗ ಇನ್ನು ಅನೇಕ ಸಮುದಾಯಗಳಲ್ಲಿ ಮದುವೆಯ ಮೊದಲು ಒಂದು ಕಂಬವನ್ನು ನಿಲ್ಲಿಸಿ ಅದಕ್ಕೆ ತಾಳಿಕಟ್ಟುತ್ತಾರೆ. ಇದಕ್ಕೆ ಹಾಲುಗಂಬ ಎಂದು ಕರೆಯುತ್ತಾರೆ. ಇದನ್ನು ಮನೆಯ ಸಾಸಕಟ್ಟೆ ಮೇಲೆ ನೆಡುತ್ತಾರೆ. ಮಾಂಗಲ್ಯ ಕಟ್ಟುವುದಕ್ಕೆ ಮುಂಚೆ ಇದಕ್ಕೆ ವಾಡಿಕೆಯಂತೆ ಪೂಜಾವಿಧಿಗಳನ್ನು ಸಲ್ಲಿಸುತ್ತಾರೆ. ತೆರಪದ್ಧತಿ ಹಾಗೂ ವರದಕ್ಷಿಣೆ ಪಿಡುಗು ನಡುಗಡ್ಡೆಗಳಲ್ಲಿ ಮತ್ತು ಅನೇಕ ಸಮುದಾಯಗಳಲ್ಲಿರುವುದು ಕಂಡುಬರುತ್ತದೆ. ಬ್ರಾಹ್ಮಣರಲ್ಲಿ ಗಂಡು ಹೆಣ್ಣಿನ ಜಾತಕ ಕೂಡಿಬಂದರೆ ವಿವಾಹ ನಿಷ್ಕರ್ಷೆಯಾಗುತ್ತದೆ. ಕೆಲವರಲ್ಲಿ ಎದುರು ಬದುರು ಕೊಡುವ ಪದ್ಧತಿಯೂ ಇದೆ. ಇವತ್ತಿಗೂ ನಡುಗಡ್ಡೆಗಳಲ್ಲಿ ಅಂತರ ಸಮೂಹ ವಿವಾಹಗಳು ನಡೆಯುವುದಿಲ್ಲ.

**ಕನ್ಯಾ ನೋಡುವ ಶಾಸ್ತ್ರ:** ಬೇಡರಿಂದ ಹಿಡಿದು ವೈಶ್ಯ, ವೀರಶೈವ ಅನೇಕ ಸಮುದಾಯಗಳಲ್ಲಿ ವಧುವಿದ್ದಕಡೆಗೆ ವರನು ಕನ್ಯಾನೋಡಲು ಹೋದರೆ, ಬ್ರಾಹ್ಮಣರಲ್ಲಿ ವರನಿರುವ ಕಡೆಗೆ ವಧುವು ಹೋಗಬೇಕು. ಹೀಗೆ ಹೋಗುವಾಗ ಹೆಣ್ಣಿಗೆ ಹೂವು ತೆಗೆದುಕೊಂಡು ಹೋಗುತ್ತಾರೆ. ಬೆಡಗು, ಗೋತ್ರ ನೋಡಿ ಮದುವೆ ಮಾಡುತ್ತಾರೆ. ವೀರಶೈವರಲ್ಲಿ ಕೈಬೆರಳುಗಳಿಗೆ ದಾರಹಿಡಿದು ಅಳತೆ ನೋಡುವುದು ರೂಢಿಯಲ್ಲಿದೆ. ಕನ್ಯಾ ವರನ ಮನಸ್ಸಿಗೆ ಬಂದರೆ ಆಮೇಲೆ ಗಂಡಿನವರ ಮನೆಗೆ ಮನೆತನ ನೋಡಲು ಹೋಗುತ್ತಾರೆ. ಮನೆತನ ಒಪ್ಪಿಗೆಯಾದಲ್ಲಿ ಅವರವರ ಅನುಕೂಲದ ಮೇಲೆ ಮಾತುಕತೆ ಕೊಡುವ ತೆಗೆದುಕೊಳ್ಳುವ ವಿಚಾರ ನಡೆಯುತ್ತದೆ. ಈ ಹಿರಿಯರ ಸಮ್ಮುಖದಲ್ಲಿ ಅವರವರ ಅನುಕೂಲದ ಮೇರೆಗೆ ಮದುವೆ ದಿನ ನಿಶ್ಚಿತಾರ್ಥ ದಿನಗೊತ್ತುಪಡಿಸಲು ಹಿರಿಯರು ತಿಳಿಸುತ್ತಾರೆ.

**ನಿಶ್ಚಿತಾರ್ಥ:** ನಿಗದಿಪಡಿಸಿದ ದಿನದಂದು ಒಂದು ಹೆಣ್ಣನ್ನು ಗಂಡಿಗೆ ಮದುವೆಯಾಗಲು ನಿಶ್ಚಯ ಮಾಡುವ ದಿನವಾಗಿದೆ. ಈ ಕಾರ್ಯ ಎಲ್ಲಾ ಸಮುದಾಯಗಳಲ್ಲಿ ಕಂಡುಬರುತ್ತದೆ. ಇದನ್ನು ಹೆಣ್ಣಿನ ಮನೆಯಲ್ಲಿ ಮಾಡುತ್ತಾರೆ. ಆಯಾ ಸಮುದಾಯದ ಹಿರಿಯರು ಹೆಣ್ಣನ್ನು ಕೂಡಿಸಿ

ತಾಂಬೂಲವನ್ನು ನೀಡುತ್ತಾರೆ. ಅದನ್ನು ಗಂಡಿನವರು ಹೆಣ್ಣಿನವರು ಸ್ವೀಕರಿಸಿದರೆ ಮಾತಾಡಿದಂತೆ. ಬ್ರಾಹ್ಮಣರು ಹೆಣ್ಣಿನ ಮನೆಯಲ್ಲಿಯೇ ಧಾರೆ ಎರೆಯುತ್ತಾರೆ. ಲಿಂಗಾಯಿತರು, ನಾಯಕರು, ಹರಿಜನರ ಗಂಡಿನ ಅಥವಾ ಹೆಣ್ಣಿನ ಮನೆಯಲ್ಲಿ ಮದುವೆ ಆಗುತ್ತದೆ. ಆದರೆ ನಡುಗಡ್ಡೆಗಳಲ್ಲಿ ಆಧುನಿಕತೆಯ ವೈಭವವನ್ನು ಮಾಡುವುದಿಲ್ಲ. ಸರಳವಾಗಿ ಮದುಮಗಳನ್ನು ಅಷ್ಟೆ ಕೂಡಿಸಿ ನಿಶ್ಚಿತಾರ್ಥ ಮಾಡುತ್ತಾರೆ. ಗಂಡು ಹೆಣ್ಣನ್ನು ಕೂಡಿಸಿ ಮಾಡುವುದಿಲ್ಲ.

**ಲಗ್ನಪತ್ರಿಕೆ:** ಮೊದಲೆಲ್ಲಾ ಮೇಲಿನ ವರ್ಗದಲ್ಲಿ ಲಗ್ನಪತ್ರಿಕೆ ತಾಂಬೂಲಕೊಟ್ಟು ಕರೆಯುವುದು ವಾಡಿಕೆಯಾಗಿತ್ತು. ಈಗ ಎಲ್ಲಾ ಸಮುದಾಯದವರು ಲಗ್ನಪತ್ರಿಕೆಯನ್ನು ಕೊಟ್ಟು ಕರೆಯುತ್ತಾರೆ. ಆದರೆ ನಡುಗಡ್ಡೆಗಳಲ್ಲಿ ಲಗ್ನಪತ್ರಿಕೆಗಳನ್ನು ಮಾಡಿಸುವುದಿಲ್ಲ. ಮನೆಗೆ ಹೋಗಿ ಹೇಳಿಬರುತ್ತಾರೆ. ಮತ್ತು ತಮ್ಮ ಸಂಬಂಧಿಕರ ಊರುಗಳಿಗೆ ಹೋಗಿ ಸುದ್ದಿಯನ್ನು ಬಾಯಿ ಮಾತಿನ ಮೂಲಕ ಹೇಳಿಬರುತ್ತಾರೆ. ಯಾರು ಒಬ್ಬರು ಇಬ್ಬರು ಆರ್ಥಿಕವಾಗಿ ಮತ್ತು ಅಕ್ಷರಸ್ಥರು ತಮ್ಮ ಕುಟುಂಬದಲ್ಲಿ ಇದ್ದರೆ ಲಗ್ನಪತ್ರಿಕೆ ಮಾಡಿಸುತ್ತಾರೆ. ಇಲ್ಲವಾದರೆ ಬಹಳಷ್ಟು ಜನ ಹಾಗೆ ಮಾಡುತ್ತಾರೆ.

ಲಗ್ನಪತ್ರಿಕೆಯನ್ನು ಮದುವೆ ಒಂದುವಾರ ಮುಂಚೆ ಇರುವಾಗ ಮಾಡಿಸುತ್ತಾರೆ. ಬ್ರಾಹಣರು, ಲಿಂಗಾಯಿತರಲ್ಲಿ ಲಗ್ನಪತ್ರಿಕೆಯನ್ನು ದೇವರ ಮುಂದೆ ಇಟ್ಟು ಪೂಜೆ ಮಾಡಿ, ಲಗ್ನಪತ್ರಿಕೆಯ ಐದು ಮೂಲೆಯಲ್ಲಿ ಕುಂಕುಮ ಹಚ್ಚಿ ಪೂಜೆ ಮಾಡುತ್ತಾರೆ. ನಂತರ ಮೊದಲ ಪತ್ರಿಕೆಯನ್ನು ತಮ್ಮ ಕುಲದೈವದ ಮುಂದೆ ಇಡುತ್ತಾರೆ. ನಂತರ ತಮ್ಮ ಸಮುದಾಯದ ಗುರುವಿಗೆ ನೀಡುತ್ತಾರೆ. ನಂತರ ತಮ್ಮ ಬಂಧು ಬಳಗಕ್ಕೆ ಪತ್ರಿಕೆ ಹಂಚುವ ಕಾರ್ಯಮಾಡುತ್ತಾರೆ. ಹೆಂಗಸರು ತಮ್ಮ ಸಮುದಾಯದ ಹೆಂಗಸರನ್ನು ಕರೆದು ಒಳಕಲ್ಲು ಪೂಜೆಮಾಡಿ ಅದರಲ್ಲಿ ಅಕ್ಕಿ ಹಾಕಿ ಶಾಸ್ತ್ರದ ಪ್ರಕಾರ ಐದು ಜನಮುತ್ತೈದೆಯರು ಬೀಸುವ ಕಲ್ಲಿನ ಪೂಜೆ ಮಾಡುತ್ತಾರೆ. ಐದು ಸೇರು ಅಕ್ಕಿ, ಬೆಲ್ಲ, ಲಗ್ನಪತ್ರಿಕೆ, ಕುಬಸ, ಎಲೆ, ಅಡಿಕೆ, ದಕ್ಷಿಣೆ ತೆಗೆದುಕೊಂಡು ಹೋಗಿ ಗಂಡನ ಮನೆಗೆ ಹೋಗುತ್ತಾರೆ. ಇದನ್ನು ತಂದವರಿಗೆ ಸಿಹಿಯೂಟ ಮಾಡಿಸಿ ಬಟ್ಟೆಕೊಟ್ಟು ಕಳುಹಿಸುತ್ತಾರೆ. ಲಿಂಗಾಯಿತರು ಮದುವೆಗೆ ಮೂರುದಿನ ಮುಂಚೆ ಲಕ್ಷ್ಮಿಪೂಜೆ ಮಾಡುತ್ತಾರೆ. ನಾಯಕರು ಕೂಡಾ ಮಾಡುತ್ತಾರೆ.

**ದೇವರೂಟ:** ಮದುವೆ ಹಿಂದಿನ ದಿನ ಹಂದರ ಹಾಕಿ ಮದುಮಕ್ಕಳನ್ನು ಮಾಡಿ ದೈವದೂಟ ನೀಡುತ್ತಾರೆ. ಆದಕಾರಣ ಈ ಕಾರ್ಯವನ್ನು ದೇವರೂಟ ಅಥವಾ ದೇವತಾಕಾರ್ಯ ಎಂದು ಕರೆಯುತ್ತಾರೆ. ಈ ನಡುಗಡ್ಡೆಗಳಲ್ಲಿ ಹಂದರವನ್ನು ನದಿಯ ದಡದಲ್ಲಿ ಬೆಳೆದಿರುವ ಕಣಗಿನ ತಪ್ಪಲವನ್ನು ತಂದು ಹಾಕುತ್ತಾರೆ. ಸೋದರ ಮಾವ ಹಂದರ ಹಾಕುವ ಕಾರ್ಯಮಾಡುತ್ತಾನೆ. ಮದುವೆ ಮನೆ ಮುಂದೆ ನಾಲ್ಕು ಕಂಬಕ್ಕೆ ಪಣತಿಗಳನ್ನು ಕಟ್ಟಿ ದೀಪವನ್ನು ಹಚ್ಚುತ್ತಾರೆ.

**ಐರಾಣಿ ತರುವುದು:** ಮುಸ್ಲಿಂರನ್ನು ಹೊರತುಪಡಿಸಿ ಬಹುತೇಕ ಸಮುದಾಯಗಳಲ್ಲಿ ಈ ಆಚರಣೆ ಇದೆ. ಐರಾಣಿ ತರುವಾಗ ಕುಂಬಾರರ ಮನೆಯಿಂದ ಅಕ್ಕಿ, ಬೇಳೆ, ಬೆಲ್ಲ ಕೊಟ್ಟು ಸುಣ್ಣದಿಂದ ಚಿತ್ರಗಳನ್ನು ಬಳಿದು ಚಿಕ್ಕಗಡಿಗೆಗಳಿಂದ ಹಿಡಿದು ದೊಡ್ಡ ಗಡಿಗೆಗಳವರೆಗೆ ಎರಡೆರಡರಂತೆ ತಂದು ಅವುಗಳನ್ನು ಗುಡಿಯಲ್ಲಿ ಇಡುತ್ತಾರೆ. ಮೆರವಣಿಗೆಯ ಮೂಲಕ ಅವುಗಳನ್ನು ನದಿಗೆ ತೆಗೆದುಕೊಂಡು ಗಂಗೆಪೂಜೆಮಾಡಿ ನೀರು ತುಂಬಿಸಿಕೊಂಡು ಬಂದು ಹಂದರಗಳಲ್ಲಿ ನಾಲ್ಕು ಮೂಲೆಗಳಿಗೆ ಇಟ್ಟು ಸುರುಗಿ ಸುತ್ತುತ್ತಾರೆ. ಸುರುಗಿಯ ಬಳಿಗೆ ಒಂದು ತಟ್ಟೆಮಣೆ ಒಂದು ಒಣಕೆ ಹಾಕುತ್ತಾರೆ. ಅದರ ಮೇಲೆ ಮದುವೆ ಮಕ್ಕಳನ್ನು ಕೂಡಿಸುತ್ತಾರೆ.

**ಮನೆಗೆ ಛಟ್ಟು ಬಡಿಯೋದು:** ನಡುಗಡ್ಡೆಗಳಲ್ಲಿ ಈ ಪದ್ಧತಿ ಇರುವವರ ಮನೆಯಲ್ಲಿ ಮಾತ್ರ ಮಾಡುತ್ತಾರೆ. ಮನೆಯ ಹೆಣ್ಣು ಮಗಳು ಅಳಿಯಸೇರಿ ಈ ಕಾರ್ಯವನ್ನು ಮಾಡುತ್ತಾರೆ. ಮಗಳು ಎರಡು ಕೈಯಿಂದ ಕೆಮ್ಮಣ್ಣು ಅಥವಾ ಸುರುಮ ಬಣ್ಣದಲ್ಲಿ ಅದ್ದಿ ಗೋಡೆಗೆ ಬಡಿಯುತ್ತಾ ಹೋಗುತ್ತಾಳೆ. ಅಳಿಯ ಬಣ್ಣದ ತಟ್ಟೆ ಮತ್ತು ಹೆಂಡತಿಯ ಸೀರೆಯ ಸೆರಗು ಹಿಡಿದಿರುತ್ತಾನೆ.

**ಬಳೆ ಶಾಸ್ತ್ರ:** ಮದುಮಗಳಿಗೆ ಬಳೆ ಹಾಕಿಸಿದ ನಂತರ ಬಂದ ಮುತ್ತೈದೆಯರಿಗೆಲ್ಲಾ ಬಳೆ ಹಾಕಿಸುತ್ತಾರೆ. ಗಂಡಿನ ಕಡೆಯವರು ಕಾರ್ಯಮಾಡುವವರಿಗೆ ಮೊದಲು ಬಳೆ ಹಾಕಿಸಿ ನಂತರ ಮನೆ ಮಂದಿಗೆಲ್ಲ, ಸಂಬಂಧಿಕರಿಗೆ ನೆರೆಹೊರೆಯ ಹೆಣ್ಣುಮಕ್ಕಳಿಗೆ ಹಸಿರು ಬಳೆಗಳನ್ನು ಹಾಕಿಸುತ್ತಾರೆ. ಸಮೃದ್ಧಿಯ ಸಂಕೇತ ಎಂದು ಹಸಿರು ಬಳೆ ಹಾಕಿಸುತ್ತಾರೆ. ಬಳೆ ಹಾಕಲು ಬಂದ ಬಳೆಗಾರನಿಗೆ ಅಕ್ಕಿ, ಬೇಳೆ, ಬೆಲ್ಲ, ದಕ್ಷಿಣೆ, ಕಾಯಿಕೊಟ್ಟು ಕಳುಹಿಸುತ್ತಾರೆ.

**ಎದುರುಗೊಂಬುವುದು:** ಮದುವೆ ಹೆಣ್ಣಿನ ಮನೆಯಲ್ಲಿ ನಡೆದರೆ ಗಂಡು ಹೆಣ್ಣಿನ ಮನೆಗೆ ಬರುತ್ತಾನೆ. ಗಂಡಿನ ಮನೆಯಲ್ಲಿ ಮದುವೆ ಇದ್ದರೆ ಹೆಣ್ಣು ಗಂಡಿನ ಮನೆಗೆ ಬರುತ್ತಾಳೆ. ಆಗ ಅವರಿಬ್ಬರನ್ನು ದೇವಸ್ಥಾನದ ಛತ್ರದಲ್ಲಿ ಅಥವಾ ಅಗಸಿಯಲ್ಲಿ ಎದುರುಗೊಂಡು ಅವರಿಗೆ ಮನೆಯಲ್ಲಿ ಬಿಟ್ಟು ಊಟೋಪಚಾರ ಮಾಡಿಸುತ್ತಾರೆ. ಬೇಡರು ಹರಿಜನರಲ್ಲಿ ಮಸಿಲೂಟ ಎಂಬುದನ್ನು ಬೀಗರಿಗೆ ಕೊಡುವರು. ಇದರಲ್ಲಿ ಅನ್ನ, ತುಪ್ಪ, ಹೋಳಿಗೆ ಹಾಗೂ ಕುಬಸದ ಕಣವನ್ನು ಜೊತೆಗೆ ಬೆಲ್ಲ ಕೊಬ್ಬರಿ ಕೊಡುತ್ತಾರೆ.

**ಸುರುಗಿ ನೀರುಹಾಕುವುದು:** ಸುರುಗಿ ನೀರು ಹಾಕುವುದು ಎಲ್ಲಾ ವರ್ಗಗಳಲ್ಲಿ ಕಂಡುಬರುತ್ತದೆ. ಮದುವೆ ದಿನ ಬೆಳಿಗ್ಗೆ ಈ ಕಾರ್ಯಕ್ರಮ ನಡೆಯುತ್ತದೆ. ಬ್ರಾಹ್ಮಣರು ಮದುಮಕ್ಕಳ ಜೊತೆಗೆ ತಂದೆ ತಾಯಿಯರು ಅಕ್ಕ ತಂಗಿಯರು ಕೂಡುತ್ತಾರೆ. ಆದರೆ ಬೇಡರು, ಲಿಂಗಾಯಿತರು, ಹರಿಜನರು ಮುಂತಾದ ವರ್ಗದಲ್ಲಿ ಗಂಡು ಹೆಣ್ಣನ್ನು ಒಟ್ಟಿಗೆ ಕೂಡಿಸಿ ಇವರ ಹಿಂದೆ ತಂದೆ ತಾಯಿ ಶಾಸ್ತ್ರಮಾಡುವವರನ್ನು ಕೂಡಿಸಿ ನೀರುಹಾಕುತ್ತಾರೆ. ಮೊದಲು ಐದು ಜನ ಮುತ್ತೈದೆಯರು ಎಣ್ಣೆ

ಅರಿಶಿನ ಹಚ್ಚಿ ಎಲೆ ಅಡಿಕೆ ಕೊಟ್ಟು ಆರತಿ ಮಾಡುತ್ತಾರೆ. ನಂತರ ಅವರಿಬ್ಬರನ್ನು ಹಂದರದ ಕೆಳಗೆ ಮಣೆಹಾಕಿ ಸುರುಗಿಸುತ್ತಿ ನಾಲ್ಕು ಮೂಲೆಯಲ್ಲಿ ತಂಬಿಗೆಯನ್ನು ಇಡುತ್ತಾರೆ. ಚೌಕಾಕಾರವಾಗಿರುವ ತಂಬಿಗೆಗಳಿಗೆ ಬಿಳಿದಾರದಿಂದ ಒಂಭತ್ತು ಎಳೆಯನ್ನು ಸುತ್ತಿ ನೀರು ಹಾಕಿದ ನಂತರ ಅದನ್ನು ತೆಗೆದು ಅರಿಶಿನದ ಕೊಂಬುಕಟ್ಟಿ ಕಂಕಣ ಕಟ್ಟುವರು. ನೀರು ಹಾಕಿದ ನಂತರ ಬಟ್ಟೆಕೊಡುವರು.

**ಬಾಸಿಂಗ ಕಟ್ಟುವುದು:** ಬಾಸಿಂಗವನ್ನು ಕಟ್ಟುವುದು ಬ್ರಾಹ್ಮಣರನ್ನು ಬಿಟ್ಟು ಉಳಿದ ಸಮುದಾಯಗಳಲ್ಲಿ ಕಂಡುಬರುತ್ತದೆ. ಕೆಲವರು ತಮ್ಮ ಅನುಕೂಲಕ್ಕೆ ತಕ್ಕ ಹಾಗೆ ಹೂವಿನ ಬಾಸಿಂಗ, ಮುತ್ತಿನ ಬಾಸಿಂಗ ಕಟ್ಟುವುದನ್ನು ನೋಡಬಹುದು.

ಬ್ರಾಹ್ಮಣರು, ಆರ್ಚಕರು, ಜಂಗಮರು ಮಂತ್ರಹೇಳಿ ತಾಳಿಕಟ್ಟಿಸಿದರೆ ಲಿಂಗಾಯಿತರಲ್ಲಿ ಅವರ ಶಾಸ್ತ್ರಿಗಳು, ಹರಿಜನರು, ದಾಸಯ್ಯನವರು, ನಾಯಕರಲ್ಲಿ ಜಂಗಮರು, ದಾಸಯ್ಯನವರು ತಾಳಿ ಕಟ್ಟಿಸುತ್ತಾರೆ. ತಾಳಿಯಾದ ದಿನವೇ ತುಂಬಿಕೊಡುವ ಪದ್ಧತಿ ಇದೆ. ಅಂದರೆ ಪ್ರಸ್ತಕಾರ್ಯವನ್ನು ಬ್ರಾಹ್ಮಣರು ಮಾಡುತ್ತಾರೆ. ಲಿಂಗಾಯಿತ ವೀರಶೈವರು ಹದಿನಾರು ದಿನ ತಿಂಗಳು ಅಥವಾ ಐದು ತಿಂಗಳೊಳಗೆ ಈ ಕಾರ್ಯಮಾಡುತ್ತಾರೆ. ಆದರೆ ಈಗ ಐದು ತಿಂಗಳ ತನಕ ಬಿಡುವುದಿಲ್ಲ. ಮನೆಯ ಹಿರಿಯರು ಶಾಸ್ತ್ರ ಕೇಳಿಮಾಡಿಸುತ್ತಾರೆ. ಉಳಿದ ಸಮುದಾಯದಲ್ಲಿ ಈ ತೆರನಾದ ಕಾರ್ಯವನ್ನು ವಾರದೊಳಗೆ ಮಾಡುತ್ತಾರೆ. ನಾಯಕರು, ಹರಿಜನರು, ಕುರುಬರ, ಸಮುದಾಯದಲ್ಲಿ ಹಾಸಿಗೆ ಪೂಜೆಮಾಡಿ ಅದರ ಮೇಲೆ ಮದುಮಕ್ಕಳಿಬ್ಬರು ಸೋಬಾನ ಪದ ಹಾಡುತ್ತಾರೆ.

**ಸಾವಿನ ಆಚರಣೆ:** ಪ್ರತಿಯೊಂದು ಸಮುದಾಯದಲ್ಲಿ ವ್ಯಕ್ತಿ ಸತ್ತ ನಂತರ ಅವರ ಬಂಧುಗಳಿಗೆ ಸುದ್ದಿ ತಲುಪಿಸುವರು. ಸಾಮಾನ್ಯವಾಗಿ ಎಲ್ಲಾ ಸಮುದಾಯದಲ್ಲಿ ಜೀವ ಹೋಗುವುದನ್ನು ತಿಳಿದಾಗ ಬಾಯಲ್ಲಿ ನೀರು, ಹಾಲು ಬಿಡುತ್ತಾರೆ. ಬ್ರಾಹ್ಮಣರು, ನಾಯಕರು, ಹರಿಜನರು ಹೆಣವನ್ನು ಮಲಗಿಸಿರುತ್ತಾರೆ. ಹಿಂದುಗಳೆಲ್ಲಾ ಶವವನ್ನು ಸ್ನಾನ ಮಾಡಿಸಿ ಹೊಸಬಟ್ಟೆ ಹಾಕಿ ವಿಭೂತಿ ಧಾರಣೆ ಮಾಡಿ ಕೈಯಲ್ಲಿ ವಿಭೂತಿ ಉಂಡೆಯನ್ನು ಬಿಲ್ವ ಪತ್ರೆಯನ್ನು ಕೊಡುತ್ತಾರೆ. ಕೆಲವರು ಎಲೆ ಅಡಿಕೆಯನ್ನು ಇಡುವರು. ಶವದ ಪಕ್ಕದಲ್ಲಿ ದೀಪ ಕಳಸ ಹಚ್ಚಿ ಇಡುವರು.

ಮುಸ್ಲಿಂರು ಹೆಣವನ್ನು ಮಲಗಿಸುತ್ತಾರೆ. ಮೊದಲು ಶವಸ್ನಾನ ಮಾಡಿಸುತ್ತಾರೆ. ಶವ ಸ್ನಾನ ಮಾಡಿಸುವವರು ಬೇರೆ ಇರುತ್ತಾರೆ. ಅವರನ್ನು ಮುರ್ದಾಸೊ ಎಂದು ಕರೆಯುವರು. ಕುರುಬರು, ನಾಯಕರು, ಹರಿಜನರು ಶವವನ್ನು ಹೂಳುತ್ತಾರೆ. ಬ್ರಾಹ್ಮಣರು ಹೆಣವನ್ನು ಸುಡುತ್ತಾರೆ. ಬ್ರಾಹ್ಮಣರು ಹೆಣವನ್ನು ಬಹಳ ಹೊತ್ತು ಕಾಯಿಸುವುದಿಲ್ಲ. ಉಳಿದ ಸಮುದಾಯದವರು ಬಂಧುಗಳು ಬರುವವರೆಗೂ ಭಜನೆ ಮಾಡುವರು, ಮುಸ್ಲಿಂರು ಖುರಾನ್ ಓದುವರು.

ಎಲ್ಲಾ ಸಮುದಾಯದಲ್ಲಿ ಶವವನ್ನು ಒಯ್ಯುವಾಗ ದುಃಖ ಪೂರಿತವಾದ ರಾಗಗಳ ಮೂಲಕ ಬ್ಯಾಂಡ್ ಬಾರಿಸುತ್ತಾರೆ. ಆದರೆ ನಡುಗಡ್ಡೆಗಳಲ್ಲಿ ಬ್ಯಾಂಡ್‌ಗಿಂತ ಹಲಗೆಗಳೇ ಜಾಸ್ತಿ. ಎಲ್ಲಾ ವರ್ಗಗಳಲ್ಲಿ ಶವವನ್ನು ಒಯ್ಯಲು ಬೇರೆ ಬೇರೆಯಾದ ವಿಧಾನಗಳನ್ನು ಅಳವಡಿಸಿಕೊಂಡಿದ್ದಾರೆ. ಬ್ರಾಹ್ಮಣರು ಹೆಣವನ್ನು ಮಲಗಿಸಿ ಹೊರುತ್ತಾರೆ. ಲಿಂಗಾಯಿತರು ಮಂಟಪದಲ್ಲಿ ಕೂಡಿಸಿ ಒಯ್ಯುತ್ತಾರೆ. ಮಂಟಪವನ್ನು ಅತಿಯಾಗಿ ನಡುಗಡ್ಡೆಗಳಲ್ಲಿ ಅಷ್ಟೊಂದು ಕಾಣಿಸುವುದಿಲ್ಲ. ಕೌದಿ ಮತ್ತು ಚಾದರಗಳಲ್ಲಿ ಸಾಮಾನ್ಯವಾಗಿ ಚಟ್ಟವನ್ನು ಸಿದ್ಧಗೊಳಿಸಿ ಹೆಣವನ್ನು ಒಯ್ಯುವ ಮತ್ತು ಸಿದಿಗಿಯನ್ನು ತಾವೇ ತಯಾರಿಸಿಕೊಳ್ಳುತ್ತಾರೆ.

ಬ್ರಾಹ್ಮಣ ಸಮುದಾಯದಲ್ಲಿ ಶವದ ಹಿಂದೆ ಹೆಣ್ಣುಮಕ್ಕಳು ಹೋಗುವುದಿಲ್ಲ. ಬೇರೆ ಸಮುದಾಯದಲ್ಲಿ ಹೋಗುವುದನ್ನು ಕಾಣಬಹುದಾಗಿದೆ. ಬ್ರಾಹ್ಮಣರು ಹೆಣವನ್ನು ಹೊರಗಡೆ ತಂದು ಸಿದಿಗಿ ಮೇಲೆ ಮಲಗಿಸಿ ಸಂಬಂಧಿಕರಿಂದ ಎಳ್ಳುನೀರನ್ನು ಎಡಗೈ ಮೂಲಕ ಹಾಕಿಸುತ್ತಾರೆ. ನಂತರ ಬೀಗರು ಮೊದಲು ಹೆಗಲು ಕೊಡಬೇಕು. ಶವವನ್ನು ಸ್ಮಶಾನಕ್ಕೆ ಒಯ್ಯುವಾಗ ರಾಮಧ್ಯಾನ ಮಾಡುತ್ತ ತೆಗೆದುಕೊಂಡು ಗಡ್ಡೆಯಲ್ಲಿ ಗುರುತು ಮಾಡಿದ ಸ್ಮಶಾನದಲ್ಲಿ ಅಥವಾ ಜಮೀನುಗಳಲ್ಲಿ ಇಡುತ್ತಾರೆ. ಮೊದಲೇ ಕಟ್ಟಿಗೆಯಿಂದ ಮಾಡಿದ ಮಂಟಪದ ಮೇಲೆ ಮಲಗಿಸುತ್ತಾರೆ. ಸತ್ತವರ ಹಿರಿಯ ಮಗ ಮನೆಯಿಂದ ಗಡಿಗೆಯನ್ನು ಶವದ ಸುತ್ತ ಮೂರು ಸಾರಿ ಪ್ರದಕ್ಷಿಣೆ ಮಾಡಿ ಆ ಗಡಿಗೆಯನ್ನು ಒಡೆಯುತ್ತಾನೆ. ನಡುಗಡ್ಡೆಗಳಲ್ಲಿ ಗಡಿಗೆ ಒಡೆಯುವುದು ಕಂಡುಬರುವುದಿಲ್ಲ.

ನಾಯಕರು, ಹರಿಜನರು, ಕುರುಬರು, ಲಿಂಗಾಯಿತರು ಮುಂತಾದ ಸಮುದಾಯದವರು ಶವವನ್ನು ತೆಗೆದುಕೊಂಡು ಹೋಗಿ ಗಡ್ಡೆಯಲ್ಲಿ ಗೊತ್ತುಮಾಡಿದ ಸ್ಥಳದಲ್ಲಿ ಹೂಳುತ್ತಾರೆ. ಮೊದಲೆ ಕುಣಿಯನ್ನು ತೆಗೆಸಿರುತ್ತಾರೆ. ನಂತರ ಎಲ್ಲರೂ ಹಿಡಿ ಮಣ್ಣನ್ನು ಹಾಕುವರು. ಈ ಸಮುದಾಯಗಳಲ್ಲಿ ಹೆಣದ ಹಿಂದೆ ಸ್ಮಶಾನಕ್ಕೆ ಹೋಗಿ ಹೆಣ್ಣಿನ ಮುತ್ತೈದೆತನವನ್ನು ವಿಧವೆಯವರು ತೆಗೆಯುತ್ತಾರೆ. ಆ ಮುಖ ಯಾರಿಗೂ ಕಾಣದಹಾಗೆ ಮುಚ್ಚಿಕೊಂಡು ಮನೆಗೆ ಕರೆದುಕೊಂಡು ಬರುತ್ತಾರೆ.

ಬ್ರಾಹ್ಮಣರು ತಂದೆ, ತಾಯಿ ಬದುಕಿದ್ದವರು ಸ್ಮಶಾನಕ್ಕೆ ಹೋಗುವುದಿಲ್ಲ. ಒಂದು ವೇಳೆ ಸೊಸೆ ಬಸುರಿಯಾಗಿದ್ದರೆ, ಮಗ ಬೆಂಕಿಕೊಡಲು ಬರುವುದಿಲ್ಲ. ಉಳಿದವರು ಅಗ್ನಿ ಸ್ಪರ್ಶಮಾಡಬಹುದು. ಇವರಲ್ಲಿ ಶವ ಸುಟ್ಟು ಮೂರು ದಿನದ ನಂತರ ಶವದ ಬೂದಿಯನ್ನು ಉಳಿದ ಎಲುಬುಗಳನ್ನು ಒಂದು ಮಡಿಕೆಯಲ್ಲಿ ಹಾಕಿ ಕೃಷ್ಣಾ ನದಿಗೆ ಬಿಟ್ಟುಬರುತ್ತಾರೆ.

ಎಲ್ಲಾ ಸಮುದಾಯದಲ್ಲಿ ಒಂಭತ್ತನೆಯ ದಿನಗಳವರೆಗೆ ಎಲ್ಲಿಗೂ ಹೋಗುವಂತಿಲ್ಲ . ಮುಸ್ಲಿಂರಲ್ಲಿ ಮೂರನೆ ದಿನದಂದು ಕುರಿಯನ್ನು ಬಲಿಕೊಟ್ಟು ಗೋರಿಯ ಬಳಿಗೆ ಹೋಗಿ ಅವರು ತಿನ್ನುವ ಮಾಂಸದ ಊಟವನ್ನು ಇಟ್ಟು ಪ್ರಾರ್ಥಿಸುವರು. ಆ ದಿನ ಮನೆಯಲ್ಲಿ ಖುರಾನ್ ಓದುವವರನ್ನು

ಕರೆಯಿಸಿ ಸಂಪೂರ್ಣ ಖುರಾನ್ ಓದಿಸುವರು. ನಂತರ ತಮ್ಮ ಕೈಲಾದಷ್ಟು ದಾನವನ್ನು ಮಾಡುತ್ತಾರೆ. ಕೆಲವರು ೩ ದಿನ ಕಾರ್ಯಮಾಡುತ್ತಾರೆ. ರಂಜಾನ್ ತಿಂಗಳಲ್ಲಿ ಸತ್ತವರ ಹೆಸರಿನಲ್ಲಿ ಪಿತೃಪ್ರದಾನ ಮಾಡುತ್ತಾರೆ. ಮನೆಯಲ್ಲಿ ಎಷ್ಟು ಜನ ಇರುತ್ತಾರೋ, ಅದರಂತೆ ಒಂದು ತಲೆಗೆ ೨೧/೨ ಕೆ.ಜಿ ಗೋಧಿಯನ್ನು ದಾನ ಮಾಡುತ್ತಾರೆ. ಕೆಲವು ಸಮುದಾಯದಲ್ಲಿ ಗಂಧ ಪೂಜೆ ಮಾಡುವುದರ ಮೂಲಕ ಸೂತಕ ಕಳೆಯುತ್ತಾರೆ. ಎಲ್ಲಾ ಸಮುದಾಯದವರು ತಿಥಿಯ ಪೂರ್ವದಲ್ಲಿ ಮನೆಗಳಿಗೆ ಸುಣ್ಣ ಬಳಿಸುತ್ತಾರೆ. ಶ್ರಾದ್ಧದ ದಿನ ಬ್ರಾಹ್ಮಣರು ಜನಿವಾರ ಬದಲಾಯಿಸಿಕೊಂಡು ಪಿಂಡ ಪ್ರಧಾನ ಮಾಡುತ್ತಾರೆ. ಹರಿಜನರು, ನಾಯಕರು ಮಹಿಳೆಯ ಮುತ್ತೈದೆತನವನ್ನು ತೆಗೆಯುತ್ತಾರೆ. ಮುಸ್ಲಿಂರಲ್ಲಿ ಯಾರಾದರೂ ಸತ್ತಾಗ ತಮ್ಮ ಸಂಬಂಧಿಕರಿಗೆಲ್ಲಾ ಸುದ್ಧಿ ತಿಳಿಸುತ್ತಾರೆ. ಸತ್ತ ಹೆಣವನ್ನು ಶುಚಿಗೊಳಿಸಿ ಬಟ್ಟೆ ಹೊದಿಸುತ್ತಾರೆ. ಶವಕ್ಕೆ ಗಂಧದ ಎಣ್ಣೆ ಹಚ್ಚುತ್ತಾರೆ. ಹೂವನ್ನು ಹಾಕಿ ನಂತರ ನಾಲ್ಕು ಜನ ಹೊತ್ತುಕೊಂಡು ಹೋಗುತ್ತಾರೆ. ಹೆಣವನ್ನು ದಫನ್ ಮಾಡುತ್ತಾರೆ. ಪರ್ಸಿ ಮಾಡುವಾಗ ದಫನ್ ಮಾಡಿದ ಜಾಗಕ್ಕೆ ಹೋಗಿ ಪೂಜೆಸಲ್ಲಿಸಿ ಎಡೆ ಇಡುತ್ತಾರೆ. ಹೆಣವನ್ನು ಮುಟ್ಟುವವರು ಸ್ನಾನ ಮಾಡಿ ಬಂದು ಮುಟ್ಟಬೇಕು. ಒಂದು ವೇಳೆ ಸ್ನಾನ ಮಾಡದೇ ಬಂದಂತಹ ವ್ಯಕ್ತಿಯು ಹೆಣವನ್ನು ಮುಟ್ಟಿದರೆ ಸತ್ತ ವ್ಯಕ್ತಿಯು ಪಾಪಕ್ಕೆ ಹೋಗುತ್ತಾನೆ ಎಂಬುದು ನಂಬಿಕೆ. ಮಹಿಳೆಯರು ದಫನ್ ಕ್ರಿಯೆಯಲ್ಲಿ ಭಾಗವಹಿಸುವುದಿಲ್ಲ. ಅಲ್ಲಿ ಅವರಿಗೆ ಪ್ರವೇಶ ನಿಷಿದ್ಧ. ಪ್ರತಿಯೊಬ್ಬ ಹೆಣ್ಣು ಗಂಡು ಖುರಾನ್ ಓದಲು ಕಲಿತಿರಬೇಕು. ೧೦ ವರ್ಷದ ಒಳಗಾಗಿ ಖುರಾನ್ ಓದು ಕಲಿತಿರಬೇಕು. ಆದರೆ ನಡುಗಡ್ಡೆಗಳಲ್ಲಿ ಖುರಾನ್ ಓದುವುದಿಲ್ಲ. ಹೀಗೆ ನಡುಗಡ್ಡೆಗಳಲ್ಲಿ ಜೀವನಾವರ್ತನ ಆಚರಣೆಗಳು ಕೆಲವೊಂದು ಗಡ್ಡೆಗಳಲ್ಲಿ ಅಲ್ಪಮಟ್ಟಿಗೆ ನಡೆಯುತ್ತವೆ. ಇನ್ನು ಕೆಲವು ಗಡ್ಡೆಗಳಲ್ಲಿ ತಮಗೆ ಗೊತ್ತಿದಷ್ಟು ಮಾಡುತ್ತಾರೆ. ಕೆಲವೆಡೆ ಆಚರಣೆಗಳನ್ನು ಆಚರಣೆ ಮಾಡುವುದಿಲ್ಲ. ಆದರೂ ವಾರ್ಷಿಕಾವರ್ತನದ ಆಚರಣೆಗಿಂತ ಜೀವನಾವರ್ತನ ಆಚರಣೆ ಪಾಲಿಸುವುದೇ ಹೆಚ್ಚು ಎಂದು ಹೇಳಬಹುದು.

**ಸಾಮೂಹಿಕ ವಿವಾಹಗಳು:** ಜಲದುರ್ಗ ನಡುಗಡ್ಡೆಯಲ್ಲಿ ಇಂದು ಸಾಮೂಹಿಕ ವಿವಾಹಗಳು ನಡೆಯುವುದನ್ನು ಕಾಣಬಹುದಾಗಿದೆ. ಜಲದುರ್ಗದ ಪ್ರಭುದೇವ ತಾತನವರು ಈ ಕಾರ್ಯವನ್ನು ನೆರವೇರಿಸಿಕೊಡುತ್ತಾರೆ. ಸಂಗಮನಾಥ ದೇವಸ್ಥಾನದಲ್ಲಿ ವಿವಾಹಗಳು ನಡೆಯುತ್ತವೆ. ಕೆಳವರ್ಗದವರಾದ ನಾಯಕರು, ಹರಿಜನರು, ವಡ್ಡರು, ಕುರುಬರು ಈ ಸಮುದಾಯದವರು ಹಾಗೂ ಆರ್ಥಿಕ ಸ್ಥಿತಿಮಟ್ಟ ಕಡಿಮೆ ಇರುವಂತಹವರು ಸಾಮೂಹಿಕ ಮದುವೆಗಳಲ್ಲಿ ಮದುವೆಯಾಗುತ್ತಾರೆ. ಜಲದುರ್ಗದ ಸುತ್ತಮುತ್ತ ಹಳ್ಳಿಗಳಾದ ಹಾಲಬಾವಿ, ಕಡದರ ಗಡ್ಡೆ, ಹಂಚಿನಾಳ, ಯರಗೋಡಿ, ಯಳಗುಂದಿ ಅಲ್ಲಿ ನಡೆಯುವಂತಹ ಸಾಮೂಹಿಕ ಮದುವೆಗಳಲ್ಲಿ ಮದುವೆ ಮಾಡಿಕೊಂಡು ಬರುತ್ತಾರೆ. ನಡುಗಡ್ಡೆ ಜನಗಳಲ್ಲದೆ ಇನ್ನೂ ಅನೇಕ ಗ್ರಾಮದವರು ಈ ಗಡ್ಡೆಗೇ ಬರುತ್ತಾರೆ.

## ೫.೨. ವಾರ್ಷಿಕಾವರ್ತನದ ಆಚರಣೆಗಳು

ಹಬ್ಬ-ಹರಿದಿನಗಳು ಭಕ್ತಿ ಧರ್ಮ ಮತ್ತು ವ್ರತಾಚರಣೆಗೆ ಸಂಬಂಧಿಸಿದ ಶುಭ ದಿನಗಳು. ಸಂಸ್ಕೃತಿ ಸಂವರ್ಧಕ ದಿನಗಳು ಆಗಿವೆ. ಇವುಗಳು ಆಚರಣೆಗೆ ಪವಿತ್ರವಾಗಿವೆ. 'ಇಹ'ದ ಬದುಕಿಗೂ 'ಪರ'ದ ಚಿಂತನೆಗೂ ಇವು ಸಾಧನೋಪಾಯಗಳು. ಹಿಂದುಗಳಾದ ನಮಗೆ ಧರ್ಮವೇ ಬಾಳಿನ ಉಸಿರು; ಧರ್ಮದ ಕುಶಲತೆಯೇ ಬಾಳಿನ ತಂತ್ರ. ಜ್ಞಾನ ಪೂರ್ಣ ಜಗಜ್ಯೋತಿಯ ಅರಿವೇ ತುತ್ತತುದಿ. ಅಂತೆಯೇ ಹಬ್ಬ-ಹರಿದಿಗಳ ಆಚರಣೆಯೂ ವಿಶಿಷ್ಟವಾಗಿದೆ. ಮಹತ್ವಪೂರ್ಣವಾಗಿದೆ.

"ಹಬ್ಬ ಎಂಬ ಪದವು ಸಂಸ್ಕೃತದ 'ಪರ್ವನ್' ಶಬ್ದದ ರೂಪವಾಗಿ, ಪರ್ವ ಎಂದರೆ ಒಂದು ಮತ್ತೊಂದರ ಜೊತೆಗೆ ಸಂಧಿಸುವುದು ಎಂದರ್ಥ. ಸೂರ್ಯ, ಚಂದ್ರ ದಿಕ್ಕು ಬದಲಾಗುವುದೇ ಪರ್ವ. ಅದನ್ನೇ ನಮ್ಮ ಪೂರ್ವಜರು ಅಮವಾಸ್ಯೆ, ಹುಣ್ಣಿಮೆಗಳೆಂದು ಗುರುತಿಸಿದಂತೆ ಕಾಣುತ್ತದೆ" (ನಿಂಗಪ್ಪ ಎಸ್. ಮಾದಣ್ಣವರ, ೨೦೧೪, ಪು.೧೪೫).

ಹಬ್ಬ-ಹರಿದಿನಗಳು ಕೇವಲ ಕರ್ಮಕಾಂಡಕ್ಕೆ ಮಾತ್ರ ಸಂಬಂಧಿಸಿದವುಗಳಲ್ಲ. ಜ್ಞಾನಕಾಂಡಕ್ಕೂ ಸಂಬಂಧಿಸಿವೆ. ಇವುಗಳ ಸಂಬಂಧವೇ ಆಚಾರ ಮತ್ತು ವಿಚಾರ ಎಂದು ಹೇಳಿದುದು. ವ್ಯವಹಾರಿಕವಾಗಿ ಮಾತ್ರ ಶುಷ್ಕತರ್ಕ ನ್ಯಾಯಗಳಿಂದ ಅನೇಕರಲ್ಲಿ ದೇವರಿಗೆ ಎರಡು ಕಾಯಿ ಅರ್ಪಿಸಿ ಪೂಜೆ ಮಾಡಿದುದರಿಂದ ಅಥವಾ ಹಬ್ಬಗಳ ನಿಷ್ಠೆಯ ಆಚರಣೆಯಿಂದ ತಮಗೆ ವ್ಯಾಪಾರದಲ್ಲಿ ವೃದ್ಧಿ, ಸಂತಾನಭಾಗ್ಯ, ವಿಶೇಷ ಧನಪ್ರಾಪ್ತಿ, ಆರೋಗ್ಯಾಭಿವೃದ್ಧಿ, ಪರೀಕ್ಷೆಗಳಲ್ಲಿ ಪಾಸು, ಒಳ್ಳೆಯ ವರನ ಪ್ರಾಪ್ತಿ ಇತ್ಯಾದಿ ಯಾವುದಾದರೂ ಸುಖ ಪ್ರಾಪ್ತಿಗಳನ್ನು ಹೇಳಿಕೊಳ್ಳುವುದುಂಟು. ಇವುಗಳನ್ನು ಮಾಡದ್ದರಿಂದ ಕಾರ್ಯಭಂಗವುಂಟಾಯಿತೆಂದು ಹೇಳಿಕೊಳ್ಳುವರು. ಇದಕ್ಕೆ ಅವರವರ ದೃಷ್ಟಿ ನಿರ್ಣಯವೇ ಕಾರಣ. ಇದರ ಸತ್ಯ ವಿಮರ್ಶೆ ಸುಲಭವಾಗಿ ಬಿಡಿಸುವಂತಹದ್ದಲ್ಲ. ಬಹುಜಟಿಲ.

ಮಾನವನ ಸೃಷ್ಟಿಗಿಂತಲೂ ಪ್ರಕೃತಿಯ ಸ್ವಷ್ಟ ಅತ್ಯಂತ ಪ್ರಾಚೀನ ಪ್ರಕೃತಿ ಪುರುಷ ಸಂಬಂಧ ಅದ್ಭುತವೂ; ಸೋಜಿಗವೂ ಆಗಿದೆ. ಸೃಷ್ಟಿಸ್ಥಿತಿ, ಲಯಗಳ ಮೂಲಕ ಪ್ರಕೃತಿಯು ಇಡೀ ಜಗತ್ತಿನ ಮೇಲೆ ಸೂತ್ರಧಾರಿತ್ವ ವಹಿಸಿದೆ. ಸೂತ್ರಧಾರಿತ್ವದಲ್ಲಿ ಪಾತ್ರಧಾರಿಯಾದ ಮಾನವನು ಹಿಂದೆ ಭಯಭೀತನಾಗಿ ರಕ್ಷಣೆಯ ಮಾರ್ಗಕ್ಕಾಗಿ ತನ್ನ ಉಳಿವಿಗಾಗಿ ಶ್ರೇಯಸ್ಸಿಗಾಗಿ ಪ್ರಕೃತಿಯನ್ನೇ ಮೊರೆಹೊಕ್ಕಿದ್ದನೆಂದು ಕಾಣುತ್ತದೆ. ಸೂರ್ಯ, ಚಂದ್ರ, ಮಳೆ, ಬೆಳೆ, ಗುಡುಗು-ಸಿಡಿಲು, ಗಿಡ-ಮರಗಳು, ನದಿ-ಬೆಟ್ಟಗಳು, ಆಕಾಶ-ಬೆಂಕಿ ಇವುಗಳನ್ನು ಕಂಡು ಪ್ರತಿಯೊಂದನ್ನೂ ದೈವಸ್ವರೂಪವೆಂದೇ ಭಾವಿಸಿ ಅದೃಶ್ಯ ಶಕ್ತಿಗಳ ಕೈವಾಡವಿದೆಯೆಂದು ನಂಬಿ ಆರಾಧನೆಯಲ್ಲಿ ತೊಡಗಿದ್ದನ್ನೆನ್ನಬಹುದು.

ಹಬ್ಬ-ಹರಿದಿನಗಳಂದು ಮನೆಯೇ ದೇಗುಲ. ತಳಿರು ತೋರಣಗಳಿಂದ ಮಕ್ಕಳ ಮಂದಹಾಸ ದಿಂದ ಮಡದಿಯ ವ್ರತನಿಯಮದ ಸಡಗರದಿಂದ ಬಂಧು ಮಿತ್ರರ ಆಗಮನದಿಂದ ಎಲ್ಲರಿಗೂ ಶಾಂತಿ, ಸಂತೋಷ ಲಭಿಸುತ್ತವೆ. ಯುಗಾದಿ, ವಿಜಯದಶಮಿ, ನಾಗರ ಪಂಚಮಿ ಮುಂತಾದ ಕೆಲವು ಹಬ್ಬಗಳಂದು ಮನೆಯ ಮಂದಿಯೆಲ್ಲ ಹೊಸ ಬಟ್ಟೆಗಳನ್ನು ಧರಿಸುವರು. ಉಳ್ಳವರು ಪ್ರತಿಯೊಂದು ಹಬ್ಬದಲ್ಲಿಯೂ ಉಂಡು ಉಟ್ಟು ನಲಿಯಬಹುದು. ಅಂತೆಯೇ ಬಡವರೂ ಸಹ ಯಥಾಶಕ್ತಿ ಊಟ-ಉಡಿಗೆಗಳಲ್ಲಿ ಸಂತೋಷಪಡೆಯುವರು. ದೇವರ ಉತ್ಸವ ಪಾರಾಯಣ, ನಾಟಕ ಅಥವಾ ಸಾಮೂಹಿಕವಾದ ಗೋಷ್ಠಿಗಳಲ್ಲಿ ಜನ ನಲಿಯುವರು. ವ್ಯವಹಾರಿಕ ಜಗತ್ತಿನ ಕ್ಲೇಶ ಕಾರ್ಪಣ್ಯಗಳಿಂದ ಎಲ್ಲರ ಮನಸ್ಸು ಈ ದಿನಗಳಲ್ಲಾದರೂ ಸ್ವಲ್ಪ ದೂರವಿದ್ದು ನೆಮ್ಮದಿಯಿಂದಿರುವರು. ಆದರೆ ಬರಿಯ ಸಂತೋಷ ಮನರಂಜನೆಯಲ್ಲಿ ಕಾಲಕಳೆಯದೆ ಹಬ್ಬಹರಿದಿನಗಳಂದು ಕೆಲವು ಕಾಲವಾದರೂ ದೈವ-ಸಾನ್ನಿಧ್ಯವನ್ನು ನಿರೀಕ್ಷಿಸಬೇಕು.

ಹಬ್ಬ-ಹರಿದಿನ ಆಚರಣೆಗಳಲ್ಲಿ ಗೃಹಿಣಿಯರ ಪಾತ್ರ ಮುಖ್ಯವಾಗಿದ್ದು, ನಾಲ್ಕು ಗೋಡೆಗಳ ಮಂದಿರವೇ ಗೃಹವಲ್ಲ; ಗೃಹಿಣಿಯೇ ಗೃಹ. ಶ್ರೀ ಅಂಬಿಕಾತನಯದತ್ತರು ಹೇಳುವಂತೆ ಗೃಹಿಣಿಯು

ಮನೆಯ ಹೊಸ್ತಲಕೆ ಶುಭ ಬರೆಯುವಾಕೆ
ಮಂಗಲವ ಬಾರೆಂದು ಕರೆಯುವಾಕೆ
ಬಾಳ ಸುಳಿಯಲಿ ಬೆಳೆಯ ತೋರುವಾಕೆ
ದಿನದಿನವು ನಮ ಜಯವ ಕೋರುವಾಕೆ

(ಪೊ. ಡಿ.ಟಿ. ರಂಗಸ್ವಾಮಿ; ೨೦೦೦, ಪು.೪೦)

ಅಂತೆಯೇ ಮಹಿಳೆಯಿಂದ ಹಬ್ಬಗಳಿಗೆ ವಿಶೇಷ ಕಳೆ. ಆಕೆ ಮಕ್ಕಳಿಗೆ ಸ್ನಾನ ಮಾಡಿಸುವ, ಬಟ್ಟೆತೊಡಿಸುವ, ಅಡುಗೆ ಮಾಡುವ ಸಂಭ್ರಮದಿಂದ ಪೂಜಾ ದಿನಗಳನ್ನು ಮಾಡುವ ಪ್ರತಿಯೊಂದು ಸಂತೋಷ ಸಮಯಗಳಿಂದ ಆಕೆಯ ಮುಖದಲ್ಲಿ ನಗೆಯ ನವಿಲು ನಲಿದಾಡುತ್ತದೆ. ಆದ್ದರಿಂದ ಮನೆಯು ಸಂತೋಷದಿಂದ ತುಂಬಿ ತುಳುಕುತ್ತದೆ.

ಹಿಂದೂಗಳು ವರ್ಷತುಂಬ ಹಬ್ಬಗಳನ್ನಾಚರಿಸುವ ಅನೇಕ ಪವಿತ್ರ ದಿನಗಳಿವೆ. ಎಲ್ಲಾ ಹಿಂದೂಗಳಿಗೆ ಸಾಮಾನ್ಯವಾಗಿರುವ ಹಬ್ಬಗಳಲ್ಲದೇ ಬೇರೆ ಬೇರೆ ಪಂಥಗಳಿಗೆ ಪ್ರತ್ಯೇಕ ಹಬ್ಬಗಳಿವೆ. ಹೀಗೆ ನಡುಗಡ್ಡೆಗಳಲ್ಲಿ ಎಲ್ಲಾ ಹುಣ್ಣಿಮೆ, ಅಮವಾಸ್ಯೆಗಳ ಆಚರಣೆ ಮಾಡುವುದಿಲ್ಲ. ಕೆಲವೊಂದನ್ನು ಮಾಡುತ್ತಾರೆ. ಇಲ್ಲಿ ಸಾಮೂಹಿಕವಾಗಿ ಆಚರಿಸುವ ಕೆಲವು ಹಬ್ಬಗಳನ್ನು ಅಧ್ಯಯನ ಮಾಡಲಾಗಿದೆ.

**ಯುಗಾದಿ:** ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತ್ತಿದೆ. ಹೊಸ ವರುಷಕೆ ಹೊಸ ಹರುಷವ ಹೊಸತು ತರುತ್ತಿದೆ ಎಂಬ ಕವಿ **ಬೇಂದ್ರೆ**ಯವರ ವಾಣಿಯಂತೆ ಹೊಸ ವರ್ಷ ಹರ್ಷದಾಯಕವಾಗಲೆಂಬ ಒಳ್ಳೆಯ ಇಚ್ಛೆಯಿಂದ ಆಚರಿಸುವ ಹಬ್ಬವೇ ಯುಗಾದಿ. "ಯುಗ" ಎಂದರೆ "ನೂತನವರ್ಷ" "ಆದಿ" ಎಂದರೆ "ಆರಂಭ" ಎಂದು ಅರ್ಥ. ಯುಗಾದಿ ಹತ್ತು ಹಲವು ಪರಂಪರೆಯ ಆರಂಭದ ದಿನ. ಹಲವಾರು ಶತ್ರುಂಜಯ ಮೃತ್ಯುಂಜಯಗಳ ಸ್ಮಾರಕದಿನ. ವರ್ಷದ ಮೂರುವರೆ ಶುಭ ದಿನಗಳಲ್ಲಿ ಮೊದಲ ಮುಹೂರ್ತದಿನ. "ಋತೂನಾಂ ಕುಸುಮಾಕರಃ" ಎಂಬ ಗೀತಾಚಾರ್ಯನ ವಾಣಿಯಂತೆ ಋತುರಾಜನ ವಸಂತದ ಶುಭಾಗಮನದ ದಿನ.

ಯುಗಾದಿಯ ದಿನ ಉಷಾ ಕಾಲಕ್ಕೆ ಎದ್ದು, ಮಂಗಳ ಸ್ನಾನಮಾಡಿ ನವ-ವಸ್ತ್ರ ಧರಿಸಿ ಹಿರಿಯರ ಅಶೀರ್ವಾದ ಪಡೆದು ಬೇವಿನ ದಳ-ಬೆಲ್ಲ ಹೊಸ ಮಣ್ಣಿನ ಗಡಿಗೆ ಕೆಲವೊಂದು ಹಣ್ಣುಗಳನ್ನು ಮಿಶ್ರ ಮಾಡಿ ಬೇವು ತಯಾರಿಸಿ ಮನೆಯನ್ನೆಲ್ಲಾ ಮಾವು-ಬೇವಿನ ತಳಿಯ ತೋರಣಗಳಿಂದ ಅಲಂಕರಿಸಿ ಹೊಸಬಟ್ಟೆ ತೊಟ್ಟು ಇಷ್ಟ ಮಿತ್ರರೊಂದಿಗೆ ಬೇವು ಹೋಳಿಗೆಯ ಮೃಷ್ಟಾನ್ನ ಭೋಜನ ಮಾಡುತ್ತಾರೆ. ಎಲ್ಲರೂ ಒಂದೆಡೆ ಸೇರಿ ಹನುಮಪ್ಪನ ಗುಡಿಯಲ್ಲಿ ಪಂಚಾಂಗ ಶ್ರವಣ, ವರ್ಷಫಲ ಕೇಳುವುದು. ಬೇವು ನೂರು ಕಾಲ ಆಯುಷ್ಯವನ್ನು ಸರ್ವ ಸಂಪತ್ತನ್ನು ನೀಡುವುದಲ್ಲದೆ ಅನಿಷ್ಟಗಳನ್ನೆಲ್ಲಾ ನಿವಾರಿಸುತ್ತದೆ ಎಂದು ಹೇಳಲಾಗಿದೆ. ದೇಹಕ್ಕೆ ತಂಪು ನೀಡುವ ಬೇವೂ ಬೇಕು. ಉಷ್ಣ ಪ್ರಧಾನ ಬೆಲ್ಲವೂ ಬೇಕು ಎಂಬುದು ಜನಪದರ ನಂಬಿಕೆಯಾಗಿದೆ. ಇಡೀ ವರ್ಷದ ಶುಭದಿನಗಳಲ್ಲಿ ಇದು ಅತ್ಯುತ್ತಮ ದಿನವೆಂದು ಭಾವಿಸಿ ಭಕ್ತಿ ಪೂರ್ವಕವಾಗಿ ಮನೆಯಲ್ಲಿ ದೇವರನ್ನು ಪೂಜಿಸುವುದಲ್ಲದೇ ಸಂಜೆ ದೇವಸ್ಥಾನಗಳಿಗೆ ಹೋಗಿ ಬರುವ ಸಂಪ್ರದಾಯವೂ ಇದೆ. ನಡುಗಡ್ಡೆಗಳಲ್ಲಿ ಹೋಳಿಹಬ್ಬದಂದು ಬಣ್ಣವನ್ನು ಆಡುವುದಿಲ್ಲ. ಯುಗಾದಿ ಹಬ್ಬದಲ್ಲಿ ಮೂರು ದಿನಗಳ ಕಾಲ ಬಣ್ಣವನ್ನು ಆಡುತ್ತಾರೆ. ನಡುಗಡ್ಡೆಗಳಲ್ಲಿ ಬಣ್ಣಕ್ಕಾಗಿ ಓಕಳಿ ಗಿಡದ ಹೂವುಗಳನ್ನು ತಂದು ಓಕಳಿ ಬಣ್ಣವನ್ನು ತಯಾರಿಸಿ ಆಡುತ್ತಾರೆ. ಹಾಗೆ ಈ ಹಬ್ಬದಲ್ಲಿ ವಿಶೇಷವಾದದ್ದು ಬೇಟೆ. ನಡುಗಡ್ಡೆಗಳಲ್ಲಿ ಯುಗಾದಿಯಲ್ಲಿ ಎರಡು ದಿನ, ಗಡ್ಡೆಯ ಗಂಡಸರೆಲ್ಲಾ ಸೇರಿ ಹಲಗೆ, ವಾದ್ಯದೊಂದಿಗೆ ಬಡಿಗೆ ಬೆತ್ತಗಳನ್ನು ತೆಗೆದುಕೊಂಡು ಬೇಟೆಯನ್ನು ಆಡುತ್ತಾರೆ. ಲಿಂಗಾಯಿತರು, ಬ್ರಾಹ್ಮಣ ಸಮುದಾಯ ಬಿಟ್ಟು ಉಳಿದೆಲ್ಲಾ ಸಮುದಾಯಗಳು ಹೋಳಿಗೆ ಊಟ ಮಾಡಿದ ನಂತರ ಮಾರನೇ ದಿನ ಮಾಂಸ ಊಟಮಾಡುತ್ತಾರೆ. ಇದಕ್ಕೆ ನಡುಗಡ್ಡೆಗಳಲ್ಲಿ ಕರಿ ಮಾಡುವುದು ಎಂದು ಕರೆಯುತ್ತಾರೆ.

**ಬಸವ ಜಯಂತಿ:** ವೈಶಾಖ ಶುದ್ಧ ತೃತಿಯಾವನ್ನು ಅಕ್ಷಯ ತೃತಿಯ ಎಂದು ಕರೆಯುತ್ತಾರೆ. ಈ ದಿನವನ್ನು ಸಮಸ್ತ ಸಂವತ್ಸರದ ದಿನಗಳಲ್ಲಿ ಅತೀವ ಭಾಗ್ಯದಾಯಕ ದಿನವೆಂದು ಪರಿಗಣಿಸುತ್ತಾರೆ. ನಡುಗಡ್ಡೆಗಳಲ್ಲಿ ಬಸವಣ್ಣ ಎಂದರೆ ಎತ್ತುಗಳು ಎಂದು ತಿಳಿದು ಎತ್ತುಗಳಿಗೆ ಭಕ್ತಿಯಿಂದ ಪೂಜೆಯನ್ನು

ಸಲ್ಲಿಸುತ್ತಾರೆ. ಅನೇಕರು ತಮ್ಮ ಹೊಸ ಕೆಲಸಗಳನ್ನು ಈ ದಿನ ಆರಂಭಿಸುವರು. ಗೃಹಪ್ರವೇಶ, ಮದುವೆ, ಜವಳ ಕಾರ್ಯಕ್ರಮಗಳನ್ನು ನಡುಗಡ್ಡೆಯಲ್ಲಿ ಕಾಣಬಹುದು.

**ಮಹಾಶಿವರಾತ್ರಿ:** ಮಾಘ ಬಹುಳ ಚತುರ್ದಶಿ ಶಿವರಾತ್ರಿಯಂದು ಪ್ರಪಂಚಕ್ಕೇ ತಂದೆಯೆನಿಸಿದ ಶಿವನ ಆರಾಧನೆಗೆ ಪ್ರಶಸ್ತ ಮೂಹೂರ್ತ. ಲಿಂಗಗಳಿರುವ ಕ್ಷೇತ್ರಗಳಲ್ಲಿ ಲಕ್ಷಲಕ್ಷಜನರು ಪೂಜೆ ಪುನಸ್ಕಾರದಲ್ಲಿ ಮಗ್ನರಾಗಿರುತ್ತಾರೆ. ಶಿವರಾತ್ರಿ ದಿನ ಅರುಣೋದಯಕ್ಕೆ ಎದ್ದು, ಸ್ನಾನಮಾಡಿ (ನದಿ. ಸಮುದ್ರ, ಸಂಗಮ ಸ್ನಾನ ಅತಿ ಶ್ರೇಷ್ಠವಾದುದು) ಶುಭ್ರ ವಸ್ತ್ರವನ್ನುಟ್ಟು "ಸಮಸ್ತ" ಪಾಪ ನಿವಾರಣೆಗಾಗಿಯೂ, ಜ್ಞಾನ, ಮೋಕ್ಷ ಪ್ರಾಪ್ತಿಗಾಗಿಯೂ ಶಿವರಾತ್ರಿ ವ್ರತ ಆಚರಿಸುತ್ತೇನೆ ಎಂದು ಸಂಕಲ್ಪ ಮಾಡಬೇಕು. ತ್ರಯೋದಶಿಯಲ್ಲಿ ಒಪ್ಪತ್ತು ಊಟ, ಚತುರ್ದಶಿಯಂದು ಪೂರ್ಣ ನಿರಾಹಾರವಾಗಿದ್ದು, ಅಮವಾಸ್ಯೆಯೆಂದು ಪಾರಣೆ ಮಾಡಬೇಕು. ತೀರ ಕ್ಷೀರಹಾರ ಅಥವಾ ಫಲಾಹಾರ ಸ್ವೀಕರಿಸಬಹುದು. ಪ್ರದೋಷ ಕಾಲಕ್ಕೆ ಶಿವಾಲಯಕ್ಕೆ ಹೋಗಿ ರಾತ್ರಿ ನಾಲ್ಕೂ ಯಾಮಗಳಲ್ಲೂ ರುದ್ರಾಭಿಷೇಕ ಪೂಜೆ, ಹರಿಕಥೆ, ಸತ್ಸಂಗಾದಿಗಳಲ್ಲಿ ಮಗ್ನರಾಗಬೇಕು. ಶಿವಪೂಜೆಗೆ ಜಾತಿ–ಮತ, ಸ್ತ್ರೀ–ಪುರುಷ, ಬೇಧವಿಲ್ಲ. ಅನನ್ಯ ಭಕ್ತಿಯಿಂದ ಧ್ಯಾನಿಸಿ ನಡುಗಡ್ಡೆಗಳ ಜನರು ಜಾಗರಣೆ, ಉಪವಾಸ, ಅರ್ಚನೆ, ಭಜನೆ ಮಾಡುತ್ತಾರೆ. ಶಿವರಾತ್ರಿಯನ್ನು ನಡುಗಡ್ಡೆಗಳಲ್ಲಿ ಮುಸ್ಲಿಂ ಸಮುದಾಯ ಬಿಟ್ಟು ಬಹುಪಾಲು ಎಲ್ಲಾ ಸಮುದಾಯದವರು ಆಚರಣೆ ಮಾಡುತ್ತಾರೆ.

ಜಾಗರಣೆ ಎಂದರೆ ರಾತ್ರಿ ಇಡಿ ಎದ್ದಿರುವುದು. ಶಿವನ ಧ್ಯಾನ ಮಾಡುವುದು. ಮಹಾಶಿವರಾತ್ರಿ ಯಂದು ನಡುರಾತ್ರಿ ಕೋಟಿಸೂರ್ಯ ಪ್ರಕಾಶನಾದ ಪರಶಿವನ ಶಿವಲಿಂಗದಿಂದ ಸ್ವಯಂಭೂವಾಗಿ ಉದ್ಭವಿಸಿದನೆಂದು ತಿಳಿದು ಬರುತ್ತದೆ. ಇದಲ್ಲದೆ ಶಿವರಾತ್ರಿ ಶಿವನು ಹಾಲಾಹಲ ವಿಷ ಕುಡಿದ ದಿನವೆಂತಲೂ, ತಾಂಡವ ನೃತ್ಯ ಮಾಡಿದ ದಿನವೆಂತಲೂ ಹೇಳುತ್ತಾರೆ. ಇಂದು ಅನೇಕ ಶಿವಾಲಯ ಗಳಲ್ಲಿ ಜಾತ್ರೆಗಳು ನಡೆಯುತ್ತವೆ.

ಜಲದುರ್ಗ ನಡುಗಡ್ಡೆಯಲ್ಲಿ ಸಂಗಮನಾಥನಿಗೆ ಜಾಗರಣೆ ಉಪವಾಸ ವ್ರತ ಕೈಗೊಂಡ ಗಡ್ಡೆಯ ಜನರು ಮತ್ತು ಸುತ್ತಮುತ್ತ ಗ್ರಾಮಗಳಿಂದ ಬಂದು ಸಂಗಮನಾಥನ ಗುಡಿಯಲ್ಲಿ ರಾತ್ರಿ ಇಡಿ ಭಜನೆಯೊಂದಿಗೆ ಜಾಗರಣೆ ಮಾಡುತ್ತಾರೆ.ಜಲದುರ್ಗ ನಡುಗಡ್ಡೆಯಲ್ಲಿ ಎಲ್ಲಾ ಹಬ್ಬಗಳಿಗಿಂತಲೂ ಶಿವರಾತ್ರಿಯನ್ನು ದೊಡ್ಡ ಹಬ್ಬವಾಗಿ ಆಚರಣೆ ಮಾಡುತ್ತಾರೆ. ಇದು ಫೆಬ್ರವರಿ ತಿಂಗಳಲ್ಲಿ ಬರುತ್ತದೆ. ಶಿವರಾತ್ರಿ ದಿನದಂದು ಶಿವನ ಬಾಗಿಲ ತೆರೆದಿರುತ್ತದೆ ಎನ್ನುವ ನಂಬಿಕೆ ನಡುಗಡ್ಡೆಗಳ ಜನಪದರಲ್ಲಿದೆ. ಈ ದಿನ ಸತ್ತರೆ, ಅವರಿಗೆ ಸ್ವರ್ಗಸಿಗುತ್ತದೆ ಎನ್ನುವ ಬಲವಾದ ನಂಬಿಕೆ ಈ ಜನರಲ್ಲಿದೆ. ಅದಕ್ಕಾಗಿ ಈ ದಿನ ಉಪವಾಸ ಮೂಲಕ ಜಾಗರಣೆ ಮಾಡಿ ಅನನ್ಯ ಭಕ್ತಿಯಿಂದ ಧ್ಯಾನಿಸಿ "ನಾನಾ ವಿಧವಾದ

ಪಾಪಕರ್ಮಗಳಿಂದ ಭವ-ಬಂಧನದಲ್ಲಿ ಸಿಲುಕಿದ ನನ್ನನ್ನು ಲೋಕಕ್ಕೇ ಸುಖವನ್ನು ಕೊಡುವ ಸ್ವಾಮಿಯಾದ ನೀನು ಉದ್ಧರಿಸು" ಎಂದು ಬೇಡಿಕೊಳ್ಳುತ್ತಾರೆ.

**ವಿಜಯದಶಮಿ:** "ಶಮೀ ಶಮಯತೆ, ಪಾಪಂ, ಶಮೀ ಶತ್ರು ನಿವಾರಿಣೇ।

ಅರ್ಜುನಸ್ಯ ಧನುರ್ದಾರೀ, ರಾಮಸ್ಯ ಪ್ರಯಕಾರಿಣೀ"॥(ರಮೇಶ ಬೆ.ಗೋ; ೧೯೯೮, ಪು.೪೬)

"ಓ ಶಮೀ ವೃಕ್ಷವೇ! ನೀನು ಶ್ರೀ ರಾಮನಿಂದ ಪೂಜಿಸಲ್ಪಟ್ಟು, ಶ್ಲಾಘನೆಗೆ ಪಾತ್ರವಾಗಿರುವೆ. ಅಜ್ಞಾತವಾಸ ಕಾಲದಲ್ಲಿ, ಅರ್ಜುನನ ಧನುಸ್ಸನ್ನು ಧರಿಸಿ, ಮುಂದೆ ಜಯ ತಂದು ಕೊಟ್ಟಿರುವೆ, ಪಾಪವನ್ನು ಶತ್ರು ಬಾಧೆಯನ್ನು ನಿವಾರಿಸುವ ನೀನು, ನನ್ನ ಕಾರ್ಯದಲ್ಲಿ ಜಯಸಿಗುವಂತೆ ಅನುಗ್ರಹಿಸು" ಎನ್ನುತ್ತಾರೆ. ಶಮೀ ಪತ್ರೆಯನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದು ಈ ಹಬ್ಬದ ವಿಶೇಷ. ಆಶ್ವಯುಜ ಶುಕ್ಲದಶಮಿಯಂದು ನಕ್ಷತ್ರಗಳು ಉದಯಿಸುವ ಕಾಲಕ್ಕೆ 'ವಿಜಯ' ಎಂದು ಹೆಸರು. ಸಕಲ ಕಾರ್ಯಗಳ ಸಿದ್ಧಿಗೆ ಅದು ಪ್ರಶಸ್ತ ಮೂಹೂರ್ತ. ಈ ದಿನ ದೇವಿಯು ಮಹಿಷಾಸುರ, ಶುಂಭ-ನಿಶುಂಭಾದಿಗಳನ್ನು ಜಯಿಸಿದ ದಿನ; ಷಣ್ಮುಖ ತಾರಕಾಸುರನನ್ನು ಕೊಂದ ದಿನ, ಶ್ರೀರಾಮನು ರಾವಣನನ್ನು ಗೆದ್ದು ಶಮೀವೃಕ್ಷವನ್ನು ಪೂಜಿಸಿ ಅಯೋಧ್ಯೆಗೆ ತೆರಳಿದ ದಿನ, ಪಾಂಡವರು ಅಜ್ಞಾತವಾಸವನ್ನು ಯಶಸ್ವಿಯಾಗಿ ಪೂರೈಸಿ ಶಮೀ ಮರಕ್ಕೆ ಕಟ್ಟಿದ ಆಯುಧಗಳನ್ನು ಪಡೆದು ಬನ್ನಿ ಹಂಚಿದ ದಿನ, ವಿದೇಶಿ ಆಕ್ರಮಣವನ್ನು ತಡೆದು, ಹಿಂದೂ ಸಂಸ್ಕೃತಿ ಧರ್ಮ ರಕ್ಷಣೆಗಾಗಿ ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾದ ದಿನ. ಕ್ರಿ.ಶ ೧೫೧೩ರಲ್ಲಿ ತನ್ನ ವಿಜಯದ ಸವಿನೆನಪಿಗಾಗಿ ಶ್ರೀಕೃಷ್ಣದೇವರಾಯನು ಕಟ್ಟಿಸಿದ 'ಮಾನೌಮೀ ದಿಬ್ಬ' ಇಂದೂ ಮೂಕವಾಗಿ ಗತ ವೈಭವ ಸಾರುತ್ತಿದೆ. ಮೈಸೂರು ದಸರೆ ಹಾಗೂ ಜಂಬೂಸವಾರಿಯಂತೂ ಜಗತ್‌ಪ್ರಸಿದ್ಧ; ಅಂದಿನ ಮೈಸೂರು ರಾಜರುಗಳು ನಡೆಸುತ್ತಿದ್ದ ಸೀಮೋಲ್ಲಂಘನ ಮತ್ತು ಶಮೀಪೂಜೆ ಇಂದೂ ನಡೆದುಬಂದಿದೆ. ನಡುಗಡ್ಡೆಗಳಲ್ಲಿರುವ ಎಲ್ಲಾ ದೇವತೆಗಳ ಗುಡಿಯಲ್ಲಿ ಘಟಸ್ಥಾಪನೆ ನಡೆಯುತ್ತದೆ. ಅಂದಿನಿಂದ ಖಂಡೆ ಪೂಜೆಯವರೆಗೆ ೯ ದಿನಗಳು ನಂದಾದೀಪ ಹಾಕಿ ದೀಪ ಹಚ್ಚಿ ಪ್ರತಿದಿನ ಬೆಳಗ್ಗೆ ಮತ್ತು ರಾತ್ರಿ ಪೂಜೆ ಮಾಡುತ್ತಾರೆ. ಆದರೆ ನಡುಗಡ್ಡೆಗಳಲ್ಲಿ ದೇವಿ ಪುರಾಣ ಪಠಣ ನಡೆಯುವುದಿಲ್ಲ. ಗಡ್ಡೆಯ ಭಕ್ತರು ಮನೆಯನ್ನು ಶೃಂಗರಿಸಿ ದೇವಿಗೆ ಕಾಯಿ, ಕರ್ಪೂರ, ನೈವೇದ್ಯಗಳನ್ನು ಅರ್ಪಿಸಿ ಪೂಜಿಸುತ್ತಾರೆ.

ಬನ್ನಿ ಮುಡಿಯೋದು ಬಂತು ಬಂಗಾರ ಕೊಡೋದು ಬಂತು
ಬಂದ ನನಕಾಲ ಹಿಡದಾನ॥ ನನತಮ್ಮ
ಬಂಗಾರ ಮಾಲ ನನಗಿರಲಿ.

ಎಂದು ಜನಪದ ಗರತಿಯು ತನ್ನ ತಮ್ಮನ ಹಾಗೂ ಮಗಳ ಕುರಿತು ಹಾಡಿರುವುದು ಒಂದು ಸಂಬಂಧದ ಸಂಕೇತವಾದರೆ, ಮತ್ತೊಂದು ಹಿರಿಯರಿಗೆ ಕಿರಿಯರು ವಿನಯವಾಗಿರುವ ಅಂಶವು ಅಡಗಿದೆ. ತಂದೆ ತಾಯಿಗೆ ಬನ್ನಿ ಕೊಡುವುದೇ ವಿಶೇಷ. ಹೀಗೆ ಬನ್ನಿ ಹಬ್ಬ ಬಾಂಧವ್ಯ ವೃದ್ಧಿಯ ಸಂಕೇತವಾಗಿರುವುದು ಸರ್ವೇಸಾಮಾನ್ಯವಾಗಿದೆ. ವಿಜಯದಶಮಿ ದಿನ ಸಾಯಂಕಾಲ ೨ ಗಂಟೆಗೆ ಗಡ್ಡೆಯ ಜನರೆಲ್ಲ ಸೇರಿ ಡೊಳ್ಳಿನ ಮೇಳದ ಮಜಲಿನೊಂದಿಗೆ ಬನ್ನಿ ಮರಕ್ಕೆ ತಾವು ತೆಗೆದುಕೊಂಡು ಹೋಗಿರುವ ಬೇಟೆಯ ಸಾಮಾನುಗಳು, ಕೃಷಿ ಸಾಮಾನಗಳನ್ನು ಬನ್ನಿ ಮರಕ್ಕೆ ಇಟ್ಟು ಪೂಜೆ ಮಾಡಿ ತೆಗೆದುಕೊಂಡುಬರುತ್ತಾರೆ. ಹೋಗುವಾಗ ಜೋಳದ ದೊಂಟುಗಳನ್ನು ಕೂಡಾ ತೆಗೆದುಕೊಂಡು ಹೋಗಿ ಬನ್ನಿ ಮರಕ್ಕೆ ಇಡುವುದುಂಟು. ಪೂಜೆ ಮುಗಿದನಂತರ ಬನ್ನಿ ಎಂದರೆ ಬನ್ನಿಮರದ ತಪ್ಪಲು ಆರಿಗಿಡದ ತಪ್ಪಲು ಹರಿಯುತ್ತಾರೆ. ಹೀಗೆ ಬನ್ನಿ ಮುಡಿದ ಮೊದಲು ಗಡ್ಡೆಯ ಎಲ್ಲ ದೇವರುಗಳಿಗೆ ಬನ್ನಿ ಕೊಡುತ್ತಾರೆ. ನಂತರ ಗೌಡ, ಪೂಜಾರಿ, ಮಠಾಧಿಪತಿಗಳಿಗೆ  ಕೊಟ್ಟು, ತಂದೆ ತಾಯಿಗೆ ಕೊಡುತ್ತಾರೆ. ತನ್ನ ಬಂಧು ಬಾಂಧವ್ಯದವರಿಗೆ ಗಡ್ಡೆಯಲ್ಲಿರುವ ಎಲ್ಲಾ ಜನರು ಬನ್ನಿಯನ್ನು ಅವರ ಕೈಯಲ್ಲಿ ಕೊಟ್ಟು ಮತ್ತೆ ತಾವು ತೆಗೆದುಕೊಂಡು ಬಂಗಾರದಂಗ ಇರೋಣ। ಎಂದು ಒಬ್ಬರಿಗೊಬ್ಬರು ಹೇಳುತ್ತಾರೆ. ಇಲ್ಲಿ ಬನ್ನಿಯನ್ನು ಮೊದಲು ಚಿಕ್ಕವರು ಹಿರಿಯರು ಇರುವಲ್ಲಿಗೆ ತಾವಾಗಿಯೇ ಹೋಗಿ ಅವರಿಗೆ ಬನ್ನಿಕೊಟ್ಟು ಕಾಲಿಗೆ ನಮಸ್ಕರಿಸುತ್ತಾರೆ. ಅದಕ್ಕೆ ಹಿರಿಯರು ಅಶೀರ್ವಾದ ಮಾಡಿ ಸ್ಪಂದಿಸುತ್ತಾರೆ. ಗೆಳೆಯರಲ್ಲಿ ಇದು ಸಹಜವಾಗಿರುತ್ತದೆ. ಇದಕ್ಕೂ ಮುಖ್ಯವಾಗಿ ಜಗಳವಾಡಿದವರು ವೈರತ್ವ ಬೆಳಸಿಕೊಂಡವರನ್ನು ಅವರ ಗೆಳೆಯರು ಸಂಬಂಧಿಕರು ಬನ್ನಿಕೊಡಿಸುವ ಮೂಲಕ ಒಂದು ಗೂಡಿಸುತ್ತಾರೆ. ಈ ಹಬ್ಬ ಯಾವುದೇ ಸಮುದಾಯ ಜನಾಂಗಗಳಿಗೆ ಸೀಮಿತವಾಗದೆ ಗಡ್ಡೆಯ ಎಲ್ಲಾ ಜನರು ಆಚರಿಸುತ್ತಾರೆ.

**ಮೊಹರಂ ಹಬ್ಬ**

ಮೊಹರಂ ಹಬ್ಬ ಮುಂದ ಮೂರ ತಿಂಗಳ ಇತ್ತು
ಬದುಕು ಬಾಳೇವು ಎಲ್ಲಾ ಬಿಡಿಸಿತ್ತು
ಹಿರಿಯರಿಗೆ ಅದು ಸಿಟ್ಟು ತರಿಸಿತ್ತು.

ಈ ಹಾಡು ಮೊಹರಂ ಹಬ್ಬಕ್ಕೆ ಮೂರು ತಿಂಗಳು ಇರುವಾಗಲೇ ಹೆಜ್ಜೆಗಳ ತಯಾರಿಯನ್ನು ತಿಳಿಸುತ್ತದೆ. ಅದರಲ್ಲೂ ಮೊಹರಂ ಹಬ್ಬದ ತಯಾರಿಯಲ್ಲಿ ಹಿಂದುಗಳದ್ದೇ ಪ್ರಮುಖ ಪಾತ್ರವಿರುವುದು. ನಡುಗಡ್ಡೆಗಳ ಪ್ರದೇಶಗಳಲ್ಲಿ ವಿಶೇಷ. ಆದರೆ ಕೆಲವು ನಡುಗಡ್ಡೆ ಮಸೀದಿಗಳಲ್ಲಿ ಮುಸ್ಲಿಂರು ಇಲ್ಲ. ಅಲ್ಲಿ ಮೊಹರಂ ಹಬ್ಬ ಮಾಡುವುದಿಲ್ಲ. ಬೇರೆ ಬೇರೆ ಊರುಗಳಿಗೆ ಅಲಾಯಿ ನೋಡಲಿಕ್ಕೆ ಹೋಗುತ್ತಾರೆ. ಕೆಲವು ಗಡ್ಡೆಗಳಲ್ಲಿ ಈ ಆಚರಣೆ ಮಾಡುತ್ತಾರೆ. ಒಂದು ಎರಡು ಮುಸ್ಲಿಂರ ಮನೆಗಳಿದ್ದು, ಇಲ್ಲವೆಂದರೆ

ಬೇರೆ ಊರಿನ ಮುಲ್ಲಾರನ್ನು ಕರೆಸುತ್ತಾರೆ. ಮಸೀದಿಯನ್ನು ಊರಿನ ಜನರು ಹಣ ಹಾಕಿ ಕಟ್ಟಿಸಿರುತ್ತಾರೆ ಮತ್ತು ದೇವರುಗಳನ್ನು ಮಾಡಿಸಿರುತ್ತಾರೆ.

ಮುಸ್ಲಿಂ ಸಂಪ್ರದಾಯದಂತೆ ಹಿಜರಿ ಸಂವತ್ಸರದ ಮೊದಲ ತಿಂಗಳೇ ಮೊಹರಂ ತಿಂಗಳು. ಈ ಪದಕ್ಕೆ 'ನಿಷಿದ್ಧವಾದದ್ದು, ವರ್ಜಿತವಾದದ್ದು ಸೈಯದ್ ಆಶಹರ್ (ಎಲ್ಲಾ ತಿಂಗಳುಗಳ ರಾಜ) ಎಂದಿತ್ತು. ಮೊಹರಂ ಹಬ್ಬಕ್ಕೆ ಕಾರಣವಾದ ಈ ತಿಂಗಳಲ್ಲಿ ಹಜರತ್ ಇಮಾಮ್ ಹುಸೇನ್ ಹುತಾತ್ಮರಾದರು. ಈ ಕಾರಣಕ್ಕಾಗಿ ಮೊಹರಂ ತಿಂಗಳು ಅಶುಭ ಮತ್ತು ದುಃಖದಾಯಕವೆಂದು ಭಾವಿಸಲ್ಪಡುತ್ತದೆ.

ಮೊಹರಂ ದೇವರುಗಳನ್ನು ಅಲ್ಲಾಸಾಬ, ಮೌಲಾಲಿ, ಪೀರಸಾಬ್ ಎಂದು ಇತ್ಯಾದಿ ಹೆಸರುಗಳಿಂದ ಗುರುತಿಸುತ್ತಾರೆ. ಕೆಲವು ಮಸೀದಿಗಳಿರುವ ಗಡ್ಡೆಗಳಲ್ಲಿ ಮೊಹರಂ ದಿನದ ೫ ದಿನ ದೇವರುಗಳನ್ನು ಕೂಡಿಸುತ್ತಾರೆ. ನಂತರ ಎಲ್ಲ ಮನೆ ಹರಕೆ ಮಾಡಿಕೊಂಡವರು ಫಕೀರರಾಗುವ ಸಂಪ್ರದಾಯವಿದೆ. ಮಸೀದಿಗೆ ಹೋಗಿ ಸಕ್ಕರೆ ಓದಿಸಿ (ನೈವೇದ್ಯ ಕೊಟ್ಟು), ಮುಸ್ಲಿಂರು ಮತ್ತು ಬೇಡಿಕೊಂಡವರು ಲಾಡಿಗಳನ್ನು ಹಾಕಿಕೊಂಡು ಬರುತ್ತಾರೆ. ಮೊಹರಂ ಕೊನೆಯ ದಿನ (೭ ದಿನ) ಇರುವಾಗ 'ಸಂದಲ್ ರಾತ್ರಿ' ಇರುತ್ತದೆ. ಮೊಹರಂ ಮುನ್ನಾ ದಿನ 'ಕತ್ತಲರಾತ್ರಿ' ಇರುತ್ತದೆ. ಆ ದಿನವು ಸಕ್ಕರೆ ಓದಿಸುವ(ನೈವೇದ್ಯ ಕೊಡುವುದು), ಕೆಲವರು ಬ್ಯಾಟಿ (ಪ್ರಾಣಿಬಲಿ) ಮಾಡುವುದು ಇರುತ್ತದೆ. ಮೊಹರಂ ಹಬ್ಬದ ದಿನ ಬೆಳಿಗ್ಗೆ ೫ ಗಂಟೆಗೆ ದೇವರು ಏಳುತ್ತವೆ. ಅಗ್ನಿಕುಂಡ ಹಾಯುವ ಮೂಲಕ ಪವಾಡ ಮತ್ತು ಹೇಳಿಕೆಗಳು ಪ್ರಾರಂಭವಾಗುತ್ತವೆ. ಭಕ್ತರು ತಮ್ಮ ಇಷ್ಟಾರ್ಥಗಳ ಸಿದ್ದಿಗಾಗಿ ದೇವರುಗಳಲ್ಲಿ ಬೇಡಿಕೊಳ್ಳುತ್ತಾರೆ. ದೇವರಗಳು ಮುಂದೆ ಅಗ್ನಿಕುಂಡದ ಸುತ್ತ ಅಲಾಯಿ ಕುಣಿಯುತ್ತಾರೆ. ರಾತ್ರಿಯಿಂದ ಬೆಳಗಿನವರೆಗೆ ಆಡುತ್ತಾರೆ. ಮೊಹರಂ ದಿನ ೪ ಗಂಟೆಗೆ ದೇವರು ನದಿಗೆ ಹೋಗುವ ಮೂಲಕ ಮೊಹರಂ ಕೊನೆಗೊಳ್ಳುತ್ತದೆ. ಸೂಸಲ ಎಡೆ ಕೊಡುತ್ತಾರೆ. ಈ ಹಬ್ಬದಲ್ಲಿ ಹಿಂದುಗಳ ಪಾತ್ರ ಪ್ರಧಾನವಾಗಿದ್ದು, ಇದು ಗಡ್ಡೆಗಳಲ್ಲಿ ಹಿಂದೂ ಮುಸ್ಲಿಂ ಸಾಮರಸ್ಯಕ್ಕೆ ಅನುವು ಮಾಡಿಕೊಟ್ಟಿದೆ ಎಂದು ಹೇಳಬಹುದು.

**ನಾಗರ ಪಂಚಮಿ:** ಶ್ರಾವಣ ಮಾಸದಲ್ಲಿ ಆಚರಿಸಲ್ಪಡುವ ಈ ಹಬ್ಬವು ಸಾಮಾನ್ಯವಾಗಿ ಎಲ್ಲಾ ಸಮುದಾಯಗಳ ಜನರ ವಿಶಿಷ್ಟ ಆಚರಣೆಯಾಗಿ ಕಂಡುಬರುತ್ತದೆ. ನಾಗರ ಪಂಚಮಿಯನ್ನು ಹೆಣ್ಣು ಮಕ್ಕಳ ಹಬ್ಬವೆಂದೇ ಕರೆಯಲಾಗುತ್ತದೆ. ಹೊಸದಾಗಿ ಮದುವೆಯಾಗಿ ಹೋದ ಹೆಣ್ಣು ಮಕ್ಕಳು ಮೊದಲ ಪಂಚಮಿಯನ್ನು ತವರಿನಲ್ಲೇ ಆಚರಿಸುತ್ತಾರೆ. ಎರಡು ದಿವಸ ಈ ಹಬ್ಬವನ್ನು ಆಚರಿಸಲಾಗುತ್ತದೆ. ಮೊದಲನೇ ದಿನ ಬೆಲ್ಲದ ನೀರು ಕಲಸಿ ಬೆಲ್ಲದ ಹಾಲು ಎಂದು ಭಾವಿಸುತ್ತ ಗುಡಿಯಲ್ಲಿರುವ ನಾಗರ ಮೂರ್ತಿಗೆ ಅಥವಾ ಹುತ್ತಕ್ಕೆ ಮನೆಯ ಎಲ್ಲಾ ಹೆಣ್ಣು ಮಕ್ಕಳು ಹಾಲು

ಎರೆಯುತ್ತಾರೆ. ಎರಡನೇ ದಿನವಾದ ಪಂಚಮಿಯಂದು ಆಕಳ ಹಾಲಿನಿಂದ ನಾಗಪ್ಪನಿಗೆ ಎರೆಯುತ್ತಾರೆ. ನಾಗಪ್ಪನಿಗೆ ಹಾಲು ಎರೆದ ನಂತರ ಧಾರಗಳನ್ನು, ತಾವು ಕೊರಳಲ್ಲಿ ಹಾಕಿಕೊಂಡು ಬರುತ್ತಾರೆ. ನಾಗಪ್ಪನಿಗೆ ಭಕ್ಷ್ಯ ಭೋಜನಗಳನ್ನು ವಿಧವಿಧವಾದ ಉಂಡಿಗಳನ್ನು ಮಾಡಿ ಎಡೆ ಮಾಡುತ್ತಾರೆ. ನಡುಗಡ್ಡೆಗಳಲ್ಲಿ ಜೋಳದ ಅಳ್ಳು, ಎಳ್ಳುಂಡಿ, ಕಡಲೆ ಉಂಡಿ, ಶೇಂಗಾ ಉಂಡಿ, ಗೋದಿಹುಗ್ಗಿ ನೀಡುತ್ತಾರೆ. ಪೂಜೆಯ ನಂತರ ಉಂಡೆಗಳನ್ನು ಅಕ್ಕ ಪಕ್ಕದ ಜನರಿಗೆ ಕೊಡುವುದು, ಅವರಿಂದ ತೆಗೆದುಕೊಳ್ಳುವುದು, ಬೇರೆಯ ಊರುಗಳ ನೆಂಟರಿಗೆ ಕಳುಹಿಸುವುದು, ಹಬ್ಬದ ದಿನ ಕೊಬ್ಬರಿ ಆಡಿಸುವುದು, ಜೋಕಾಲಿ ಆಡುವ ಪದ್ಧತಿ ಇದೆ. ಮದುವೆ ಗೊತ್ತಾದವರು ಶ್ರಾವಣಮಾಸದಲ್ಲಿ ಹುಡುಗಿಗೆ ಸೀರೆ ಉಂಡಿಗಳನ್ನು ಕೊಡುತ್ತಾರೆ.

ನಾಗಪ್ಪನಿಗೆ ಹಾಲುಹೊಯ್ಯುವಾಗ ನನ್ನ ಪಾಲು, ನಮ್ಮವ್ವನ ಪಾಲು, ನಮ್ಮಪ್ಪನ ಪಾಲು, ಅಣ್ಣನ ಪಾಲು, ತಮ್ಮನ ಪಾಲು, ಅಕ್ಕನ ಪಾಲು, ತಂಗಿ ಪಾಲು, ಗಂಡನ ಪಾಲು ಎಲ್ಲರ ಪಾಲು ನಾಗಪ್ಪನ ಹಾಲು ಎಂದು ಎಲ್ಲಾ ಬಂಧುಬಾಂಧವರ ಹೆಸರಿನಲ್ಲಿ ಮಹಿಳೆಯರು ಹಾಲು ಎರೆಯುತ್ತಾರೆ. ಈ ಹಬ್ಬದಲ್ಲಿ ಜೋಕಾಲಿ ಆಡುವುದು ತುಂಬ ವಿಶೇಷ. ಅದರಲ್ಲಿ ಜನಪದ ಹಾಡುಗಳನ್ನು ಹಾಡುತ್ತಾರೆ.

> ನಾಗರ ಪಂಚಮಿ ನಾ ಹೆಂಗ ಮರಿಲೆವ್ವ
> ನನ್ನ ತವರು ಮನೆಯ। ಇನ್ನೆಂಟು ದಿವಸಕ
> ನಮ್ಮಣ್ಣ ಬರುತಾನ ನನ್ನ ಕರಿಲಾಕ....

ಎಂಬ ಹಾಡು ನಾಗರ ಪಂಚಮಿ, ಹೆಣ್ಣು ಮಕ್ಕಳ ಅದರಲ್ಲೂ ತವರಿನ ಹಬ್ಬ ಎಂದು ಸ್ಪಷ್ಟಪಡಿಸುತ್ತದೆ. ಗಂಡನ ಮನೆಗೆ ಹೋದ ಗೆಳತಿಯರೆಲ್ಲ ಕೂಡುವುದು ಈ ಹಬ್ಬದಲ್ಲಿ ಎಂದು ಹೇಳಬಹುದು.

**ಕಾರಹುಣ್ಣಿಮೆ:** ಜೇಷ್ಠ ಮಾಸದ ಹುಣ್ಣಿಮೆಯನ್ನು ಕಾರಹುಣ್ಣಿಮೆ ಎಂದು ಕರೆಯುತ್ತಾರೆ. ಕೃಷಿಕರು ಇದನ್ನು ಮಳೆಗಾಲದ ಆರಂಭವೆಂದು ಎತ್ತುಗಳ ಕೋಡುಗಳಿಗೆ ಬಣ್ಣ ಹಚ್ಚಿ, ಕೋಡೆಣಸುಗಳನ್ನು ತೊಡಿಸಿ, ಕೋಡು ಬಳೆಗಳನ್ನು ಹಾಕಿ, ಕೊರಳಿಗೆ ಗೆಜ್ಜೆ ಸರವನ್ನು ಕಟ್ಟಿ ಮೈ ಮೇಲೆ ಅಲ್ಲಲ್ಲಿ ಉರಿ ಮಂಜಿನ ಬಣ್ಣ ಹಚ್ಚಿ ಅಲಂಕಾರಗೊಳಿಸಿ, ಎತ್ತುಗಳನ್ನು ಮೆರವಣಿಗೆ ಹೊರಡಿಸಿ ಅಗಸಿಯ ಕಡೆಗೆ ಅಲಂಕಾರದಿಂದ ಕಟ್ಟಿದ ಅಗಸಿಬಾಗಿಲಿಗೆ ಕರಿಯನ್ನು ಹರಿಯಲು ಓಡಿಸುತ್ತಾರೆ. ಇದು ಎರಡು ಗಡ್ಡೆಗಳಲ್ಲಿ ಮಾತ್ರ ನಡೆಯುತ್ತದೆ. ಅಂದರೆ ದೇವರಗಡ್ಡೆ, ಕುರುವಪೂರಗಡ್ಡೆಗಳಲ್ಲಿ ಕರಿ ಹರಿಯುತ್ತಾರೆ. ಉಳಿದ ಗಡ್ಡೆಗಳಲ್ಲಿ ಎತ್ತುಗಳಿಗೆ ಸಿಂಗರಿಸಿ ಬಿಡುತ್ತಾರೆ. ಕೆಂದೆತ್ತು ಕರಿಹರಿದರೆ, ಕೆಂಜೋಳ ಬೆಳೆಯುವುದೆಂದು, ಬಿಳಿಎತ್ತು ಕರಿ ಹರಿದರೆ ಬಿಳಿಜೋಳ ಬೆಳೆಯುವುದೆಂದು, ಬಿಳಿಎತ್ತು ಕರಿ ಎತ್ತು ಎರಡು ಕೂಡಿ ಸಮಹರಿದರೆ ಸಮಕಾಲವೆಂದೂ ಬೆಳೆಗಳ 'ಬಿಲಕಾಲ'ವೆಂದೂ ತಿಳಿಯುವರು.

**ಸಂಕ್ರಾಂತಿ:** ಸೂರ್ಯನ ಚಲನೆಯ ಹಬ್ಬ ಎಂದೇ ಕರೆಯಲಾಗುವ ಸಂಕ್ರಾಂತಿ ಹಬ್ಬವನ್ನು ದೇಶದ ವಿವಿಧ ಪ್ರದೇಶಗಳಲ್ಲಿ ಆಚರಣೆ ಮಾಡಲಾಗುತ್ತದೆ. ನಡುಗಡ್ಡೆಗಳ ಪ್ರದೇಶದಲ್ಲಿ ಈ ಹಬ್ಬವನ್ನು ಸಂಭ್ರಮದಿಂದ ಆಚರಣೆ ಮಾಡುತ್ತಾರೆ. ಯಾಕೆಂದರೆ ಇಲ್ಲಿಗೆ ಅನೇಕ ದೂರದ ಊರುಗಳಿಂದ ನಡುಗಡ್ಡೆಗಳಿಗೇ ಜನರು ಬರುತ್ತಾರೆ. ಇಲ್ಲಿ ಕೃಷ್ಣಾ ನದಿ ಇರುವುದರಿಂದ ಪೂರ್ಣಸ್ನಾನಕ್ಕಾಗಿ ಜಲದುರ್ಗ ನಡುಗಡ್ಡೆ, ರಾಮಗಡ್ಡೆ, ನಾರದಗಡ್ಡೆ, ಕುರುವಪೂರಗಡ್ಡೆಗಳಿಗೆ ಸಂಕ್ರಾಂತಿ ಸಮಯದಲ್ಲಿ ಜನಸಾಗರವೇ ಬರುತ್ತದೆ. ಬಂದಂತಹ ಜನರು ನದಿಯಲ್ಲಿ ಸ್ನಾನ ಮಾಡಿ ಅಲ್ಲಿರುವ ದೇವರುಗಳಿಗೆ ಪೂಜಿಸಲ್ಲಿಸಿ ಬರುತ್ತಾರೆ. ಇವರುಗಳಿಂದ ಗಡ್ಡೆಯ ಜನರು ಕೂಡ ಇದೇ ರೀತಿ ಹಬ್ಬವನ್ನು ಆಚರಿಸುತ್ತಾರೆ. ಕೆಲವರು ಆಚರಿಸುತ್ತಾರೆ, ಕೆಲವರು ತಮ್ಮ ದಿನ ನಿತ್ಯದ ಕೆಲಸಗಳಲ್ಲಿ ಭಾಗಿಯಾಗಿರುತ್ತಾರೆ.

ಜಗತ್ತಿಗೇ ಕಣ್ಣಾದ ಇಂತಹ ಸೂರ್ಯನ ಚಲನೆಯ ಹಬ್ಬ ಸಂಕ್ರಮಣ ಅಥವಾ ಸಂಕ್ರಾಂತಿ. ಸಂಸ್ಕೃತದಲ್ಲಿ "ಕ್ರಮಣ" ಎಂದರೆ 'ಹೆಜ್ಜೆ' ಇಡುವಿಕೆ ಎಂದರ್ಥ. ಸಂಕ್ರಮಣ ಎಂದರೆ ಚೆನ್ನಾಗಿ ಹೆಜ್ಜೆ ಇಡುವಿಕೆ.

ಸೂರ್ಯ ಒಂದು ರಾಶಿಯಲ್ಲಿ ತನ್ನ ಇರುವನ್ನು ಮುಗಿಸಿ ಇನ್ನೊಂದು ರಾಶಿಗೆ ಹೆಜ್ಜೆ ಇಡುವುದೇ ಸಂಕ್ರಮಣ ಅಥವಾ ಸಂಕ್ರಾಂತಿ. ಅಂದಿನ ವಿಶೇಷವಾದ ಅಡುಗೆ ಎಳ್ಳುಹಚ್ಚಿದ ರೊಟ್ಟಿ, ಕಾಯಿ ಪಲ್ಯ ಬಹಳ ವಿಶೇಷವಾದ ಅಡುಗೆ. ಎಳ್ಳು ಹೋಳಿಗೆ, ಶೇಂಗಾ ಹೋಳಿಗೆ ಮಾಡುತ್ತಾರೆ. ಅಡುಗೆ ಮಾಡಿ, ಊಟಮಾಡುವುದು ಅಷ್ಟೆ ವಿಶೇಷ. ನದಿಯಲ್ಲಿ ಸ್ನಾನ ಮಾಡುವುದು ಇವರಿಗೆ ವಿಶೇಷ ಅಲ್ಲ. ಏಕೆಂದರೆ ದಿನಾಲು ಇವರು ನದಿಯಲ್ಲಿ ಸ್ನಾನ ಮಾಡುವುದರಿಂದ ವಿಶೇಷ ಅಂತ ಅನಿಸುವುದಿಲ್ಲ. ಎಳ್ಳು ಬೀಜಕುಟ್ಟಿ ಮೈಗೆ ಹಚ್ಚಿಕೊಂಡು ಸ್ನಾನ ಮಾಡಿಕೊಳ್ಳುತ್ತಾರೆ. ಕೆಲವರು ಮನೆಯಲ್ಲಿ ಮಾಡಿ ಬಿಡುತ್ತಾರೆ. ಕೆಲವರು ನದಿಗೆ ಹೋಗುತ್ತಾರೆ.

**ಮಣ್ಣೆತ್ತಿನ ಅಮವಾಸ್ಯೆ:** ಜೇಷ್ಠಮಾಸದ ಅಮವಾಸ್ಯೆಯ ದಿನ ಮಣ್ಣೆತ್ತಿನ ಅಮವಾಸ್ಯೆ ಎಂದು ಆಚರಿಸುತ್ತಾರೆ. ಈ ದಿನ ಮಣ್ಣಿನಿಂದ ಎತ್ತುಗಳನ್ನು ಮಾಡಿ ಅವುಗಳಿಗೆ ಪೂಜೆ ಮಾಡಿ ಮನೆಯ ಬಾಗಿಲ ಮೇಲೆ ಅಥವಾ ಜಗಲಿಯ ಮೇಲೆ ಅಥವಾ ಮನೆಯ ಜಂತಿಗೆ ಕಟ್ಟುತ್ತಾರೆ. ತಿರುಗಿ ಬರುವ ಮಣ್ಣೆತ್ತಿನ ಅಮವಾಸ್ಯೆಯವರೆಗೆ ಮನೆಯಲ್ಲಿ ಇಟ್ಟಿರುತ್ತಾರೆ. ಮತ್ತೆ ಅಮವಾಸ್ಯೆ ಬಂದ ನಂತರ ಹಳೆಯ ಮಣ್ಣಿನ ಎತ್ತುಗಳನ್ನು ನದಿಗೆ ಅಥವಾ ಭಾವಿ ನೀರಿಗೆ ಹಾಕಿ ಹೊಸಮಣ್ಣೆತ್ತುಗಳನ್ನು ಇಟ್ಟು ಪೂಜಿಸುತ್ತಾರೆ. ಪ್ರತಿ ವರ್ಷ ಹೀಗೆ ಮಾಡುತ್ತಾರೆ.

**ದೀಪಾವಳಿ:** ದೀಪಾವಳಿ ಹಬ್ಬವನ್ನು ಉತ್ತರ ಕರ್ನಾಟಕದ ಎಲ್ಲಾ ಗ್ರಾಮಗಳಲ್ಲಿ ಆಚರಿಸುವಂತೆ ಈ ನಡುಗಡ್ಡೆಗಳಲ್ಲಿ ಅಷ್ಟೊಂದು ಆಚರಿಸುವುದಿಲ್ಲ. ಅಂಗಡಿ ಇದ್ದವರು, ವ್ಯಾಪಾರಸ್ಥರು, ವಾಹನಗಳು ಇದ್ದವರು ಮತ್ತು ಲಕ್ಷ್ಮೀಪೂಜೆ ಮಾಡುವವರು ಮಾತ್ರ ಆಚರಿಸುತ್ತಾರೆ. ಪ್ರತಿಯೊಬ್ಬರು ಸಾಮಾನ್ಯವಾಗಿ

ಹಸುವಿನ ಸಗಣಿಯ ಉಂಡೆಗಳನ್ನು ಮಾಡಿ ಪಾಂಡವರೆಂದು ಪೂಜಿಸುವ ವಾಡಿಕೆಯಿದೆ ಮತ್ತು ಇದನ್ನು ಬೆಳಕಿನ ಹಬ್ಬವೆಂದು ಕರೆಯುತ್ತಾರೆ. ಇತ್ತೀಚೆಗೆ ಕೆಲವು ಗಡ್ಡೆಗಳಲ್ಲಿ ಪಟಾಕಿಗಳನ್ನು ಹುಡುಗರು ಹಾರಿಸುತ್ತಿದ್ದಾರೆ.

**ಗೌರಿ ಹುಣ್ಣಿಮೆ:** ಇದು ನಡುಗಡ್ಡೆಗಳಲ್ಲಿ ಸಹಜವಾಗಿ ಆಚರಿಸಲ್ಪಡುವ ಹುಣ್ಣಿಮೆಯಾದರೂ ಮಹಿಳೆಯರಿಗೆ ವಿಶೇಷ ಹಬ್ಬವಾಗಿದೆ. ಏಕೆಂದರೆ ವಿವಾಹ ನಿಶ್ಚಯವಾದ ಸ್ತ್ರೀಗೆ ಗಂಡಿನ ಕಡೆಯವರು ಸೀರೆ, ಹೂವು ಹಾಗೂ ಸಕ್ಕರೆ ಆರತಿ ತರುವ ಪದ್ಧತಿ ಇದೆ. ಇದು ಸಹ ವಿವಾಹ ನಿಶ್ಚಯವನ್ನು ದೃಢಗೊಳಿಸಲು ಹಾಗೂ ಗಂಡು ಹೆಣ್ಣಿನವರ ನಡುವೆ ಬಾಂಧವ್ಯ ವೃದ್ಧಿಗಾಗಿ ಹುಟ್ಟಿಕೊಂಡ ಸಂಪ್ರದಾಯವಾಗಿದೆ. ಈಗ ಮದುವೆ ನಿಶ್ಚಯ, ಮದುವೆಯ ಪೂರ್ವದ ಕೆಲವೇ ದಿನಗಳಲ್ಲಿ ನಡೆಯುವುದರಿಂದ ಈ ಸಂಪ್ರದಾಯ ಕಡಿಮೆಯಾಗುತ್ತಿದೆ. ಆದರೆ ಜನಪದರಲ್ಲಿ ಇನ್ನು ಆಚರಣೆಯಲ್ಲಿದೆ. ಅಂದರೆ ದೀಪಾವಳಿ ನಂತರ ಸಾಯಂಕಾಲ ಚಿಕ್ಕ ಮಕ್ಕಳು ಅಂದರೆ ೧೨ ವರ್ಷದ ಒಳಗಿನವರು, ೧೫ ದಿನ ಮೊದಲೇ ಪ್ರಾರಂಭಿಸುತ್ತಾರೆ. ಅಂದರೆ ಪ್ರತಿದಿನ ಗೌರಿಹುಣ್ಣಿಮೆ ದಿನ. ಇದನ್ನು ವೈಭವದಿಂದ ಆಚರಿಸುತ್ತಾರೆ. ಆರತಿಗಳಿಂದ ದಿನಾಲು ಗೌರಿಯನ್ನು ಪೂಜಿಸುತ್ತಾರೆ. ಗೌರಿಗೆ ಸಂಬಂಧ ಪಟ್ಟ ಹಾಡುಗಳನ್ನು ಹಾಡುತ್ತಾರೆ.

ಒಂದ ಸೇರ ಎಣ್ಣೆ ತಂದಾಳ ಗೌರಿ
ಒಂದು ಬಾಗಿಲಿಗೆ ಹಚ್ಚ್ಯಾಳ ಗೌರಿ
ಏಕದಾರುತೆ ಗೌರಿ ಬೆಳಗದಾರುತೆ.

**ನೂಲಹುಣ್ಣಿಮೆ:** ನೂಲ ಹುಣ್ಣಿಮೆಯನ್ನು ಜನಪದರು 'ಜನಿವಾರದ ಹುಣ್ಣಿಮೆ' ಎಂತಲೂ ಕರೆಯುತ್ತಾರೆ. ಮೊದಲು ಇದನ್ನು ಜನಿವಾರದಾರರು ಮಾತ್ರ ತಮ್ಮ ಸಾಂಪ್ರದಾಯಿಕ ಪರಂಪರೆಯಂತೆ ಆಚರಿಸುತ್ತಿದ್ದರು. ಆದರೆ ಈಗ ಅದನ್ನು ಸಮಾಜದ ಸರ್ವರೂ ರಾಖಿಹಬ್ಬವೆಂದು ಆಚರಿಸುತ್ತಾರೆ. ಮಹಿಳೆಯರು ಅಣ್ಣ, ತಮ್ಮ ಸಹೋದರತೆಯ ಬಾಂಧವ್ಯಕ್ಕಾಗಿ ರಾಖಿಕಟ್ಟಿ ಆರತಿ ಮಾಡುತ್ತಾರೆ. ಗಂಡಸರು ರಾಖಿ ಕಟ್ಟಿದ ಸಹೋದರಿಯರಿಗೆ ಕಾಣಿಕೆಕೊಡುತ್ತಾರೆ ಇದು ಆಚರಣೆ. ಆದರೆ ರಾಖಿ ಕಟ್ಟಿಸಿಕೊಂಡ ಪುರುಷರು ಸಹೋದರಿಯರಿಗೆ ರಕ್ಷಕರಾಗಿ ಇರಬೇಕೆಂದು ಈ ಹಬ್ಬದ ವಿಶೇಷವಾಗಿದೆ. ಹೀಗೆ ನೂಲಹುಣ್ಣಿಮೆ ರಾಖಿ ಹಬ್ಬವಾಗಿ ಸೋದರ ಬಾಂಧವ್ಯಕ್ಕೆ ಸೇತುವೆಯಾಗಿದೆ. ಈ ನಡುಗಡ್ಡೆಗಳಲ್ಲಿ ಎಲ್ಲ ಜನಪದರು ಮಾಡುವುದಿಲ್ಲ. ಇತ್ತೀಚೆಗೆ ಕೆಲವು ಜನರು ಇದನ್ನು ಆಚರಿಸುತ್ತಾರೆ.

**ಸಂಕ್ರಮಣ**

ಮಕರ ಸಂಕ್ರಮಣ ಹಬ್ಬ ಹಿಂದಿನಿಂದಲೂ ಪ್ರಾಧಾನ್ಯತೆಯಿಂದ ನಡೆದುಬಂದಿದೆ. ಈ ಹಬ್ಬವು ಜನವರಿ ತಿಂಗಳಿನಲ್ಲಿ ಆರಂಭವಾಗುತ್ತದೆ. ಹಬ್ಬದ ದಿನದಂದು ಸೂರ್ಯನು ಮಕರ

ರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರು ತಿಂಗಳಿನವರೆಗೆ ತಿರುಗುತ್ತಾನೆ. ಈ ಒಂದು ದಿನವನ್ನು ಮಕರ ಸಂಕ್ರಾಂತಿ ಎಂದು ಕರೆಯುವರು. ಈ ಹಬ್ಬದಂದು ಎಳ್ಳು-ಬೆಲ್ಲ ಹಂಚುವರು. 'ಭೋಗಿ, ಸಂಕ್ರಮಣ ಮತ್ತು ಕನುಹಬ್ಬ' ಎಂದು ಮೂರು ದಿನಗಳವರೆಗೆ ಈ ಹಬ್ಬವನ್ನು ಆಚರಣೆ ಮಾಡುತ್ತಾರೆ. ಈ ವೇಳೆಗೆ ಗಡ್ಡೆಯಲ್ಲಿ ಬೇರೆ ಬೇರೆ ತರಹದ ಬೆಳೆಗಳನ್ನು ಸಹ ಬೆಳೆದಿರುತ್ತಾರೆ.

ಅಂದಿನ ದಿನ ಗಡ್ಡೆಯ ಜನರು ಮನೆ ಮಾರುಗಳನ್ನು ಸಾರಿಸಿ ಎಳ್ಳು, ನೀರು, ಜಳಕ ಮಾಡಿ ತಾವು ಮಾಡಿದ ಎಳ್ಳು ಹಬ್ಬದ ರೊಟ್ಟಿ ಬರ್ತವನ್ನು ಊಟ ಮಾಡುತ್ತಾರೆ. ಎಳ್ಳು-ಬೆಲ್ಲ ಬೇರೆಯವರಿಗೆ ಹಂಚುವುದು ಕಡಿಮೆ. ಈ ಗಡ್ಡೆಯ ಜನರಿಗೆ ಎಲ್ಲಾ ಹಬ್ಬಕ್ಕಿಂತಲೂ ಏನೋ ಒಂದು ತರಹ ತಮ್ಮ ಗಡ್ಡೆಗೆ ಸಂಭ್ರಮ ಎಂದು ಭಾವಿಸುತ್ತಾರೆ. ಏಕೆಂದರೆ ಐತಿಹಾಸಿಕವಾಗಿ ಪ್ರಸಿದ್ಧವಾಗಿರುವ ಜಲದುರ್ಗ ನಡುಗಡ್ಡೆಗೆ ಬೇರೆ ಜಿಲ್ಲಾ ತಾಲ್ಲೂಕುಗಳಿಂದ ಜನಸಾಗರವೇ ಹರಿದುಬರುತ್ತದೆ. ನಡುಗಡ್ಡೆಗೆ ಎರಡು ಹೊಳೆಗಳಿರುವುದರಿಂದ ಎಲ್ಲಿ ನೋಡಿದರೂ ಜನಸಾಗರವೇ. ಒಂದು ರೀತಿಯಲ್ಲಿ ಜಾತ್ರೆಯೇ ನಡೆದು ಹೋಗುತ್ತದೆ. ಈ ಗಡ್ಡೆಯಲ್ಲಿರುವ ಜನರಿಗೆ ಬರುವ ಜನಸಮೂಹ ನೋಡುವುದೇ ವಿಶೇಷ.

**ಎಳ್ಳಾಮಾಸಿ ಹಬ್ಬ**

ಒಕ್ಕಲಿಗರಿಗೆ ತಾವು ಬೆಳೆಯುವ ಬೆಳೆ ಹಾಗೂ ಭೂಮಾತೆಯನ್ನು ಆರಾಧಿಸುವ ಹಬ್ಬಗಳಲ್ಲಿ ಎಳ್ಳಾಮಾಸಿ ಪ್ರಮುಖವಾದದ್ದು. ಬಿಳಿಜೋಳ ಆಗ ತಾನೇ ಹೊಡೆ ಬಿಚ್ಚಿಕೊಂಡು ಸುಂಕಗಟ್ಟಿ ಹಾಲಗಾಳ ಹಿಡಿಯುತ್ತದೆ. ಎಳ್ಳಾಮಾಸಿಯಲ್ಲಿ ಮೈಕೊರೆಯುವ ಚಳಿ ಇರುತ್ತದೆ. ಏಕೆಂದರೆ ಗಡ್ಡೆಯ ಸುತ್ತಲೂ ನೀರಿರುವುದರಿಂದ ತುಂಬಾನೇ ಚಳಿ. ಇಂತಹ ಚಳಿಯಲ್ಲಿ ಗಡ್ಡೆಯ ಜನರು ತಮ್ಮ ಹೊಲಕ್ಕೆ ಚರಗ ಚೆಲ್ಲಕ್ಕೆ ಹೋಗುವರು. ಅವರಿಗೆ ವಿಶೇಷ.

ನಸುಕಿನಲ್ಲಿಯೇ ಎದ್ದು ಹೆಂಗಸರು ಗುಡಿಸಲು ಮನೆ ಮಾರುಗಳನ್ನು ಸಾರಿಸಿ ಜಳಕ ಮಾಡಿ ಹೊಸ ಬಟ್ಟೆ ಧರಿಸಿ ಆಭರಣಗಳನ್ನು ಹಾಕಿಕೊಂಡು ಹಿಗ್ಗಿನಿಂದ ಎಳ್ಳು ಹಚ್ಚಿದ ರೊಟ್ಟಿ, ಎಣ್ಣೆಗಾಯಿ, ಹೋಳಿಗೆ, ಹುರಿಬಾನ್, ಬಿಂದಿಗೆ ನೀರು ತೆಗೆದುಕೊಂಡು ಬೆಳಗಿನ ಜಾವದಲ್ಲಿ ಮನೆಯಲ್ಲಿ ಎಲ್ಲರೂ ಹೋಗುವುದಿಲ್ಲ. ಒಬ್ಬರು ಇಬ್ಬರು ಮೂರು ಜನ ಹೋಗಿ ಬೆಳೆಯ ನಡುವೆ ಐದು ಕಲ್ಲುಗಳನ್ನಿರಿಸಿ ಅದಕ್ಕೆ ನೀರು ಸುರುವಿ ವಿಭೂತಿ, ಕುಂಕುಮ ಹಚ್ಚಿ ಕಾಯಿ ಒಡೆದು, ಎಡೆ ಹಿಡಿಯುತ್ತಾರೆ.

ಮತ್ತೊಂದೆಡೆಯನ್ನು, ಮೊಸರನ್ನ, ಬಾನ ಕೈಯಲ್ಲಿ ಕೊಟ್ಟು ಅವನೊಂದಿಗೆ ತಂಬಿಗೆ ನೀರು ಹಿಡಿದುಕೊಂಡು ಹೊಲದ ನಾಲ್ಕು ಮೂಲೆಗೂ ಮತ್ತು ಹೊಲದ ತುಂಬ ಒಬ್ಬ ಹುಲ್ಲಿಲಿಗೊ

ಮತ್ತೊಬ್ಬ ಸುರಂಬಳಿಗೊ? ಎನ್ನುತ್ತಾ ಆಹಾರ ಹಾಗೂ ನೀರನ್ನು ಸಿಂಪಡಿಸುತ್ತ ಚರಗ ಚೆಲ್ಲುತ್ತಾರೆ. ಹೀಗೆ ಮಾಡುವುದರಿಂದ ಭೂದೇವಿ ಸಂತೃಪ್ತಳಾಗಿ ಹೆಚ್ಚು ಇಳುವರಿಯನ್ನು ಕೊಡುತ್ತಾಳೆಂಬ ನಂಬಿಕೆ ಇವರಲ್ಲಿದೆ. ಹುಲ್ಲಿಲಿಗೊ? ಎಂಬುದು ಹುಲುಸಾಗಲಿ ಎಂಬುದನ್ನು ಸೂಚಿಸುತ್ತದೆ. ನಂತರ ಉಳಿದ ಎಡೆಯನ್ನು ತಾವು ಊಟ ಮಾಡಿ ಬರುತ್ತಾರೆ.

ಇಷ್ಟೇ ಅಲ್ಲದೇ ಎಳ್ಳಾಮಾಸಿಯಲ್ಲಿ ಗಡ್ಡೆಯಲ್ಲಿರುವ ಎಲ್ಲಾ ದೇವರುಗಳಿಗೆ ಹೆಣ್ಣು ಮಕ್ಕಳು ಗಂಡು ಮಕ್ಕಳು ಹೊಸ ಬಟ್ಟೆ ಧರಿಸಿಕೊಂಡು ನೈವೇದ್ಯ ಕಾಯಿಯನ್ನು ಒಡೆಸುವುದು ಸಾಮಾನ್ಯವಾಗಿದೆ.

### ೫.೩. ನಂಬಿಕೆ, ವಿಧಿ–ನಿಷೇಧಗಳು

ಜನಪದ ನಂಬಿಕೆ, ವಿಧಿ–ನಿಷೇಧಗಳು ಪರಂಪರಾನುಗತವಾಗಿ ಅಂಗೀಕೃತವಾದ ಪರಿಕಲ್ಪನೆಗಳು. ನಂಬಿಕೆ, ವಿಧಿ–ನಿಷೇಧಗಳು ಅಂಗೀಕೃತವಾದಲ್ಲಿ, ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷೆಗಳು ಮುಖ್ಯವಾಗುತ್ತವೆ. ನಂಬಿಕೆಯು ಜನಪದ ಜೀವನಾನುಭವದ ಉತ್ಪನ್ನ. ಹೀಗಾಗಿ ಮಾನವನ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧವಿದೆ. ಅದು ಸೂಚನೆ, ನಿಯಮ, ವಿಧಿ–ನಿಷೇಧ–ನಿರ್ದೇಶನ, ಆಗ್ರಹ, ಆದೇಶ ಹಾಗೂ ಆಜ್ಞೆಗಳ ರೂಪದಲ್ಲಿ ನಿತ್ಯ ಆಲೋಚನೆ, ರೂಢಿ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಕೂಡಿದ್ದು, ಆ ಮೂಲಕ ಕ್ರಿಯಾ ರೂಪವನ್ನು ತಾಳುತ್ತದೆ. ಆ ಮೂಲಕ ಹುಟ್ಟಿರಬಹುದಾದಂತಹ ನಂಬಿಕೆಗಳು ನಡುಗಡ್ಡೆಗಳಲ್ಲಿ ಹೇರಳವಾಗಿ ಸಿಗುತ್ತವೆ. ಸಾಮಾಜಿಕ ನೆಲೆಗಟ್ಟಿನ ಮೇಲೆ ರೂಪುಗೊಂಡ ನಂಬಿಕೆಗಳಿಗೆ ತಾತ್ವಿಕ, ಸಾಮಾಜಿಕ ಹಿನ್ನೆಲೆಯು ಧಾರ್ಮಿಕ ತಳಹದಿಯೂ ಇರುತ್ತದೆ. ನಾವು ಜನಪದ ಸಂಸ್ಕೃತಿಯ ಅಂತರಾಳದ ಜೀವಂತ ಮಿಡಿತವನ್ನು ಈ ನಂಬಿಕೆಗಳಲ್ಲಿ ಗುರುತಿಸಬಹುದು.

“ಮೂಢ ಭಕ್ತಿಗೆ ಕೇಡಿಲ್ಲ”, “ದಿಕ್ಕಿಲ್ಲದವರಿಗೆ ದೇವರೇ ಗತಿ” ಎಂಬ ಜನಪದ ಮಾತುಗಳು ಅವರ ನಂಬಿಕೆಗಳಿಗೆ ಹಿಡಿದ ಕೈಗನ್ನಡಿಯಂತಿವೆ. ಯಾವುದೇ ಕಾಲದಲ್ಲಿ ಹುಟ್ಟಿಕೊಂಡ ನಂಬಿಕೆಗಳನ್ನು ಜನ ಇಂದಿಗೂ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.

ಜನಪದರ ಜೀವನದ ವಿವಿಧ ಹಂತಗಳಲ್ಲಿ ಸಾಗುವ ನಂಬಿಕೆಗಳು ಬದುಕಿನ ಬಹುದೊಡ್ಡ ಆಧಾರ ಸ್ತಂಭಗಳು. ಸಂಶಯ ಸಂದೇಶಗಳನ್ನು ದೂರಸರಿಸಿ ಸಾರ್ಥಕತೆಯ ಜೀವನದ ಸಾರವನ್ನು ಸವಿಯಲು ನಂಬಿಕೆಗಳು ಸಹಕಾರಿಯಾಗುತ್ತಿವೆ. ನಂಬಿಕೆ ಕೆಲವೊಮ್ಮೆ ರಕ್ಷಣೆಯನ್ನು ಒದಗಿಸಿ ಭ್ರಾತೃತ್ವವನ್ನು ಬೆಳೆಸುತ್ತದೆ. ವ್ಯಕ್ತಿಯ ಮನೋಭಾವ ಹೇಗಿರುತ್ತದೆಯೋ ಹಾಗೆಯೇ ಜನರಲ್ಲಿ ಪ್ರಭಾವ ಬೀರುವ ನಂಬಿಕೆಗಳನ್ನು ಮಾನವ ತನ್ನ ಉಳಿವಿಗಾಗಿ ರೂಢಿಸಿಕೊಂಡಿದ್ದಾನೆ.

ವ್ಯಕ್ತಿಯ ಬದುಕಿನಲ್ಲಿ ಶ್ರದ್ಧೆಯನ್ನುಂಟು ಮಾಡುವ ನಂಬಿಕೆಯು ಒಂದು ಮಾನಸಿಕ ಸ್ಥಿತಿ. ಇದು ಭೂತ, ವರ್ತಮಾನ, ಭವಿಷ್ಯತ್ತಿನ ಸಂಗತಿಗಳನ್ನು ಸೃಷ್ಟಿಸಿಕೊಳ್ಳುತ್ತಾ ಹೋಗುತ್ತದೆ. ಹೀಗಾಗಿ ಮಾನವನ ಬದುಕಿಗೂ ನಂಬಿಕೆಗೂ ಬಿಡಿಸಲಾಗದ ಸಂಬಂಧವಿದೆ. ನಂಬಿಕೆಗಳು ಮಾನವನ ಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ ವ್ಯಾಪಿಸಿವೆ. ಸಮುದಾಯ, ವೃತಿ, ಅಂತಃಸ್ತುಗಳ ಬೇಧವಿಲ್ಲದೆ ಎಲ್ಲರ ಜೀವನದಲ್ಲಿ ಸೇರಿಕೊಂಡಿವೆ(ಡಾ. ಮಂಜುನಾಥ ಬೇವಿನಕಟ್ಟಿ, ಪು.೩೧). ಹೀಗೆ ನಂಬಿಕೆಗಳು ವ್ಯಕ್ತಿಯ ಜೀವನದಲ್ಲಿ ಬಹುಮುಖ್ಯವಾದ ಪಾತ್ರವಹಿಸುತ್ತವೆ.

ನಂಬಿಕೆಗಳು ಕಾಲದೇಶ ವ್ಯಕ್ತಿಯೊಂದಿಗೆ ಸಾಪೇಕ್ಷ ಸಂಬಂಧ ಹೊಂದಿರುವಂತಹವು. ಒಬ್ಬನಿಗೆ ಅದು ನಂಬಿಕೆಯಾದರೆ ಮತ್ತೊಬ್ಬ ವ್ಯಕ್ತಿಗೆ ಅದು ಮೂಢನಂಬಿಕೆಯಾಗಬಹುದು. ನಮ್ಮ ಜನಪದ ಜೀವನದೊಂದಿಗೆ ಸಂಬಂಧವನ್ನು ಹೊಂದಿರುವ ನಂಬಿಕೆಗಳು ಅವರ ಬದುಕಿನ ಎಲ್ಲಾ ಮಗ್ಗುಲುಗಳನ್ನು ಆವರಿಸಿಕೊಂಡಿವೆ. ನಡುಗಡ್ಡೆಗಳ ಪರಿಸರದಲ್ಲಿ ಇಂತಹ ನಂಬಿಕೆ ವಿಧಿ ನಿಷೇಧಗಳು ಸಂವಿಧಾನದ ನಿಯಮಗಳಂತೆ ಕಟ್ಟುನಿಟ್ಟಾಗಿಯೇ ಇರುತ್ತವೆ. ಇಲ್ಲಿನ ಜನರು ಆ ನಿಯಮಗಳಿಗೆ ಬದ್ಧರಾಗಿ ಇಲ್ಲಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜೀವಿಸುತ್ತಿದ್ದಾರೆ.

ನಡುಗಡ್ಡೆಗಳಲ್ಲಿ ಇರುವ ಜನಪದರು ಶಕುನಗಳನ್ನು ನಂಬುತ್ತಾರೆ. ಹೊರಹೋಗುವಾಗ ತುಂಬಿದ ಕೊಡ ಎದುರಿಗೆ ಬಂದರೆ ಶುಭ ಶಕುನ, ಖಾಲಿಕೊಡ ಬಂದರೆ ಅಪಶಕುನ, ಸೌದೆಹೊರೆ ಎದುರಿಗೆ ಬಂದರೆ ಅಪಶಕುನ, ಹಲ್ಲಿ ಲೊಚಗುಟ್ಟಿದರೆ ಯಾವ ಮೂಲೆಯಿಂದ ಲೊಚಗುಟ್ಟಿತು ಎಂಬುದನ್ನು ನೋಡಿ ಶುಭ, ಅಶುಭವನ್ನು ಹೇಳುತ್ತಾರೆ. ಶುಭ ಮತ್ತು ಅಶುಭದ ಮಾಲೆಗಳನ್ನು ನಿರ್ಧರಿಸಿಕೊಂಡಿರುತ್ತಾರೆ. ಈ ದಿಕ್ಕಿಗೆ ಮಿಂಚಿದರೆ ಮಳೆ ಬರುತ್ತದೆ. ಆ ದಿಕ್ಕಿಗೆ ಮಿಂಚಿದರೆ ಮಳೆ ಬರುವುದಿಲ್ಲ ಎಂದು ತಿಳಿಯುತ್ತಾರೆ. ಒಲೆ ಜೋರಾಗಿ ಮೊರೆದರೆ ನೆಂಟರು ಬರುತ್ತಾರೆ ಎನ್ನುವ ನಂಬಿಕೆ, ಕೋಳಿ ಹುಂಜ ಹೊಸಲಿನ ಮೇಲೆನಿಂತು ಕೂಗಿದರೆ ನೆಂಟರು ಬರುತ್ತಾರೆ. ಆ ನೆಂಟರಿಗೆ ಕೋಳಿ ಕೊಯ್ದು ಅಡುಗೆ ಮಾಡಬೇಕೆನ್ನುವ ನಂಬಿಕೆಗಳು ಇಲ್ಲಿವೆ.

ನಂಬಿಕೆಯು ನಡುಗಡ್ಡೆಗಳ ಜನರ ಬದುಕಿಗೆ ಸೂಚನೆ, ನಿಯಮ, ಆಜ್ಞೆ, ಆದೇಶ, ನಿಷೇಧ ಹಾಗೂ ನಿರ್ದೇಶನ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನೇರ್ಪಡಿಸಿ, ಜನಪದರ ಕೆಲಸ, ಜೀವನದ ಆಲೋಚನಾ ಕ್ರಮ, ಆಚರಣೆ, ಸಂಪ್ರದಾಯಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು. ನಡುಗಡ್ಡೆಗಳ ಪರಿಸರದ ಜನರ ಬದುಕನ್ನು ಲೌಕಿಕ ಕ್ರಿಯೆಯನ್ನು ಗಟ್ಟಿಗೊಳಿಸಲು ಅಥವಾ ನಿಷೇಧಿಸಲು ನಂಬಿಕೆಗಳು ಅದಕ್ಕೆ ಧಾರ್ಮಿಕ ಚೌಕಟ್ಟನ್ನು ಒದುಗಿಸುವುದುಂಟು. ಅಂತಹ ನಂಬಿಕೆಗಳು ಇಲ್ಲಿವೆ. ಅಂತಹವುಗಳಲ್ಲಿ ಕೆಲವುಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ.

## ನಂಬಿಕೆಗಳು

ಶುಭ ಕಾರ್ಯಕ್ಕೆ ಹೋಗುವಾಗ ಬೆಕ್ಕು, ವಿಧವೆ, ಹಾರಿ, ಗುದ್ಲಿ, ಖಾಲಿಕೊಡ, ಕ್ಷಾರಿಕ, ಹಾವು, ಒಂಟಿ ಬ್ರಾಹ್ಮಣ ಎದುರು ಅಥವಾ ಅಡ್ಡಬರಬಾರದು.

ಎಲ್ಲಿಗಾದರು ಹೋಗುವಾಗ ತುಂಬಿದ ಕೊಡ ಎದುರು ಬಂದರೆ ಒಳ್ಳೆಯ ಶಕುನ.

ಎಲ್ಲಿಗಾದರು ಹೋಗುವಾಗ ಮುಂಗುಸಿ ಅಡ್ಡ ಬಂದರೆ, ರತ್ನಪಕ್ಷಿ ಕಂಡರೆ, ಆಕಳು ಎದುರು ಬಂದರೆ ಶುಭ ಶಕುನ.

ದೇವರಿಗೆ ಬೆನ್ನು ತೋರಿಸುತ್ತಾ ಹೊರ ಬರಬಾರದು. ಹಿಂಬದಿಯಲ್ಲಿ ನಾಲ್ಕು ಹೆಜ್ಜೆ ಹಿಂದೆ ಹೋಗಬೇಕು.

ಶವ ಸಂಸ್ಕಾರ ಮುಗಿಸಿ ಬರುವಾಗ ಹಿಂದೆ ತಿರುಗಿ ನೋಡಬಾರದು.

ಬಾಣಂತಿ, ಮದುಮಕ್ಕಳು ಬರಿಗಾಲಿನಿಂದ ಓಡಾಡಬಾರದು.

ಹೊರಗೆ ಹೋಗುವಾಗ ಎಲ್ಲಿಗೆ ಎಂದು ಕೇಳಬಾರದು.

ಕಟ್ಟಿಗೆ ಉರುವಲು ಒಲೆ ಒದರಿದರೆ ಯಾರಾದರೂ ಬರುತ್ತಾರೆ ಎಂಬ ಸೂಚನೆ.

ತುಂಬಿದ ಕೊಡ ಕೈ ಜಾರಿ ಬಿದ್ದರೆ ಮಳೆ ಬರುವ ಸೂಚನೆ.

ನಾಯಿ ಮುಗಿಲಿಗೆ ಮುಖ ಮಾಡಿಕೂಗಿದರೆ ಮಳೆ ಬರುವ ಸೂಚನೆ

ಚಂದ್ರನ ಸುತ್ತ ಕಣ ಕಟ್ಟಿದರೆ ಮಳೆ ಬರುವ ಸೂಚನೆ.

ಮೈಮೇಲಿನ ಬಟ್ಟೆಯನ್ನು ಹೊಲಿಯ ಬಾರದು.,

ಉಪ್ಪು ಕೈಯಿಂದ ಕೈಗೆ ಕೊಟ್ಟರೆ ಜಗಳವಾಗುತ್ತದೆ.

ಬಾಳೆ ಎಲೆಯಲ್ಲಿ ಊಟ ಮಾಡುವವರು ಎಲೆ ತುದಿ ಭಾಗ ಎಡಕ್ಕೆ ಮಾಡಬೇಕು.

ಮುಸ್ಸಂಜೆ ಹೊತ್ತಲ್ಲಿ ಮಲಗಬಾರದು.

ಗಂಡನ ತಟ್ಟೆಯಲ್ಲಿ ಹೆಂಡತಿ ಊಟ ಮಾಡಿದರೆ ಗಂಡನ ಪ್ರೀತಿ ಆಯಸ್ಸು ಹೆಚ್ಚಾಗುತ್ತದೆ.

ಗಂಡನ ಊಟವಾದ ನಂತರ ಹೆಂಡತಿ ಊಟ ಮಾಡಬೇಕು.

ಮೊದಲ ಬಾರಿಗೆ ಮಗುವನ್ನು ನೋಡಿದರೆ, ಮಗುವಿಗೆ ಏನಾದರೂ ಕೊಡಬೇಕು.

ಒಂಟಿ ಕಾಲಿನಲ್ಲಿ ನಿಲ್ಲುವವರು ಕಾಲು ಅಲುಗಾಡಿಸುವುದು, ಕಾಲನ್ನು ಬೇರೆಯವರಿಗೆ ತಾಕಿಸುವುದು ಮಾಡಬಾರದು.

ಮನುಷ್ಯರನ್ನು, ಆಕಳನ್ನು ಕಸಬರಿಗೆಯಿಂದ ಹೊಡೆಯಬಾರದು.

ಮರದಿಂದ ಕೇರುವಾಗ ಅದರ ಗಾಳಿ ಗಂಡಸರಿಗೆ ತಾಗಬಾರದು.

ಮದುವೆಯಾದ ವರ್ಷ ದಂಪತಿಗಳ ಸಮೇತ ಜಾತ್ರೆ ನೋಡಬೇಕು.

ಮನೆಯ ಮುಂದೆ ತುಳಸಿ ಗಿಡವಿದ್ದರೆ ಕಾಯಿಲೆಗಳು ಬರುವುದಿಲ್ಲ.

ಹೆಣ್ಣಿಗೆ ಎಡಗಣ್ಣು, ಗಂಡಿಗೆ ಬಲಗಣ್ಣು ಹಾರಿದರೆ ಒಳ್ಳೆಯದು.

ಹೆಂಗಸರು ಅವಳಿ ಬಾಳೆಹಣ್ಣು ತಿನ್ನಬಾರದು.

ರಾತ್ರಿ ಹೊತ್ತಲ್ಲಿ ಗುಡಿಸಿದ ಕಸ ಹೊರಗೆ ಚೆಲ್ಲಬಾರದು ಲಕ್ಷ್ಮಿ ಹೊರಗೆ ಹೋಗುತ್ತಾಳೆ.

ಯಾವುದೇ ಶುಭ ಅಶುಭ ಕಾರ್ಯಗಳಿಗೆ ಪುರೋಹಿತರಿಂದ, ಸ್ವಾಮಿಗಳಿಂದ ಪಂಚಾಂಗ ಕೇಳಿಸಿ ಆ ಪ್ರಕಾರ ಮಾಡಬೇಕೆಂಬ ನಂಬಿಕೆ ಇದೆ.

ಬೆಳಿಗ್ಗೆ ಏಳುವಾಗ ಬಲ ಮಗ್ಗುಲಲ್ಲಿ ಏಳಬೇಕು.

ದೇವರು ಬಲಭಾಗದಿಂದ ಹೂವು ಕೊಟ್ಟರೆ ಕೆಲಸ ಆಗುತ್ತದೆ. ಎಡಭಾಗದಿಂದ ಕೊಟ್ಟರೆ ಕೆಲಸ ಆಗುವುದಿಲ್ಲ ಎಂಬ ನಂಬಿಕೆ.

ಮನೆಯಲ್ಲಿ ಯಾರಾದರೂ ಸತ್ತರೆ ಸತ್ತವರ್ಷವೇ ಮದುವೆ ನಡೆಯಬೇಕು. ಇಲ್ಲದಿದ್ದರೆ ಮೂರು ವರ್ಷದವರೆಗೆ ಮದುವೆ ಮಾಡಲು ಬರುವುದಿಲ್ಲ.

ಕೈಯಲ್ಲಿ ಗರುಡ ರೇಖೆ ಇರುವವರನ್ನು ಕಂಡರೆ ಹಾವು ಹೆದರುತ್ತದೆ.

ಮಗುವಿಗೆ ಮೇಲಿನ ಹಲ್ಲು ಮೊದಲು ಬಂದರೆ ಸೋದರಮಾವನಿಗೆ ಕೇಡು, ಪರಿಹಾರವಾಗಿ ಬೆಳ್ಳಿ ಬಟ್ಟಲಲ್ಲಿ ಎಣ್ಣೆ ಹಾಕಿ ಆ ಮಗುವಿನ ಮುಖ ನೋಡಬೇಕು.

ನಾಗರಹಾವನ್ನು ಸಾಯಿಸಿದರೆ ಹಾಗೆ ಬಿಸಾಕಬಾರದು. ಬಾಯಲ್ಲಿ ನಾಣ್ಯ ಇಟ್ಟು ಹಾಲು ಹಾಕಿ ಸುಡಬೇಕು.

ಮನೆಯೊಳಗೆ ಕಾಗೆ ಬರಬಾರದು.

ಬಸುರಿಯ ಬಯಕೆ ತೀರಸದಿದ್ದರೆ ಹುಟ್ಟುವ ಮಕ್ಕಳ ಕಿವಿ ಸೋರುತ್ತದೆ.

ಯಾವುದೇ ಕೃಷಿ ಚಟುವಟಿಕೆ ಆರಂಭವಾಗುವ ಮೊದಲು ಹೊಲಕ್ಕೆ ಹೋಗಿ ಕಾಯಿ ಒಡೆದು ಪೂಜೆ ಮಾಡಬೇಕು.

ಪ್ರತಿ ಅಮವಾಸ್ಯೆಗೆ ಎತ್ತು, ಗೊಂದಲಿಗೆ, ಕಾಯಿ ಒಡೆದು ಪೂಜೆ ಮಾಡಬೇಕು.

ನಾವು ಯಾರನ್ನಾದರೂ ಕುರಿತು ಮಾತನಾಡುವಾಗ ಅಲ್ಲಿಗೆ ಆ ವ್ಯಕ್ತಿ ಬಂದರೆ ಅವರಿಗೆ ನೂರು ವರ್ಷ ಆಯಸ್ಸು ಎಂದು ಹೇಳುತ್ತಾರೆ.

೧. ಮಗಳನ್ನು ಮಂಗಳವಾರ ಗಂಡನ ಮನೆಗೆ, ಸೊಸೆಯನ್ನು ಶುಕ್ರವಾರ ತವರು ಮನೆಗೆ ಕಳಿಸಬಾರದು.

೨. ಶುಕ್ರವಾರ, ಮಂಗಳವಾರ ಮತ್ತು ಅಮವಾಸ್ಯೆಯ ದಿವಸ ಹೊರಗಿನವರಿಗೆ ಹಣಕೊಡಬಾರದು. ಲಕ್ಷ್ಮಿಹೊರಗೆ ಹೋಗುತ್ತಾಳೆ ಎಂಬ ನಂಬಿಕೆ.

೩. ಬರೀ ತೊಟ್ಟಿಲನ್ನು ತೂಗಬಾರದು, ಮಕ್ಕಳಿಗೆ ಹೊಟ್ಟೆ ನೋವು ಬರುತ್ತದೆ.

೪. ಯಾರಾದರೂ ಮಲಗಿದಾಗ ದಾಟಬಾರದು, ಬಾಣಂತಿಯರು ಕಾಲು ಚಾಚಿಕೊಂಡು ಕುಳಿತಾಗ ದಾಟಬಾರದು, ದಾಟಿದರೆ ದಾಟಿದ ರೀತಿಯಲ್ಲಿ ವಾಪಸ್ ಬರಬೇಕು.

೫. ಮಗು ಮಲಗಿದಾಗ ಸುತ್ತಲೂ ಕುಳಿತುಕೊಳ್ಳಬಾರದು ಶವದ ಮುಂದೆ ಕುಳಿತಂತಾಗುತ್ತದೆ.

೬. ದೀಪ ಆರಿಸು ಎನ್ನಬಾರದು, ನಂದಿಸು, ಶಾಂತಿಮಾಡು ಎನ್ನಬೇಕು.

೭. ಹೋಗುತ್ತೇನೆ ಎನ್ನಬಾರದು ಹೋಗಿ ಬರುತ್ತೇನೆ ಎನ್ನಬೇಕು.

೮. ಹುಟ್ಟಿದ ದಿನ ಮಂಗಳವಾರ, ಅಮವಾಸ್ಯೆ, ಹಬ್ಬದಂದು ಮುಖಕ್ಷಾರ ಕಟಿಂಗ್ ಮಾಡಿಸಿ ಕೊಳ್ಳಬಾರದು.

೯. ಹೊಸ್ತಿಲಿನ ಮೇಲೆ ಸೀನುವುದು, ಕಾಲಿನಿಂದ ತುಳಿಯುವುದು ಮಾಡಬಾರದು.

೧೦. ಅಕ್ಕಿ ಆರಿಸುವಾಗ ಅಕ್ಕಿ ತಿನ್ನಬಾರದು, ತಿಂದರೆ ಅವರ ಮದುವೆಯಲ್ಲಿ ಮಳೆ ಬರುವುದು.

೧೧. ಗರ್ಭಿಣಿಯರು ಶವಯಾತ್ರೆಯನ್ನು ನೋಡಬಾರದು.

೧೨. ಗರ್ಭಿಣಿಯರು ಗ್ರಹಣ ಕಾಲದಲ್ಲಿ ತರಕಾರಿ, ಹಣ್ಣು ಕೊಯ್ಯಬಾರದು ಹಾಗೆ ಮಾಡಿದರೆ ಅಂಗವಿಕಲ ಮಕ್ಕಳು ಹುಟ್ಟುತ್ತವೆ.

೧೩. ಬೆಕ್ಕು ಕೆಟ್ಟ ಧ್ವನಿಯಲ್ಲಿ ಕೂಗಬಾರದು, ಹಾಗೆ ಮಾಡಿದರೆ ಅವುಗಳನ್ನು ಓಡಿಸಬೇಕು.

೧೪. ಬೆಕ್ಕು ಎಡಕ್ಕೆ ಹೋಗಬಾರದು.

೧೫. ಬೆಕ್ಕು ಮುಖ ತಿಕ್ಕಿಕೊಂಡರೆ, ಕಾಗೆ ಮನೆಯ ಮುಂದೆ ಕುಳಿತು ಕಾ ಕಾ ಎಂದು ಕೂಗಿದರೆ ಮನೆಗೆ ನೆಂಟರು ಬರುತ್ತಾರೆ.

೧೬. ರಾತ್ರಿ ಹಾಲಿಲ್ಲದೆ ಹೆಪ್ಪಿಗೆ ಹೋಗಬಾರದು.

೧೭. ಯಾರಾದರೂ ಗಿಣ್ಣದ ಹಾಲು ಕೊಟ್ಟರೆ ಕಾಲಿ ಪಾತ್ರೆ ವಾಪಸ್ ಕೊಡದೆ, ಅಕ್ಕಿ, ಜೋಳ, ಬೆಲ್ಲ ಹಾಕಿ ಕೊಡಬೇಕು.

೧೮. ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು, ಸಾಲ ಹೆಚ್ಚಾಗುತ್ತದೆ.

೧೯. ಬಿಸಿಲಿನಲ್ಲಿ ಮಳೆ ಬಂದರೆ ಒಳ್ಳೆಯದು.

೨೦. ಶವಯಾತ್ರೆ ಎದುರು ಬಂದರೆ ಒಳ್ಳೆಯದು.

೨೧. ಶವಸಂಸ್ಕಾರ ಮುಗಿಸಿ ಬರುವವರ ಎದುರು ಬರಬಾರದು. ಹಾಗೆ ಬರುವುದನ್ನು ಕಂಡಲ್ಲಿ ಪಕ್ಕ ಸರಿದುಕೊಂಡು ನಿಂತುಕೊಳ್ಳಬೇಕು.

೨೨. ಉತ್ತರ ದಿಕ್ಕಿಗೆ ತಲೆ ಇಟ್ಟು ಮಲಗಬಾರದು.

೨೩. ಬೆಳಿಗ್ಗೆ ಎದ್ದ ತಕ್ಷಣ ಎರಡು ಅಂಗೈಗಳನ್ನು ಉಜ್ಜಿಕೊಂಡು ನೋಡಬೇಕು. ದೇವರ ಫೋಟೋ ತಂದೆ ತಾಯಿಯರನ್ನು ಮೊದಲು ನೋಡಬೇಕು.

೨೪. ಮದುವೆಯಾದ ವರ್ಷ ಆಷಾಡ ಮಾಸದಲ್ಲಿ ಅತ್ತೆ ಸೊಸೆ ಒಂದೇ ಮನೆಯಲ್ಲಿ ಇರಬಾರದು.

೨೫. ಶ್ರಾವಣ ಮಾಸದಲ್ಲಿ ತಲೆ ಕೂದಲು ಕ್ಷೌರ ಮಾಡಿಸಬಾರದು.

೨೬. ಚಿಕ್ಕ ಮಕ್ಕಳು ಮಲಗಿರುವಾಗ ಮುತ್ತು ಕೊಡಬಾರದು.

೨೭. ತಂದೆ ತಾಯಿ ಇರುವವರು, ಬಸುರಿ ಹೆಂಗಸಿನ ಗಂಡ ಶವ ಸಂಸ್ಕಾರಕ್ಕೆ ಹೋಗಬಾರದು.

೨೮. ಊಟ ಮಾಡುವಾಗ ಮೈ ಮುರಿಯಬಾರದು, ಊಟದ ತಟ್ಟೆಯನ್ನು ದಾಟಬಾರದು, ಊಟದ ಮೇಲೆ ಸಿಟ್ಟು ಮಾಡಿ ಎದ್ದು ಹೋಗಬಾರದು.

೨೯. ಗರ್ಭಿಣಿಯರು ಹಳ್ಳ ದಾಟಬಾರದು, ಅನಿವಾರ್ಯವಾದಲ್ಲಿ ನದಿಗೆ ಬಾಗಿನಕೊಟ್ಟು ದಾಟಬೇಕು.

೩೦. ಬಂಗಾರ ಸಿಕ್ಕರೆ ಬಂಗು ಬಿಡಿಸುತ್ತದೆ. ಆದಕಾರಣ ಅದನ್ನು ಐನೋರಿಗೆ ದಾನ ಮಾಡಬೇಕು.

೩೧. ಉಪ್ಪು ಕದಿಯಬಾರದು ಉಪ್ಪನ್ನು ಬಿಸಾಕಬಾರದು.

೩೨. ಯಾರಿಗಾದರು ನೀರು ಚಿಮುಕಿಸಬಾರದು ಹಾಗೆ ಮಾಡಿದಲ್ಲಿ ಒಳಿತು ಎನ್ನಬೇಕು. ಇಲ್ಲದಿದ್ದರೆ ಉಗುರು ಸುತ್ತು ಆಗುತ್ತದೆ.

೩೩. ಬಿಕ್ಕಳಿಕೆ ಬಂದರೆ ಯಾರೋ ನೆನಪಿಸಿಕೊಳ್ಳುತ್ತಿದ್ದಾರೆ ಎಂದರ್ಥ.

೩೪. ಗರ್ಭಿಣಿ ನೆರಳು ನಾಗರ ಹಾವಿಗೆ ಬೀಳಬಾರದು, ನೆರಳು ಬಿದ್ದರೆ ಅವಳ ಹೆರಿಗೆ ಆಗುವತನಕ ಹಾವಿಗೆ ಕಣ್ಣು ಕಾಣಿಸುವುದಿಲ್ಲ.

೩೫. ದೊಡ್ಡ ಕಿವಿ ಇದ್ದರೆ, ಅಂಗಾಲು ಜೊಳ್ಳು ಇದ್ದರೆ, ಕೈಬೆರಳುಗಳನ್ನು ಜೋಡಿಸಿದಾಗ ಸಂದು ಕಾಣಿಸದಿದ್ದರೆ ಶ್ರೇಷ್ಠ, ಅವರು ಧನಿಕರಾಗುತ್ತಾರೆ.

೩೬. ದೇವಸ್ಥಾನದಲ್ಲಿ ದರ್ಶನದ ನಂತರ ಸ್ವಲ್ಪ ವೇಳೆ ಕುಳಿತು ಬರಬೇಕು.

೩೭. ಶುಭ ಕಾರ್ಯಕ್ಕೆ ಮೂವರು ಹೋಗಬಾರದು. ಹೋಗುವುದು ಅನಿವಾರ್ಯವಾದಲ್ಲಿ ಜೇಬಿನಲ್ಲಿ ಅಡಿಕೆ ಬೆಟ್ಟೆ ಇಟ್ಟುಕೊಳ್ಳಬೇಕು. ಜೊತೆಗೆ ಗಣಪತಿ ಬಂದಹಾಗೆ.

೩೮. ಸಂಜೆ ದೀಪ ಹಚ್ಚಿದ ಮೇಲೆ ಕಸ ಬಳಿಯುವುದು, ತಲೆ ಬಾಚಿಕೊಳ್ಳುವುದು, ಊಟಮಾಡುವುದು ನಿಷೇಧ.

ಬೆಳಗಿನ ಕನಸು ನನಸ್ಸಾಗುತ್ತದೆ.

ಊಟ ಮಾಡುವಾಗ ಮಾತನಾಡುವುದು, ಅಳುವುದು ಮಾಡಬಾರದು.

ವೀಳ್ಯದೆಲೆ ಬೋರಲಾಗಿ ಬಿದ್ದರೆ ತಿನ್ನಬಾರದು. ಅಡಿಕೆ ಕೈಯಿಂದ ಜಾರಿ ಬಿದ್ದರೆ ಅದು ಸಿಗುವುತನಕ ಹುಡುಕಬೇಕು ಇಲ್ಲವಾದರೆ ಹುಡುಕುವುದನ್ನು ಬಿಟ್ಟುಬಿಡಬೇಕು.

ಆರು ಬೆರಳು ಇದ್ದವರು ಅದೃಷ್ಟವಂತರು.

ಮುತ್ತೈದೆಯಾದವರು ಗಾಜಿನ ಬಳೆ, ಮಾಂಗಲ್ಯ ಇಲ್ಲದೆ ಬಹಳ ಹೊತ್ತು ಇರಬಾರದು.

ರಾತ್ರಿ ಹೊತ್ತು ಸುಣ್ಣ, ಉಪ್ಪು ಹೊರಗಡೆ ಕೊಡಬಾರದು.

ಬೆಕ್ಕನ್ನು ಹೊಡೆಯುವುದು, ಸಾಯಿಸುವುದು ಮಾಡಬಾರದು.

ಹಲ್ಲಿ ಸಾಯಿಸಬಾರದು.

ಹಲ್ಲಿ ಮೈಮೇಲೆ ಬಿದ್ದರೆ ಕೈಕಾಲು ಮುಖ ತೊಳೆದುಕೊಂಡು ತುಳಸಿ ಕಟ್ಟೆಗೆ ಊದಿನಕಡ್ಡಿ ಹಚ್ಚಿ ಬೆಳಗಿದರೆ ದೋಷವಿಲ್ಲ.

ಹಾವರಾಣಿಯನ್ನು ಮುಟ್ಟಿದರೆ ಹಣ ಸಿಗುತ್ತದೆ.

ಮತ್ತೊಬ್ಬರೊಂದಿಗೆ ಮಾತನಾಡುವಾಗ ಲೊಚಗುಟ್ಟಿದರೆ ಆಗ ಆಡಿದ ಮಾತು ನಿಜ ಎಂದರ್ಥ. ಕೆಲವರು ಶಿವಶಿವ ಎಂದು ಹೇಳುತ್ತಾರೆ.

ಗೂಂಬೆ ಮನೆಯ ಮುಂದೆ ಕುಳಿತು ಕೂಗಿದರೆ ಸಾವಿನ ಸೂಚನೆ.

ನಕ್ಷತ್ರ ಬಿದ್ದರೆ ಗಣ್ಯರು ಸಾಯುವ ಸೂಚನೆ ಇದನ್ನು ನೋಡಿದವರು ನೆಲಕ್ಕೆ ಉಗುಳಬೇಕು.

ಶಿವಗಣಾರಾಧನೆ, ನಿಧನ ವಾರ್ತೆ ಇರುವ ಪತ್ರವನ್ನು ಓದಿದ ಮೇಲೆ ಹರಿದು ಹಾಕಬೇಕು.

ನಿಧನದ ವಿಷಯ ತಿಳಿಸುವ ಪತ್ರ ಬರೆದರೆ ಪತ್ರದ ನಾಲ್ಕು ಮೂಲೆಗೆ ಮಸಿ ಹಚ್ಚಬೇಕು.

ಗಂಡಿಗೆ ತಲೆಯಲ್ಲಿ ಎರಡು ಸುಳಿ ಇದ್ದರೆ ಅವನಿಗೆ ಎರಡು ಮದುವೆಯೋಗ ಇದೆ ಎಂಬುದು.

ನಾಲಿಗೆಯ ಮೇಲೆ ಮಚ್ಚೆ ಇದ್ದರೆ ಅವರು ಆಡಿದ ಮಾತು ನಿಜವಾಗುತ್ತದೆ.

ಮೇಲಿಂದ ಮೇಲೆ ಹೆಣ್ಣು ಮಕ್ಕಳು ಹುಟ್ಟುತ್ತಿದ್ದರೆ ಸಾಕು ಸಾವಿತ್ರಿ ಬೇಕು ಬೆನಕಪ್ಪ ಎಂದು ಹೆಸರಿಟ್ಟರೆ ಮುಂದಿನ ಮಗು ಗಂಡಾಗುತ್ತದೆ.

ಉಪ್ಪಿನ ಕಾಯಿಯನ್ನು ಅಮವಾಸ್ಯೆಯ ದಿನ ರಾತ್ರಿ ಹೊತ್ತು, ಮಂಗಳವಾರ ಶುಕ್ರವಾರ ತೆಗೆಯಬಾರದು.

ತಂದೆಯಂತೆ ಮಗಳು ತಾಯಿಯಂತೆ ಮಗ ಇದ್ದರೆ ಅದೃಷ್ಟಶಾಲಿಗಳು ಎಂಬ ನಂಬಿಕೆ ಇದೆ.

ತುಂಬಿದ ಗಡಿಗೆ ಎದುರಾದರೆ ಶುಭ.

ಬಲಿ ನೀಡುವ ಮೊದಲು ಬಲಿಯಾಗುವ ಪ್ರಾಣಿಯ ತಲೆಯ ಮೇಲೆ ನೀರು ಹಾಕಬೇಕು.

ದೇವರ ಕೊಳದ ನೀರನ್ನು ಅಸಹ್ಯ ಪಡದೇ ಸ್ನಾನಮಾಡಬೇಕು.

ನೀರಿನಲ್ಲಿ ಮುಳಗಿದವರನ್ನು ಗಂಗಮ್ಮ ಮೂರು ಬಾರಿ ತೇಲಿಸಿ, ಮೂರು ಬಾರಿ ಮುಳಗಿಸಿ ಮಡಿಲಿಗೆ ಹಾಕಿಕೊಳ್ಳುತ್ತಾಳೆ.

ಕೆರೆ ತುಂಬಿದಾಗ ಬಲಿಕೊಡಬೇಕು.

ಸತ್ತ ಸ್ಥಳದಲ್ಲಿ ನೀರು ತುಂಬಿದ ಚಂಬು ಇಡಬೇಕು.

**ವಿಧಿ-ನಿಷೇಧಗಳು (TABOO)**

"ಇಲ್ಲಿನ ಕೆಲವು ನಿಷೇಧಗಳನ್ನು ಸಮುದಾಯಗಳಲ್ಲಿ ಪಾಲಿಸದೇ ಹೋದ ವ್ಯಕ್ತಿಯನ್ನು "ಅಪವಿತ್ರ" ಎಂದು ಕರೆಯುತ್ತಾರೆ"(ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ, ೨೦೧೨, ಪು.೧೧೭). ಮತ್ತು ಆತನಿಗೆ ಶಿಕ್ಷೆ ದಂಡ ವಿಧಿಸಲಾಗುತ್ತದೆ. ಹೀಗೆ ಶಿಕ್ಷೆಗೊಳಗಾದ ವ್ಯಕ್ತಿ ಮತ್ತೆ ಪರಿಶುದ್ಧ ವ್ಯಕ್ತಿಯಾಗುತ್ತಾನೆ.

ನಿಷೇಧವನ್ನು ಉಲ್ಲಂಘಿಸಿದವ ಸಮಾಜದಲ್ಲಿ ಕೆಟ್ಟ ಮತ್ತು ವಿರುದ್ಧ ವ್ಯಕ್ತಿಯಾಗಿ ಬಿಡುವ ಸಾಧ್ಯತೆಯೂ ಇದೆ. ಭಯ ಮತ್ತು ಭಾವನಾ ಮೂಲವಾದ ನಂಬಿಕೆಯನ್ನು ಕಟ್ಟು ನಿಟ್ಟಾಗಿ ಜಾರಿಗೊಳಿಸುವ ಅಥವಾ ಬಲಗೊಳಿಸುವಂತಹದು ನಿಷೇಧ. ಹೀಗಾಗಿ ಲಿಖಿತ ಕಾನೂನನ್ನು ಮೀರಿಸುವಂತಹ ಶಕ್ತಿ ನಿಬಂಧನೆಯಾಗಿ ನಿಷೇಧ ಕಾರ್ಯ ನಿರ್ವಹಿಸುತ್ತದೆ. ನಡುಗಡ್ಡೆಗಳ ಪರಿಸರದಲ್ಲಿ ವಿಧಿ-ನಿಷೇಧಗಳು ಕಂಡುಬರುತ್ತವೆ. ನಿಷೇಧದ ಮೂಲ ಮಾತಿನಲ್ಲಿದೆ. ಸಕಾರಾತ್ಮಕ ಆಚರಣೆಗಳಿಗಿರುವಂತೆ ನಕಾರಾತ್ಮಕವಾದವೂ ಉಂಟು. ಸಕಾರಾತ್ಮಕವಾದವುಗಳನ್ನು ಮಾತ್ರ ವಿಧಿಗಳೆಂದು ನಕಾರಾತ್ಮಕ ವಾದವುಗಳನ್ನು ನಿಷೇಧಗಳೆಂದು ಕರೆಯಬಹುದು. ನಿಷೇಧಗಳನ್ನು ಸ್ವಾರ್ಥಕ್ಕಾಗಿ ಮಾಡಿಕೊಂಡರೂ ಹೆಚ್ಚಿನ ನಿಷೇಧಗಳು ಸಾಮಾಜಿಕ ಸಂರಕ್ಷಣೆಗಳಿಗಾಗಿ ಮಾಡಿಕೊಂಡ ನಿಷೇಧಗಳಾಗಿವೆ.

**ಕೆಲವು ನಿಷೇಧಗಳು**

ಬೇವಿನ ಕಟ್ಟಿಗೆಯಿಂದ ಅಡುಗೆ ಮಾಡಬಾರದು.

ರಾತ್ರಿ ದೀಪ ಶಾಂತವಾದಾಗ ಊಟ ಮಾಡಬಾರದು.

ಉತ್ತರ ದಿಕ್ಕಿಗೆ ತಲೆ ಇಟ್ಟು ಮಲಗಬಾರದು.

ರಾತ್ರಿ ವೇಳೆ ಊಟ ಮಾಡದೆ ಮಲಗಬಾರದು.

ಗರ್ಭಿಣಿ ರಾತ್ರಿ ಹೊತ್ತು ಹೊರಗೆ ಮಲಗಬಾರದು.

ಮಲಗಿ ನೀರು ಕುಡಿಯಬಾರದು.

ಬಂಜೆಯರು ಮಕ್ಕಳನ್ನು ಮುಟ್ಟಬಾರದು.

ಕೂದಲು ಮತ್ತು ಉಗುರುಗಳನ್ನು ಸಿಕ್ಕಲ್ಲಿ, ಬಿಸಾಕಬಾರದು.

ಮಲಗಿರುವ ಮಕ್ಕಳಿಗೆ ಅಲಂಕಾರ ಮಾಡಬಾರದು.

ರಾತ್ರಿ ತಲೆ ಬಾಚಬಾರದು.

ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು.

ಬೀಸುವ ಕಲ್ಲನ್ನು ಒದೆಯಬಾರದು.

ದೀಪ ಹಚ್ಚಿದ ಮೇಲೆ ಮನೆಯಿಂದ ಏನನ್ನು ಕೊಡಬಾರದು.

ಬೆಕ್ಕು ಅಡ್ಡ ಬಂದರೆ ಪ್ರಯಾಣ ನಿಷಿದ್ಧ.

ತಲೆಯ ಮೇಲೆ ಕಾಗೆ ಕುಳಿತರೆ ಸಾವಿನ ಸುದ್ದಿ.

ಹಾವುಗಳ ಸಂಭೋಗ ಕ್ರಿಯೆ ನೋಡಿದರೆ ಅಶುಭ.

ಶುಕ್ರವಾರ ಮನೆಯ ಸೊಸೆ ತವರು ಮನೆಗೆ ಹೋಗುವಂತಿಲ್ಲ.

ಋತುಮತಿಯಾದ ಹುಡುಗಿಯನ್ನು ಮುಟ್ಟಿಸಿಕೊಳ್ಳಬಾರದು.

ಚಿಕ್ಕ ಮಗುವನ್ನು ಮುಟ್ಟಾದವರು ಎತ್ತಿ ಆಡಿಸುವಂತಿಲ್ಲ.

ಮಗುವಿಗೆ ಐದು ತಿಂಗಳಾಗುವ ತನಕ ಬಾಚಣಿಕೆಯನ್ನು ತಲೆಗೆ ಇಡುವಂತಿಲ್ಲ.

ಕಟ್ಟೆಯ ಮೇಲೆ ಕೂತು ಕಾಲು ತೂಗಬಾರದು.

ಒಂದೇ ಬೆಡಗುಳ್ಳ ವಧು ವರರು ವಿವಾಹ ಆಗುವಂತಿಲ್ಲ.

ದೇವರಿಗೆ ಮುಡಿಸುವ ಹೂ, ಊದುಬತ್ತಿಯನ್ನು ಮೂಸಿ ನೋಡಬಾರದು.

ತೆಂಗಿನ ಕಾಯಿಯನ್ನು ಕಾಲಿನಿಂದ ಒದೆಯಬಾರದು.

ದೇವರ ಗುಡಿಯ ಎದುರಿಗೆ ಮನೆ ಕಟ್ಟಬಾರದು.

ನಾಗರ ಪಂಚಮಿಯಂದು ಕರಿಗಡಬು ಮಾಡಬಾರದು.

ಗುಡಿಯಿಂದ ಮನೆಗೆ ಬಂದಾಗ ಕಾಲು ತೊಳೆಯಬಾರದು.

ಚಿಕ್ಕ ಮಕ್ಕಳು ಮಲಗಿರುವಾಗ ಮುತ್ತು ಕೊಡಬಾರದು.

ಬಸುರಿ ಹೆಂಗಸಿನ ಗಂಡ ಶವ ಸಂಸ್ಕಾರಕ್ಕೆ ಹೋಗಬಾರದು.

ಹೊರಗೆ ಹೋಗುವಾಗ ಎಲ್ಲಿಗೆ ಎಂದು ಕೇಳಬಾರದು.

ಬಾಣಂತಿ, ಮದು ಮಕ್ಕಳು ಬರಿಗಾಲಿನಿಂದ ಓಡಾಡಬಾರದು.

ವೀಳ್ಯದೆಲೆ ಬೋರಲಾಗಿ ಬಿದ್ದರೆ ತಿನ್ನಬಾರದು.

ರಾತ್ರಿ ಹೊತ್ತು ಸುಣ್ಣ, ಉಪ್ಪು ಹೊರಗಡೆ ಕೊಡಬಾರದು.

ಬೆಕ್ಕನ್ನು ಹೊಡೆಯುವುದು, ಸಾಯಿಸುವುದು ಮಾಡಬಾರದು.

ಹಲ್ಲಿ ಸಾಯಿಸಬಾರದು.

ಮನೆಯೊಳಗೆ ಕಾಗೆ ಬರಬಾರದು.

**ಹರಕೆಗಳು:** ಹರಕೆ ಎಂಬ ಪದದ ಅರ್ಥವನ್ನು ಗಮನಿಸಿದಾಗ ಒಳ್ಳೆಯದಾಗಲಿ ಎಂಬ ಮಾತು, ಬೇಡಿಕೊಳ್ಳುವುದು ಎಂಬ ಅರ್ಥವನ್ನು ಸೂಚಿಸುತ್ತದೆ. ಅಂದರೆ ಮಾನವನಿಗೆ ಒಂದಿಲ್ಲ ಒಂದು ರೀತಿಯಲ್ಲಿ ಚಿಂತನೆಗಳು, ತೊಂದರೆಗಳು, ಪದೆ ಪದೇ ಕಾಡುವ ರೋಗಗಳು, ಮಕ್ಕಳು ಮದುವೆಯಾಗದೆ ಇದ್ದರೆ, ಮಕ್ಕಳಾಗದೇ ಹೋದರೆ ಅಂತಹ ಸಂದರ್ಭದಲ್ಲಿ ಮಾನವ ದೇವರ ಮೊರೆಹೋಗುತ್ತಾನೆ. ಇವೆಲ್ಲಾ ಬಯಕೆಗಳನ್ನು ಈಡೇರಿಸಿದರೆ ನಾನು ನಿನ್ನಲ್ಲಿಗೆ ಬಂದು ಹರಕೆ ತೀರಿಸುತ್ತೇನೆ ಎಂದು ಬೇಡಿಕೊಳ್ಳುತ್ತಾನೆ. "ಆ ಹರಕೆ ವಸ್ತುಗಳ ರೂಪದಲ್ಲಿರಬಹುದು. ಒಡವೆಗಳ ರೂಪದಲ್ಲಿರಬಹುದು. ವಿವಿಧ ತೆರನಾದ ಉಪವಾಸ, ವೃತ ಆಚರಣೆ ಮಾಡುವುದರ ಮೂಲಕ ಹರಕೆ ತೀರಿಸುವ ಸಂಪ್ರದಾಯವಿದೆ"(ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ, ೨೦೧೩, ಪು.೧೨೦).

ಭಾರತೀಯ ಜೀವನದಲ್ಲಿ ದೈವಭಕ್ತಿ ಪ್ರಧಾನವಾದದ್ದು, ಜನತೆಯಲ್ಲಿ ದೈವಭಕ್ತಿ, ಹಬ್ಬ, ಹರಿದಿನ, ವ್ರತ, ಕಥೆ, ಪುರಾಣಯಾತ್ರೆ, ಜಾತ್ರೆಗಳಲ್ಲಿ ಪೋಷಕವಾದವುಗಳೇ. ಹಬ್ಬದಾಚರಣೆಯನ್ನು ಒಬ್ಬರು ಮಾಡಿದಂತೆಯೇ ಇನ್ನೊಬ್ಬರು ಮಾಡುವುದಿಲ್ಲ. ಅವರು ಇನ್ನೊಬ್ಬರಿಗಿಂತ ಉತ್ತಮವಾಗಿ ಹಬ್ಬಗಳ ಆಚರಣೆ ಉತ್ಸವ ದೈವಾರಾಧನೆಯನ್ನು ಮಾಡಬೇಕೆಂಬ ಉತ್ಕಟ ಅಭಿಲಾಷೆಯನ್ನು ಎಲ್ಲಾ ಭಕ್ತಾದಿಗಳು ಹೊಂದಿರುತ್ತಾರೆ. ನಡುಗಡ್ಡೆಗಳ ಜನರು ತಮ್ಮ ತಮ್ಮ ಮನೆಯ ದೇವರು, ಕುಲದೇವರು, ಮೊರೆಹೊಕ್ಕ ದೇವರು, ಕಾಡಿದ ಬೇಡಿದ ದೇವರು, ಗಡ್ಡೆಯಲ್ಲಿ ಪ್ರಸಿದ್ಧಿಯನ್ನು ಪಡೆದ ದೇವರು ಇವರೆಲ್ಲರಿಗೂ ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

ನಡುಗಡ್ಡೆಗಳ ಜನಪದರಿಗೆ ಪ್ರಾಕೃತಿಕವಾದ ನೆಲ, ಮಳೆ, ಒಲೆ, ಬೀಸುವಕಲ್ಲು, ಮರ, ಕಸಬರಿಗೆ ಇವು ಕೂಡಾ ಇವರಿಗೆ ದೈವವೇ. ಕುರುಬ ಸಮುದಾಯ ನಾಯಿಯನ್ನು ಮೈಲಾರಲಿಂಗ ಎಂದು ತಿಳಿದುಕೊಂಡಿರುತ್ತಾರೆ. ಮರ, ಕಸಬರಿಗೆ ಲಕ್ಷ್ಮಿ ಎಂದು ನಂಬಿಕೆ ಇಟ್ಟಿರುತ್ತಾರೆ. ಮುಸ್ಲಿಂರು ತಮ್ಮ ರಂಜಾನ ಹಬ್ಬ ಹಾಗೂ ಮೊಹರಂ ಹಬ್ಬದಲ್ಲಿ ಹರಕೆಯನ್ನು ಕಟ್ಟಿಕೊಳ್ಳುತ್ತಾರೆ. ತಮ್ಮ ಬಂಧು ಬಳಗದವರಷ್ಟೇ ಸೇರಿಕೊಂಡು ಮಾಡುವ ಹಬ್ಬ ಹರಿದಿನಗಳು ಆಚರಣೆಗಳು. ಅಂದರೆ ಅವರ ಮನೆದೇವರು ಇದ್ದರೆ ಹರಕೆ ಹೊತ್ತುಕೊಂಡು ಪೂಜೆ ಸಲ್ಲಿಸಲಾಗುತ್ತದೆ.

ಜೀವನದಲ್ಲಿ ಅನೇಕ ಕಷ್ಟ ಕಾರ್ಪಣ್ಯಗಳು ಸಂಭವಿಸುತ್ತವೆ. ಆ ಕಷ್ಟಕಾರ್ಪಣ್ಯಗಳಿಂದ ದೂರಾಗಬೇಕಾದರೆ ಹರಕೆಗಳನ್ನು ಕಟ್ಟಿಕೊಂಡು ಭಯ ಭಕ್ತಿಯಿಂದ ಪೂರೈಸುವ ಸಂಪ್ರದಾಯ ರೂಢಿಗತವಾಗಿದೆ. 'ಹರಕೆ ಹನ್ನೆರಡು ವರುಷ' ತಾವು ಅಂದು ಕೊಂಡಾಗ ತೀರಿಸಲಾಗದೇ ಹೋದರೆ, ಅನುಕೂಲವಾದಾಗ ಹರಕೆ ತೀರಿಸುವುದುಂಟು.

ಪ್ರತಿಯೊಂದು ಸಮುದಾಯದವರು ಪ್ರಮುಖವಾಗಿ ಊರಿನ ದೇವರನ್ನು ಬಿಟ್ಟು ಶಕ್ತಿ ದೇವತೆಗಳನ್ನು ಆರಾಧಿಸುತ್ತಾರೆ. ಯಲ್ಲಮ್ಮ, ಹುಲಿಗೆಮ್ಮ, ದುರ್ಗಮ್ಮ, ದ್ಯಾವಮ್ಮ ಮುಂತಾದ ಶಕ್ತಿ

ದೇವತೆಗಳ ಆರಾಧಕರು. ಈ ಎಲ್ಲ ದೇವತೆಗಳನ್ನು ಮಂಗಳವಾರ, ಶುಕ್ರವಾರ ಪೂಜಿಸುವುದು ಸಂಪ್ರದಾಯವಾಗಿದೆ. ಮಕ್ಕಳಿಗೆ ಗಣಜಲಿ, ತಟ್ಟಗೊಬ್ಬರ ಮೈ ಮೇಲೆ ಕಾಣಿಸಿಕೊಂಡರೇ, ಐದು ದಿವಸ ಹೊರಗೆ ಕಳುಹಿಸಲಾರದೇ ಐದನೇ ದಿವಸ ಮಂಗಳವಾರ ಅಥವಾ ಶುಕ್ರವಾರ ಹೆಣ್ಣು (ಶಕ್ತಿ)ದೇವತೆಯಾದ ಪಾಲಕಮ್ಮ ದೇವಿಯ ಗುಡಿಗೆ ಕಳಿಸುತ್ತಾರೆ. ಇದನ್ನು ದೀಪಕೊಡುವುದು, ನೈವೇದ್ಯ ಕೊಡುವುದು ಎನ್ನುತ್ತಾರೆ. ಹೀಗೆ ದೇವಸ್ಥಾನಕ್ಕೆ ಹೋಗುವಾಗ ತಂಬಿಗೆಯಲ್ಲಿ ನೀರನ್ನು ತುಂಬಿಕೊಂಡು ಅದರಲ್ಲಿ ಬೇವಿನ ತಪ್ಪಲ ಇಟ್ಟುಕೊಂಡು ಎರಡು ವೀಳ್ಯದೆಲೆ, ಅಕ್ಕಿ, ಅಡಿಕೆಬೆಟ್ಟಿ, ಉತ್ತತ್ತಿ, ಲಿಂಬೆಹಣ್ಣು ಒಂದು ಬಟ್ಟೆಯಲ್ಲಿ ಇಟ್ಟುಕೊಂಡು ಊರಿನ ದೇವರಿಗೆ ಹರಕೆ ತೀರಿಸುತ್ತಾರೆ.

ಹಬ್ಬ ಹರಿದಿನಗಳು ಭಕ್ತಿ, ಧರ್ಮ ಮತ್ತು ವ್ರತಾಚರಣೆಗೆ ಸಂಬಂಧಿಸಿದ ಶುಭ ದಿನಗಳು. ಸಾಂಸ್ಕೃತಿಕ ಪರಂಪರೆಯನ್ನು ನೆನಪಿಸುವ ಸಾಧನಗಳಾಗಿವೆ. ಇವುಗಳ ಆಚರಣೆಗಳು ಪವಿತ್ರವಾಗಿವೆ. ಹರಕೆಗಳು ಜೀವನ ದಾರಿಸಾಗಲು ಇರುವ ದಾರಿ ಮಗ್ಗಲುಗಳಾಗಿವೆ. ಅಂತಹ ಹರಕೆಗಳನ್ನು ನೋಡಬಹುದು. ನಡುಗಡ್ಡೆಗಳಲ್ಲಿರುವ ಕೆಲವು ಹರಕೆಗಳನ್ನು ತಿಳಿಸಲಾಗಿದೆ.

**ಹರಕೆಗಳು**

* ಗಡ್ಡೆಯಲ್ಲಿ ಮಳೆ ಬರದೆ ಇರುವಾಗ ಗಡ್ಡೆ ಗದ್ದೆಮ್ಮನಿಗೆ ಉಡಿ ತುಂಬುವ ಹರಕೆ ಮಾಡುತ್ತಾರೆ.
* ದೇವಿಗೆ ಬಂಗಾರದ ಆಭರಣಗಳ ನತ್ತು, ಡಾಬ, ಕಾಲಕಡಗ ಮಾಡಿಸುವ ಹರಕೆ.
* ನಾರದ ಗಡ್ಡೆಯಲ್ಲಿ ಹಸುಗಳಿಗೆ ಹುಟ್ಟಿದ ಗಂಡು ಕರುವನ್ನು ಗೂಳಿ ಬಿಡುವ ಹರಕೆ ಹೊರುತ್ತಾರೆ.
* ಗಡ್ಡೆ ಗದ್ದೆಮ್ಮನಿಗೆ ಕೆಂಡದ ಕೊಂಡದಲ್ಲಿ ಕೋಳಿ ಹಾರಿಸುವ ಹರಕೆ.
* ತುಪ್ಪವನ್ನು ಮೀಸಲಿಡುವ ಹರಕೆ.
* ತಮ್ಮ ಮನೆ ದೇವರಿಗೆ, ಮುಡಿಪು ಕಟ್ಟಿಡುವ ಹರಕೆ.
* ಗಂಡು ಮಗು ಹುಟ್ಟಿದರೆ ಅವನ ತೂಕ ಸಕ್ಕರೆ ಕೊಡಿಸುವುದು ಮತ್ತು ಜವುಳಾ ಬೀಡುವುದು, ದೇವರ ಹೆಸರು ಇಡುವುದು.
* ಕುರುಬರು, ಬೇಡರು, ಮುಸಲ್ಮಾನರು ತಮ್ಮ ಕುಲದೇವರಿಗೆ ಆಡು, ಕುರಿ, ಕೋಳಿ ಬಲಿಕೊಡುವ ಹರಕೆ ಹೊರುತ್ತಾರೆ.
* ಮಕ್ಕಳಾಗದವರು ಜಲದುರ್ಗದ ಎಲ್ಲಮ್ಮನ ದೇವಸ್ಥಾನಕ್ಕೆ ಕಾಯಿ ಕಟ್ಟುವುದು.
* ನಡುಗಡ್ಡೆಯಲ್ಲಿರುವ ಗದ್ದೆಮ್ಮನಿಗೆ ಮಕ್ಕಳು ಆಗದೇ ಇರುವವರು ಹರಕೆ ಹೊರುವರು. ಮಾಳಮಾರೆಪ್ಪನಿಗೆ ಮಕ್ಕಳಾಗದವರು ಕುಲಾವಿ ಹೊಲಿಸಿ ಹಾಕುವ ಹರಕೆ ಹೊರುತ್ತಾರೆ.

* ದೇವರ ಗಡ್ಡೆಯಲ್ಲಿರುವ ಗದ್ದೆಮ್ಮನಿಗೆ ಮನೆಯಲ್ಲಿ ಸಮಸ್ಯೆಯಾದರೆ, ಕುರಿ ಬಲಿಕೊಡುತ್ತೇವೆ ಎಂದು ಹರಕೆ ಹೊರುತ್ತಾರೆ.

* ಗದ್ದೆಮ್ಮನಿಗೆ ಉಡಿ ತುಂಬುವ ಹರಕೆ ಕೂಡಾ ಹೊರುತ್ತಾರೆ.

* ಜಲದುರ್ಗ ನಡುಗಡ್ಡೆಯ ಎಲ್ಲಮ್ಮನಿಗೆ, ಒದ್ದೆ ಬಟ್ಟೆಯಲ್ಲಿ ದೀಡ ನಮಸ್ಕಾರ ಹಾಕುವುದು.

* ಜಲದುರ್ಗ ಸಂಗಮನಾಥನಿಗೆ ಗಂಡು ಮಕ್ಕಳಾದರೆ ನಿನ್ನಹೆಸರು ನಾಮಕರಣ ಮಾಡುತ್ತೇವೆ, ಮತ್ತು ೧೧ ಅಮವಾಸ್ಯೆ, ೨೧ ಅಮವಾಸ್ಯೆ ನಿನ್ನ ಗುಡಿಗೆ ಬರುತ್ತೇವೆ ಎಂದು ಹರಕೆ ಹೊರುತ್ತಾರೆ.

* ಮೈಯಲ್ಲಿ ತುರಕೆ, ತದ್ದು, ಹುಣ್ಣು ಆದರೆ ಜಲದುರ್ಗ ಎಲ್ಲಮ್ಮನಿಗೆ ೫ ಶುಕ್ರವಾರ ಅಥವಾ ಮಂಗಳವಾರ ವ್ರತದೊಂದಿಗೆ ನಿನ್ನ ಗುಡಿಗೆ ಬರುತ್ತೇವೆ ಎಂದು ಹರಕೆ ಮಾಡುತ್ತಾರೆ.

ಮದುವೆಯಾಗದೇ ಇರುವ ಹೆಣ್ಣು ಮಕ್ಕಳು, ನವರಾತ್ರಿ ಸಂದರ್ಭದಲ್ಲಿ ಒಂಬತ್ತು ದಿವಸ ಸೂರ್ಯ ಹುಟ್ಟುವುದಕ್ಕಿಂತ ಮೊದಲು ಎದ್ದು ಬನ್ನಿ ಮರಕ್ಕೆ ಪೂಜೆ ಮಾಡುವ ಹರಕೆಗಳನ್ನು ಹೊರುತ್ತಾರೆ. ಹರಕೆಗಳು ಜನಪದರ ಬದುಕಿನಾಚೆಗಿನ ಬಗೆಗೆ ಪ್ರತಿಕ್ರಿಯಿಸಿದ ಬಗೆ ಅವುಗಳೊಳಗಿನ ಸಂಬಂಧಗಳನ್ನು ತಿಳಿಸುತ್ತವೆ. ಯಾವುದೇ ಧರ್ಮ, ಸಮುದಾಯ, ಕೋಮುಗಳ ನೆಲೆಯಲ್ಲಿ ಚಿತ್ರವಾಗುವ ಪ್ರಸ್ತುತ ಸಾಮಾಜಿಕ, ಧಾರ್ಮಿಕ ಸಂದರ್ಭದಲ್ಲಿ ಮನುಷ್ಯ ಸಂಬಂಧವನ್ನು ನೆಲೆಗೊಳಿಸುವಲ್ಲಿ, ಹರಕೆಗಳು ಬಳಕೆಯಾಗುತ್ತವೆ. ಇಲ್ಲಿ ಹರಕೆಗಳು ನಡುಗಡ್ಡೆಗಳ ಜನರ ಜೀವನದಲ್ಲಿ ಕಾಣುವ ಸಫಲತೆ, ವಿಫಲತೆಗಳು ನಮಗೆ ಮುಖ್ಯವಾಗುವುದಿಲ್ಲ. ಹರಕೆಗಳಿಂದ ಸಾಧ್ಯವಾಗುವ ಭಾವೈಕ್ಯತೆ ಮತ್ತು ಮಾನವ ಸಂಬಂಧಗಳ ಕೂಡಿಸುವಿಕೆ ಬಹಳ ಮಹತ್ವದ್ದಾಗಿರುತ್ತದೆ.

ನಡುಗಡ್ಡೆಗಳ ಜನರ ಆಚರಣೆ ಮತ್ತು ನಡುಗಡ್ಡೆಗಳ ಹೊರಗೆ ಇರುವ ಜನರ ಆಚರಣೆ ಸ್ವಲ್ಪ ವ್ಯತ್ಯಾಸ ಇದೆ. ಗಡ್ಡೆಯ ಜನರಲ್ಲಿ ಆಚರಣೆ ಪರಂಪರಾಗತವಾಗಿ ಸಾಗಿಬರುತ್ತಾ ಬಂದಿರುವುದನ್ನು ಕಾಣಬಹುದು. ಯಾವುದೇ ಆಚರಣೆಗಳಲ್ಲಿ ಬದಲಾವಣೆಯನ್ನು ಕಂಡುಕೊಂಡಿಲ್ಲ. ಪರಿವರ್ತನೆ ಹಾದಿಯಲ್ಲಿ ಕೂಡ ಸಾಗಿಲ್ಲ. ಸ್ವಲ್ಪಮಟ್ಟಿಗೆ ವೇಷದಲ್ಲಿ ಬದಲಾವಣೆ ರೂಪ ಕಾಣುತ್ತದೆ. ಉಳಿದವೆಲ್ಲಾ ಅಂದರೆ ಭಾಷೆ, ಆಚಾರ, ವಿಚಾರ, ನಡೆ, ನುಡಿ, ಮದುವೆ ಜನನ, ಮರಣ, ಹಬ್ಬ-ಹರಿದಿನ ಹಾಗೂ ರೀತಿ-ರಿವಾಜುಗಳು ಸಂಸ್ಕೃತಿಯ ಕೊಡುಗೆಗಳಾಗಿವೆ. ಆದರೆ ಕುಲ, ದೇಶ ಹಾಗೂ ಪರಿಸರಕ್ಕನುಸಾರವಾಗಿ ಯಾವುದೇ ಸಂಸ್ಕೃತಿಯು ಬದಲಾವಣೆಯಾಗಬೇಕಾದುದು ಅಗತ್ಯ. ಆದರೆ ಈ ನಡುಗಡ್ಡೆಗಳು ಜನಸಂಪರ್ಕ ಮತ್ತು ಆಧುನಿಕತೆಗೆ ಸ್ವಲ್ಪ ದೂರ ಉಳಿದಿರುವ ಕಾರಣವಾಗಿ ಇನ್ನು ಪಾರಂಪರಾಗತವಾಗಿ ಆಚರಣೆಗಳು ರೂಢಿಯಲ್ಲಿ ಉಳಿದಿವೆ ಎಂದು ಕ್ಷೇತ್ರಕಾರ್ಯದ ಮೂಲಕ ತಿಳಿಯಲಾಗಿದೆ.

ನಡುಗಡ್ಡೆಗಳ ಹೊರಗೆ ಇರುವ ಜನರ ಆಚರಣೆಗಳು ಪಾರಂಪರಾಗತವಾಗಿ ಸಾಗಿಬಂದಿರುವುದರ ಜೊತೆಗೆ ಸ್ವಲ್ಪ ಪರಿವರ್ತನೆಗಳನ್ನು ಕಂಡುಕೊಂಡಿದ್ದಾರೆ. ಏಕೆಂದರೆ ಇವರ ಜನಸಂಪರ್ಕ ಮತ್ತು ಆಧುನಿಕತೆಯ ಜೊತೆಗೆ ವ್ಯವಹಾರ ನಡೆಯುವುದರಿಂದ ತಮ್ಮ ಪ್ರತಿಯೊಂದು ಆಚರಣೆಗಳಲ್ಲಿ ಆಧುನಿಕತೆಗೆ ಅಳವಡಿಸಿಕೊಂಡಿದ್ದಾರೆ ಎಂದು ಹೇಳಬಹುದು.

ಆಚರಣೆಗಳು ಹೇಗೆ ಭಿನ್ನವಾಗಿದೆಯೆಂದರೆ ಉದಾಹರಣೆಗೆ ಗಡ್ಡೆಗಳಲ್ಲಿ ವಾರ, ತಿಥಿ, ಸಮಯ, ಭಕ್ತಿ, ದಿನಲೂ ಸ್ನಾನ, ದೇವರ ಪೂಜೆ ಇವು ಯಾವವು ಅವರಲ್ಲಿ ಕಾಣುವುದಿಲ್ಲ. ಗಡ್ಡೆ ಹೊರಗೆ ಇರುವ ಜನರು ವಾರ, ತಿಥಿ, ಸಮಯ, ದಿನಲೂ ಸಾನ್ನ ದೇವರಪೂಜೆ, ಭಕ್ತಿಗೆ ಮೊರೆ ಹೋಗುತ್ತಿದ್ದಾರೆ ಮತ್ತು ಭವಿಷ್ಯದಲ್ಲಿ ಹೇಳುವ ನಂಬಿಕೆಗಳು ಹೆಚ್ಚಾಗಿ ಅವರು ಹೇಳಿದ ಪೂಜೆ ಪುನಸ್ಕಾರ ಮಾಡುವವರಾಗಿದ್ದಾರೆ. ಮನೆ ಕಟ್ಟುವ, ಹೊಲ ಖರೀದಿಸುವ, ವ್ಯವಹಾರ ಪ್ರಾರಂಭ ಮಾಡುವ ಮತ್ತು ಕೊಡುವುದು ತೆಗೆದುಕೊಳ್ಳುವುದು, ಹಬ್ಬ-ಹರಿದಿನ, ಜಾತ್ರೆ ಮುಂತಾದ ಎಲ್ಲಾ ಆಚರಣೆಗಳು ಇವರಲ್ಲಿ ಪರಿವರ್ತನೆಯಾಗಿ ಆಚರಣೆ ಮಾಡುತ್ತಾರೆ.

ಆದರೆ ನಡುಗಡ್ಡೆಗಳ ಜನರು ಇದು ಯಾವುದನ್ನು ರೂಢಿಸಿಕೊಳ್ಳದೇ "ಕಾಯಕವೇ ಕೈಲಾಸ" ಎನ್ನುವ ರೀತಿಯಲ್ಲಿ ಯಾವ ಆಚರಣೆಗಳಿಗೆ ಸಮಯ, ನಕ್ಷತ್ರ ನೋಡುವುದಿಲ್ಲ. ಅವರು ನೋಡುವುದು ಗಡ್ಡೆಯ ಎಲ್ಲ ಜನರು ಸಿದ್ಧವಾಗಿದ್ದಾರೆಂಬುದನ್ನು ಗಮನಿಸಿ ಆಚರಣೆ ಮಾಡುತ್ತಾರೆ.

ನಡುಗಡ್ಡೆ ಜನರು ವಿಶೇಷವಾಗಿ ದೇವರಿಗೆ ಕಾಯಿಕರ್ಪೂರಗಳನ್ನು ಹೆಚ್ಚಾಗಿ ಕೊಡುವುದಿಲ್ಲ. ಹಾಲು, ತುಪ್ಪ, ಹೊಲದಲ್ಲಿ ಬೆಳೆದಿರುವ ಕುಂಬಳಕಾಯಿ ಮತ್ತು ಪ್ರತಿಯೊಂದು ಬೆಳೆಯ ಮೊದಲ ಫಸಲನ್ನು ತಂದು ದೇವರಿಗೆ ಅರ್ಪಿಸುತ್ತಾರೆ ಹಾಗೂ ಒಂದು ವೇಳೆ ಬೇಟೆಯಾಡಲು ಹೋದರೆ ದೇವರಿಗೆ ಕೈ ಮುಗಿದು ಹೋಗುತ್ತಾರೆ. ಬೇಟೆ ಸಿಕ್ಕರೆ ನನಗೆ ಸ್ವಲ್ಪ, ನಿನಗೆ ಸ್ವಲ್ಪ ಎಂದು ಹೇಳಿದಾಗ; ಬೇಟೆ ಸಿಕ್ಕಾಗ ಅದನ್ನು ತಂದು ದೇವರಲ್ಲಿ ಇಟ್ಟು ತೆಗೆದುಕೊಂಡು ಹೋಗುತ್ತಾರೆ.

# ಅಧ್ಯಾಯ ಆರು

# ನಡುಗಡ್ಡೆಗಳ ಭಾಷೆ ಮತ್ತು ಸಾಹಿತ್ಯ

## ಅಧ್ಯಾಯ ಆರು

# ನಡುಗಡ್ಡೆಗಳ ಭಾಷೆ ಮತ್ತು ಸಾಹಿತ್ಯ

ಮನುಷ್ಯ ತನ್ನ ಭಾವನೆಯನ್ನು ಅಭಿವ್ಯಕ್ತಿಗೊಳಿಸಲು ಮಾಡಿಕೊಂಡಿರುವ ಪ್ರಮುಖ ಸಾಧನ ಭಾಷೆ. ಭಾಷೆ ಮನುಷ್ಯನಿಗೆ ಒದಗಿ ಬಂದಿರುವ ನಿಧಿಯಾಗಿದೆ. ಜೊತೆಗೆ ಮಾನವನ ಪರಂಪರೆಯ ಲಾಂಛನವಾಗಿದೆ. ಭಾಷೆ ಸಂಸ್ಕೃತಿಯ ಪ್ರಮುಖ ಅಂಗ, ಸಾಮಾಜಿಕ ಕ್ರಿಯೆ. ಅದಕ್ಕೆ ತನ್ನದೇ ಆದ ಪ್ರತ್ಯೇಕ ಸ್ಥಾನವಿಲ್ಲ. ಅದು ಬಳಸುವ ವ್ಯಕ್ತಿಯನ್ನು ಅವಲಂಬಿಸಿದೆ. ಹೀಗಾಗಿ ಭಾಷೆಗೂ ಅದನ್ನು ಬಳಸುವ ವ್ಯಕ್ತಿಗೂ ನಿಕಟವಾದ ಸಂಬಂಧವಿದೆ.

ಭಾಷೆ ವ್ಯಕ್ತಿಯ ಅಂತರಂಗದ ಅಭಿವ್ಯಕ್ತಿ ಮಾಧ್ಯಮ. ಪದಗಳೇ ಅದರ ಅಂಗ. ನೈಸರ್ಗಿಕತೆಯಿಂದ ಕೂಡಿದ ಈ ಭಾಷಾ ಲಿಪಿಯನ್ನು ರೂಪಿಸಿಕೊಳ್ಳುವುದಕ್ಕಿಂತ ಪೂರ್ವದಿಂದಲೇ ಆದಿ ಮಾನವನ ಗುಂಪುಗಳು ತಮ್ಮ ಭಾವನೆಯನ್ನು ಶಾಬ್ಧಿಕ ರೂಪದಲ್ಲಿ, ಅಭಿವ್ಯಕ್ತಗೊಳಿಸುತ್ತಾ ಬಂದರು. ತಮಗುಂಟಾದ ಸುಖ ದುಃಖವನ್ನು, ಅದ್ಭುತ ಆಶ್ಚರ್ಯವನ್ನೋ, ಸೋಲು ಗೆಲುವನ್ನೋ, ಕುಣಿತದಲ್ಲಿ, ಹಾಡುಗಳಲ್ಲಿ, ಮೂರ್ತಗೊಳಿಸಿದರು. ಇಂತಹ ಜನಪದರು ತಮ್ಮ ಪರಿಸರದಲ್ಲಿ ತಮ್ಮ ಮೇಲೆ ಪ್ರಭಾವ ಬೀರಿದ, ಬೀರುವ ವಸ್ತುಗಳನ್ನು ಕುರಿತು ಸಾಮಾಜಿಕವಾಗಿ ತಮಗೆ ತಿಳಿದ ಚರಿತ್ರೆ, ಪರಾಕ್ರಮ, ಶೌರ್ಯ ತಾವು ನೋಡಿದ ಧಾರ್ಮಿಕ, ಸಾಮಾಜಿಕ, ತ್ಯಾಗ, ಬಲಿದಾನ, ಕೌಟುಂಬಿಕ ಸುಖ-ದುಃಖ ಸಂದರ್ಭಗಳಿಗೆ ಸಹಜವಾಗಿಯೇ ಸ್ಪಂಧಿಸಿ ಅಂತಹ ಘಟನೆಗಳನ್ನು ವಿವರವಾಗಿ ಸೆರೆಹಿಡಿದು ಮನಮೋಹಕವಾಗಿ ಮುಂದಿನ ತಲೆಮಾರಿಗೆ ಬಳುವಳಿಯಾಗಿ ಕೊಡುತ್ತಾ ಬಂದಿದ್ದಾರೆ.

ಬರಹದ ಭಾಷೆ ನಿಜವಾದ ಸ್ವಾಭಾವಿಕ ಭಾಷೆಯಾಗದು. ಕಂಠದ ಅಥವಾ ಜನಪದ ಭಾಷೆ ನೈಸರ್ಗಿಕವಾದುದಾಗಿದೆ. ಅದನ್ನೇ ದೇಸಿ ಎಂದು ಪ್ರಾಚೀನ ಕವಿಗಳು ಕರೆದಿದ್ದಾರೆ. ಇದನ್ನು ನಾವು ಶಿಷ್ಟಪದ ಮತ್ತು ಜಾನಪದ ಎನ್ನುತ್ತೇವೆ. ಶಿಷ್ಟಪದ ಸಾಹಿತ್ಯ ಶಾಸ್ತ್ರ ನಿರ್ದೇಶನದಲ್ಲಿ ಹುಟ್ಟಿದರೆ ಜನಪದ ಸಾಹಿತ್ಯ ನೆಲೆಸಿದಂ ಕಾವ್ಯ ಕಾವ್ಯಕ್ಕೆ ಲಕ್ಷಣಂ ಎಂಬಂತೆ ಈ ಮೊದಲು ಹುಟ್ಟಿದ ಸಾಹಿತ್ಯ

ಮಾದರಿಯಲ್ಲಿ ರೂಪ ಪಡೆಯುತ್ತದೆ. ನಿದ್ದೆಗೊಮ್ಮೆ ನಿತ್ಯ ಮರಣ ಎದ್ದ ಸಲ ನವೀನ ಜನನ ಎಂಬಂತೆ ಪುನಃ ಸೃಷ್ಟಿಗೊಳ್ಳುತ್ತಾ ನಡೆಯುತ್ತದೆ.

### ೬.೧. ಭಾಷೆ

ಭಾಷೆ ಒಂದು ಸಂವಹನ ಸಂಪರ್ಕ ಮಾಧ್ಯಮ. ಭಾಷೆಯ ಮಹತ್ವವನ್ನು ಕುರಿತು 'ದಂಡಿ' ಎಂಬ ಲಾಕ್ಷಣಿಕ ಈ ರೀತಿ ಹೇಳುತ್ತಾನೆ. "ಭಾಷೆ ಎಂಬ ಜ್ಯೋತಿ ಬೆಳಗದಿದ್ದರೆ ಮೂರು ಲೋಕಗಳು ಕತ್ತಲೆಯಿಂದ ತುಂಬಿ ಹೋಗುತ್ತಿದ್ದವು". ಮಾನವ ತನ್ನ ಮನಸ್ಸಿನಲ್ಲಿರುವ ಭಾವನೆಗಳನ್ನು, ವಿಚಾರಗಳನ್ನು ಭಾಷೆಯ ಮೂಲಕ ಇನ್ನೊಬ್ಬರಿಗೆ ತಿಳಿಸುತ್ತಾನೆ. ಭಾಷೆಯ ಮಹತ್ವವನ್ನು ಅರಿಯದೇ ಹೋದ ಮಾನವ ಬರೀ ಕೇವಲ ಜಂತುವಾಗಿಯೇ ಉಳಿಯುತ್ತಿದ್ದನು. ಭಾಷೆ ಮಾನವ ತನ್ನ ದೈನಂದಿನ ಬದುಕಿಗೆ ಸೃಷ್ಟಿಸಿಕೊಂಡಿರುವ ಸಂಪರ್ಕ ಸಾಧನ. ಜೊತೆಗೆ ಮಾನವ ಪರಂಪರೆಯ ಲಾಂಛನವಾಗಿದೆ"(ಶಾಂತವ್ವ ಲಕ್ಷ್ಮೇಶ್ವರ, ೨೦೧೩, ಪು.೧೨೪). ಭಾಷೆ ಸಂಸ್ಕೃತಿಯ ಪ್ರಮುಖ ಅಂಗವಾಗಿದೆ. ಅದೊಂದು ಸಾಮಾಜಿಕ ಕ್ರಿಯೆಯಾಗಿದೆ. ಅದಕ್ಕೆ ತನ್ನದೇ ಆದ ಪ್ರತ್ಯೇಕ ಸ್ಥಾನವಿಲ್ಲ. ಅದು ಬಳಸುವ ಅಭಿವ್ಯಕ್ತಿಯನ್ನು ಅವಲಂಬಿಸಿದೆ. ಹೀಗಾಗಿ ಭಾಷೆಗೂ ಅದನ್ನು ಬಳಸುವ ವ್ಯಕ್ತಿಗೂ ನಿಕಟವಾದ ಸಂಬಂಧವಿದೆ. ಭಾಷೆಯಲ್ಲಿ ಆಡುಭಾಷೆ, ಗ್ರಾಂಥಿಕ ಭಾಷೆ ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಆಡು ಭಾಷೆ ಎಂದರೆ ಜನರು ಮಾತನಾಡುತ್ತಾರೆ, ವ್ಯವಹರಿಸುತ್ತಾರೆ. ಇದನ್ನು ಜನಪದರ ಭಾಷೆ, ದೇಸಿ ಭಾಷೆ ಎಂತಲೂ ಕರೆಯುತ್ತಾರೆ. ಗ್ರಾಂಥಿಕ ಭಾಷೆ ಎಂದರೆ ಗ್ರಂಥದಲ್ಲಿ ರಚಿತವಾದ ಭಾಷೆ. ಅಂದರೆ ಲಿಪಿಬದ್ಧಗೊಳಿಸಿದುದು ಆಗಿರುತ್ತದೆ. ಭಾಷೆ, ಕಾಲ, ದೇಶ, ಪರಿಸರ ಪ್ರದೇಶಕ್ಕನುಗುಣವಾಗಿ ವ್ಯತ್ಯಾಸವಾಗುತ್ತ ಪುನರ್ ಸೃಷ್ಟಿಗೊಳ್ಳುತ್ತ ಹೋಗುವುದು ಸಹಜ ಪ್ರಕ್ರಿಯೆಯಾಗಿದೆ.

ನಡುಗಡ್ಡೆಗಳಲ್ಲಿ ಕನ್ನಡವೇ ಪ್ರಮುಖ ಭಾಷೆಯಾದರೂ, ವಿವಿಧ ಭಾಷೆಯ ಸಮುದಾಯಗಳು ಬಹುಭಾಷೆಗಳನ್ನಾಡುವವರಾಗಿದ್ದಾರೆ. ಈ ನಡುಗಡ್ಡೆಗಳು ಇಂಗ್ಲಿಷ್ ಪ್ರಭಾವಕ್ಕೆ ಒಳಗಾಗಿಲ್ಲ ಎಂದು ಹೇಳಬಹುದು. ಆದರೆ ಕೆಲವು ನಡುಗಡ್ಡೆಗಳಲ್ಲಿ ತೆಲುಗು ಮತ್ತು ಮರಾಠಿ ಭಾಷೆಯ ಪ್ರಭಾವಕ್ಕೆ ಒಳಗಾಗಿವೆ. ಅಂತಹ ನಡುಗಡ್ಡೆಗಳೆಂದರೆ ರಾಯಚೂರು ಜಿಲ್ಲಾ ವ್ಯಾಪ್ತಿಯೊಳಗೆ ಬರುವ ಕುರುವಪೂರ ನಡುಗಡ್ಡೆ. ಇಲ್ಲಿಯ ಜನರು ತೆಲುಗು ಮತ್ತು ಮರಾಠಿ ಭಾಷೆಯನ್ನು ಆಡುತ್ತಾರೆ. ಆಂಧ್ರದ ಗಡಿ ಭಾಗದಲ್ಲಿನ ಪ್ರಭಾವದಿಂದ ತೆಲುಗು ಮಾತಾನಾಡುತ್ತಾರೆ. ಇಲ್ಲಿ ಸಂಪೂರ್ಣ ತೆಲುಗು ಭಾಷೆಯನ್ನು ಮಾತನಾಡುವವರಿದ್ದಾರೆ. ಆದರೆ ಇಲ್ಲಿ ವಾಸಿಸುವ ಬ್ರಾಹ್ಮಣ ಕುಟುಂಬಗಳು ಮರಾಠಿ ಭಾಷೆಯನ್ನು ಮಾತನಾಡುತ್ತಾರೆ. ದತ್ತಾತ್ರೇಯ ದೇವಸ್ಥಾನವಿರುವುದರಿಂದ ಬೀದರ ಜಿಲ್ಲಾ ಭಕ್ತರು ಅತಿ ಹೆಚ್ಚಿನ ಪ್ರಮಾಣದಲ್ಲಿ ಈ ಗಡ್ಡೆಗೆ ಬರುವುದರಿಂದ ಇಲ್ಲಿ ಮರಾಠಿ ಪ್ರಭಾವಕ್ಕೆ ಒಳಗಾಗಿದೆ ಎಂದು ಹೇಳಬಹುದು.

ಕನ್ನಡ ಮಾತನಾಡುವುದು ಅತಿ ಕಡಿಮೆ. ಇನ್ನುಳಿದ ರಾಮಗಡ್ಡೆ ಮತ್ತು ನಾರದಗಡ್ಡೆಯಲ್ಲಿ ಸಂಪೂರ್ಣವಾಗಿ ತೆಲುಗು ಮಾತನಾಡುತ್ತಾರೆ.

ರಾಯಚೂರು ಜಿಲ್ಲಾ ಲಿಂಗಸೂಗೂರು ತಾಲೂಕಿನಲ್ಲಿ ಬರುವ ಜಲದುರ್ಗ, ಹಂಚಿನಾಳ, ಯರಗೋಡಿ, ಯಳಗುಂದ, ಕಡದರಗಡ್ಡೆ ಮತ್ತು ಯಾದಗಿರಿ ಜಿಲ್ಲಾ ಸುರಪುರ ತಾಲೂಕಿನಲ್ಲಿ ಬರುವ ಮೇಲಿನಗಡ್ಡೆ ಮತ್ತು ದೇವರಗಡ್ಡೆ, ನೀಲಕಂಠರಾಯಗಡ್ಡೆ, ಈ ನಡುಗಡ್ಡೆಗಳಲ್ಲಿ ಸಂಪೂರ್ಣವಾಗಿ ಕನ್ನಡ ಭಾಷೆಯನ್ನಾಡುವವರಾಗಿದ್ದಾರೆ. ಸ್ವಲ್ಪ ಮುಸ್ಲಿಂ ಕುಟುಂಬಗಳಲ್ಲಿ ಮಾತ್ರ ಉರ್ದು ಮಾತನಾಡುವವರಿದ್ದಾರೆ. ಈ ನಡುಗಡ್ಡೆಗಳಲ್ಲಿ ಇತ್ತೀಚಿಗೆ ಶಾಲೆ ಕಲಿತ ವಿದ್ಯಾವಂತರು ಇಂಗ್ಲಿಷ್ ಪ್ರಭಾವಕ್ಕೆ ಒಳಗಾಗಿ ಕನ್ನಡದಲ್ಲಿ ಇಂಗ್ಲಿಷ್ ಪದಗಳನ್ನು ತಮಗೆ ಗೊತ್ತಿಲ್ಲದೆಯೇ ಅಲ್ಪಸ್ವಲ್ಪ ಬೆರಸಿ ಮಾತನಾಡುತ್ತಾರೆ. ಹೀಗೆ ಭಾಷೆ ಸಂವಹನ ಸಂಪರ್ಕ ಮಾಧ್ಯಮವಾಗಿದೆ ಎಂದು ಹೇಳಬಹುದು. ಮನಸ್ಸಿನ ಅನಿಸಿಕೆ, ವಿಚಾರಗಳ ಮಾಧ್ಯಮ ಪದಗಳು ಭಾಷೆಯಾಯಿತು. ಆ ದಿನಮಾನವ ತನ್ನ ಅನಿಸಿಕೆಯನ್ನು ಕೂಗಿ, ಚೀರಿ, ಚಪ್ಪಾಳೆ ತಟ್ಟುವುದರ ಮೂಲಕ ಕಣ್ಸನ್ನೆ, ಕೈಸನ್ನೆಯ ಮೂಲಕ ಅಭಿವ್ಯಕ್ತಿಸಿದ. ಬರಬರುತ್ತಾ ಸಾಮೂಹಿಕವಾಗಿ ತಮಗೆ ತಿಳಿದ ಚರಿತ್ರೆ, ಪರಾಕ್ರಮ, ಶೌರ, ಬಲಿದಾನ, ತಾವು ನೋಡಿದ ಸಾಮಾಜಿಕ, ಧಾರ್ಮಿಕ, ತ್ಯಾಗ, ಕೌಟುಂಬಿಕ ಸುಖ–ದುಃಖ, ಸಂದರ್ಭಗಳಿಗೆ ಸಹಜವಾಗಿಯೇ ಸ್ಪಂದಿಸಿ, ಅಂತಹ ಘಟನೆಗಳನ್ನು ವಿವರವಾಗಿ ಸೆರೆ ಹಿಡಿದು, ಕಾವ್ಯ, ಗೀತೆ, ನಾಟಕ, ಕಥೆಗಳ ಮುಖಾಂತರ ಮನಮೋಹಕವಾಗಿ ಹೃದಯ ಸ್ಪರ್ಶಿಯಾಗಿ ಮುಂದಿನ ತಲೆಮಾರಿಗೆ ಬಳುವಳಿಯಾಗಿ ಕೊಡುತ್ತಾ ಬಂದಿದ್ದಾರೆ.

ಕನ್ನಡ ಭಾಷೆಯನ್ನಾಡುವ ಜನಪದರು ಪ್ರತಿದಿನ ಮಾತನಾಡುವ ಮಹಾಪ್ರಾಣಾಕ್ಷರಗಳನ್ನು ತೇಲಿಸಿ ಅಲ್ಪಪ್ರಣಾಕ್ಷರವಾಗಿ ಅಥವಾ ವ್ಯಂಜನಾಕ್ಷರವನ್ನು ಸ್ವರಾಕ್ಷರವಾಗಿ ಬಳಸಿಕೊಂಡು ಮಾತನಾಡುತ್ತಾರೆ. ಖಡ್ಗ–ಕಡ್ಗ, ಭಾಷೆ–ಬಾಸೆ, ಮೊಸರು–ಮಸರ ಇತ್ಯಾದಿ ಪದ ಬಳಕೆ ಅಧಿಕವಾಗಿದೆ. ಇದನ್ನು ಗಮನಿಸಿದರೆ ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ ಎಂಬ ವಾದಕ್ಕೆ ಈ ಉಪಭಾಷೆ ಪುಷ್ಠಿ ಕೊಡುತ್ತದೆ. ಜೊತೆಗೆ ಅಕಿ, ಈಕಿ, ಅವ, ಇವ ಎಂಬ ಬಂಧು ಸೂಚಕ ರೂಪಗಳು ಹೆಚ್ಚಾಗಿ ಬಳಕೆಯಲ್ಲಿವೆ.

| **ಶಿಷ್ಟ ಕನ್ನಡ** | **ನಡುಗಡ್ಡೆಗಳ ಆಡುಮಾತಿನ ಕನ್ನಡ** |
|---|---|
| ಇಷ್ಟು | ಈಸ, ಈಸೊಂದು, ಈಸು |
| ಇದ್ದಾನೆ | ಅದಾನ |
| ಜೋಪಾನ | ಜ್ವಾಕಿ, ಉಷಾರು |
| ಕೊಲ್ಲು | ಸಾಯಿಸು, ಸಾಯಿಬಡಿ |

| | |
|---|---|
| ಮೆಟ್ಟಿಲು | ಪಾಟುಣಿಗಿ |
| ಮನೆ | ಮನಿ |
| ಯುವವಯಸ್ಸಿನವರು | ಹರೇದಾರು |
| ಉಡುಗೊರೆ | ಮುಯ್ಯಿ |
| ಗುರುತು | ಗುರ್ತು, ಪತ್ತೆ |
| ಮುಡಿದೊಡೋ | ಹಾತ್ಕೊ ಇಟ್ಕೊ |
| ಹೋಗುತ್ತಾನೆ | ಹೊಂಟಾನ, ಹೋಗುತ್ಕತ್ತಿನಾ |
| ಮಲಗುವುದಿಲ್ಲ | ಮಕ್ಕೊಳಂಗಿಲ್ಲ |
| ಮೋಡ | ಮಾ |
| ವೇಳೆ | ಹೊತ್ತು, ಯಾಳೆ |
| ನೇತುಹಾಕು | ಸಿಗಾಡು |
| ಬನ್ನಿರಿ | ಬರ್ರಿ |
| ಬೆಳಗಿನ ಮಳೆ | ಮುಂಜಾನೆ, ಉದಿಕ |
| ಬೇಗನೆ | ದೌಡು, ಗಡಾನ |
| ಬೇಸಿಗೆ | ಬ್ಯಾಸ್ಗಿ |
| ತಲೆದಿಂಡು | ಲೋಡು, ತಲಗುಂಬು |
| ಚಡ್ಡಿ | ಚೊಣ್ಣ |
| ಮುಖ | ಮಕ, ಮೋತಿ |
| ಚೆನ್ನಾಗಿದೆ | ಚಲೋಐತಿ, ಬೇಸೈತಿ |
| ಬಸವಣ್ಣ | ಬಸಣ್ಣ |
| ಸಂಸಾರ | ವಗತಾನ, ಬದುಕು |
| ತೋಟ | ತ್ವಾಟ |
| ಸುಡಪ್ಪು ಇಲ್ಲ | ಬಾಳ ಇಲ್ಲ, ಜಗ್ಗ ಇಲ್ಲ, ಜಾಸ್ತಿ ಇಲ್ಲ |
| ಅಷ್ಟು | ಅಸ |
| ಎಷ್ಟು | ಏಸ |
| ಗಳಿಸುವುದು | ಗಳಿಕೆ |

| | |
|---|---|
| ದೋಸೆ | ದಾಸಿ |
| ವ್ಯವಹಾರ | ಯಾವಾರ |
| ಸಂತೆ | ಸಂತಿ |
| ಸೌಲಭ್ಯ | ಸೌಕರ್ಯ |
| ಗೆಲ್ಲು | ಗೆದಿ |
| ಶಾಲೆ | ಸಾಲಿ |
| ಏಣಿ | ನುಚುಣಿಕಿ |
| ಅಮ್ಮ | ಯಮ್ಮ |
| ಅಕ್ಕ | ಯಕ್ಕ |
| ಅಪ್ಪ | ಯಪ್ಪ |
| ಯುಗಾದಿ | ಉಗಾದಿ |
| ತೆಂಗಿನಕಾಯಿ | ಟೆಂಗಿನಕಾಯಿ |
| ತಲೆ | ತೆಲಿ |
| ಕಬ್ಬಿಣ | ಕಬ್ಣ |
| ಕೊಬ್ಬರಿ | ಕೊಬರಿ |
| ನೇಗಿಲು | ಗಳೇವು |
| ವಯ್ಯಾರ | ಧಿಮಾಕ |
| ವೇಗವಾಗಿ | ಜೋರಾಗಿ ಜಗ್ಗ |
| ಇದೆ | ಐತಿ |
| ಈಕಡೆ | ಇತ್ತಾಗ |
| ಆಕಡೆ | ಅತ್ತಾಗ |
| ನಡೆದಾಡು | ಅಡ್ಯಾಡು, ಓಡ್ಯಾಡು |
| ಸ್ವಲ್ಪ | ತಟಗ |

ಹೀಗೆ ಇನ್ನೂ ಅನೇಕ ಪದಗಳು ನಮಗೆ ಸಿಗುತ್ತವೆ. ಇಲ್ಲಿ ಕೆಲವನ್ನು ಮಾತ್ರ ಪಟ್ಟಿ ಮಾಡಿದ್ದೇನೆ. ಈ ನಡುಗಡ್ಡೆಗಳ ಸಾಹಿತ್ಯವನ್ನು ಅವಲೋಕಿಸಿದಾಗ ಅದೊಂದು ಸಣ್ಣ ಗುಂಪುಗಳಿಂದ ಕೂಡಿರುವ ಗಡ್ಡೆಗಳಾಗಿವೆ. ಜನಪದ ಸಾಹಿತ್ಯ ಸಿಗುವಷ್ಟು ಶಿಷ್ಟ ಸಾಹಿತ್ಯ ಅಷ್ಟಾಗಿ ದೊರೆಯುವುದಿಲ್ಲ ಎಂದು ಹೇಳಬಹುದು.

## ೬.೨. ಸಾಹಿತ್ಯ

ಸಾಹಿತ್ಯದ ಮೂಲಕ ಒಂದು ಸಮುದಾಯದ ಜೀವನ ವಿಧಾನವನ್ನು ಅರಿಯಬಹುದಾಗಿದೆ. ಸಾಹಿತ್ಯ ಎನ್ನುವುದು ವಿವಿಧ ಪ್ರಕಾರಗಳಲ್ಲಿ ಅಭಿವ್ಯಕ್ತಗೊಳ್ಳುವ ಬದುಕಿನ ವ್ಯಾಖ್ಯಾನವೇ ಆಗಿದೆ. ಸಾಹಿತ್ಯಕ್ಕೂ ನಾವು ಬದುಕುವ ಪರಿಸರಕ್ಕೂ ಸಂಬಂಧ ಇದ್ದು, ಸಮಾಜದಲ್ಲಿ ಸಂಭವಿಸುವ ಘಟನೆಗಳೇ ಸಾಹಿತ್ಯದ ಮುಖ್ಯ ಆಕರ. ಸಾಹಿತ್ಯ ಸಮಾಜದ ಪ್ರತಿನಿಧೀಕರಣದ ಕನ್ನಡಿಯಾಗಿದೆ. ಹಾಗಾಗಿ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಸಾಮಾಜಿಕ ಚಿತ್ರಣಕ್ಕೂ ಮತ್ತು ವಾಸ್ತವಿಕ ಸಮಾಜದ ಸ್ವರೂಪಕ್ಕೂ ಸಾಮ್ಯತೆಗಳಿರುವುದು ಕಂಡುಬರುತ್ತದೆ. ಕಾರಣ ಸಾಹಿತ್ಯ ಎಂಬುದನ್ನು ಹೊರತುಪಡಿಸಿದ ಸಂಗತಿ ಇಲ್ಲ. ಹಾಗಾಗಿ ಸಾಹಿತ್ಯದ ಮೂಲಕ ಸಾಮಾಜಿಕ ವಾಸ್ತವಿಕತೆಯನ್ನು ಅರಿಯಬಹುದು. ಜನರ ಸಾಂಪ್ರಾದಾಯಿಕ ಮೌಲ್ಯಗಳನ್ನು ಕೊಂಡೊಯ್ಯುವ ವಾಹಕದ ಸಾಹಿತ್ಯಿಕ ಆಕರಗಳ ಆಧಾರದ ಮೇಲೆ ನಡುಗಡ್ಡೆಗಳ ಜನರ ನೆಲೆ ನಿಂತಿರುವವರ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡುತ್ತಾ ಅವರ ಜೀವನ ವಿಧಾನದ ಕೆಲವು ಒಳನೋಟಗಳನ್ನು ನೋಡುವ ಪ್ರಯತ್ನ ಇದಾಗಿದೆ.

ಸಾಹಿತ್ಯವನ್ನು ಶಿಷ್ಟ ಮತ್ತು ಜನಪದ ಎಂದು ವಿಭಾಗಿಸಿಕೊಂಡು ಬಂದ ಕ್ರಮ ನಮ್ಮಲ್ಲಿ ರೂಢಿಯಲ್ಲಿದೆ. ಈ ವಿಭಾಗೀಕರಣಗಳು ಏನೇ ಇದ್ದರೂ ಅಂತಿಮವಾಗಿ ಸಾಹಿತ್ಯ ಸಾಮಾಜಿಕ ರಚನೆಯೇ ಆಗಿವೆ. ಹಾಗಾಗಿ ಮೇಲೆ ಇರುವ ಎರಡು ಸಾಹಿತ್ಯಗಳನ್ನು ಅನ್ವಯಿಸುವಂತ ವಿಚಾರಗಳೇ ಆಗಿವೆ. ಆದರೆ ಈ ಅಧ್ಯಯನವನ್ನು ಜಾನಪದಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿರುವ ಕಾರಣ ಮೌಖಿಕ ಸಾಹಿತ್ಯದ ಕಡೆಗೆ ಮಾತ್ರ ಗಮನಹರಿಸಲಾಗಿದೆ. ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಜನಪದ ಸಾಹಿತ್ಯ ಸಂಗ್ರಹದ ಕೆಲಸ ಸಾಕಷ್ಟಾಗಿದೆ.

ಆದರೆ ಈ ಸಂಗ್ರಹಿತ ಪಠ್ಯಗಳನ್ನು ವಿಶ್ಲೇಷಿಸುವ ಮತ್ತು ನಿರ್ವಚಿಸುವ ಪ್ರಯತ್ನಗಳು ನಡೆದಿವೆಯಾದರೂ ತುಂಬಾ ವಿರಳ. ಅಕಾಡೆಮಿಕ್ ವಲಯದಲ್ಲಿ ಲಿಖಿತ ಆಕಾರಗಳಿಗೆ ದೊರೆತ ಆದ್ಯತೆ ಮತ್ತು ಮಾನ್ಯತೆಗಳು ಮೌಖಿಕ ಆಕರಗಳಿಗೆ ದೊರೆತಿಲ್ಲ. ಆದರೆ ಇತ್ತೀಚೆಗೆ ಮೌಖಿಕ ಆಕರಗಳು ಕೂಡ ಸಂಸ್ಕೃತಿಯ ವಾಹಕಗಳು ಎಂಬ ಸತ್ಯವನ್ನು ಮನಗಂಡಿರುವುದರಿಂದ ಯಾವುದೇ ಸಮುದಾಯದ ಸಂಸ್ಕೃತಿಯ ವಿಸ್ಮೃತಿಗಳನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಮೌಖಿಕ ಆಕರಗಳು ಮುಖ್ಯವೆನಿಸತೊಡಗಿವೆ. ನಡುಗಡ್ಡೆಗಳಲ್ಲಿರುವ ಸಾಹಿತ್ಯವನ್ನು ಪರಿಶೀಲಿಸುವ ಮುನ್ನ ಜನಪದ ಸಾಹಿತ್ಯವನ್ನು ಕುರಿತು ಒಂದಿಷ್ಟು ತಿಳಿಯೋಣ.

ಮೌಖಿಕ ಸಾಹಿತ್ಯ ಅಥವಾ ಜನಪದ ಸಾಹಿತ್ಯ ಎಂದು ಕರೆಯಲ್ಪಡುವ ಸಾಹಿತ್ಯ ಜಾನಪದದ ಒಂದು ಪ್ರಕಾರ. ಜನಪದರಿಂದ ಮೌಕಿಕ ರೂಪದಲ್ಲಿ ರಚನೆಗೊಂಡ ಪ್ರಕಟಿತ ಅಥವಾ ಅಪ್ರಕಟಿತ

ರೂಪದಲ್ಲಿರುವ ಸಾಹಿತ್ಯವು ಗಾದೆ, ಗೀತೆ, ಒಗಟು, ಒಡಪು, ಲಾವಣಿ, ಖಂಡ ಕಾವ್ಯ, ಮಹಾಕಾವ್ಯ, ಐತಿಹ್ಯ, ಪುರಾಣ ಹೀಗೆ ಮುಂತಾದ ರೂಪದಲ್ಲಿರುತ್ತದೆ.

ಜನಪದ ಸಾಹಿತ್ಯ ಎಂಬುದು ಜನರ ನಿತ್ಯ ಜೀವನದ ನೋವು ನಲಿವಿನ ಸಂಗತಿಗಳನ್ನು ದಾಖಲಿಸಿಕೊಂಡ ಆಕರವೇ ಆಗಿದೆ.

ಮಾನವನಿಗೆ ದೇವರು ಭಾಷೆಯನ್ನು ಕಾಣಿಕೆಯನ್ನಾಗಿ ನೀಡಿದ್ದಾನೆ. "ಭಾಷೆಯೊಂದು ಇರದಿದ್ದರೆ ಮನುಕುಲವು ಕತ್ತಲೆಯಲ್ಲಿ ಇರಬೇಕಾಗುತ್ತಿತ್ತು." ಲಾಕ್ಷಣಿಕಕಾರ **'ದಂಡಿ'**ಯು ಬಹುಕಾಲದ ಹಿಂದೆ ವ್ಯಕ್ತಪಡಿಸಿದ್ದಾನೆ. ಭಾಷೆಯು ಕೇವಲ ಮಾನವನ ವ್ಯವಹಾರಕ್ಕಷ್ಟೇ ಅಲ್ಲ, ಸಂಸ್ಕೃತಿಯ ವಾಹಿನಿಯ ಶಕ್ತಿಯಾಗಿದೆ. ಮಾನವನ ನಾಗರಿಕ ಸಂಸ್ಕೃತಿಯು ತಲೆಮಾರಿನಿಂದ ತಲೆಮಾರಿಗೆ ಜೀವಂತವಾಗಿ ಸಾಗುತ್ತಿದೆ. ಇದಕ್ಕೆ ಭಾಷೆಯು ಸಹಾಯಕ ಪಾತ್ರವಹಿಸಿ ಜನರ ರೀತಿ–ನೀತಿ, ಆಚರಣೆ, ಸಂಪ್ರದಾಯಗಳಂತೆ ಪರಿಣಾಮ ಬೀರುವ ಅಂಶಗಳಾಗಿವೆ.

ಭಾರತ ಸರಕಾರವು ೧೩ ಲಿಪಿಬದ್ಧವಾದ ಭಾಷೆಗಳನ್ನು ಗುರುತಿಸಿದೆ. ಲಿಪಿರಹಿತ ಭಾಷೆಗಳು ಭಾರತದಲ್ಲಿದ್ದು, ಅವುಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಭೌಗೋಳಿಕ ಸ್ತರದ ನೆಲೆಯಲ್ಲಿ ಒಂದೇ ಭಾಷೆ ಮಾತನಾಡುವವರೂ ಸಹ ಆಯಾ ಪ್ರದೇಶದಲ್ಲಿ ಉಪಭಾಷೆಯಾಗಿ ಪರಿವರ್ತನೆಗೊಳ್ಳುವುದು ಭಾಷೆಯ ವೈಶಿಷ್ಟ್ಯವಾಗಿದೆ. ಹಾಗೆಯೇ ಜನಪದ ಸಾಹಿತ್ಯದಿಂದ ಅನೇಕ ವಲಯದಲ್ಲಿ ಜನಪದರ ಸಾಹಿತ್ಯ ಕುರಿತಂತೆ ಇರುವ ವಿಚಾರಗಳನ್ನು ತಿಳಿಯಬಹುದು. "ಜನಪದ ಸಾಹಿತ್ಯವೆಂದರೆ ಕೇವಲ ಹಾಡಲ್ಲ, ಅದರಲ್ಲಿ ದೇವರ ಧ್ಯಾನ, ಭಕ್ತಿ ಚಿಂತನೆಗಳು, ಜೊತೆಗೆ, ಧಾರ್ಮಿಕ ಆಚರಣೆ, ನಡೆ, ನುಡಿ, ಕಲೆ, ಸಾಹಿತ್ಯ, ಸಂಗೀತಗಳನ್ನೊಳಗೊಂಡ ಸಮುದಾಯಗಳ ಸಮಗ್ರ ಜೀವನ ಚಿತ್ರಣವಾಗಿದೆ. ಪ್ರತ್ಯೇಕವಾಗಿ ಮನಸ್ಸಿನಲ್ಲಿ ಮೂಡಿ ನಿಲ್ಲಬಲ್ಲ ಚಿತ್ರವಾಗಿದೆ. ಕರುಳು ತಂತಿಯನ್ನು ಮೀಟಬಲ್ಲ, ನಾದ ಮಾಧುರ್ಯ ಅದರಲ್ಲಿ ಅಡಕವಾಗಿದೆ. ಜನಸಾಮಾನ್ಯರ ಅಂತರಾಳದಿಂದ ಹೊರಹೊಮ್ಮುವ ಸಹಜ ಅನುಭವವಾಗಿದೆ. ಒಂದು ನಾಡಿನ ಸಮುದಾಯದ ಸಂಸ್ಕೃತಿಯ ಸಮಗ್ರ ಚಿತ್ರಣಕ್ಕೆ ಹಿಡಿದ ಕನ್ನಡಿಯಾಗಿದೆ"(ಡಾ.ಅರ್ಜುನ ಗೋಳಸಂಗಿ, ೨೦೦೦, ಪು.೧).

'ಜನಪದ' ಎಂದರೆ ಕೊನೆಯ ಪಕ್ಷ ಒಂದಾದರೂ ಸಮಾನ ಅಂಶವನ್ನುಳ್ಳ ಜನ, ಗುಂಪು. ಈ ಸಮಾನ ಅಂಶ ಯಾವುದಾದರೂ ಆಗಿರಬಹುದು. ಸಮಾಜ, ಧರ್ಮವಾಗಿರಬಹುದು, ಭಾಷೆಯಾಗಿರಬಹುದು, ಸಮುದಾಯವಾಗಿರಬಹುದು, ಕಸುಬಾಗಿರಬಹುದು. ಯಾವುದೇ ಕಾರಣದಿಂದ ಈ ಜನ ಗುಂಪಾಗಿರಲಿ–ಇವರಿಗೆ, ತಮ್ಮದೆಂದು ಹೇಳಿಕೊಳ್ಳುವ ಒಂದು ಪರಂಪರೆ ಇರುತ್ತದೆ. ಗುಂಪಿನಲ್ಲಿಯ ಪ್ರತಿಯೊಬ್ಬರು, ಪ್ರತಿಯೊಬ್ಬರನ್ನು ತಿಳಿದಿರುತ್ತಾರೆ ಎಂದಲ್ಲ. ಆದರೆ ತನ್ನ ಪರಂಪರೆಯ ಜೀವ ಕೇಂದ್ರ ಯಾವುದೆಂಬುದನ್ನು ಬಾಯಿ ಬಿಟ್ಟು ಹೇಳಲಿಕ್ಕೆ ಬಾರದಿದ್ದರೂ

ಅರಿತಿರುತ್ತಾನೆ. ಈ ಪರಂಪರೆ ಆ ಗುಂಪಿನ ಆರಾಧನೆ, ಆಚಾರ, ವಿಚಾರ, ನಂಬಿಕೆ, ಧೋರಣೆಗಳ ಮೂಲಕ ವ್ಯಕ್ತವಾಗುತ್ತದೆ. ಈ ಪರಂಪರೆ ಆ ಗುಂಪಿನವರಿಗೆಲ್ಲ ತಾವು ಇನ್ನೊಂದು ಗುಂಪಿನ ಜನರಿಗಿಂತ ಬೇರೆಯಾಗಿದ್ದೇವೆ ಎಂದು ಹೇಳಿಕೊಳ್ಳುವಂಥ ಒಂದು ಸಮೂಹ ಪ್ರಜ್ಞೆಯನ್ನು ಕೊಡುತ್ತದೆ.

"ಜನಪದ ಸಾಹಿತ್ಯ ನಮ್ಮ ಜೊತೆಗೆ ಹುಟ್ಟು ಪಡೆದಂತಹದ್ದು. ಬದುಕು ಬೇರೆ ಈ ಸಾಹಿತ್ಯ ಬೇರೆ ಅಲ್ಲ, ಬದುಕಿನ ಜೊತೆಗೆ ಸೃಷ್ಟಿಗೊಳ್ಳುವ ಮಾನವ ಬದುಕನ್ನೇ ದಾಖಲಿಸುವ ಕೆಲಸವನ್ನು ಈ ಸಾಹಿತ್ಯ ಮಾಡುತ್ತದೆ. ಹೀಗೆ ಬದುಕಿನ ಅಂಗವಾಗಿ ಬದುಕನ್ನು ದಾಖಲಿಸುವ ಕೆಲಸ ಮಾಡುವ ಇದು ಮಾನವ ಬದುಕಿನ ಬಹುದೊಡ್ಡ ಸಾಂಸ್ಕೃತಿಕ ಕೊಡುಗೆ ಆಗಿದೆ"(ಡಾ.ವೀರಣ್ಣ ದಂಡೆ, ೨೦೦೧, ಪು.೬೭).

**೬.೨.೧. ಜನಪದ ಗೀತೆಗಳು**

ಜನಪದ ಸಾಹಿತ್ಯದ ಒಂದು ಮುಖ್ಯ ಪ್ರಕಾರ. ಇದನ್ನು ಹಳ್ಳಿಯ ಹಾಡು ಎಂದು ಕರೆಯಲಾಗುತ್ತದೆ. ಜನಸಮುದಾಯದಲ್ಲಿ ವಾಕ್ಪರಂಪರೆಯಲ್ಲಿ, ನಿರಂತರವಾಗಿ ಉಳಿದು ಬಂದಿರುವ ಹಾಡುಗಳೇ ಜನಪದ ಗೀತೆ ಎನಿಸಿಕೊಳ್ಳುತ್ತವೆ. ಜನಪದ ಸಾಹಿತ್ಯದ ಇತರ ಪ್ರಕಾರಗಳಂತೆ ಜನಪದ ಗೀತೆಗಳ ಉಗಮ, ಕಾಲ ಯಾವುದೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಅದರೆ ಅವು ಹುಟ್ಟಿ, ಬೆಳೆದದ್ದಂತು ಶುದ್ಧವಾದ ವಾಕ್ಪರಂಪರೆಯಲ್ಲಿಯೇ. ಇದಕ್ಕೆ ಕಾರಣರಾದವರು ಮಾತ್ರ ಜನಪದರು. ಜನಪದ ಗೀತೆಗಳನ್ನು ರಚಿಸುವ ಹಾಡುವ ನಿಶ್ಚಿತ ಕ್ರಮಗಳಾವುವು. ಸಾಮಾನ್ಯವಾಗಿ ಇಲ್ಲಿ ಕೇಳಿ ನೆನಪಿಟ್ಟುಕೊಳ್ಳುವುದರಿಂದ ಹಾಡುವವರ ಜೊತೆ ಧ್ವನಿಗುಡಿಸುವುದರಿಂದ ಅವುಗಳನ್ನು ಕಲಿಯಲಾಗುತ್ತದೆ. ಈ ಮಾದರಿಯಲ್ಲೇ ಅವು ತಲೆಮಾರಿನಿಂದ ತಲೆಮಾರಿಗೆ ಹರಿದುಬಂದಿವೆ.

ಜನಪದ ಗೀತೆಗಳನ್ನು ಗೀತೆಗಳು ಮತ್ತು ಕಥನ ಗೀತೆಗಳು ಎನ್ನುವ ಎರಡು ದೊಡ್ಡ ಗುಂಪುಗಳಾಗಿ ವಿಭಾಗಿಸಬಹುದು. ಗೀತೆಗಳಲ್ಲಿ ತೀವ್ರವಾದ ಆತ್ಮನಿಷ್ಠೆ ಮತ್ತು ಭಾವ ಪ್ರಖರತೆಯಿಂದ ಕೂಡಿರುವ ಭಾವಗೀತೆಗಳದ್ದೇ ಸಿಂಹಪಾಲು. ಇನ್ನುಳಿದಂತೆ ಜೋಗುಳ, ಪ್ರಕೃತಿ ಗೀತೆಗಳು, ಋತುಮಾನದ ಹಾಡುಗಳು, ಪ್ರಣಯ ಗೀತೆಗಳು, ಮದುವೆ ಹಾಡುಗಳು, ಬೇಸಾಯದ ಹಾಡುಗಳು, ಕಾಯಕ ಗೀತೆಗಳು ಇತ್ಯಾದಿಗಳು ವಿಭಾಗದಲ್ಲಿಯೇ ದಾಖಲಾಗುವಂಥದ್ದು.

ಪ್ರತಿ ಭೂಸಂಪನ್ನನಾದ ಸಹಚಾರ್ಯ ಅನಿವಾರ್ಯವಾದದ್ದು. ಕ್ರಿಯಾತ್ಮಕತೆ ಜನಪದ ಗೀತೆಗಳ ಬಹುಮುಖ್ಯ ಗುಣ. ನಿರ್ದಿಷ್ಟ ಸಂದರ್ಭಗಳಲ್ಲಿ ಬಳಕೆಯಾಗುವ ಜನಪದ ಗೀತೆಗಳು ಸಾಮಾಜಿಕ, ಸಾಮೂಹಿಕ ಉದ್ದೇಶಗಳನ್ನು ನೆರವೇರಿಸುವಂತಹದ್ದಾಗಿವೆ. ಸಮಾಜ, ಜೀವನದಲ್ಲಿ ಹಾಸುಹೊಕ್ಕಾಗಿವೆ. ಉದಾಹರಣೆಗೆ ಸೋಬಾನೆ ಪದಗಳು, ನಾಟಿ ಪದಗಳು, ದೇವರ ಪದಗಳು,

ಬದುಕಿನ ಪ್ರಮುಖ ಘಟ್ಟಗಳಲ್ಲಿ ಅಥವಾ ವ್ಯಕ್ತಿಯ ಜೀವನದ ನಿರ್ಣಯ ತಿರುವುಗಳಾದ ಬಾಲ್ಯ, ಯೌವ್ವನ, ಮದುವೆ, ಸಾವು ಇಂಥ ಸಂದರ್ಭಗಳಲ್ಲಿ ಹಾಡುಗಾರಿಕೆ ಜೊತೆಯಾಗಿರುತ್ತದೆ.

ಜನಪದ ಗೀತೆಗಳು ಒಂದು ಸಮುದಾಯದ ಆಸ್ತಿಯಾದರೂ ಅವುಗಳನ್ನು ಎಲ್ಲರೂ ಎಲ್ಲ ಸಂದರ್ಭಗಳಲ್ಲೂ ಹಾಡಲು ಬರುವುದಿಲ್ಲ. ಮಾನವ ಅತಿಮಾನುಷ ಶಕ್ತಿಯಲ್ಲ. ನಂಬಿಕೆಯಿರಿಸಿ ಅವುಗಳೊಡನೆ ಸಂಪರ್ಕ ಹೊಂದುವ ಸಲುವಾಗಿ ಸೃಷ್ಟಿಸಿದ ಪರಮಾರ್ಥ ಗೀತೆಗಳೂ ಜನಪದ ಗೀತೆಗಳಲ್ಲಿ ಇವೆ. ದೇವರಸ್ತುತಿ ಜನಪದ ಬದುಕಿನ ಅನಿವಾರ್ಯ ಭಾಗವಾಗಿದೆ. ಕೌಟುಂಬಿಕ ಬಾಂಧವ್ಯಗಳನ್ನು ಬಿತ್ತರಿಸುವ ಗೃಹ ಜೀವನದ ಕಷ್ಟ ಸುಖಗಳನ್ನು ಬಿಂಬಿಸುವ ಹಾಡುಗಳಂತೂ ಹೃದಯಂಗಮವಾಗಿವೆ. ಕೆಲವು ಹಬ್ಬಗಳಲ್ಲಿ ಮತ್ತು ಮದುವೆಗಳಲ್ಲಿ ಹಾಡುವ ಹಾಸ್ಯಲೇಪಿತ ಶೃಂಗಾರ ಗೀತೆಗಳು ಅಪಾರ ಸಂಖ್ಯೆಯಲ್ಲಿ ಜನಪದ ಗೀತೆಗಳ ಕಣಜದಲ್ಲಿ ತುಂಬಿಕೊಂಡಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಜನಪದ ಗೀತೆಗಳು ತನ್ನ ಕ್ರಿಯಾತ್ಮಕತೆಯನ್ನು ಕಳೆದುಕೊಂಡು ಮನರಂಜನೆಯ ಉದ್ದೇಶಕಷ್ಟೇ ಬಳಕೆಯಾಗುತ್ತಿರುವುದನ್ನು ಕಾಣಬಹುದಾಗಿದೆ.

ಆದರೆ ನಡುಗಡ್ಡೆಗಳ ಜನಪದರಲ್ಲಿ ಜನಪದ ಗೀತೆಗಳು ಕ್ರಿಯಾತ್ಮಕತೆಯನ್ನು ಇನ್ನು ಕಳೆದುಕೊಂಡಿಲ್ಲ ಎಂದು ಹೇಳಬಹುದು. ಮನರಂಜನೆಯ ಜೊತೆಗೆ ಕ್ರಿಯಾತ್ಮಕತೆ ಇದೆ.

ಜನಪದ ಗರತಿಯ ಹಾಡುಗಳನ್ನು ನೋಡುವುದಕ್ಕೆ ಮೊದಲು ಬ್ರಾಹ್ಮಣಿಯ ಹಾಡುಗಳನ್ನು ಗಮನಿಸಬಹುದು. ಶ್ರೀ ದೇವುಡು ತಮ್ಮ ಕರ್ನಾಟಕ ಸಂಸ್ಕೃತಿಯಲ್ಲಿ ಜನಪದ ಸಾಹಿತ್ಯದಲ್ಲಿ ಬ್ರಾಹ್ಮಣಿಯ ಹಾಡುಗಳನ್ನು ಸೇರಿಸಿದ್ದಾರೆ. ಹಾಡುಗಳಲ್ಲಿ ಬ್ರಾಹ್ಮಣಿಯ ಹಾಡು, ಶೂದ್ರಾಣಿಯ ಹಾಡು ಎಂದು ಭಾಗಿಸಿ ಮತ್ತೆ ಅವೆರಡರಲ್ಲಿ ನಿತ್ಯದ ಹಾಡು, ನೈಮಿತ್ತಿಕ ಹಾಡು ಎಂಬ ಭಾಗ ಮಾಡಿದ್ದಾರೆ. ನೈಮಿತ್ತಿಕ ಹಾಡುಗಳು ಸಾಮಾನ್ಯವಾಗಿ ಸಮೂಹ ಗೀತೆಗಳಾಗಿರುತ್ತವೆ. ಒಬ್ಬರೇ ಹಾಡುವುದಿರಲಿ, ಸಮೂಹ ಗೀತೆಗಳಿರಲಿ, ಬ್ರಾಹ್ಮಣಿಯ ಹಾಡುಗಾರಿಕೆ ಜನಪದ ಸಾಹಿತ್ಯವೆಂದು ಹೇಳಲಿಕ್ಕಾಗುವುದಿಲ್ಲ. ಇಲ್ಲಿ ಜನಪದ ಸಾಹಿತ್ಯದ ಜೊತೆಗೆ "ಜನಪ್ರಿಯ ಸಾಹಿತ್ಯ" ಎಂಬ ಇನ್ನೊಂದು ಪ್ರಕಾರವನ್ನು ಕಲ್ಪಿಸುವುದು ಅಗತ್ಯ. ಜನಪ್ರಿಯ ಸಾಹಿತ್ಯ ಕಲಿತವರು ಬರೆದುದು, ಹಾಡುವವರು ಓದಿ ಬಾಯಿಪಾಠ ಮಾಡಿರುತ್ತಾರೆ. ಪಠ್ಯ ಯಾವಾಗಲೂ ಹಾಗೆ ಇರುತ್ತದೆ. ಶಿಶುನಾಳ ಶರೀಫ್ ಸಾಹೇಬರ ಪದಗಳು, ಯಕ್ಷಗಾನ ಪ್ರಬಂಧಗಳು, ಭಜನೆಯ ಪದಗಳು, ಸಿನಿಮಾ ಹಾಡುಗಳು, ಮಂಗಳಾರತಿ ಹಾಡುಗಳು, ದಾಸರ ಪದಗಳು ಇವೆಲ್ಲ ಈ ಬಗೆಯವು. (ಬ್ರಾಹ್ಮಣಿ ಹಾಡುವ ಹಾಡುಗಳೆಲ್ಲ ಇದೇ ಜಾತಿಗೆ ಸೇರುತ್ತವೆ) ಬ್ರಾಹ್ಮಣಿಯ ಹಾಡಿಗೆ ಶೂದ್ರಾಣಿಯ(ಗರತಿ) ಹಾಡಿಗಿಂತ ಭಿನ್ನವಾದ ಕೆಲವು ಲಕ್ಷಣಗಳಿವೆ.

೧. ಬ್ರಾಹ್ಮಿಣಿಯ ಹಾಡುಗಳಲ್ಲಿ ತ್ರಿಪದಿಗಳು ಕಡಿಮೆ ಅಥವಾ ಇರುವುದಿಲ್ಲ.

೨. ಅವು ನಿರ್ದಿಷ್ಟ ತಾಳ ರಾಗಗಳಲ್ಲಿ ಹಾಡುವ ಪದಗಳು.

೩. ಭಾಷೆ ಶಿಷ್ಟವಾಗಿದ್ದು, ಆದಿ ಅಂತ್ಯ ಪ್ರಾಸಗಳನ್ನು ಒಳಗೊಂಡಿರುತ್ತದೆ.

೪. ವಸ್ತು ಭಾವ ಪ್ರಪಂಚ ಸಾಮಾನ್ಯವಾಗಿ ರಾಮಾಯಣ, ಭಾರತ, ಭಾಗವತಗಳಿಗೆ ಸಂಬಂಧಪಟ್ಟದ್ದು.

೫. ಹಾಡುಗಳು ಹೆಚ್ಚಾಗಿ ಅನುಭಾವ ಪದಗಳು, ಭಕ್ತಿ ಗೀತೆಗಳು.

೬. ಓದಿ ಬಾಯಿ ಪಾಠ ಮಾಡಿಯೇ ಕಲಿಯುತ್ತಾರೆ.

೭. ಹಾಡುಗಳಿಗೆ ಹೊಸ ವಿವರಗಳನ್ನು ಸೇರಿಸುವ, ಅಲಂಕರಿಸುವ ಗೋಜಿಗೆ ಹೋಗುವುದಿಲ್ಲ.

೮. ಪದದ ಶಿಲ್ಪ ಹೀಗಿರುತ್ತದೆ: 'ಪಲ್ಲ ಅನುಪಲ್ಲ, ಪದ್ಯಗಳು ಹಾಡಿನಲ್ಲಿ ಹೇಳುವ ವಿಷಯ ಪಲ್ಲ, ಅನುಪಲ್ಲವಿಯಲ್ಲಿಯೇ ಮುಗಿದಿರುತ್ತವೆ. ಪದ್ಯಗಳು ಪಲ್ಲವಿ ಹೇಳಿಕೆಯನ್ನು ಖಾತ್ರಿಯಾಗಿಸಲಿಕ್ಕೆ ಬರುತ್ತವೆ. ಉದಾ:

ಭಯ ನಿವಾರಣಮ ಶ್ರೀ ಹರಿಯ ನಾಮಾ– ಪ
ಜಯ ಪಾಂಡುರಂಗ ವಿಠ್ಠಲ ನಿಮ್ಮ ನಾಮಾ – ಅ.ಪ.
ಮೊರೆಯ ಲಾಲಿಸಿ ಮುನ್ನ ಜಗವಸಲಹಿದ ನಾಮ।
ಕರುಣದಿಂ ದ್ರೌಪದಿಯ ಕಾಯ್ದ ನಾಮ॥
ಮರುಗತಿಹ ಧೃವಗೆ ಉನ್ನತಿಯ ಮಾಡಿದ ನಾಮ।
ಪರಕೆ ಪರತತ್ವವಲ್ಲದೆ ನಿಮ್ಮ ನಾಮಾ॥

**ಗರತಿಯ ಹಾಡು**

ಗರತಿಯ ಹಾಡುಗಳಿಗೆ ಬಂದರೆ ಕ್ರಿಯಾತ್ಮಕತೆಯ ಬೆಂಕಿ–ಕೆಂಡದಂಥ ಬಿಸಿಯ ಸ್ಪರ್ಶವಾಗುತ್ತದೆ. ಈಕೆ ಕಲಿತವಳಲ್ಲ, ಆದ್ದರಿಂದ ಪುಸ್ತಕ ನೋಡಿ ಕಲಿಯುವ ಮಾತೇ ಬರುವುದಿಲ್ಲ. ತನ್ನ ಹಾಡುಗಾರಿಕೆ ಒಂದು ಕಲೆಯೆಂಬುದೂ ಗೊತ್ತಿಲ್ಲ. ಇನ್ನೊಬ್ಬರ ಹಾಡುಗಾರಿಕೆಯಿಂದ ಹಾಡು ಕಲಿಯುತ್ತಾಳೆ ನಿಜ, ಇನ್ನೊಬ್ಬಾಕೆ ಹಾಡಿದಾಗ ಆ ಕೂಡಲೇ ಅದನ್ನೇ ಇದ್ದಕ್ಕಿದ್ದ ಹಾಗೆ ಹಾಡುತ್ತೀಯಾ? ಎಂದರೆ "ಹೌದು" ಎನ್ನುತ್ತಾಳೆ. ಹಾಡಿನಲ್ಲಿ ಹೊಸದೇನಾದರೂ ಸೇರಿಸುತ್ತೀಯಾ? ಯಾಕೆ, ಹೇಗೆ? – ಎಂಬೆಲ್ಲ ಪ್ರಶ್ನೆಗಳಿಗೆ 'ನಂಗೊತ್ತಿಲ್ಲ' ಎಂದು ಉತ್ತರ.

ಈ ಹಾಡುಗಳು ಅಚ್ಚಾದಾಗ ತ್ರಿಪದಿಯಂತೆ ಕಂಡುಬರುತ್ತವೆ. ಹಾಡುವಾಗ ಮೊದಲನೇ ಸಾಲು ಹೇಳಿ ಎರಡನೇ ಸಾಲಿನ ಉದ್ದ ಗೆರೆಯತನಕ ಹೇಳಿ ಸೋ, ಕೋಲ, ಶೋಭಾನ ಇತ್ಯಾದಿ ಸೊಲ್ಲು ಕೇಳಿಸಿ ಆಮೇಲೆ ಮತ್ತೆ ಎರಡನೆ ಸಾಲನ್ನು ಗೆರೆಯ ನಂತರದ ಶಬ್ದ ಸಹಿತ ಹೇಳಿ ಮೂರನೇ ಸಾಲು ಹೇಳುತ್ತಾರೆ. ಮತ್ತೆ ಸೋ ಹೇಳುತ್ತಾರೆ. ಹೀಗೆ ಬರೆದಾಗ ಮೂರೇ ಸಾಲಾದದ್ದು

ಹಾಡುವಾಗ ನಾಲ್ಕು ಸಾಲಾಗುತ್ತದೆ. ಎರಡನೆ ಸಾಲು ಪುನರುಕ್ತಿಯಾಗುವುದರಿಂದ ಅನುಕೂಲಕ್ಕಾಗಿ ಇನ್ನೊಮ್ಮೆ ಬರೆಯುವುದಿಲ್ಲವಷ್ಟೇ. ಈ ದೃಷ್ಟಿಯಿಂದ ತ್ರಿಪದಿಯೆಂಬ ಹೆಸರು ಬಹಳ ಕೃತಕವಾದದ್ದು.

ನಕಲಿಯಾಡುವುದಿಲ್ಲ. ಅಭಿವ್ಯಕ್ತಿಯ ಸಾಧ್ಯತೆ ಎಷ್ಟು ತೀವ್ರವಾಗಿರುತ್ತದೆಂದರೆ, ಉಚ್ಚರಿಸುತ್ತಿದ್ದಂತೆಯೇ ಹಾಡು ಕುರಿತು ವಸ್ತು ಸಾಕ್ಷಾತ್ಕಾರವಾಗುತ್ತದೆ. ಇದಕ್ಕೆ ಕಾರಣ ಜಾನಪದದಲ್ಲಿ ಒಂದೊಂದು ಪದಕ್ಕೆ ಒಂದೊಂದೇ ಅರ್ಥವಿರುವುದರಿಂದ. ಅರ್ಥದ ಸ್ಪಷ್ಟತೆ, ಸಂವಹನೆಯ ತೀವ್ರತೆ ಮುಕ್ತವಾಗುವುದಿಲ್ಲ. ಆದ್ದರಿಂದಲೇ ಅದು ಸರಳ, ಸೇಂದ್ರೀಯ, ಬೇಕಾದಂಥ ಶಿವಪಾರ್ವತಿ ಬರಲಿ, ಅವರೆಲ್ಲ ಕೈಕಾಲು ಮಾಡಿಸಿಕೊಂಡು ಸಂಸಾರ ವಂದಿಗರಾಗಿಯೇ ಬರುತ್ತಾರೆ ಎಂಬ ನಂಬಿಕೆ ನಡುಗಡ್ಡೆಗಳ ಜನಪದರು ಹಾಡಿನ ಮುಖಾಂತರ ತೋರಿಸಿಕೊಡುತ್ತಾರೆ.

ಒಬ್ಬ ಗರತಿಯು ತನ್ನ ಮಗಳನ್ನು ನೋಡಿ ಶಿವ ಹೌಹಾರುತ್ತಾನೆ ಎನ್ನುವ ರೀತಿಯಲ್ಲಿ ಹಾಡು ಹೇಳುತ್ತಾಳೆ.

"ಚಿತ್ತಾರ ಬಿಂದಗಿ ಶಿವನ ಮಗ್ಗಿಯ ಕುಬಸ
ಶೀಲವಂತೆವ್ವ ನನ ಮಗಳ। ಬರುವಾಗ
ಶಿವ ತನ್ನ ತಪಸ ಮರತಾನ"(ದಾಮವ್ವ ಹಾಲಬಾವಿ)

ಈಕೆಯ ಮಗಳು, ಸೊಸೆಯನ್ನು ನೋಡಿ ಪಾರ್ವತಿ ಮತ್ಸರದಿಂದ ಮೂಗು ಮುರಿಯುತ್ತಾಳೆ. ಈ ಹಾಡುಗಳಲ್ಲಿ ಕಾಣುವ ಜೀವನ ಶ್ರದ್ಧೆಯ ಪರಿಣಾಮದಿಂದ ಹುಟ್ಟಿದ ಆಚರಣೆಯ ಅಂಶ ಇನ್ನೂ ಮಹತ್ವದ್ದು. ವರ್ಣಿಸುವ ಪ್ರತಿಯೊಂದು ವಸ್ತುವನ್ನು ಅದರ ವೈಭವದ ರೂಪದಲ್ಲೇ ಸ್ವೀಕರಿಸಿ, ಹಾಡಿ, ಹರಿಪದವನ್ನು ನೋಡಿದರೆ, ಬದುಕು ಅವರಿಗೆ ಹೇಗೆ ಆರಾಧನೆಯ ದೈವವಾಗಿ ಪರಿಣಮಿಸಿದೆಯೆಂಬುದು ಸ್ಪಷ್ಟವಾಗುತ್ತದೆ. ಈ ಹಾಡುಗಳಲ್ಲಿ ಆಧ್ಯಾತ್ಮ ಬರುವುದಿಲ್ಲವೆಂದಲ್ಲ, ಕಡಿಮೆ ಪ್ರಾಥಮಿಕವಾದದ್ದು(ಉದಾ: ಕಲ್ಲು ದೇವರಿಗ್ಹೋಗಿ ನಲ್ಲಾನ ಮರಿಬ್ಯಾಡ) ತ್ರಿಪದಿ ಹಾಡುತ್ತಾಳೆ.

ಜನಪದ ಗೀತೆಗಳ ಹಾಡುಗಾರಿಕೆಯ ಲಕ್ಷಣಗಳನ್ನು ಹೀಗೆ ಸಂಗ್ರಹಿಸಬಹುದು.

೧. ಹೆಚ್ಚಾಗಿ ತ್ರಿಪದಿಗಳಲ್ಲಿಯೇ ಇರುತ್ತದೆ.

೨. ಒಂದೇ ತ್ರಿಪದಿಯನ್ನು ಅನೇಕ ಧಾಟಿಗಳಲ್ಲಿ ಹಾಡಬಹುದು.

೩. ಭಾಷೆ ಗ್ರಾಮ್ಯ. ಅವರಾಡುವ ಉಪಭಾಷೆಯಾಗಿದ್ದು ಪ್ರಾಸ ಬರಬಹುದು, ಬಿಡಬಹುದು, ನಿರ್ಧಿಷ್ಟ ನಿಯಮಗಳಿಲ್ಲ.

೪. ವಸ್ತು ಭಾವ ಪ್ರಪಂಚ ದಿನನಿತ್ಯದ ಜೀವನಕ್ಕೆ ಸಂಬಂಧಪಟ್ಟದ್ದು.

೫. ಇನ್ನೊಬ್ಬರಿಂದ ಕೇಳಿಯೇ ಕಲಿಯುತ್ತಾರೆ.

೬. ಹೊಸ ವಿವರ ಸೇರಿಸುವ, ಅಲಂಕರಿಸುವ ಯಾವ ಅವಕಾಶವನ್ನೂ ಬಿಡುವುದಿಲ್ಲ.

೭. ಹಾಡುಗಳಿಗೆ ನಿರ್ಧಿಷ್ಟ ಆರಂಭವಿಲ್ಲ, ಅಂತ್ಯವಿಲ್ಲ.

೮. ಹಾಡುಗಳಲ್ಲಿ ಆಧ್ಯಾತ್ಮ ಕಡಿಮೆ.

೯. ಮೂರ್ತತೆ ಇವುಗಳ ಪ್ರಧಾನ ಗುಣ.

೧೦. ಬದುಕಿನ ಶ್ರದ್ಧೆ ಒಡೆದು ಕಾಣುತ್ತದೆ.

ಈ ಕಾವ್ಯ ಜೀವನ ಶ್ರದ್ಧೆಯಿಂದ ಹುಟ್ಟಿರುವಂಥದ್ದು. ಕಣ್ಣಳತೆಗೆ ಸಿಕ್ಕುವ ಪ್ರತಿಯೊಂದು ವಸ್ತುವಿನಲ್ಲಿಯೂ ಉಪಯುಕ್ತತೆಯನ್ನಾಗಿ ಕಂಡುಕೊಂಡಿರುವಂಥದ್ದು. ಆದ್ದರಿಂದ ವಸ್ತುವಿನ ಆಯ್ಕೆಯಲ್ಲಿ ಯಾವ ಸಂತೋಷ ಪ್ರವೃತ್ತಿಯೂ ಇರುವುದಿಲ್ಲ. ಬದುಕಿನ ಸಣ್ಣಪುಟ್ಟ ವಿವರಗಳೂ ವಿಶೇಷವಾದ ಶ್ರದ್ಧೆ, ಭಕ್ತಿ, ಕಾಳಜಿಗಳಿಂದ ವರ್ಣಿಸಲ್ಪಟ್ಟಿರುತ್ತವೆ. ಈ ಶ್ರದ್ಧೆಯಿಂದಾಗಿ, ಜಗತ್ತಿನಲ್ಲಿರುವ ಸಹಜ ವಸ್ತು ಹಾಡಿಗೆ ಬಂದಾಗ ಅಲಂಕೃತವಾಗಿರುತ್ತದೆ. ತನ್ನ ಸುತ್ತ ಸ್ನಿಗ್ಧ ವಾತಾವರಣವೊಂದನ್ನು ಸೃಷ್ಟಿಸಿಕೊಂಡು ಬಂದಿರುತ್ತದೆ. ಭಾಷೆಗೂ ಸಂತೋಷ ಪ್ರವೃತ್ತಿ ಇರುವುದಿಲ್ಲ. ವಸ್ತುವನ್ನು ಮುಚ್ಚಿಡುವ, ಒಂದು ಬಿಟ್ಟು ಒಂದನ್ನು ತೋರಿಸುವ

"ಆಡಾತ ಹೋದಲ್ಲಿ ಅಂಗ್ಯೆಯ ನೋಡ್ಯಾರ
ಮುಂಗೈ ಬೆವರ ಬರಸ್ಯಾರ। ನನ ಅಣ್ಣ
ವರ ಬಂದರ ಮಗಳ ಕೊಡ ಬ್ಯಾಡ"(ಗದ್ದೆಮ ದೇವರಗಡ್ಡೆ)

ತಂಗಿಯೊಬ್ಬಳು ಅಣ್ಣನ ಮಗಳನ್ನು ತನ್ನ ಮಗನಿಗೇ ಮದುವೆ ಮಾಡಿಕೊಡಬೇಕೆಂದು ಪರ್ಯಾಯವಾಗಿ ಹೇಗೆ ಹೇಳುತ್ತಾಳೆ. ಆಡಲಿಕ್ಕೆ ಹೋದಲ್ಲಿ ಬೇರೆ ವರಗಳು ಬಂದು, ಹುಡುಗಿಯ ಲಕ್ಷಣಗಳನ್ನು ನೋಡುತ್ತಾರೆ. ಅಣ್ಣ ಅಂಥವರಿಗೆ ಮಗಳನ್ನು ಕೊಡದಿರಲಿ ಎಂದು ಮುಂಚಿತವಾಗಿಯೇ ಈ ರೀತಿ ಸೂಚಿಸಿದ್ದಾಳೆ.

ಜನಪದ ಗೀತೆಗಳಲ್ಲಿ ಗಂಡಸರ ಹಾಡುಗಳು, ಹೆಂಗಸರ ಹಾಡುಗಳು, ಮಕ್ಕಳ ಹಾಡುಗಳನ್ನು ಈ ನಡುಗಡ್ಡೆಗಳಲ್ಲಿ ನೋಡಬಹುದು. ಅವುಗಳನ್ನು ಇಲ್ಲಿ ಕಾಣಬಹುದು. ಕ್ಷೇತ್ರಕಾರ್ಯದ ಮೂಲಕ ಕೆಲವೊಂದು ಪ್ರಮುಖ ಹಾಡುಗಳನ್ನು ಸಂಗ್ರಹಿಸಲಾಗಿದೆ.

**ಯಾತಕ್ಕೆ ಮಳೆ ಹೋದವೋ**

ಯಾತಕ್ಕೆ ಮಳೆ ಹೋದವೋ
ಶಿವ ಶಿವ ಲೋಕ ತಲ್ಲಣಿಸುತಾವೋ

ಬೇಕಿಲ್ಲದಿದ್ದಾರೆ ಬೆಂಕಿಯ ಮಳೆಸುರಿದು
ಉರಿಸಿ ಕೊಲ್ಲಲು ಬಾರದೆ॥

ಹೊಟ್ಟೆಗೆ ಅನ್ನ ಇಲ್ಲಾದೆಲೆ
ನಡೆದರೆ ಜೋಯಿ ಹೊಡೆಯುತಲೆ
ಪಟ್ಟದಾನೆಯಂತ ಸ್ತ್ರೀಯರು ಸೊರಗಿ
ಸೀರೆ ನಿಲ್ಲೋದಿಲ್ಲ ಸೊಂಟಾದಲಿ॥

ಹಸಿಗೂಸು ಹಸಿವು ತಾಳಾದೆಲೆ
ಅಳುತಾವೆ ರೊಟ್ಟಿ ಕೇಳುತಲೆ
ಹಡೆದ ಬಾಣಂತಿಗೆ ಅನ್ನವು ಇಲ್ಲದೆಲೆ
ಏರುತಾವೆ ಮೊಳಗೈಗೆ ಬಳೆ॥

ಒಕ್ಕಲು ಮಕ್ಕಳಂತೆ
ಅರಿವನ್ನು ಮಕ್ಕಳನ್ನು ಮಾರುಂಡರು
ಮಕ್ಕಳನ್ನು ಮಾರುಂಡು ದುಃಖವನ್ನು ಮರಿತಾರೆ
ಮುಕ್ಕಣ್ಣ ಮಳೆ ಕರುಣಿಸೋ॥(ದಾಮಣ್ಣ ಕಡದಂಗಡ್ಡೆ)

**ಜೋಗಿ ಜಂಗರೆ ಹೋಗಿ ನನ ತೌರೀಗೆ**

ಜೋಗಿ ಜಂಗರೆ ಹೋಗಿ ನನ ತೌರೀಗೆ
ಸಣ್ಣಕ್ಕಿ ದಾನ ಕೊಡುತಾರೆ
ಸಣ್ಣಕ್ಕಿ ದಾನ ಕೊಡುತಾರೆ ಅಣ್ಣಯ್ಯ
ಹೊನ್ನಿನ ದಾನ ಕೊಡುತಾರೆ॥

ನೀರುಳ್ಳಿದಾನ ನೀರು ಮಜ್ಜಿಗೆ ದಾನ
ಅಂಬಲಿಯ ದಾನ ಕೊಡುತಾರೆ
ಅಂಬಲಿಯ ದಾನ ಕೊಡುತಾರೆ ಅಣ್ಣಯ್ಯ
ಅಂಬುಲದ ಮುದ್ದೆ ಕೊಡುತಾನೆ॥

ಅತ್ತಿಗೆ ಬಸುರಿ ಮನೆ ಮುಂದೆ ಚಪ್ಪರ
ಅನ್ನ ಛತ್ರವ ಇಡಿಸೀದೆ
ಅನ್ನ ಛತ್ರವ ಇಡಿಸೀದೆ ಅಣ್ಣಯ್ಯ
ಮನೆ ಮುಂದೆ ನೆಡೆದಿದೆ ಅನ್ನದಾನ॥

ಹಾದೀಯ ಅರಮನೆ ಬೀದೀಯ ಪಡಸಾಲೆ
ಏಳು ಸುತ್ತಿನ ಕಲ್ಲು ಬಾವಿ

ಏಳು ಸುತ್ತಿನ ಕಲ್ಲು ಬಾವಿ ಕಟ್ಟಿಸ್ಯಾನು
ಇಡಿಸ್ಯಾನು ತಮ್ಮಯ್ಯ ಅರವಟ್ಟಿಗೆ॥

ತಾನತ್ತಂದಾನೋ ತಾನತ್ತಂದಾನೋ
ತಾನತ್ತಂದಾನೋ ತಾನಾನೋ.......(ಗದ್ದೆವ್ವ ದೇವರಗಡ್ಡೆ)

## ಹೆಣ್ಣಿನ ಜಮುಮಾಕೆ ಅಣ್ಣತಮ್ಮರು ಬೇಕು

ಹೆಣ್ಣಿನ ಜನುಮಾಕೆ ಅಣ್ಣತಮ್ಮರು ಬೇಕು
ಬೆನ್ನು ಕಟ್ಟುವರು ಸಭೆಯೊಳಗೆ
ಬೆನ್ನು ಕಟ್ಟುವರು ಸಭೆಯೊಳಗೆ ಸಾವಿರ
ಹೊನ್ನು ಕಟ್ಟುವರು ಉಡಿಯೊಳಗೆ॥

ಎನಗೆ ಯಾರಿಲ್ಲಂತ ಮನದಾಗ ಮರುಗಿದರು
ಪರನಾಡಲ್ಲೊಬ್ಬ ಪ್ರತಿಸೂರ್ಯ
ಪರನಾಡಲ್ಲೊಬ್ಬ ಪ್ರತಿಸೂರ್ಯ ನನ್ನಣ್ಣ
ಬಿದಿಗೆ ಚಂದ್ರಮ ಉದಿಯಾದ॥

ಮನೆಯ ಹಿಂದಲ ಮಾವುನೆನೆದಾರೆ ಘಮ್ಮೆಂದು
ನೆನೆದಂಗೆ ಬಂದ ನನ ಅಣ್ಣ
ನೆನೆದಂಗೆ ಬಂದ ನನ ಅಣ್ಣ ಬಾಳೆಯ
ಗೊನೆಯ್ಹಾಂಗೆ ತೋಳ ತಿರುವೂತ॥

ಸರದಾರಿ ಬರುವಾಗ ಸುರಿದಾವು ಮಲ್ಲಿಗೆ
ದೊರೆ ನನ್ನ ತಮ್ಮ ಬರುವಾಗ
ದೊರೆ ನನ್ನ ತಮ್ಮ ಬರುವಾಗ ಯಾಲಕ್ಕಿ
ಗೊನೆ ಬಾಗಿ ಹಾಲಸುರಿದಾವೊ॥

ಅಣ್ಣ ಬರುತಾನಂತ ಅಂಗಳಕ್ಕೆ ಕೈಕೊಟ್ಟು
ರನ್ನ ಬಚ್ಚಲಿಗೆ ಮಣೆ ಹಾಕಿ
ರನ್ನ ಬಚ್ಚಲಿಗೆ ಮಣೆ ಹಾಕಿ ಕೇಳೇನು
ತಣ್ಣಾಗಿರಲ್ಲಣ್ಣ ನನ್ನ ತವರು॥(ನೀಲಮ್ಮ ರಾಮಗಡ್ಡೆ)

## ಅಪ್ಪ ನೀಲಕಂಠರಾಯ

ತಿಂಗಾಳು ಮುಳುಗಿದವೊ
ರಂಗೋಲಿ ಬೆಳಗಿದವೊ

ನಮ್ಮ ಸ್ವಾಮಿ ನೀಲಕಂಠರಾಯನ
ಪೂಜೆಗೆಂದು ಬಾಳೆ ಬಾಗಿದವೊ॥

ಅಪ್ಪ ನೀಲಕಂಠರಾಯನಿಗೆ ತುಪ್ಪದಾರತಿ ಹಚ್ಚಿ
ಹೊಂಬಾಳೆ ಸೇವೆ ಮಾಡುವಾಗ
ಬಾಳೆ ಬಾಗಿದವೊ॥
ಅಣ್ಣ ನೀಲಕಂಠರಾಯನು ಸಣ್ಣತೇರಿನ ಮ್ಯಾಲೆ
ಸುಮ್ಮಾನೆ ಕೂತು ಶರಣರು ನೋಡುವಾಗ
ಬಾಳೆ ಬಾಗಿದವೊ॥

ಮಲ್ಲಿಗೆ ಹೂವ್ನಂಗೆ ಚೆಲ್ಲಿದೋ ನಿನ್ನ ಪರುಸೆ
ನಮ್ಮ ಚೆಲ್ಲಾಟಗಾರ ಮಾಯ್ಕಾರ್ನ ಪೂಜೆಗೆ
ಬಾಳೆ ಬಾಗಿದವೊ॥(ನೀಲಕಂಠರಾಯನ ಗಡ್ಡೆ ಗರತಿಯರು)

**ಪಂಚಮಿ ಹಬ್ಬ ಉಳಿದಾವ ದಿನ ನಾಕ**

ಪಂಚಮಿ ಹಬ್ಬ ಉಳಿದಾವ ದಿನ ನಾಕ
ಅಣ್ಣ ಬರಲಿಲ್ಲ ಯಾಕ ಕರಿಯಾಕ॥

ನನ್ನ ತವರೂರು ಗೋಕುಲನಗರ
ಅಲ್ಲಿ ಇರುವುದು ರಾಜಮಂದಿರ
ಯವ್ವ ಹ್ಯಾಂಗ ಇರಲಿ ತೌರ ಮರೆತು
ಅಣ್ಣ ಬರಲಿಲ್ಲ ಯಾಕ ಕರಿಯಾಕ॥

ನನ್ನ ತೌರೂರ ಪಂಚಮಿ ಭಾರಿ
ವಾರಿಗೆ ಗೆಳೆತ್ಯಾರು ನಾವು ಕೂಡಿ
ಬಳ್ಳಿ ಸೊಗಸೀಲೆ ಜೋಕಾಲಿಯೇರಿ
ಅಣ್ಣ ಬರಲಿಲ್ಲ ಯಾಕ ಕರಿಯಾಕ॥

ಎಳ್ಳು ಅವಲಕ್ಕಿ ತಂಬಿಟ್ಟ ಕುಟ್ಟಿ
ನಾನು ತಿನುವಾಕಿ ಮನೆಗೆ ಬಂದಾಗ
ಯಾರೀಗು ಏನು ಉಳಿದ್ಹಾಂಗ
ಅಣ್ಣ ಬರಲಿಲ್ಲ ಯಾಕ ಕರಿಯಾಕ॥

ನನ್ನ ತವರೂರು ದೇವರ ಗಡ್ಡಿ
ಅಲ್ಲಿ ನೆಲಸ್ಯಾಳ ಗದ್ದೆಮ್ಮ ದೇವಿ ದೇವರ

ಯವ್ವ ಬೇಡುವೆ ನಾನೊಂದು ವರವ
ಅಣ್ಣ ಬರಲಿಲ್ಲ ಯಾಕ ಕರಿಯಾಕ

**ತವರೂರು ಮನೆ ನೋಡ ಬಂದೆ**

ತವರೂರ ಮನೆ ನೋಡ ಬಂದೆ
ತಾಯ ನೆನಪಾಗಿ ಕಣ್ಣೀರ ತಂದೆ॥

ಹತ್ತು ಹದಿನಾಲ್ಕು ವರುಷಗಳ ಹಿಂದೆ
ಹೆತ್ತ ತಂದೆ ತಾಯಿಗಳ ಮುಂದೆ
ಮುತ್ತಿನಂತೆ ಜೋಪಾನವಾಗಿ ಬೆಳೆದೆ
ಅದು ಎತ್ತ ಹೋದಾರೂ ಕನಸಾಗಿದೆ॥

ಬಾಗೀಲ ಮುಂದೆ ರಂಗೋಲಿ
ಬಾಗಿ ಹಿಡುತಿದ್ದೆ ನಾನಾ ತರದಲ್ಲಿ
ಅದ ಹೇಗೆ ನಾನು ಮರೆಯಲಿ
ಅದು ಎಂದೂ ಮರೆಯಾದು ಬಾಳಲ್ಲಿ॥

ಅತ್ತಿಗೆ ಕೈಗೊಂಬೆ ನನ ಅಣ್ಣ
ಎತ್ತಿ ಮುದ್ದಾಡಿದ ತಂಗಿ ಮರೆತ
ಅಣ್ಣ ಕಣ್ಣೆತ್ತಿ ಒಮ್ಮೆ ನೋಡಬಾರದೆ
ತಂಗಿ ಬಾರವ ಇತ್ತ ಎನಬಾರದೆ॥

ಅಣ್ಣಾನ ಹೆಂಡತಿ ನನ್ನ ನೋಡಿ
ಕರೆದಳು ಅಣ್ಣನ್ನ ಕಣ್ಸನ್ನೆ ಮಾಡಿ
ಅಣ್ಣಾ ಒಳಗ್ಹೋಗಿ ಕುಳಿತ
ತನ್ನ ಸಿರಿಯಲ್ಲಿ ನನ್ನ ಮರೆತ॥

ಶಿವನೇ.... ಶಿವನೇ.... ಶಿವನೇ....
ಶಿವನೇ ನಾ ಕೈಮುಗಿದು ಬೇಡುವೆ
ಸಿರಿಸಂಪತ್ತು ಕೊಡು ನನ ಅಣ್ಣಗೆ
ತಾಯಿ ಜಗದಾಂಬೆ ಗದ್ದೆಮ್ಮ ದೇವಿ ಕೈಮುಗಿದು ಬೇಡುವೆ
ಕಾಯಿ ಕರ್ಪೂರದಾರತಿ ಬೆಳಗುವೆ॥

**ಚನ್ನಪ್ಪ ಚೆನಗೌಡ**

ಚನ್ನಪ್ಪ ಚೆನಗೌಡ
ಕುಂಬಾರ ಮಾಡಿದ ಕೊಡನವ್ವ
ಚಂದಕೆ ತಂದೇನ ತಂಗಿ ನೀರಿಗೆ ಬಂದೇನ॥

ಆರು ಮೂರು ಒಂಬತ್ತು
ಆರು ತೂತಿನ ಕೊಡನವ್ವ
ಚೆಂದಕೆ ತಂದೇನ ತಂಗಿ ನೀರಿಗೆ ಬಂದೇನ॥

ಬಾಳಿಯ ಬನದಾಗ
ಹೆಂಗ ಬಾಗಿ ಬರಲವ್ವ
ಚೆಂದಕೆ ತಂದೇನ ತಂಗಿ ನೀರಿಗೆ ಬಂದೇನ॥

ನಿಂಬಿಯ ಬನದಾಗ
ನಾ ಹ್ಯಾಂಗ ಹಿಂಬಾಗಿ ಬರಲವ್ವ
ಚೆಂದಕೆ ತಂದೇನಾ ತಂಗಿ ನೀರಿಗೆ ಬಂದೇನ॥

ಹುಯಿಲಗೋಳ ಕೇರಿಯಾಗ
ಅಲ್ಲಿ ನೀರು ತುಂಬುವಾಗ
ಕಲ್ಲ ತಾಕಿತ್ತ ತಂಗಿ ಬಿಂದಿಗೆ ಒಡೆದಿತ್ತು॥

ದ್ಯಾಮವ್ವನ ಗುಡಿ ಮುಂದ
ಒಬ್ಬ ಮುದುಕ ಕುಂತಿದ್ದಾ
ಗಾಂಜಾ ಸೇದತಿದ್ದಾ ಒಳ್ಳೆ ಪಟಗಾಸುತ್ತಿದ್ದ॥

ಮಂಚದ ಮ್ಯಾಲಾನ
ಯವ್ವ ಇವನ್ಯಾರ ಮಲಗ್ಯಾವ
ಗೊತ್ತಲ್ಲೇನವ್ವಾ ತಂಗಿ ಶಿಶುನಾಳ ಶರೀಪಜ್ಜ
ಚೆಂದಕೆ ತಂದೇನೆ ತಂಗಿ ನೀರಿಗೆ ಬಂದೇನ॥

**ತಾಯಿ ಸತ್ತಮೇಲೆ ತವರಿಗೆ ಎಂದೂ**

ತಾಯಿ ಸತ್ತ ಮ್ಯಾಲೆ ತವರಿಗೆ ಎಂದೂ ಹೋಗಬಾರದವ್ವಾ
ನಾಯಿಗಿಂತ ಕಡೆಯಾಗಿ ಹೋಯಿತು ನನ್ನ ಬಾಳ ಕೇಳವ್ವಾ॥

ಬಹಳ ಮಕ್ಕಳ ಬಡತನ ಸಂಸಾರ ನನ್ನ ನಸಿಬಿದಾಗ
ಬರೆದು ಕಳಿಸಿದಾಗ ಏನು ಮಾಡುದು ಕರುಣ ಇಲ್ಲ ಶಿವಗ
ಸಿರಿಯ ತವರಿಗೆ ತುತ್ತ ಕೂಲಿಗೆ ನಾ ಹೋಗಿರಲಿಲ್ಲ
ಕರಳು ತಡಿಯದೆ ಅಣ್ಣನ ನೋಡಾಕ ಹೊರಟು ಬಂದೆನಲ್ಲಾ॥

ಬಗಲಾಗ ಬಂದು ಕೈಯಾಗ ಒಂದು ಕೂಸ ಕಟಗೊಂಡು
ಹರದಾರಿ ಹತ್ತಾ ಉಸಿರು ಹಾಕುತ್ತ ಬಂದಿದ್ದೆ ನಡಕೊಂಡು

ತವರಿನ ಹೊಸ್ತಿಲ ತುಳಿಯುವದಾಗ ಅಣ್ಣ ಹೆಂಡತಿಯು
ಕಂಡರು ಕಾಣಿಸದ್ಹಾಂಗ ಹೋದಳು ಇಲ್ಲ ಕರೆವ ಗತಿಯು॥

ನೆತ್ತಿ ಮ್ಯಾಲ ಬಿಸಿಲು ಬಂದಿತ್ತು ಮಕ್ಕಳು ಚಟಪಟಿಸಿ
ನೀರಿಗಾಗಿ ಕಣ್ಣೀರ ಹಾಕುತ ಅತ್ಯಾವ ಪುಟ ಪುಟಿಸಿ
ಹುಟ್ಟಿ ಬೆಳೆದ ನನ ತವರಲ್ಲೀಗ ನೀರಿಗೂ ಗತಿಯಿಲ್ಲ
ಬಾ ನನ ಮಗಳೆ ಯಾವಾಗ ಬಂದೆಂದು ಕರೆವ ಕರುಳಿಲ್ಲ॥

ಕೆಲಸದ ಮ್ಯಾಗ ಹೋಗಿದ್ದ ಅಣ್ಣ ಆಗ ಮನೆಗೆ ಬಂದ
ಬಾಗ್ಲಲ್ಲಿ ನಿಂತಿದ್ದ ಈ ತಂಗಿಯ ಕಂಡು ಕಣ್ಣಲ್ಲಿ ನೀರೆರೆದ
ಮನಸ ಒಳಗೆ ಇಷ್ಟಿಲ್ದಿದ್ರು ಹಸಿದ ಮಕ್ಕಳ ನೋಡಿ
ಒಲ್ಲದ ಮನಸಿಲೆ ಒಳಗೆ ಹೋದೆನು ಅಣ್ಣನ ಜೊತೆಗೂಡಿ॥

ಒಳಗ ಒಂದ ಅಣ್ಣಗ ಅತ್ಗೆ ಕಿವಿಯಾಗ ಹೇಳ್ಯಾಳ
ಬಾಯಿ ಮುಚ್ಚಿ ಕುಂದ್ರುವಂಗ ತಲಿಯಾಗ ತುಂಬ್ಯಾಳ
ಕೀಳು ಕುಲದಾ ಮಕ್ಕಳಾಂಗ ಆಕಿ ನಮ್ಮನ ನೋಡ್ಯಾಳು
ಚಹಾ ಕುಡಿದು ಬರಿ ತೊಳೆದ ನೀರ ತಂದಾಕಿ ಕೊಟ್ಟಾಳು॥

ಮಕ್ಕಳು ಮಾರಿ ಕಿವಿಚಿ ಕುಡಿವಾಗ ತಾಯಿಯ ನೆನಪಾತ
ತುಪ್ಪ ಹಾಕಿ ಕೈತುತ್ತ ಉಣಿಸಿದ ಚಿತ್ರದ ನೆನಪಾತ
ಗಂಡ ಹೆಂಡಿರು ಉಂಡ ಮುಸುರಿ ಮಕ್ಕಳಿಗೆ ಕೊಡುವಾಗ
ತಾಯಿ ಇದ್ದರೆ ಈ ಗತಿ ಬರುತಿತ್ತ ಹೆತ್ತ ಮಗಳಿಗೆ॥

ಒಬ್ಬಾಕಿ ತಂಗಿ ಚಂದಾಗಿ ನೋಡಂತ ಅವ್ವ ಸಾಯುವಾಗ
ಅಣ್ಣನ ಮುಂದೆ ಕಣ್ಣೀರ ತಗದು ಅಂದು ಹೇಳುವಾಗ
ಮದವಿ ಆದ ಕೆಲವು ತಿಂಗಳವರೆಗೂ ಅಂಗೆ ಅಂಗೆ ಇದ್ದ
ಎಂದೂ ಮರಿಯದ ನನ್ನ ಅಣ್ಣಯ್ಯ ಹೀಗೆ ಎಂಗೆ ಆದ॥

ಜೋಡಿ ಹಕ್ಕಿಯಂಗ ನಾ ಅಣ್ಣಯ್ಯ ಕೂಡಿ ಬೆಳೆದು ಮಾತು
ಹೆಂಡತಿ ಬರಲು ಒಡಹುಟ್ಟಿದ ತಂಗಿನ ಮರತಾಂವ ಈ ಹೊತ್ತು
ಕತ್ತಲನ್ನು ಕೇಳದೆ ನಮ್ಮನ ಹೊರಗೆ ಹಾಕುವಾಗ
ಬಾಯಿ ಮುಚ್ಚಿ ಬರಿ ನೋಡುತ ನಿಂತ ಹೊರಗೆ ನೂಕುವಾಗ॥

ನೀನು ಬಿಟ್ಟರೂ ನಾ ಹ್ಯಾಂಗ ಬಿಡಲಿ ಕರುಳಿನ ಸಮ್ಮಂದಾ
ಕಣ್ಣಾಗ ನೀರ ಬರತಾವೂ ಅಣ್ಣ ನಿನ್ನ ನೆನಪಿನಿಂದಾ

ನನಗೇನಾಗಲಿ ಅಣ್ಣಾ ನೀ ಸುಖದಿ ಬದುಕಿ ಬಾಳೊ
ನೀನು ಮರೆತರೂ ನಿನ್ನ ತಂಗಿ ನಾನು ಹ್ಯಾಂಗ ಮರಿಯಲೊ॥

**ಜನಪದ ಗೀತೆ**

**ಎದ್ದು ಬಾ ತಾಯಿ**

ಎದ್ದು ಬಾತಾಯೆ
ಗದ್ದೆಮ್ಮ ದೇವಿ
ಎದ್ದು ಬಾss ಎದ್ದು ಬಾss॥ಪ॥
ದಿನಕರನ ಹೊಂಗಿರಣ
ಹೊಂಗಳೆಸ ಬೆಳಗಿದವು
ಬಂಗಾರದ ಕಳಸಕೆ ಮುತ್ತನು ಕೊಟ್ಟಿಹವುss ॥೧॥

ನಿನ್ನ ಪಾದ ತೊಳೆಯಲು
ಕೃಷ್ಣೆಯೆ ಕಾದಿಹಳು
ಕೋಟಿ ಕೋಟಿ ಜಲರಾಶಿ ಪ್ರದಕ್ಷಿಣೆ ಗೈಯತಿದೆ ॥೨॥

ಛತ್ರಿ ಚಾಮರ ಬೀಸುತಿವೆ
ಮುತ್ತಿನಾರತಿ ಬೆಳಗಿವೆ
ಮತ್ತೆ ಮಂಗಳ ವಾದ್ಯಗಳು ನಿನಗಾಗಿ ಮೊಳಗುತ್ತಿವೆ ॥೩॥

ಮಲ್ಲಿಗೆಯ ದಂಡೆಗಳು
ಸಂಪಿಗೆಯ ಹಾರಗಳೂ
ಕೇದಗೆಯು ನಿನಗಾಗಿ ಕಾದು ಕುಳಿತಿಹುದುss ॥೪॥

ತುಪ್ಪದ ದೀಪಗಳು
ಕರ್ಪೂರ ಬೆಳಗಿದೆ
ಮೃಷ್ಟಾನ್ನ ನೈವೇದ್ಯ ಮಡಿಯಿಂದ ತಂದಿಹೆನು ॥೫॥

ಧೂಪದಾ ವಾಸನೆಯ
ಸುತ್ತೆಲ್ಲಾ ಹರಡಿದೆ
ಬಂದ ಭಕ್ತರೆಲ್ಲ ನಿನಗೆ ಸಾಷ್ಟಾಂಗ ಹಾಕಿಹರು ॥೬॥

ಹಿಂದೆ ಬಸವಸಾಗರ
ಮುಂದೆ ಚಿನ್ನದಾಗರ
ಎಂದೆಂದೂ ಜನಜೀವನ ಮಾಡವ್ವ ಸುಂದರೆ ॥೭॥

ಸುರಪುರದ ದೊರೆಗಳು
ಅಮರೇಶ್ವರದರಸರು
ಕೋಟಿ ಕೋಟಿ ಭಕ್ತರು ದರುಶನಕೆ ಬಂದಿಹರು ॥೮॥

(ರಚನೆ: ಶ್ರೀ ಎಸ್.ಎಸ್.ಕಾಶೀಮಠ ರೋಡಲಬಂಡಾ)

**ಜನಪದ ಗೀತೆ**

ಹಸರಂಗಿ ಹಲಗಡಗ। ಕುಸಲದ ಟೊಪ್ಪಗಿ
ಬಂಗಾರ ತೊಟ್ಟಿಲ। ಸಿಂಗಾರದ ಅಗ್ಗ
ಸಿಂಗಾರ ಶ್ರೀ ಕೃಷ್ಣನ ಚೆಂದಾಗಿ ತೂಗಿರೋ ಜೋ ಜೋ

ನೀರಾಗ ನೆರಳಕ್ಕ ಸೂರ್ಯ ಚಂದ್ರ ಬೆಳಕು
ಅದರಂತೆ ತಾಬೇಡಿ ಜೋರಾಗಿ ಅಳತಾನ। ಜೋ ಜೋ

ಶಂಖ್ಯಾಗಿನ ಶ್ರೀಗಂಧ ತೇದ ಬಟ್ಟಲ ತುಂಬಿ
ತೀಡಿ ತೀಡಿ ಹಚ್ಚಿದರೆ ಕಾಡಿ ಕಾಡಿ ಅಳತಾನ। ಜೋ ಜೋ

ಗಿಂಡುಗಿನ ಬಿಳಿಬಾನ ಬಳದ ಬಟ್ಟಲ ತುಂಬಿ
ತುತ್ತ ಮಾಡಿ ಉಣಿಸಿದರ ಹಠ ಮಾಡಿ ಅಳತಾನ। ಜೋ ಜೋ

(ರಚನೆ: ಶ್ರೀಮತಿ ವಿದ್ಯಾವತಿ, ನಾರಾಯಣಪುರ)

**ಭಾಗ್ಯದೇವತೆ**

ಭಾಗ್ಯವ ನೀಡು ತಾಯಿ ಗದ್ದೆಮ್ಮ
ಬೇಡುವೆ ನಿನಗೆ ಶಿರಬಾಗಿ
ಅರಿಷಿಣ ಕುಂಕುಮ ನೊಸಲಿಗೆತಾಗಿ
ಪಾವನಳಾದೆ ನಿನ್ನಡಿಗಳಲ್ಲಿ

ತಿಂಥಣಿ ಈಶನ ಸುಂದರ ಕಲ್ಪನೆ
ಆಯಿತು ನಿನ್ನಯ ಜೀವಕಾಸೆ
ಅಂದಿಗೂ ಇಂದಿಗೂ ನಿತ್ಯವೂ ಪೂಜೆ
ಜಾಗೃತ ಮಾತೆ ಎನಿಸಿದೆ ತಾಯೆ

ತೆಪ್ಪದ ಸೇವೆ ಒಪ್ಪದಿ ಪಡೆದು
ಸೂಪ್ತ ಶಕ್ತಿಯ ಮುಖದಲಿ ಬೀರುತೆ
ಗುಪ್ತಗಾಮಿನಿಯಾಗಿರುವೆ ನೀ
ನಿತ್ಯವು ಭಕ್ತರ ಪೊರೆಯುವೆ.

ಏಳೂರ ಸೇವೆ ಪಡೆಯುವ ತಾಯೆ
ಇರುಳಲಿ ಭಕ್ತರ ಘಂಜಿನ ಛಾಯೆ
ನೀನೆ ಎಮಗೆ ಆಧಾರ
ನಮ್ಮಯ ಬದುಕೆ ಸಾಕ್ಷಾತ್ಕಾರ

ಶ್ರೀಮತಿ ವಿದ್ಯಾವತಿ, ನಾರಾಯಣಪುರ

**ಗಡ್ಡೆ ಗದ್ದೆಮ್ಮ**

ದೇವರಗಡ್ಡೆ ಗದ್ದೆಮ್ಮ
ಮನೆ ಮನೆ ದೇವತೆ ನೀನಮ್ಮ

ಕೃಷ್ಣೆಯ ಥಟದಲಿ ನೆಲೆಸಿದೆಯಮ್ಮಾ
ಏಳು ಸೆಳವುಗಳ ನಡುವೆ ನೀನಮ್ಮ

ನೀನಿರುವಾ ನೆಲ ಸ್ವರ್ಗವದಮ್ಮ
ನಿನ್ನಯ ಭಕ್ತರು ಪಾವನಮ್ಮ

ರಾಜ್ಯ ವೈಭವದ ರಾಜವಮ್ಮ
ಮರುಳರಿಗಳರಿವನು ನೀ ನೀಡಮ್ಮ

ಬಾರೆ ಬಾರೆ ನಮ್ಮಮ್ಮ
ಲೋಕವ ಬೆಳಗುವ ಛಾಯಮ್ಮ

ನಿನ್ನಯ ಮಕ್ಕಳ ಮೊರೆ ಕೇಳಮ್ಮ
ದುಷ್ಟ ಸಂಹಾರಿ, ಶಿಷ್ಟ ರಕ್ಷಕಿ ನೀನಮ್ಮ

ಸತ್ಯವಂತರಿಗೆ ಸೊತ್ತನು ನೀಡುವೆ
ತನುಮನಧನದ ಲಕ್ಷ್ಮಮ್ಮ

ನಿನ್ನಯ ಮಹಿಮೆ ಹೊಗಳುವುದೆನ್ನ
ಪೂರ್ವಜನ್ಮದ ಪುಣ್ಯವದಮ್ಮ

**ತಾಯಿ ಶಾಂತಮ್ಮ**

ಮುಂಜಾನೆ ನಾನೆದ್ದು ಯಾರ್‍ಯಾರ್‍ನ ನೆನೆಯಾಲಿ
ಮೊಲೆಹಾಲು ಉಣಸಿ ಬೆಳಸೀದ।
ಮೂಲೆಹಾಲು ಉಣಸಿ ಬೆಳಸೀದ ಶಾಂತಮ್ಮ।
ಮುದದಿಂದ ಕೈಯ್ಯ ಮುಗಿದೇನ

ಆಲದೆಲೆಯ ಮಾಟ ಕೃಷ್ಣಭೀಮೇಯರ ಹರಿದಾಟ
ಸೃಷ್ಟಿ ಸೌಂದರ್ಯಕ್ಕೆ ತವರೂರ
ಸೃಷ್ಟಿ ಸೌಂದರ್ಯಕ್ಕೆ ತವರೂರ। ರಾಮಗಡ್ಡೆ
ಅಲ್ಲಿ ನೆಲೆಸ್ಯಾನ ಶಿವಯೋಗಿ

ರಾಮಗಡ್ಡೆ ಮಠದ ವಟುವಾಗಿ ನಾಬಂದು
ಮಟ ಮಟ ಮಾಯದ ಕಾಯುವ
ಮಟ ಮಟ ಮಾಯದ ಕಾಯುವ। ಚೋಳೇಂದ್ರು
ಕಾಯೊಡೆದೆ ಕೈಯ ಮುಗಿದೇನ

ಮದರಿಯ ಊರಾದ ಸದರೀಯ ಗ್ರಾಮದ
ಉದರಾಗ ಉದರೀದ ಶಾಂತಮ್ಮನ
ಉದರಾಗ ಉದರೀದ ಶಾಂತಮ್ಮನ ಕುವರ
ಸುದರಾಶಿ ಹಾಡ ಹಾಡ್ಯಾನ

ಹೊತ್ತ ತಾಯಿಗಿಂತ ಹೆತ್ತ ತಾಯಿಯೇ ಲೇಸ
ಉಚಾದ ತಾಯಿಗೆ ನಮಸೇನ
ಉಚಾದ ತಾಯಿಗೆ ನಮಸೇನ । ಶಾಂತಮ್ಮ
ಸ್ವಚ್ಛಂದ ಮನದ ಹಡೆದವ್ವಗೆ

ನೆಲಕಬ್ಬೆನ ಮೇಲೆ ಜೇನತಟ್ಟೆ ಇಟ್ಟಾಂಗ
ಹೊಟ್ಟೆಯ ಮಗನಿಂದ ಪದಗಳ
ಹೊಟ್ಟೆಯ ಮಗನಿಂದ ಪದಗಳ। ಶಾಂತಮ್ಮ।
ಸುಟ್ಟ ಹೊಟ್ಟೆಯ ತಣಿಸಲು।

ತಾಯಿಯ ನೆನೆದಾರ ಬೇಗನೆ ಪದ ಒಂದು
ಗಂಗಿ ಶಿವನ ತಲಿಮ್ಯಾಲೆ ನೆಲೆಸೀದ।
ಗಂಗಿ ಶಿವನ ತಲಿಮ್ಯಾಲೆ ನೆಲಸೀದ। ಶಾಂತಮ್ಮ।
ಭಕುತೀಲೆ ಕೈ ಮುಗಿದೇನ

ತಾಯವ್ವಯೆಂಬುವಳು ದೇವ ಲೋಕದ ಮನುಸ್ಯಾಳು
ತಾಯಿಗೆ ಬೈದರೆ ಕರ್ಮವು
ತಾಯಿಗೆ ಬೈದರೆ ಕರ್ಮವು। ಶಾಂತಮ್ಮ।
ಕಾಶಿಗೆ ಹೋದರೂ ಕಳಿಯದರ

ಒಂಬತ್ತು ತಿಂಗಳ ತುಂಬಿಕೊಂಡು ತಿರುಗ್ಯಾಳ
ಹಂಬಲಿಸಿ ನನ್ನ ಹಡೆದಾಳ।
ಹಂಬಲಿಸಿ ನನ್ನ ಹಡೆದಾಳ। ಶಾಂತಮ್ಮ
ನಿನ ಕಂದ ನೆನಪ ಬರೆದಾನ।
–ಶ್ರೀ ಸಿದ್ದಲಿಂಗಸ್ವಾಮಿಗಳು, ರಾಮಗಡ್ಡೆ

(ರಚನೆ: ಶ್ರೀ ಸಿದ್ದಲಿಂಗಸ್ವಾಮಿ, ರಾಮಗಡ್ಡೆ)

**ಮಂಗಳ ಹಾಡು**

೧. ಮಂಗಳಂ ಜಯ ಮಂಗಳಂ ॥ಪ॥
ಮಹಿಮ ಶ್ರೀ ಚನ್ನಬಸವಸ್ವಾಮಿಗೆ ॥ಅ॥
ಮೂರು ಕಾಲದಿ ಲಿಂಗಪೂಜೆಯ।
ಸಾರತರದಿ ಗೈದು ಸತತ।
ವರಯತಿ ಜಂಗಮರಿಗುಣಿಸಿ।
ಹರುಷಗೊಂಬ ಶರಣನು ತಮಲೆ

ಪಾರಮಾರ್ಥ ಲೌಕಿಕದ।
ಗುರುತನರಿತು ಜಗದೊಳೆಲ್ಲ।
ನರರಿಗೊಲಿದು ಕರುಣದಿಂದ।
ಪರಮ ತತ್ವವ ಬೋಧಿಸುವ ಗುರು

ಕಾಮನಾಘನ ಮದವಮುರಿದು।
ಸೋಮಧರನ ತೆರದಿ ಮೆರೆದು।
ತಾಮ ಸಗುಣಗಳನು ಕಳೆದು।
ಪ್ರೇಮ ಭರಿತನಾದ ಸುಚರಿತ

ಕರ್ಮರಹಿತನಾದರು ನೀ।
ಕರ್ಮವೆಸಗಿ ಜಗಕೆ ತೋರುತೆ।
ನಿರ್ಮಲಾತ್ಮಜ್ಞಾನಿ ಎನಸಿದ।
ರಾಮಲಿಂಗ ಪ್ರೇಮಿ ನಿನಗೆ

ಧರಣಿಯೊಳ್ಸಿರಿ ತನದಿ ಮೆರೆವ।
ಉರವ ಕೊಂಡ ಗವಿಯಮಠದಿ।
ನಿರುತ ಸಿದ್ದೇಶ್ವರನ ಭಜಿಸಿ।
ಮರವೆಯಳಿದ ವಿಮಲನುತಿಯುತ।

**ಲಾವಣಿ**

ಶ್ರೀ ಗುರುಚನಸವಾರ್ಯನ ಮಹಿಮೆಯ।
ಚರಿತೆಯು ಘನವಿದು ಸುಳ್ಳಲ್ಲ।
ಹರುಷದಿ ಪೇಳುನೆ ನಾನೆಲ್ಲ।
ಸ್ಥಿರ ಮನದಿ ಕೇಳಿ ಜನರೆಲ್ಲ।
ಪರಮಾದರದಿಂದಾಲಿಸಿ ಕೇಳಲು ದೊರೆವುದು ನಿಜ ಸುಖ ನಿಮಗೆಲ್ಲ

ಪೂರ್ವದಿ ನಾರದ ತಪವನುಗೈದ
ನಾರದಗಡ್ಡೆಯ ಸ್ಥಳದಲ್ಲಿ
ವರಕೃಷ್ಣಾನದಿಯ ದಡದಲ್ಲಿ
ನೆರೆ ಲಿಂಗಾಧ್ಯಾನದಿ ತಾನಲ್ಲಿ।
ನರಲೋಕದ ಜನರ ಪಾಸವ ಕಳೆಯಲು ತರುಣದಿ ಬಂದನು ಭವದಲ್ಲಿ

ಲೋಲನಾಗಿ ನಲಿದಾಡುತ ನದಿ
ಬಾಲಲೀಲೆಯನುಗೈಯ್ಯುತಲಿ।
ಗೆಳೆಯರ ಕೂಡುತ ಆಡುತಲಿ।
ಬಲುಗೋವುಗಳನು ತಾತಾಯುತಲಿ।
ಬಾಲಕೃಷ್ಣನ ತೆರದಿಯ। ಪರಿ ಕಾಲವ ತಳೆಯುತಯಿರುವಲ್ಲಿ

ಉರವಕೊಂಡ ಮಡಮಠದಲಿ ಮೆರೆವ।
ಕರಿಬಸವಾರ್ಯರು ನಿರುತದಲಿ।
ಪರಮೇಶ್ವರ ಪೂಜೆಯ ಮಾಡುತಲಿ।
ನೆರೆನಂಬಿದ ಭಕುತರಿಗೊಲಿಯುತಲಿ।
ಇರುತಿರಲೊಂದಿನ ಪರಶಿವನಲಿತಾ ಬೆರೆದನು ಪರಮಾನಂದದಲಿ

ನಾಡದೇವ ಮಠದಭಿಮಾನಿಗಳು।
ಕೂಡಿದರಲ್ಲಿಯ ಮಠದಲ್ಲಿ।
ಮಾಡುವ ಕಾರ್ಯವು ಭರದಲ್ಲಿ।
ನೋಡಿ ಯೋಚಿಸಿದವರಲ್ಲ।
ಒಡನೆ ನಾರದಗಡ್ಡೆಯಲ್ಲಿರುವ ಚನ್ನಬಸವನ ಕರತಂದಿಲ್ಲ.

ವಿಶ್ವಾವಸು ಸಂವತ್ಸರದು।
ಜೇಷ್ಠ ಮಾಸ ಶುಭಮೂರ್ತದಲಿ।
ಅಸದಳವೆನಿಸುವ ವಿಭವದಲಿ।

ವಸುಧಿಗೆ ಚೋದ್ಯವಿದೆನಿಸುತಲಿ।
ವಿಶ್ವಾಸದಿ ಮಠಪಟ್ಟಾಧ್ಯಕ್ಷರ ಮಾಡಿದರಲೆ ಶಭು ಭಕ್ತಿಯಲಿ

ಏಳು ನೂರು ಮಠಯಿಪ್ಪತ್ತು ಸಾವಿರ।
ಎಕರೆ ಇನಾಮಿನ ಭೂಮಿಗಳು।
ಇರುವವು ನೈಜಾಂ ಬ್ರಿಟೀಷಿನೊಳು।
ಮ್ಯಾನಪಲ್ಲಕಿ ಗಾಡಿಗಳು।
ಆನೆ ಒಂಟೆ ತುರಗಾವಳಿಮಾರ್ಬಲ ಎಣಿಸೂರದಲೆ ವಿಭವಗಳು

ಕಡಗ ಕಂಠಿ ವರಚಂದ್ರಹಾರಗಳು।
ಕುಪ್ಪೆ ತಾಯಿತ ಭರಣಿಗಳು
ಕನಕಬೆಳ್ಳಿಯ ಬೆತ್ತಗಳು
ಕೊಡಗಳು ತಾಲಿ ತಟ್ಟೆಗಳು।
ಕಂಡ ಜನರ ಮನಸೆಳೆಯುವ ಸೊಗಸಿನ ನಾನಾವಿಧದಲಿ ಒಡವೆಗಳು।

ಇಂತೆಸೆಯುವ ಸಿರಿಮಠದಧಿತಾರವ।
ಸಂತಸದಲಿತಾನಡೆಸುತಲಿ।
ಹಿಂದಿನಧರ್ಮವ ನೆಸಗಂತಲಿ।
ಚಂದ್ರನಂತೆ ತಾ ಬೆಳಗುತಲಿ।
ಯಾದವಗಿರಿಯ ನಾರದಗಡ್ಡೆಯ ಮಠದ ವ್ಯವಸ್ಥೆಯ ನೋಡುತಲಿ

ಮೋದದಿ ಮೈಸೂರು ಅರಸರು ಕೊಟ್ಟಪ।
ಬುಡ್ಡಾನಳ್ಳಿ ಜಹಗಿರಿನಲಿ।
ದೊಡ್ಡ ಮಠವ ಕಟ್ಟಿಸುತಲಿ।
ಸಡಗರದೀ ಪೂಜರೆಲ್ಲರಲಿ।
ಅತಿಶಯದವನು ತೋರುವ ನೀತಿಯ ಮಾರ್ಗವ ಬೋಧಿಸಿ ಕಲಿಸುತಲಿ

ಬಿದ್ದು ಹೋದ ಮಠ ಮಂದಿರಗಳನು।
ಭದ್ರಗೊಳಿಸಿದನು ಅಂದದು।
ವಿದ್ಯಾನವನಗಳಲೆ ಚಂದದಲಿ।
ಸುಂದರ ಬಳ್ಳಿಯ ಗಿಡಗಳಲಿ।
ಅಧಿಕ ತೆರದಿ, ದಿನದಿನದಿ ಮಠಗಳ ವೃದ್ಧಿಯ ಮಾಡಿದ ಮೋದದಿಂದ

(ಕ್ಷೇತ್ರಕಾರ್ಯ ಮಾಹಿತಿದಾರರಿಂದ)

ಈ ರೀತಿಯಲ್ಲಿ ಸಮಾಧಿಸ್ಥರಾದ ವೈರಾಗ್ಯ ಕರ್ತೃ ಶ್ರೀ ಚೆನ್ನಬಸವ ಸ್ವಾಮಿಗಳ ಲಿಂಗ ಶರೀರ ನಿಕ್ಷೇಪಕ್ಕೆ ಭಕ್ತರಲೊಬ್ಬರಾದ ಶ್ರೀ ಮರ್ಚೇಡು ರಾಜಾ ವಿರೂಪಾಕ್ಷರಾಯರು ಗದ್ದುಗೆಯನ್ನು ರಚಿಸಿ ಮಠವನ್ನು ನಿರ್ಮಿಸಿ ಶಾಶ್ವತವಾದ ಕೀರ್ತಿಯನ್ನು ಗಳಿಸಿದರು.

**ರಾಮಗಡ್ಡೆ ಮಠ**

ಕೃಷ್ಣೆ ಭೀಮೆಯರ ತೋಳ ತೊಟ್ಟಿಲಲಿ ಬೆಳಗುತ್ತಿರುವ
ರಾಮಗಡ್ಡೆ ಮಠ ಸುಕ್ಷೇತ್ರ

ಆಲದ ಎಲೆಯ ಆಕರದಿಂದಲೇ
ಮರೆಯುತ್ತಲಿದೆ ಶ್ರೀ ರಾಮಗಡ್ಡೆಯು
ಯುಗಯುಗದಿಂದಲೆ, ಕಣ್ಮಣ ಸೆಳೆಯುವುದು
ಗುರುವಿನ ಕರುಣೆಯ ಶ್ರೀ ಗಡ್ಡೆ

ತ್ರೇತಾಯುಗದಲ್ಲಿ ಶ್ರೀ ರಾಮಚಂದ್ರ
೧೪ ವರ್ಷ ಅಲೆಯುತ್ತಲೇ
ಗಡ್ಡೆ ಗೆಣಸುಗಳ ತಿನ್ನುತ್ತ ನಡೆದನು
ಸತಿಯನ ಕಾಣುವ ತವಕದಲ್ಲಿ

ಏಕಪತ್ನಿಯ ಖ್ಯಾತಸ್ತ ರಾಮನು
ಸೀತೆಯ ಹುಡುಕುತ ಹೊರಟತದೆ
ಭಾರತ ದೇಶದ ದಕ್ಷಿಣ ದಿಕ್ಕಿಗೆ
ಕನ್ನಡ ನಾಡಿಗೆ ಬರುತ್ತಲಿದೆ

ಎಡೆದೊರೆ ನಾಡಿನ ರಾಮಗಡ್ಡೆಯು
ಐತಿಹಾಸಿಕ ಕ್ಷೇತ್ರವಿದು
ಆದರ್ಶ ಪುರುಷ ಶ್ರೀರಾಮಚಂದ್ರನು
ನೆಲೆಸಿನಿಂತ ದಿವ್ಯ ತಾಣವಿದು

೧೪ ವರ್ಷ ವನವಾಸ ಸಮಯದಿ
೩ ತಿಂಗಳ ಅವಧಿಯಲಿ
ಶ್ರೀರಾಮಚಂದ್ರ ವಾಸಗೈದನು
ಸುಂದರ ಕೃಷ್ಣೆಯ ಗಡ್ಡೆಯಲಿ

**(ಶರಣಪ್ಪ ಗೋನಾಳ)**

**೨. ಆರುತಿಯ ಬೆಳಗೋಣ**

ಆರುತಿಯ ಬೆಳಗೋಣ ಚೋಳೇಂದ್ರ ಗುರುವರೆಗೆ
ಬಂದಂತಹ ಭಕ್ತರ ಚೆಂದದಿ ಪರಿವು ಚೋಳೇಂದ್ರ ಗುರುವರೆಗೆ

ಕೃಷ್ಣೆಯ ತೀರದಲ್ಲಿ ಮೆರೆಯುವ ಸುಕ್ಷೇತ್ರ
ಬೇಡಿದ ಭಕ್ತರ ಕಷ್ಟವು ಕಳೆಯುವ ಚೋಳೇಂದ್ರಗುರುವರೆಗೆ

ಶಿವಪೂಜೆ ಶಿವಧ್ಯಾನವ ಶಿವನಾಮ ದಿನದಿನವು
ಶಿವಲೋಕ ಸಿರಿಯನು ಭೂಮಿಗೆ ಇಳಿಸಿದ ಚೋಳೇಂದ್ರಗುರುವರೆಗೆ

ಯೋಗರೂಢನು ತಾತ ಯೋಗಿ ಪುಂಗವನು ಇತ
ಶಿವಯೋಗದಿಂದಲೇ ಶಿವನ ಪೀಠ ಚೋಳೇಂದ್ರ ಗುರುವರೆಗೆ

ರಾಮಲಿಂಗವನು ಸ್ಥಾಪನೈದನು ಶ್ರೀರಾಮಚಂದ್ರನು ಆ ಕ್ಷಣದಿ
ಅಂದಿನ ಪವಾಡ ಇಂದಿಗೂ ಶಾಶ್ವತ
ಶ್ರೀರಾಮಾ ಪಾದ ಶಿಲೆಯಲ್ಲಿ
ಶ್ರೀರಾಮಚಂದ್ರ ಸ್ಥಾಪಿಸಿದಂತ ರಾಮಗಡ್ಡೆ ಲಿಂಗ ಪ್ರಖ್ಯಾತ
ಕಾಶ್ಮೀರ ದೇಶದ ತಪಗೈದ ಗುರು ಚೋಳೇಂದ್ರಸ್ವಾಮಿ ಅನವರತ

ರಾಯಚೂರಿನ ಕೂರ್ತಕುಂದದ
ರಾಮಗಡ್ಡೆ ಮಠ ಸುಕ್ಷೇತ್ರ

**(ಪ್ರತಿಮಾ ಆತ್ರೇಯ)**

### ಗುರು ಬಂದ

ಗುರು ಬಂದ ಹರಬಂದ ಯೋಗಿ ತಾ ಬಂದ
ಚೋಳೇಂದ್ರ ಗುರುದೇವ ದಾವಸಿ ಬಂದ
ಶುಭ ಬೆಳಕನ ತಂದ

ಕಾಶ್ಮಿರದಿಂದಲೇ ಕನ್ನಡ ನಾಡಿಗೆ
ನಡೆದು ಬಂದರ ಸ್ವಾಮಿ ಚೋಳೇಂದ್ರಯೋಗಿ
ಭಕ್ತರ ಭಕ್ತಿಗೆ ಮೆಚ್ಚಿದ ಗುರುವರ
ಕೃಷ್ಣೆಯ ತಟಕೆ ಧಾವಿಸಿ ಬಂದ ಶುಭ ಬೆಳಕನ ತಂದ

ಮಳೆಗಾಲದ ಬೆಳದಿಂಗಳ ಪೂರ್ಣಿಮ
ತುಂಬಿ ತುಳುಕಿ ಪರಿಯುತ್ತಿಯಳು ಕೃಷ್ಣೆಮನೋರಮೆ
ಕಂಗಳ ಕಾಂತಿಗೆ ಚಲುವುದು ತುಂಬಿದೆ
ಚೋಳೇಂದ್ರ ಹಾಸಿದ ಬಿಳಿ ಗಂಬಳಿ

ಏನುದು ಚಿತ್ರ ಏನಿದು ವಿಚಿತ್ರ
ನೀರಿನ ಮೇಲೆ ಗುರುದೇವ ನಡೆದ
ಯೋಗಿರೂಡನು ತಾತ ಯೋಗಿಪುಂಗವನಿತ
ಚೋಳೇಂದ್ರ ಸ್ವಾಮಿಯ ಲೀಲೆಯು ಪ್ರಸಿದ್ಧ

(ಶ್ರೀ ರಕ್ಷ)

**ಗುರುದೇವ**

ಆವಿಗೆಯ ಮೆಟ್ಟಿ ಕಾವಿಯನ ತೊಟ್ಟು
ಚೋಳೇಂದ್ರ ಗುರುವ ಬಂದ
ದೈಸಿದ ರವಿಯ ಗುರುವನ ಕಂಡು
ಹೊಂಬೆಳಕು ಹರಡಿ ನಿಂತ
ಶಿವನಾಮ ಮಂತ್ರ ಶ್ರೀಕಂಠನಾದ
ಘಮಘಮ ಸುತ್ತದೆ ಹೂ
ಶ್ರೀಗಂಧದೊಡನೆ ಮಗರಂದ ಕೂಡಿ
ಮಘ ಮಘಿಸುತ್ತಲೇ ಚೆಲುವು.

ತಿಳಿನೀರ ಮೇಲೆ ಕಂಬಳಿಯ ಹಾಸಿ
ಅಲೆ ಅಲೆಯ ಜೊತೆಗೆ ತೇಲಿ
ನದಿಯಲ್ಲಿ ನಾವೇ ತೇಲಿ ತೇರದಿ
ಕಂಬಳಿಯ ತೇಲಿ ಬರಲು
ಜನರೆಲ್ಲಾ ಕೂಡಿ ಹರಘೋಷಿ ಮಾಡಿ
ಗುರುನಾಮವನ್ನು ಭಜಿಸಿ
ಸಾಲಗಿ ನಿಂದ ತಲಾಭಾಗಿ ನಮಿಸಿ
ಮನದುಂಬಿ ಹಾಡಿ ಪಾಡಿ.

ಮಳೆಗಾಲ ದಿನದಿ ಇಳೆಹೊತ್ತಿನಲ್ಲಿ
ಧರೆಯೆಲ್ಲಾ ತಂಪವು ಉಸಿರು
ಹೊಳೆಹಳ್ಳ ತುಂಬಿ ಗಿರಿಶಿರದಿ ಹಸಿರು
ದನಕರವು ಉಂಡು ತಣಿದು
ಬರಗಾಲ ಸರಿದು ಶುಭಗಾಲ ಬಂದು
ಎಲ್ಲೆ ಎಲ್ಲೋ ನಲಿವು ನಲಿವು
ಈ ಲೋಕವೆಲ್ಲ ಶಿವಲೋಕವಾಯಿತು
ಗುರು ಕರುಣೆಯಿಂದ ದಿನವು

ಮಾತೆಯನ ಕಂಡು ಮಗವೊಂದು ತಾನು
ಮೊಗಬಿಚ್ಚಿ ನಗುತ ತೆರದಿ
ಗುರು ನನ್ನ ನೋಡಿ ಭಕ್ತರ ಗುಂಪು ಹರುಷದಲ್ಲಿ ಬಂದು ನಿಂತು
ಸೇವೆಗೈದು ಧನ್ಯತೆಯ ಪಡೆದು
ಶರಣು ಎಂದು ಚರಣಕೆ ಎರಗೆ
ಕರುಣಾಳು ಬೆಳಕಿ ಕೈಹಿಡಿದು ನಡೆಸು
ಜಗವನ್ನು ಬೆಳಗು ಎಂದು.

(ಶರಣಪ್ಪ ಗೋನಾಳ)

**ಪವಾಡ ಪುರುಷ**

ಪವಾಡ ಪುರುಷ ಪುಣ್ಯಪುಂಗವು
ಚೋಳೇಂದ್ರ ಗುರು ಶಿವಯೋಗಿ
ಅವರಾತ್ರಿಯಲಿ ತಪವನಗೈದ
ಅದ್ಭುತ ಖ್ಯಾತಿಯ ತಪನಿಧಿ

ಆರು ಬೊಗಸಿಯ ನೀರಿನೊಂದಿಗೆ
ಹಸಿರು ಎಲೆಯ ಪೂರ್ಣಹಾರ
ಮರದ ತೊಗಟೆ ಕೌಪಿನ್ಯವಾಯಿತು
ಕೈಯಲಿ ಕಮಂಡಲ ಹಿಡಿದಾಯಿತು

ಸೃಷ್ಠಿಯ ನಿಯಮವು ಬದಲಾಯಿಸಿದರು
ಚೋಳೇಂದ್ರ ಗುರುವರ ತಪದಿಂದ
ಕೃಷ್ಣೆಯ ಜಲವನ ಸ್ಪರ್ಶಿಸಿದಕ್ಷಣ
ಕೃತವಾಗತ್ತದೆ ಆಚಾರ್ಯ

ಷಟಸ್ಥಲ ಸಿದ್ಧಾಂತ ಚರವರ
ಶ್ರೀ ಸಮರ್ಥ ಸದ್ಗುರು ಚೋಳೇಂದ್ರ
ಅಸನವ್ಯಸನವು ಗೆದ್ದ ತವನಿಧಿ
ಜಗಕೇ ತೋರಿದ ನಿಜ ಬೆರಗ

ಅನ್ನಸಂತರ್ಪಣೆ ನಿತ್ಯಾರಾಧನೆ
ಅನುದಿನದಲಿ ತಾ ನಡೆಯುತ್ತದೆ
ಭಕ್ತರ ಭಕ್ತಿಗೆ ಗುರುವಿನ ಕರುಣೆ
ಶಾಶ್ವತವಾಗಿ ಪೊರೆಯುತ್ತದೆ.

(ಶರಣಪ್ಪ ಗೋನಾಳ)

**ಭಕ್ತರ ಪ್ರೇಮಿ**

ಭಕ್ತರ ಪ್ರೇಮಿಯು ಭಕ್ತರ ಧಾರೆಯು
ಭಕ್ತರ ಬಂಧು ಚೋಳೇಂದ್ರ
ಭಕ್ತರ ಮನದ ಕಲ್ಪತರು ಗುರು
ಕಾಮಧೇನು ಚೋಳೇಂದ್ರ

ಭಕ್ತರ ಭಕ್ತಿಗೆ ಭಾಗ್ಯದೈವವು
ಯೋಗಿರಣ್ಯ ಚೋಳೇಂದ್ರ
ಭಕ್ತರ ಬದುಕಿಗೆ ಬೆಳಕನೆ ನೀಡುವ
ಭವ್ಯ ಭಾನುವು ಚೋಳೇಂದ್ರ

ಪಾಪ ಪುಣ್ಯವು ಒಂದು ಅರಿಯದ
ಮೂಢ ಮತಿಯು ನಾನಯ್ಯ
ಕೈ ಹಿಡಿದು ಎತ್ತಿ ನಿಜ ಸುಖ ತೋರುವ
ಗುರುವರ ದೈವವು ನಿನಯ್ಯ

ಅಗಣಿತವು ಸ್ವಾಮಿ ನಿಮ್ಮಯ ಲೀಲೆ
ಅನುದಿನ ಕಾಯೋ ಚೋಳೇಂದ್ರ
ಶ್ರೀರಾಮಗಡ್ಡೆಯ ಪುಣ್ಯದ ಸಿರಿಯೇ
ಸಿರಿಸಂಪದ ಕೊಡುವ ವರದೊರೆಯೇ**(ದೇವೇಂದ್ರಕುಮಾರ ಮುಧೋಳ)**

**(ಕ್ಷೇತ್ರಕಾರ್ಯದಲ್ಲಿ ಭಜನೆ ಮೇಳ ಹಾಡಿದ ಹಾಡುಗಳು, ರಾಮಗಡ್ಡೆ)**

**ಸಾಹಿತ್ಯ: ಅಯ್ಯಪ್ಪಯ್ಯ ಹುಡಾ, ಶಕ್ತಿನಗರ**

**೬.೨.೨. ಗಾದೆಗಳು**

ಉಳಿದ ಜನಪದ ಸಾಹಿತ್ಯ ಪ್ರಕಾರಗಳಿಗಿಂತ ವಿಶಿಷ್ಟವಾದುದು ಗಾದೆ. ಬಳಸಲ್ಪಡುವ ಸನ್ನಿವೇಶದಿಂದ ಅದನ್ನು ಬೇರ್ಪಡಿಸಲಿಕ್ಕಾಗದು. ಒಂದು ಗಾದೆ ಸರಿಯಾಗಿ ತಿಳಿಯುವುದು ಸರಿಯಾದ ಸಂದರ್ಭದಲ್ಲಿ ಅದನ್ನು ಬಳಸಿದಾಗಲೇ. ಬೇರೆ ಜಾನಪದ ಪ್ರಕಾರಗಳಿಗಿಂತ ಇದರ ಚಲಾವಣೆ ಹೆಚ್ಚು. ನಾವು ಕಲಿತ ಭಾಷೆಯಷ್ಟೇ ಸಹಜವಾಗಿರುವಂಥದ್ದು ಇದು. ಉಳಿದ ಜನಪದ ಸಾಹಿತ್ಯ ಪ್ರಕಾರಗಳು, ಸಮಾಜದ ಕೆಲವು ವರ್ಗಗಳಲ್ಲಿ ಮಾತ್ರ ಇರಬಲ್ಲವು. ಆದರೆ ಗಾದೆ ಮಾತ್ರ ಎಲ್ಲ ವರ್ಗದ ಜನರಲ್ಲಿ ಬಳಕೆಯಲ್ಲಿರುತ್ತದೆ. ಇಷ್ಟಾಗಿಯೂ ಗಾದೆಯೆಂದರೇನೆಂದು ಎಲ್ಲರಿಗೂ ಒಪ್ಪುವ ಹಾಗೆ ಹೇಳುವುದು ಸಾಧ್ಯವಿಲ್ಲ. ಏನು ಹೇಳಿದರೂ ಅದು ಅದರ ಸ್ವರೂಪ, ವರ್ಣನೆಯಾಗುತ್ತದೆ ಅಷ್ಟೇ. ಯಾಕೆಂದರೆ ಗಾದೆಯ ರೂಪ ಹೀಗೇ ಇದ್ದೀತೆಂದು, ಹೇಳಲಾಗುವುದಿಲ್ಲ. ಮಾರ್ಕೆಟಿನ

ಮಾತನ್ನು ಸ್ವಲ್ಪ ಬದಲಿಸಿ ಹೇಳುವುದಾದರೆ ಗಾದೆ "ಹವಾಮಾನ"ವಿದ್ದ ಹಾಗೇ. ಅದರ ಬಗ್ಗೆ ಎಲ್ಲರೂ ಮಾತಾಡುತ್ತಾರೆ. ಆದರೆ ಅದಕ್ಕೆ ಯಾರೇನು ಮಾಡಲಾಗುವುದಿಲ್ಲ.

ಜನತೆಯ ಅನುಭವದ ಸಂಪತ್ತು ನೆನಪಿಡಲು ಸುಲಭವಾಗುವಂತೆ, ಪ್ರಾಸಬದ್ಧವಾದ ಚಿಕ್ಕ ವಾಕ್ಯಗಳಾಗಿ ಗಾದೆಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಜನಪ್ರಿಯವಾದ ಸಾಹಿತ್ಯ ಗಾದೆ. ಒಂದು ಸಮುದಾಯದ ಮನಸ್ಸು ಗಾದೆಗಳಲ್ಲಿ ಅಡಕವಾಗಿರುತ್ತದೆ. ಪುರಾಣ, ಚರಿತ್ರೆ, ಸ್ಥಳಗತೆ, ಅನುದಿನದ ಘಟನೆಗಳು, ಕಷ್ಟ ಕೋಟಲೆಗಳು ಮತ್ತು ಆನಂದ ಹೀಗೆ ವಿಶಾಲ ಹಿನ್ನೆಲೆ ಹೊಂದಿರುವ ಗಾದೆಗಳು ಜನತೆಯ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳಲು ವಿಶೇಷವಾಗಿ ನೆರವಾಗುತ್ತ ಬದುಕನ್ನು ತಿದ್ದುವಲ್ಲಿ ರಹಸ್ಯಗಳ ಬೆನ್ನಟ್ಟಿ ಹೋಗುವಲ್ಲಿಯೂ ಮುಂದಾಗಿರುತ್ತವೆ.

ಒಂದು ದೇಶದ ನಿಜವಾದ ಬಣ್ಣ, ಬದುಕು, ಅಲ್ಲಿನ ಗಾದೆಗಳ ಮೂಲಕ ಬಯಲಾಗುತ್ತದೆ. ಜನತೆಯ ಕಳೆದ ದಿನಗಳ ರೋಷ, ಕೆಚ್ಚು, ಮೌಢ್ಯ, ಮಾನಸಿಕ ವಿಕಾಸ, ನಗು, ನೋವು, ನ್ಯಾಯ, ಅನ್ಯಾಯ ಮೊದಲಾದ ಸಂಗತಿಗಳ ಮಡು ಈ ಗಾದೆಗಳು. ಇವನ್ನೆಲ್ಲಾ ವಿಂಗಡಿಸಿ ನಿತ್ಯದ ಬದುಕಿಗೆ ಹೇಗೆ ಬಳಸಿಕೊಳ್ಳಬೇಕು ಎನ್ನುವುದು ಮುಖ್ಯ ಸಂಗತಿಯಾಗಬೇಕು. ಹೀಗಾಗಿ ಸಮಾಜ, ಸಾಹಿತ್ಯ, ಚರಿತ್ರೆ, ಭಾಷೆ, ಮನಸ್ಸು, ಮಾನವ ಮುಂತಾದ ಬಗೆ ಬಗೆಯ ವಿಷಯಗಳ ಬಗ್ಗೆ ಅಧ್ಯಯನ ನಡೆಸುವವರಿಗೆ ಗಾದೆಗಳು ಸವಾಲಾಗಿವೆ ಮತ್ತು ಹೆಚ್ಚಿನ ಗುಟ್ಟಾಗಿವೆ.

ಗಾದೆಗಳು ಹಲವು ಬಗೆಯ ಕಾರ್ಯಗಳನ್ನು ಸಮಾಜದಲ್ಲಿ ನಿರ್ವಹಿಸುತ್ತವೆ. ಮುಖ್ಯವಾಗಿ ಅನಕ್ಷರಸ್ಥ ಸಮಾಜದಲ್ಲಿ ತಿಳುವಳಿಕೆ ನೀಡುವ ಕೆಲಸವನ್ನು ಅವು ನಿರಂತರವಾಗಿ ಮಾಡುತ್ತಾ ಬಂದಿವೆ. ಹಾಗೆ ಪರಂಪರಾನುಗತವಾದ ತಿಳುವಳಿಕೆಯನ್ನು ನೀಡುತ್ತಾ, ಒಂದು ಬಗೆಯ ಸಾಮಾಜಿಕ ಹತೋಟಿಯನ್ನು ಸಾಧಿಸುತ್ತವೆ. ಎಷ್ಟೋ ಗಾದೆಗಳು, ಬುದ್ಧಿ ಮಾತುಗಳಾಗಿರುವುದರಿಂದ ಸಾಂಸ್ಕೃತಿಕ ಮೌಲ್ಯಗಳ ರಕ್ಷಣೆಯ ಕೆಲಸವೂ ಗಾದೆಗಳ ಮೂಲಕ ನಡೆದು ಬಿಡುತ್ತದೆ. ಈ ಅರ್ಥದಲ್ಲಿ ಗಾದೆಗಳು ಸಾಂಸ್ಕೃತಿಕ ಮುಂದುವರಿಕೆಯ ಸಾಧನಗಳು ಹೌದು.

ಗಾದೆ ಎನ್ನುವುದು ನಾಕು ಜನ ಕೂಡಿದಾಗ ಸರಿಯಾದ ಸಂದರ್ಭದಲ್ಲಿ ಅದು ಹುಟ್ಟುತ್ತದೆ. ಹಬ್ಬುತ್ತದೆ, ನಾಡನುಡಿಯಾಗುತ್ತದೆ. ಒಂದು ಗಾದೆ ಚಲಾವಣೆಗೆ ಬರುವ ಮುನ್ನ ಅನೇಕ ಸಲ ಪರೀಕ್ಷೆಗೊಳಪಟ್ಟು, 'ಇದು ನಿಜವಾದ ಮಾತು' ಎಂದು ಎಲ್ಲರಿಗೂ ಅನುಭವದಿಂದ ಖಾತ್ರಿಯಾಗಿರುತ್ತದೆ.

೧. **ಸಂಪೋಕ್ಲಿಸ್** ಹೇಳಿದ ಪ್ರಕಾರ, "ಹೆಚ್ಚು ಜ್ಞಾನವನ್ನು ಒಳಗೊಂಡ ಸಂಕ್ಷಿಪ್ತ ಹೇಳಿಕೆಯೇ" ಗಾದೆ.

೨. **ಸರ್ವಾಂಟಿಸ**ನ ಪ್ರಕಾರ ಗಾದೆ ಎಂದರೆ, "ದೀರ್ಘ ಅನುಭವದಲ್ಲಿ ಕಟ್ಟಿದ ಸಂಕ್ಷಿಪ್ತ ವಾಕ್ಯ" ಎಂದು ಗಾದೆಯನ್ನು ವಿವರಿಸಿದ್ದಾರೆ.

೩. **ಥಾಮಸ್ ಮುಲ್ಲರ್** ೩. ಪ್ರಕಾರ, "ಕೆಲವೇ ಶಬ್ದಗಳಲ್ಲಿ ಹೆಚ್ಚು ವಿಚಾರವನ್ನು ಒಳಗೊಂಡಿರುವುದೇ" ಗಾದೆ.

೪. **ಯೋಬರ್ಟ್**ರ ಪ್ರಕಾರ, "ಮುಖ್ಯವಾದ ಮತ್ತು ಪ್ರಶ್ನಾತೀತವಾದ ಒಂದು ಸತ್ಯದ ನಿರ್ದಿಷ್ಟ ಹಾಗೂ ಪ್ರಮಾಣಿತ ಅಭಿವ್ಯಕ್ತಿಯೇ ಗಾದೆಯಾಗಿದೆ."

೫. **ಲಾರೆಂಜ**ನ ಪ್ರಕಾರ "ಶಬ್ದಗಳಲ್ಲಿ ಸಂಕ್ಷಿಪ್ತವಾಗಿದ್ದು, ಜ್ಞಾನದಲ್ಲಿ ಅಗಾಧವಾಗಿರುತ್ತದೆ."

ಗಾದೆಗಳಲ್ಲಿ ಉಪಮೆ, ವಿರೋಧಾಭಾಸ, ಅತ್ಯುಕ್ತಿ ಮೊದಲಾದ ಅಲಂಕಾರಗಳು, ಪ್ರಾಸ, ಅನುಪ್ರಾಸ, ಪುನರಾವರ್ತನೆ, ಸಮತೂಕ ಮುಂತಾದ ವಿಶಿಷ್ಟ ಗುಣಗಳು ಅಡಕವಾಗಿರುತ್ತವೆ. ಇಂಥ ಗುಣಗಳೇ ಗಾದೆಯ ಲಕ್ಷಣಗಳಾಗಿವೆ.

ನಡುಗಡ್ಡೆಗಳಲ್ಲಿರುವ ಜನಪದರಲ್ಲಿ ಇರುವಂತಹ ಕೆಲವು ಗಾದೆಗಳನ್ನು ಇಲ್ಲಿ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಉದಾ:

**ಬೇಸಾಯದ ಅನುಭವದ ಬಗ್ಗೆ**

೧. ಬಾಳೆ ಬಗದು ಹಾಕು, ತೆಂಗು ತೇಲಿ ಹಾಕು, ಅಡಕೆ ಆಳಕ್ಕೆ ಹಾಕು.

೨. ಕುಂಟೆಯಾಡಿದ ಹೊಲ ಚೆಂದ, ದಂಟಾಡಿದ ಹೆಣ್ಣು ಚೆಂದ.

**ಕಸುಬುದಾರರ ಬಗ್ಗೆ**

೧. ಬ್ರಾಹ್ಮಣ ಗಳಿಸಿದ್ದು ಪಿಂಡಕ್ಕೆ, ಒಕ್ಕಲಿಗ ಗಳಿಸಿದ್ದು ದಂಡಕ್ಕೆ, ಹೊಲೆಯ ಗಳಿಸಿದ್ದು ಹೆಂಡಕ್ಕೆ.

೨. ಕರಿಯ ಹಾರುವನನ್ನು, ಬಿಳಿಯ ಹೊಲೆಯನನ್ನು ನಂಬಬೇಡ.

**ಸಮಾಜ ದೋಷಗಳ ಬಗ್ಗೆ**

ಆಡುವ ಮಗುವಿಗೊಂದು ಕಾಡುವ ಕೂಸು.

ಮಗಳಿಗೆ ಧಾರೆ, ಅಪ್ಪನಿಗೆ ಶೋಭಾನ.

**ಕೌಟುಂಬಿಕ ಜೀವನದ ಬಗ್ಗೆ**

ಅವ್ವ ಸತ್ತು ಮೇಲೆ ಅಪ್ಪ ಚಿಕ್ಕಪ್ಪ.

ಗಂಡ ಹೆಂಡರ ಜಗಳ ಉಂಡು ಮಲಗೋತನಕ.

**ಹಾಸ್ಯಕ್ಕೆ**

ಅಜ್ಜಾ ಮದುವೆ ಅಂದರೆ ಯಾರಿಗೆ ನಂಗಾ? ಎಂದನಂತೆ?

ಅಶ್ವತ್ಥ ಪ್ರದಕ್ಷಿಣೆ ಮಾಡಿದರೆ ಮಕ್ಕಳಾಗುತ್ತವಂದ್ರೆ, ಒಂದು ಸುತ್ತು ಸುತ್ತಿ ಹೊಟ್ಟೆ ಮುಟ್ಟಿ ನೋಡಿಕೊಂಡಳಂತೆ.

ತೀಟೆಗೆ ಮಕ್ಕಳ ಹೆತ್ತು ತಿರುಮಲದೇವರ ಹೆಸರಿಟ್ಟ.

ಕೂಸು ಹುಟ್ಟುವ ಮುನ್ನ ಕುಲಾವಿ ಹೊಲಿಸಿದರಂತೆ.

ಹೀಗೆ ಬೇಕಾದಷ್ಟು ಉದಾಹರಣೆ ಕೊಡಬಹುದು. ಗಾದೆಗಳ ರಾಶಿಯು ದಿನ ದಿನಕ್ಕೆ ಬೆಳೆಯುವಂಥದ್ದು. ಹಳೆಯದು ಅಳಿದಂತೆಲ್ಲ, ಹೊಸ ಹೊಸದು ಹುಟ್ಟಿ ಬಂದು ತುಂಬುತ್ತಲಿದೆ ಹಾಡು, ಕಥೆಗಳಂತೆ.

### ೬.೨.೩. ಒಡಪುಗಳು

ಒಡುಪು ಇದೊಂದು ಸಾಹಿತ್ಯ ಪ್ರಕಾರವಾಗಿದೆ. ಒಡಪುಗಳನ್ನು ಮದುವೆ ಸಂದರ್ಭದಲ್ಲಿ ಮತ್ತು ಮನೆಯಲ್ಲಿ ಏನಾದರೂ ಕಾರ್ಯಕ್ರಮ ಜರುಗಿದಾಗ ಆರತಿ ಮಾಡಿ ಹೆಣ್ಣು ಮಕ್ಕಳು ಇದ್ದರೆ ಗಂಡನ ಹೆಸರನ್ನು, ಗಂಡನು ಹೆಂಡತಿಯ ಹೆಸರನ್ನು ಹೇಳುತ್ತಾರೆ. ಆಗ ಪ್ರತಿಯೊಬ್ಬರಲ್ಲಿ ಒಡಪು, ಮನೆ ಮಾಡಿರುತ್ತವೆ. ಅವುಗಳು ಇಂತಹ ಸಂದರ್ಭಗಳಲ್ಲಿ ಹೊರಗೆ ಬರುತ್ತವೆ.

ಈ ನಡುಗಡ್ಡೆಗಳಲ್ಲಿ ನಡೆಯುವ ಕೆಲವು ಆಚರಣೆಗಳಲ್ಲಿ ಒಗಟುಗಳು ಬಳಕೆಯಾಗುತ್ತವೆ. ಮದುವೆ ಸಂದರ್ಭದಲ್ಲಿ, ಅಕ್ಷತೆಯ ಮುನ್ನಾ ದಿನ ವಧುವರರಿಗೆ ಅಭ್ಯಂಜನ ಮಾಡಿಸಿ, ಅರಿಷಿಣ ಹಚ್ಚಿ ಆರತಿ ಮಾಡುವಾಗ ಮದುವೆಗಾಗಿ ಕುಂಬಾರ ಮನೆಯಿಂದ ಐರಾಣಿ ತರುವಾಗ ನಾಮಕರಣ ಶಾಸ್ತ್ರ ನಡೆಯುವಾಗ, ಹುಡುಗಿ ಮೈನೆರೆದಾಗ, ಆರತಿ ಕಾರ್ಯಕ್ರಮ ಮಾಡುವಾಗ, ಹೊಸದಾಗಿ ಮದುವೆಯಾಗಿ ಒಂದು ತಿಂಗಳ ತನಕ ಊರಿನ ಹೆಣ್ಣು ಮಕ್ಕಳು, ಮದು ಮಕ್ಕಳಿಗೆ, ಗಂಡನ ಹೆಂಡತಿಯ ಹೆಸರು ಕೇಳುತ್ತಲೇ ಇರುತ್ತಾರೆ. ಗಂಡ–ಹೆಂಡತಿಯ ಹೆಸರನ್ನು ಸಾರ್ವಜನಿಕವಾಗಿ ಹೇಳುವುದರಿಂದ ದಂಪತಿಗಳ ನಡುವಣ, ಸಂತೋಷ ಸ್ವಭಾವ ಕಡಿಮೆಯಾಗುತ್ತದೆಂದೂ ಜನಪದರ ನಂಬಿಕೆಯಾಗಿದೆ. ಉದಾ: ಈ ರೀತಿಯಾಗಿದೆ.

೧. ಕಟ ಕಟ ರೊಟ್ಟಿ ಕಾರಪುಡಿ ಕಟಿಗೊಂಡು ಹೋಗಂದರೆ, ಸೆಟಗೊಂಡ ಹೋಗುತ್ತಾನಾ...

೨. ಸುರಪುರ ಸಂತಿಮಾಡ ಅಂದ್ರ ಚಿಂತಿ ಮಾಡತಾರ....

ಒಟ್ಟಿನಲ್ಲಿ ಒಡಪುಗಳನ್ನು ನಡುಗಡ್ಡೆಗಳ ಪರಿಸರದ ವಿವಿಧ ಅನುಭವಗಳ ಸುಂದರವಾದ ಮತ್ತು ಪ್ರಮಾಣಿಕವಾದ ಅಭಿವ್ಯಕ್ತಿ ಎಂದು ಹೇಳಬಹುದು. ಕೆಲವೊಂದು ಒಡಪುಗಳಲ್ಲಿ ಹಾಸ್ಯವೂ ಇರುತ್ತದೆ. ಗಾಂಭೀರ್ಯವೂ ಇರುತ್ತದೆ ಎಂದು ಹೇಳಬಹುದು.

**೬.೨.೪. ಒಗಟುಗಳು**

ಒಗಟುಗಳು ಜನಪದರ ಬದುಕಿನ ನೋವು–ನಲಿವು, ಆಸರೆ–ಬೇಸರಗಳಲ್ಲಿ ಅಷ್ಟೇ ಅಲ್ಲದೆ, ಜೀವನದ ತಾತ್ವಿಕ ಜಿಜ್ಞಾಸೆಯ ಓರೆಗಲ್ಲಿಗೆ ಪರಮ ಸಾಧನಗಳಾಗಿಯೂ ಇವೆ. ಒಗಟುಗಳೆಂದರೆ, ಸಾಮಾನ್ಯವಾಗಿ ಮನರಂಜನೆಗಾಗಿ ಪದಗಳ ಮೇಲೆ ನಿರ್ಮಿತವಾದ ಸಮಸ್ಯೆ ಎಂಬ ಅಭಿಪ್ರಾಯವಿದೆ. ಆದರೆ ಇದು ಪ್ರಾಚೀನವಾದ ಸುವ್ಯವಸ್ಥಿತಗೊಂಡ ಆಲೋಚನೆಯ ಫಲವಾಗಿದೆ.

ಇವು ಬುದ್ಧಿ ಶಕ್ತಿಗೆ ಬಿಡಿಸಲಾಗದ ಒಗಟುಗಳಾಗಿವೆ. ಗೂಢಾರ್ಥವನ್ನೊಳಗೊಂಡಿರುವುದೇ ಒಗಟಿನ ವಿಶಿಷ್ಟ ಲಕ್ಷಣ. ಒಗಟು ಕೂಡ ಇತರ ಪ್ರಕಾರಗಳಂತೆ ವ್ಯಷ್ಟಿಯಿಂದ ಸಮಷ್ಟಿಗೇರಿ, ಮೌಖಿಕ ಪರಂಪರೆಯಲ್ಲಿ ಪ್ರಕಾರವಾಗಿ ಬೆಳೆದು ಅಳಿದುಳಿದು ಬಂದಿವೆ ದೃಷ್ಟಿರೂಪದ ಶಿಷ್ಟ ಸಾಹಿತ್ಯ ಸೃಷ್ಟಿಗೆ ಪ್ರೇರಣೆಯಾಗಿದೆ. ಗೂಢವಾದ ಬದುಕಿನ ಅರ್ಥವನ್ನು ನಿಗೂಢವಾಗಿಟ್ಟುಕೊಂಡು ಇದು ಮನರಂಜನೆ, ವಿನೋದ, ಹಾಸ್ಯ, ವಿಡಂಬನೆಗಳ ಸಾಧನಗಳೂ ಹೌದು.

ಸಾಮಾನ್ಯವಾಗಿ ಒಗಟುಗಳನ್ನು ಹೇಳಲು ಕಾಲದ ನಿರ್ಬಂಧವಿಲ್ಲ. ಅವನ್ನು ಜನರು ಎಲ್ಲ ಕಾಲದಲ್ಲಿಯೂ ಹೇಳಬಹುದು. ಇಷ್ಟಾದರೂ ಜನಪದರ ಕೆಲಸ ಕಾರ್ಯಗಳಲ್ಲಿ ಒಗಟು ಹಾಕುವ ಇನ್ನೊಬ್ಬರು ಉತ್ತರ ಕೊಡುವ ರೂಢಿ ಇದೆ. ಜನರು ಹೆಚ್ಚಾಗಿ ಒಗಟುಗಳನ್ನು ಅದರಲ್ಲೂ ಸಂಜೆ ಅಥವಾ ರಾತ್ರಿ ವೇಳೆಯಲ್ಲಿ ನಿದ್ದೆ ಬರದಿದ್ದಾಗ ಹೇಳುತ್ತಾರೆ. ಮನೆಯಲ್ಲಿ ಮಕ್ಕಳು ಎರಡು ಗುಂಪಾಗಿ ಕುಳಿತು ಒಗಟು ಹೇಳುತ್ತಾರೆ. "ಒಗಟು ಬೌದ್ಧಿಕ ಕುಶಲತೆಯನ್ನು ಹೆಚ್ಚಿಸುತ್ತದೆ. ಜಾಣತನವನ್ನು ಹೆಚ್ಚು ಮಾಡುತ್ತದೆ. ಸ್ಮರಣ ಶಕ್ತಿಯನ್ನು ಜಾಗೃತಗೊಳಿಸುತ್ತದೆ. ಒಗಟುಗಳ ಪ್ರಧಾನ ಗುರಿ ಬುದ್ಧಿಯ ಕಸರತ್ತು, ಬೋಧನೆಯಾಗಿದೆ"(ಡಾ.ಹಾ.ಮಾ.ನಾಯಕ, ೧೯೭೧, ಪು.೪೩).

ಜನಪದ ಸಾಹಿತ್ಯದ ನಾಲ್ಕು ಪ್ರಮುಖ ಪ್ರವಾಹಗಳಲ್ಲಿ ಒಗಟಗಳದ್ದೂ ಒಂದು ಚಿಂತನೆ, ಚಾತುರ್ಯ, ಪ್ರಧಾನವಾಗಿದೆ. ಈ ಪ್ರವಾಹ ಮೂರ್ತ ಅಮೂರ್ತ ಬದುಕಿನ ಅದ್ಭುತ ರಮ್ಯ ಸೀಮೆಗಳಲ್ಲಿ ಲೀಲಾಜಾಲವಾಗಿ ಹರಿಯಬಲ್ಲದು.

ಪ್ರಪಂಚದ ಎಲ್ಲಾ ದೇಶದ ಎಲ್ಲಾ ಸಮುದಾಯಗಳಲ್ಲೂ ಪರಂಪರಾಗತವಾಗಿ ಎಲ್ಲರನ್ನು ಮನರಂಜಿಸುತ್ತಾ ಬಂದ ಒಗಟುಗಳು, ಆಧುನಿಕತೆ ಮತ್ತು ನವ ನಾಗರೀಕತೆಯ ವಾತಾವರಣದಲ್ಲಿ ತಮ್ಮ ಜನಪ್ರಿಯತೆಯನ್ನು ಬಹುಮಟ್ಟಿಗೆ ಕಳೆದುಕೊಂಡಿವೆ. ಇದಕ್ಕೆ ಕಾರಣ ಮನರಂಜನೆಯನ್ನು ಅತಿ ಸುಲಭವಾಗಿ ಕೊಡಬಲ್ಲ ಆಧುನಿಕ ಉಪಕರಣ, ವಸ್ತು, ವಿಶೇಷ ಪ್ರದರ್ಶನಗಳು ಎಂದೇ ಹೇಳಬಹುದು.

ನಡುಗಡ್ಡೆಗಳ ಪರಿಸರದಲ್ಲಿ ಒಗಟು ತನ್ನ ಜನಪ್ರಿಯತೆಯನ್ನು ಉಳಿಸಿಕೊಂಡಿದೆ. ಏಕೆಂದರೆ ನಡುಗಡ್ಡೆಗಳ ಜನಸಮುದಾಯಗಳು ಆಧುನಿಕ ಉಪಕರಣ ವಸ್ತುಗಳಿಂದ ದೂರ ಉಳಿದ ಕಾರಣ ಮತ್ತು ಸಿನಿಮಾ ಪ್ರದರ್ಶನಗಳ ಬಿಸಿ ಹೆಚ್ಚು. ಅವರಿಗೆ ಇನ್ನು ಸರಳವಾಗಿ ನೋಡುವ ಅವಕಾಶಗಳಿಂದ. ನಡುಗಡ್ಡೆ ಪ್ರದೇಶಗಳಲ್ಲಿ ಜನಪದ ಸಾಹಿತ್ಯ ಸಂಪತ್ತು ಇನ್ನು ಹಾಗೆ ಉಳಿದಿದೆ ಎಂದು ತಿಳಿಯಬಹುದು. ಅಂತಹ ಕೆಲವು ಒಗಟುಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ.

ಈ ಒಗಟುಗಳಲ್ಲಿ ಪ್ರತಿಷ್ಠೆಯ ಕಾರಣವಾಗಿ ಒಡ್ಡಿದಂತಹ ಒಗಟುಗಳು ಕಂಡುಬರುತ್ತವೆ. ಈ ನಡುಗಡ್ಡೆಗಳಲ್ಲಿ ಕೆಲವೊಂದು ಒಗಟುಗಳ ಉತ್ತರನೇ ಗೊತ್ತಿಲ್ಲದೇ ನಿಗೂಢವಾಗಿ ಬಿಡಿಸಲಾಗದೆ, ಕೆಲವು ಇಂದಿಗೂ ನಿಗೂಢವಾಗಿ ಇವೆ. ಉದಾ:

ನಿಂತ ಗಿಡ ಕಡಿಲಿಲ್ಲ
ಬಿದ್ದ ಕಟ್ಟಿಗೆ ಮುಟ್ಟಲಿಲ್ಲ
ಉಳಿ ಮುಟ್ಟದೇ
ಕೆತ್ತಿ ಬಣ್ಣದ ತೊಟ್ಟಲ ಮಾಡಿದ ಬಡಿಗ(ಗಿರಿಜನ ಗೂಡು ಅಥವಾ ಗುಬ್ಬಿ ಬಚ್ಚು)

ಗಂಡ ಇಲ್ಲದೇ ಗಂಡು ಮಗುವಿನ ತೊಟ್ಟಿಲು
ಪಡೆದುಕೊಂಡ ಬಡಿಗೆ ಮಾಡಿದ
ಹೊತ್ತುಕೊಂಡು ಗಂಡನ ಮನೆಗೆ ಹೋದಳು(ನವಿಲು ಮರಿ)

ಈ ಒಗಟಿಗೆ ಇನ್ನು ಉತ್ತರ ಗೊತ್ತಿಲ್ಲ ಎಂದು ಗದ್ದೆಮ್ಮ ಅನ್ನುವರು ಹೇಳುತ್ತಾರೆ. ಇದು ನಮ್ಮಮ್ಮ ನಮಗೆ ಹೇಳಿಕೊಟ್ಟಿದ್ರು. ಅವುರ್ಗು ಉತ್ತರ ಗೊತ್ತಿರ್ಲಿಲ್ಲ. ನನಗೂ ಗೊತ್ತಿಲ್ಲ, ಅನ್ನುತ್ತಾರೆ.

ಹೀಗೆ ಮಾನವನ ವಿವಿಧ ಭಾವನೆಗಳು, ಅಭಿರುಚಿಗಳು ವಿವಿಧ ಆಲೋಚನೆಗಳು ಕಲ್ಪನಾ ವೈಖರಿಯ ವೈಭವಗಳು ಇಲ್ಲಿ ಒಗಟುಗಳಲ್ಲಿ ಕಂಡುಬರುತ್ತವೆ.

ಒಗಟು, ನಡುಗಡ್ಡೆಗಳ ಪರಿಸರದಲ್ಲಿ ಕೆಲವೊಂದು ಸಲ ಜೂಜಾಟವಾಗಿ ಕಾಣುತ್ತದೆ. ನೀನು ಈ ಒಗಟು ಬಿಡಿಸಿದರೆ ನಿನಗೆ ಇಷ್ಟು ಹಣ, ಬಂಗಾರ, ಧವಸ ಧಾನ್ಯಗಳು ಎಂದು. ಒಗಟು ಸ್ಪರ್ಧೆ ಕೂಡ ನಡುಗದ್ದೆಗಳಲ್ಲಿ ನಡೆಯುತ್ತದೆ. ಮತ್ತೆ ಆ ಕ್ಷಣ ಹೇಳದೇ ಹೋದರೆ ಅವರಿಗೆ ೨-೩ ದಿನಗಳ ಅವಕಾಶವನ್ನು ನೀಡುತ್ತಾರೆ. ಉತ್ತರ ಸಿಕ್ಕಿಲ್ಲೆಂದರೆ ಆ ವ್ಯಕ್ತಿ ಸೋತಂತೆ.

ಹೀಗೆ ನಡುಗಡ್ಡೆಗಳ ಪರಿಸರದಲ್ಲಿ ಇಂತಹ ಸಾವಿರಾರು ಒಗಟುಗಳು, ಇಲ್ಲಿನ ಜನರ ನಾಲಿಗೆಯ ಮೇಲೆ ನಲಿದಾಡುವುದನ್ನು ಕಾಣಬಹುದಾಗಿದೆ. ವಿಶ್ರಾಂತ ಸಮುದಾಯದಲ್ಲಿ ಅಥವಾ ಕಾಲ ಕಳೆಯಲೆಂದು ಇಂತಹ ಒಗಟುಗಳನ್ನು ಹೇಳುವುದನ್ನು ಸಹಜವಾಗಿ ಕಾಣುತ್ತೇವೆ. ಹೇಗೋ

ಗಡ್ಡೆ ಪರಿಸರದಲ್ಲಿ ಜನಪದ ಸಾಹಿತ್ಯ ತುಂಬ ಹುಲುಸಾಗಿದೆ. ಅದು ಆ ಪ್ರದೇಶದ ಆಡು ಭಾಷೆಯಲ್ಲಿ ಅರ್ಥಪೂರ್ಣವಾಗಿ ಅಭಿವ್ಯಕ್ತವಾಗಿದೆ.

**ಕೆಲವು ಒಗಟುಗಳು**

೧. ತಗ್ಗಿನಲ್ಲಿ ಬಸುರಾಗಿ, ತೆವರಲ್ಲಿ ಹಡೆಯುತ್ತದೆ. (ಮೂಟೆ)

೨. ಬಾಯಲ್ಲಿ ತಿಂದು ಬಗಲಲ್ಲಿ ಕಾರುತ್ತದೆ. (ಬೀಸುವ ಕಲ್ಲು)

೩. ಸಾಲು ಗಿಡಗಳು ಸಪ್ಪಳಿಲ್ಲದೆ ಬಡಿಯುತ್ತವೆ. (ಕಣ್ಣು ರೆಪ್ಪೆ)

೪. ಅವ್ವ ಎಂದರೆ ಕೂಡುವುದಿಲ್ಲ ಅಪ್ಪನೆಂದರೆ ಕೂಡುತ್ತವೆ. (ತುಟಿ)

೫. ಗುಡ್ಡದ ಹಿಂದೆ ಗುಂಡುಕಲ್ಲು ಬಿದ್ದಿದೆ. (ತುರುಬು)

೬. ಹಗ್ಗ ಹಾಸಿದೆ ಗೂಳಿ ಮಲಗಿದೆ. (ಕುಂಬಳಕಾಯಿ)

೭. ಅಡ್ಡಗೋಡೆಯ ಮೇಲೆ ಗಿಡ್ಡಪ್ಪ ಕುಳಿತನ ಹೋಗಿ, ಬರುವವರಿಗೆ ಪ್ರಸಾದ ಕೊಡುತ್ತಾನೆ. (ಚೇಳು)

೮. ಗಿಡ್ಡನ ಗಿಡಕ್ಕೆ ಗಿಣಿ ಮುಕುರಿವೆ. (ಮೆಣಸಿನಕಾಯಿ)

೯. ಕರಿಸೀರೆ ಉಟ್ಟಾಳ, ಕಾಲುಂಗರ ತೊಟ್ಟಾಳ, ಮೇಲೆ ಹೋಗ್ತಾಳ, ಕೆಳಗೆ ಬರತಾಳ. (ಒನಕೆ)

೧೦. ಕಬ್ಬಿಣ ಚಡಿ, ನೆಲಕ್ಕೆ ಬಡಿ. (ಸಿಂಬಳ)

೧೧. ಅಪ್ಪನ ರೊಕ್ಕ ಎಣಿಸಲಾರೆ, ಅಮ್ಮನ ಸೀರೆ ಮಡಚಲಾರೆ. (ನಕ್ಷತ್ರ, ಆಕಾಶ)

೧೨. ಅಂಕು ಡೊಂಕದ ಶಂಖ, ಚಕ್ರದ ಬಾವಿ ಹಣಿಕಿ ನೋಡಿದರೆ ಹನಿ ನೀರಿಲ್ಲ. (ಕಿವಿ)

೧೩. ರೊಕ್ಕ ಕೊಟ್ಟು ತರಬೇಕು, ಮುಂದು ಕೂತುಕೊಂಡು ಅಳಬೇಕು. (ಉಳ್ಳಾಗಡ್ಡೆ)

೧೪. ಅಲ್ಲಿ ಕಾಂಚಣ, ಇಲ್ಲಿ ಕಾಂಚಣ, ಕಲ್ಯಾಣದಲ್ಲಿ ಕಾಂಚಣ. (ಆಡಿನ ಹಿಕ್ಕಿ)

೧೫. ಅಕ್ಕಕ್ಕ ಗಿಡ ನೋಡ, ಗಿಡ ತುಂಬ ಕಾಯಿ ನೋಡ, ತಿಂದರೆ ಬಾಯಿ ನೋಡು. (ಯಾಲಕ್ಕಿ)

೧೬. ಅಂತಪ್ಪನ ತೋಟದಾಗ ಇಂತಹ ಬದನೆಯಕಾಯಿ. ತುಂಬು ಇಲ್ಲ, ತೊಗಟಿ ಇಲ್ಲ. (ಬೆಣ್ಣೆಮುದ್ದೆ)

೧೭. ಹಸಿರು ದವಾಖಾನೆ, ಕರಿ ಗುಳಿಗಿ, ಕೆಂಪು ಎಣ್ಣೆ. (ಕಲ್ಲಂಗಡಿ)

೧೮. ಹೊಳಿ, ಹೊಳಿ ಮ್ಯಾಲ ಪಳಿ, ಪಳಿ ಮ್ಯಾಲ ಗಿಳಿ, ಗಿಳಿ ಮ್ಯಾಲ ಅಡ್ಡ ರಸ್ತೆ, ಅಡ್ಡ ರಸ್ತೆದ ಮ್ಯಾಲ ದೊಡ್ಡ ಹೊಲ, ದೊಡ್ಡ ಹೊಲದಲ್ಲಿ ದನಗಳು ಮೇಯಿತಾವ. (ಬಾಯಿ, ತುಟಿ, ಮೂಗು, ಹಣೆ, ತಲೆ, ಹೇನು)

೧೯. ಕಲ್ಲರಳಿ ಹೂವಾಗಿ ಎಲ್ಲರಿಗೂ ಬೇಕಾಗಿ, ಸಂಗಮನಾಥ ಶಿಖರಕ್ಕೆ ಬೆಳಕಾಗಿ. (ಸುಣ್ಣಾ)

೨೦. ಅಟ್ಟಂಬರಣ್ಯದಾಗ ಚಿಟಗುಬ್ಬಿತಲಿ ಒಡೆದೈತಿ, ಹಸರ ಗಿಡದಾಗ ಮೊಸೂರು ಚೆಲ್ಲಿದೆ. (ಹತ್ತಿ)

೨೧. ಅಕ್ಕಕ್ಕ ತೇರು ನೋಡು, ತೇರು ಮೇಲಿನ ಗೊಂಬಿ ನೋಡು, ಗೊಂಬಿನಾಗೆ ಮುಗಿನ ಸಿಂಬಳ ನೋಡು. (ಹತ್ತಿ ಗಿಡ)

೨೧. ಗುಡ್ಡದ ಮೇಲೆ ಗುಡಾರ ಹಾಸಿದ್ದೇನೆ, ಒಣಗ ಒಲ್ಲದು. (ನಾಲಗೆ)

೨೨. ಅಂಗಡ್ಯಾಗ ಇಟ್ಟು ಮಾರುವುದಿಲ್ಲ, ತಕ್ಕಡಿಯಾಗ ಹಾಕಿ ತೂಗುವುದಿಲ್ಲ. (ಸಗಣಿ)

೨೩. ಅಂತರದಲ್ಲಿ ಹಾರುವುದು ಪಕ್ಷಿ ಅಲ್ಲ, ಕೊಂಬುಂಟು ಹಸುವಲ್ಲ, ಬಾಲವುಂಟು ಕೋತಿ ಅಲ್ಲ. (ಗಾಳಿಪಟ)

೨೪. ಮುಂಜಾನೆ ನಾಲ್ಕು ಕಾಲು, ಮಧ್ಯಾಹ್ನ ಎರಡು ಕಾಲು, ಸಂಜೆಗೆ ಮೂರು ಕಾಲು ಆ ಪ್ರಾಣಿ ಯಾರು? (ಬಾಲ್ಯ, ಯೌವನ, ಮುಪ್ಪು)

೨೫. ಅಕ್ಕಕ್ಕ ಬಾವಿ ನೋಡು, ಬಾವಿಯಾಗ ನೀರ ನೋಡು, ನೀರಾಗ ಬೇರ ನೋಡಾ, ಬೇರಿಗೆ ಹೂ ನೋಡ. (ದೀಪ)

೨೬. ಒಂದು ಕಾಲಿನ ಹಕ್ಕಿ, ಒಂಬತ್ತ ರೆಕ್ಕಿ, ಲೆಕ್ಕ ಇಲ್ಲದ ತತ್ತಿ ಹಾಕುತ್ತೆ. (ಜೋಳದ ದಂಟು)

೨೭. ಕೆಂದೆ ಎತ್ತ ಕೆರ್‍ಯಾಗ ಈಸಾಡುತ. (ಕರ್ಚಿಕಾಯಿ)

೨೮. ಗಿಡ ಗಿಡಕ ಕುಡಗೋಲ ಕಟ್ತೇನಿ. (ಹುಣಸೆ ಕಾಯಿ)

೨೯. ಗಿಡ ಗಿಡಕ ಕಲ್ಲ ಕಟ್ಟೇನಿ. (ಮಾವಿನ ಕಾಯಿ)

೩೦. ಗಿಡ ಗಿಡಕ ಮಸಿ ಕಟ್ಟನಿ. (ನೀರಲಕಾಯಿ)

೩೧. ಆಚೆ ದಡದಿಂದ ಈಚೆ ದಡಕ್ಕೆ ಎರಡು ಹೋರಿ ತಂದಿನಿ, ಆಚ್ಚೆಕ್ಕಿಂದ ಇಚ್ಚೇಕ ಬರಾಂಗಿಲ್ಲ, ಈಚ್ಚೇಕ್ಕಿಂದ ಆಚ್ಚೇಕ ಬರಾಂಗಿಲ್ಲ. (ಚಪ್ಪಲಿ)

೩೨. ಗಿಡ್ಡ ಹುಡುಗನ ಅಡ್ಡಹಾಕಿ ಬಡಿದಾರ. (ಡೊಳ್ಳು)

೩೩. ದುಪ್ಪನೆ ಬಿದ್ದಿಲೇ ಡೋಗಾ, ಅಂಗಿ ಹರಿತಲೆ ಮಂಗಾ. (ಹುಣಿಸೆ ಹಣ್ಣು)

೩೪. ಡಬ್ಬಲಕ್ಕ ಡುಬ್ಬಲಕ್ಕ ಅವ್ರ ಇಬ್ರು, ತಾತಕ್ಕ ತೂತಕ್ಕ ಅವ್ರು ಇಬ್ರು. (ಹೋಳಿಗೆ ಮತ್ತು ದೋಸೆ)

೩೫. ತಾಯಿ ಡಂಡುರಿತ ಮಗಳು ಗುಮ್ಮರಿಕಿ. (ಬಾರಿಗಿಡ, ಬಾರಿಹಣ್ಣು)

೩೬. ತೆಗ್ಗಿನ್ಯಾಗ ಬಸವಣ್ಣ ಬಗ್ಗಿ ಬಗ್ಗಿ ನೋಡತಾನ. (ಮಟ್ಟಿ)

೩೭. ನಮ್ಮ ಮನಿಯಾಗ ಒಂದೆ ಹುಡುಗ ಐತಿ, ಅದಕ್ಕ ಮೈತುಂಬ ಕಣ್ಣ ಅದಾವು.

೩೮. ನಮ್ಮ ಮನಿಯಾಗ ಒಂದ ಹುಡುಗ ಐತಿ, ಮ್ಯಾಗ ಮ್ಯಾಗ ಅಂಗಿ ತೊಟ್ಟೈತಿ. (ಉಳ್ಳಾಗಡ್ಡೆ)

೩೯. ನಾ ಮುಂದ ತಾ ಮುಂದ ಅಂತಾರು, ಯಾವನು ಮುಂದ ಆಗುವುದಿಲ್ಲ. (ಚಪ್ಪಲಿ)

೪೦. ನೆಲೆಗುಡ್ಡದ ಮ್ಯಾಲ ಎಂಬತ್ತ ಕುರಿ ಕೊಯ್ತಿನಿ, ಒಂದಹನಿ ರಕತ ಇಲ್ಲ. (ಇರುವೆ)

೪೧. ಬಡ ಬಡ ಬಂತು, ಅಂಗಿ ಬಿಚ್ಚಿತು, ಬಾವಿಗೆ ಹಾರಿತು.(ಬಾಳೆಹಣ್ಣು)

೪೨. ಬಂಗಾರ ಗಿಂಡಿಗಿ ಬಾಯಿ ಇಲ್ಲಾ. (ತತ್ತಿ)

೪೩. ಮನಿಯೆಲ್ಲ ಓಡ್ಯಾಡತೈತಿ, ಮೂಲ್ಯಾಗೆ ಕುಂದರತೈತಿ. (ಕಸಬರಿಗೆ)

೪೪. ಯರಿ ಹೊಲದಾಗೆ, ತಡಚಗಿ ಬಿದ್ದೈತಿ. (ಬೈತಲೆ)

೪೫. ಬಿಳಿ ಕೋಣ್ಯಾಗೆ ಕರಿ ಕಳ್ಳಿನ ಓಡಾಟ, ಹೊರಗೆ ಬರಾಕ ದಾರಿ ಇಲ್ಲ. (ಕಣ್ಣು ಗುಡ್ಡೆ)

೪೬. ಬಾಚಿ ಮುಟ್ಟದ ಮನೆ, ಬಡಿಗಿ ಕಟ್ಟದ ಮನೆ. (ಹುತ್ತ)

(ಕ್ಷೇತ್ರಕಾರ್ಯದಿಂದ ಸಂಗ್ರಹಣೆ)

ಅಧ್ಯಾಯ ಏಳು

# ನಡುಗಡ್ಡೆಗಳ ಸಮಸ್ಯೆಗಳು ಮತ್ತು ಸವಾಲುಗಳು

ಭಾರತ ದೇಶವು ವೈವಿಧ್ಯಮಯವಾದ ರಾಷ್ಟ್ರವಾಗಿದೆ. ಅದರಲ್ಲಿ ಕರ್ನಾಟಕ ರಾಜ್ಯವು ತನ್ನದೇ ಆದ ಪುಟ್ಟ ಪುಟ್ಟ ಗ್ರಾಮಗಳನ್ನು ಹೊಂದಿದ್ದು, ಇಂತಹ ಗ್ರಾಮಗಳ ನಡುವೆ ಕೃಷ್ಣಾ ನದಿಯು ಕರ್ನಾಟಕದ ಗ್ರಾಮಗಳ ಜೀವ ನದಿಯಾಗಿದೆ. ಇದೇ ನದಿಯ ತೀರದ ನಡುಗಡ್ಡೆಗಳು ಇದ್ದು ಈ ಗಡ್ಡೆಗಳು ಯಾವುದೇ ಬದಲಾವಣೆ ಕಾಣದೇ ಇನ್ನು ಹಾಗೇ ಉಳಿದಿವೆ. ಈ ನಡುಗಡ್ಡೆಗಳನ್ನು ಕೃಷ್ಣಾನದಿಯು ಸುತ್ತುವರಿದು ರೈತರ ಪಾಲಿನ ಜೀವ ನದಿಯು ಹೌದು, ನಡುಗಡ್ಡೆಗಳ ಜನರ ಜೀವನ ನಾಶ ಮಾಡುವ ಬೀರುಗಾಳಿಯು ಹೌದು. ನಡುಗಡ್ಡೆಯಲ್ಲಿ ವಾಸವಾಗಿದ್ದು, ಕೆಲವು ಗಡ್ಡೆಗಳಿಗೆ ಯಾವುದೇ ಸಿದ್ಧಗೊಂಡ ಮಾರ್ಗ ಇರುವುದಿಲ್ಲ. ಅಂದರೆ ನೀಲಕಂಠರಾಯಗಡ್ಡೆ. ಇದು ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಕಕ್ಕೆರೆ ಗ್ರಾಮದಿಂದ ೧೫ ಕಿ.ಮೀ ದೂರ ಇರುವ ಕೃಷ್ಣಾನದಿ ತೀರದ ನಡುಗಡ್ಡೆಯಾಗಿದೆ. ಈ ಗಡ್ಡೆಗೆ ಯಾವುದೇ ಸಿದ್ಧಗೊಂಡ ಮಾರ್ಗ ಇರುವುದಿಲ್ಲ. ಸಣ್ಣ ಕಾಲುದಾರಿಯು ಇಲ್ಲ. ಅವರು ಬೇರೆ ಊರಿಗೆ ಹೋಗಲು ಯಾವುದೇ ರೀತಿಯ ವಾಹನಗಳ ಸಂಪರ್ಕ ಇಲ್ಲ. ಹೋಗಬೇಕಾದರೆ ದೋಣಿಯ ಮೂಲಕ ಅಥವಾ ಈಜುಕೊಂಡು ಹೋಗಬೇಕಾಗಿದೆ. ಇಲ್ಲಿ ವಾಸಮಾಡುವ ಜನರು ಬೇಡ ಸಮುದಾಯದವರಾಗಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿ ಸುರಪುರ ಮತ್ತು ಗುಡಗುಂಟಿ ಸಂಸ್ಥಾನಗಳ ಮೂಲನೆಲೆಯಾಗಿದ್ದವು. ಇಲ್ಲಿ ಕುಟುಂಬಗಳು ವಾಸ ಮಾಡುತ್ತಿವೆ. ಇವರಿಗೆ ಜಮೀನು ಇದ್ದು ಕೃಷಿ, ಪಶುಪಾಲನೆಗಳನ್ನು ಮಾಡುತ್ತಾರೆ. ಇದು ಬಿಟ್ಟರೆ ಬೇರೆ ಕೆಲಸನೇ ಇಲ್ಲ. ಯಾವುದೇ ರೀತಿಯ ಪೌರತ್ವವನ್ನು ನಡುಗಡ್ಡೆಯ ಜನರು ಪಡೆದಿಲ್ಲ. ಇವರು ಎಲ್ಲಾ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.

ಆರೋಗ್ಯ, ಶಿಕ್ಷಣ ಇದು ಅವರಿಗೆ ಸಿಗದೇ ಹೋಗದೆ ಮತ್ತು ಮಳೆಯ ಕಾಲದಲ್ಲಿ ತಿಂಗಳ ಎಲ್ಲಾ ನಡುಗಡ್ಡೆಗಳು ಜನಸಂಪರ್ಕವನ್ನು ಕಡಿದುಕೊಳ್ಳುತ್ತಿವೆ. ಅದರಲ್ಲಿ ನೀಲಕಂಠರಾಯನ ಗಡ್ಡೆ ಕೃಷ್ಣಾನದಿ ತುಂಬಿಹರಿಯುತ್ತಿರುವ ಸಂದರ್ಭದಲ್ಲಿ ಯಾವುದೇ ಮಾರ್ಗವಿಲ್ಲದೆ ಹೊರಜಗತ್ತಿನಿಂದ

ದೂರ ಉಳಿದುಬಿಡುತ್ತದೆ. ಆಗ ಆಹಾರಕ್ಕೂ ಪರದಾಟ. ವೈದ್ಯಕೀಯ ಸೌಲಭ್ಯವಿಲ್ಲದೇ ಅನೇಕ ಮಕ್ಕಳು ಮತ್ತು ಗರ್ಭಿಣಿಯರೆಲ್ಲರು ಪರದಾಡುವಂತಹ ಸ್ಥಿತಿ ನಿರ್ಮಾಣವಾಗುತ್ತದೆ. ನಡುಗಡ್ಡೆ ಕೃಷ್ಣಾನದಿಯ ಪ್ರವಾಹದಿಂದ ಬಾರಿ ಸಮಸ್ಯೆಗಳಿಗೆ ಸಿಲುಕುತ್ತದೆ. ಪ್ರತಿ ವರ್ಷ ಸಮಸ್ಯೆ ಅವರಿಗೆ ತಪ್ಪುವುದಿಲ್ಲ. ಗಡ್ಡೆ ಗುಡ್ಡದ ಮೇಲಿದೆ. ಸುತ್ತ ನೀರು ಹರಿದರೂ ಗಡ್ಡೆ ನಿವಾಸಿಗಳಿಗೆ ನೀರಿನಿಂದ ಏನು ತೊಂದರೆ ಇಲ್ಲ. ಆದರೆ ನೀರಿನ ಪ್ರಮಾಣ ಇಳಿಯುವರೆಗೂ ಹೊರ ಜಗತ್ತಿಗೆ ಸಂಪರ್ಕವಿಲ್ಲದೇ ಇಲ್ಲಿಯ ಜನರು ಬದುಕಬೇಕಾಗುತ್ತದೆ.

ಮುನ್ಸೂಚನೆ ಇರುವ ಜನರು ಮೊದಲೇ ಒಂದಿಷ್ಟು ದಿನಕ್ಕಾಗುವಷ್ಟು ಆಹಾರ ಧಾನ್ಯಗಳನ್ನು ಸಂಗ್ರಹಿಸಿ ಇಟ್ಟುಕೊಂಡಿರುತ್ತಾರೆ. ಆದರೆ ಈ ಬಾರಿ ಯಾವುದೇ ಮುನ್ಸೂಚನೆ ಇಲ್ಲದೇ ಜಲಾಶಯದಿಂದ ಭಾರಿ ಪ್ರಮಾಣದಲ್ಲಿ ನೀರು ಬಿಟ್ಟಕಾರಣ ಇಲ್ಲಿಯ ಜನರು ಸಂಪರ್ಕವಿಲ್ಲದೇ ಪರದಾಡುತ್ತಿದ್ದಾರೆ. ನೀಲಕಂಠರಾಯನಗಡ್ಡೆ ಜನರು ಕಕ್ಕೇರಾ ಪಟ್ಟಣದಲ್ಲಿ ಪ್ರತಿ ಬುಧವಾರ ನಡೆಯುವ ಸಂತೆಯಲ್ಲಿ ಆಹಾರ, ಧಾನ್ಯ, ದಿನಬಳಿಕೆ ವಸ್ತುಗಳನ್ನು ಖರೀದಿಸುತ್ತಾರೆ. ಆದರೆ ಈಗ ಅವರಿಗೆ ಸುರಪುರ ತಾಲೂಕು ಜಿಲ್ಲಾಡಳಿತ ಜೀವನಾವಶ್ಯಕ ವಸ್ತುಗಳನ್ನು ಪೂರೈಸಿದೆ. ಹೊರ ಜಗತ್ತಿನ ಸಂಪರ್ಕ ಕಳೆದುಕೊಂಡು ಪರಿತಪಿಸುತ್ತಿದ್ದ ಜನರು ವೈದ್ಯರ ಶುಶ್ರೂಸೆ ಇಲ್ಲದೇ ಐವರು ಗರ್ಭಿಣಿಯರು ನದಿ ದಾಟಿ ಆಸ್ಪತ್ರೆಗೆ ಹೋಗಿ ಚಿಕಿತ್ಸೆ ಪಡೆಯಲಾರದೆ ಪರದಾಡುತ್ತಿದ್ದಾರೆ. ಇನ್ನು ಹೆರಿಗೆ ಸಮಯ ಬಂದರೆ ಹೇಗೆ ಎನ್ನುವುದು ಇವರನ್ನು ಚಿಂತೆಗೆ ನೂಕಿದೆ.

ಕಳೆದ ವರ್ಷ ಯಲ್ಲವ್ವ ಎನ್ನುವ ಮಹಿಳೆ ಹರಿಯುವ ನೀರಿನಲ್ಲಿ ಈಜಿಕೊಂಡು ಬಂದು ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡಿದ್ದರು. ಇಂತಹ ಘಟನೆ ನಡೆದರೂ ಇಲ್ಲೊಂದು ಆಸ್ಪತ್ರೆ ನಿರ್ಮಿಸಿಲ್ಲ ಎಂದು ಗ್ರಾಮಸ್ಥರು ಹೇಳುತ್ತಾರೆ. ಗಡ್ಡಿಗೆ ಶಿಕ್ಷಣ ಕನಸಾಗಿ ಉಳಿದಿದೆ. ಒಂದು ಪ್ರಾಥಮಿಕ ಶಾಲೆ ನಿರ್ಮಿಸಿದ್ದಾರೆ. ಆದರೆ ಅದು ಯಾವಾಗಲೂ ಮುಚ್ಚಿರುತ್ತದೆ. ಮತ್ತೆ ೬ ತಿಂಗಳ ಕಾಲವಂತು ಅದು ತೆರೆಯುವುದಿಲ್ಲ. ಮಳೆಗಾಲ ಪ್ರಾರಂಭದಿಂದ ಹಿಡಿದು ನದಿಯ ನೀರು ಕಡಿಮೆ ಆಗುವವರೆಗೂ ಮಕ್ಕಳಿಗೆ ಶಿಕ್ಷಣ ಸೌಲಭ್ಯ ಸಿಗುವುದಿಲ್ಲ. ಇಲ್ಲೊಂದು ಸೇತುವೆ ನಿರ್ಮಿಸುವ ಮೂಲಕ ಇಲ್ಲಿನ ಜನರ ಸಮಸ್ಯೆಗಳನ್ನು ನೀಗಿಸಬೇಕು ಎಂಬ ಗ್ರಾಮಸ್ಥರ ಬೇಡಿಕೆ ಇದೆ. ಆದರೆ ಈ ಬಗ್ಗೆ ಪ್ರತಿನಿಧಿಗಳು ಭರವಸೆ ನೀಡುತ್ತಾರೆ, ಹೊರತು ಕೆಲಸ ಮಾಡುವುದಿಲ್ಲ. ನದಿನೀರು ಬಂದಾಗ ಜಿಲ್ಲಾಡಳಿತ ದವರು ತಾತ್ಕಾಲಿಕವಾಗಿ ಬೋಟ್ ವ್ಯವಸ್ಥೆ ಮಾಡುತ್ತಾರೆ. ಮತ್ತೆ ಅವರ ದಿನ ನಿತ್ಯದ ಸಮಸ್ಯೆಗಳಿಗೆ ಪರಿಹಾರ ಸಿಗುವುದಿಲ್ಲ.

ವ್ಯಕ್ತಿತ್ವ ವಿಕಾಸಕ್ಕೆ ಮಾನವಹಕ್ಕು ಮತ್ತು ಸ್ವಾತಂತ್ರ್ಯವನ್ನು ಗೌರವಿಸುವುದಕ್ಕೆ ಶಿಕ್ಷಣ ಅಗತ್ಯವಾದದ್ದು. ಶಿಕ್ಷಣ ಎನ್ನುವುದು ನಮ್ಮನ್ನು ನಾವು ಗೌರವಿಸಿಕೊಳ್ಳುವುದಕ್ಕೆ ಮತ್ತು ನಮ್ಮ ಸಮಾಜದ ಏಳ್ಗೆಗೆ

ಇರುವ ಸಾಧನ. ಅದಕ್ಕಾಗಿಯೇ ಶಿಕ್ಷಣ ಎನ್ನುವುದು ಮೂಲಭೂತಹಕ್ಕು. ಇದು ಎಲ್ಲರಿಗೂ ಸಮಾನವಾಗಿ ಸಿಗುವಂತಾಗಬೇಕು. ಆದರೆ ಈ ನಡುಗಡ್ಡೆಗಳ ಮಕ್ಕಳು ಶಿಕ್ಷಣದಿಂದ ವಂಚಿತರಾಗಿ ತಮ್ಮ ಜೀವನ ರೂಪಿಸುವಲ್ಲಿ ಹಿಂದುಳಿದಿದ್ದಾರೆ. ಈ ಗಡ್ಡೆಯಲ್ಲಿ ವಾಸಿಸುವ ಜನರು ಒಂದೇ ಸಮುದಾಯದವರಾಗಿದ್ದು, ಅಂದರೆ ಬೇಡರು. ನಾಗರಿಕತೆಯಿಂದ ದೂರವಾಗಿ ಪ್ರತ್ಯೇಕವಾಗಿ ಬದುಕಿ ತಮ್ಮ ಸಾಂಸ್ಕೃತಿಕ ಅಪೂರ್ವತೆಯನ್ನು ಉಳಿಸಿಕೊಂಡು ಬಂದವರು. ಇಂಥ ಬುಡಕಟ್ಟು ಅಭಿವೃದ್ಧಿಗಾಗಿ ವಿಶೇಷ ವಿವಿದೋದ್ದೇಶ ಬುಡಕಟ್ಟು ಬ್ಲಾಕ್‌ಗಳನ್ನು ೨ನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಸ್ಥಾಪಿಸಲಾಯಿತು. ಈ ಬುಡಕಟ್ಟಿನ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಅಭಿವೃದ್ಧಿ ಈ ಬ್ಲಾಕ್‌ಗಳ ಉದ್ದೇಶವಾಗಿತ್ತು. ತಮ್ಮದೇ ಆದ ಜೀವನ ಮೌಲ್ಯಗಳ ನೆಲೆಯಲ್ಲಿ ಸ್ವಾವಲಂಬಿ ಬದುಕನ್ನು ಕಟ್ಟಿಕೊಂಡು ಬದುಕುವ ನಡುಗಡ್ಡೆಗಳ ಜನರು ಆರ್ಥಿಕತೆಯ  ಬಲಸಂವರ್ಧನೆಗೆ ಪೂರಕವಾದ ಕೃಷಿಯನ್ನು ಅವಲಂಭಿಸಿ ಬದುಕುತ್ತಿದ್ದಾರೆ. ಶಿಕ್ಷಣ, ವಾಣಿಜ್ಯ-ವ್ಯಾಪಾರ, ಉದ್ಯೋಗ, ಆಹಾರ, ವಸತಿ, ಆರೋಗ್ಯ ಮುಂತಾದ ಮೂಲಭೂತ ಸೌಲಭ್ಯಗಳನ್ನು ಹೊಂದಿರದೆ ಕಡುಬಡತನವನ್ನು ಅನುಭವಿಸುತ್ತಿವೆ. ಹಲವಾರು ಸಮಸ್ಯೆಗಳಿಂದ ನಡುಗಡ್ಡೆಯ ರೈತರ ಜೀವನ ಅತ್ಯಂತ ಶೋಚನೀಯವಾಗಿದೆ.

ಅದರಲ್ಲಿ ಕೃಷ್ಣಾನದಿ ಪ್ರವಾಹದಿಂದ ಹೆಚ್ಚಿನ ನೀರು ಬಂದಾಗ ಹಳ್ಳ ಒತ್ತುವರಿಯಾಗಿ ನೀರು ಹೊಲಕ್ಕೆ ನುಗ್ಗಿ ಹೆಸರು, ಭತ್ತ, ತೊಗರಿ, ಹತ್ತಿ ಬೆಳೆ ನೀರಿನಿಂದ ಆವರಿಸಿದ್ದು, ರೈತರ ಬೆಳೆ ಹಾನಿ ಭವಣೆ ಅನುಭವಿಸಬೇಕಾಗಿದೆ. ಈ ಕುರಿತು ಕೃಷಿಯ ಅಧಿಕಾರಿಗಳು ನದಿ ಪ್ರಾಂತದಲ್ಲಿನ ರೈತರು ಬೀಜ ರಸಗೊಬ್ಬರ ಹಾಕಿ ಬೆಳೆದ ಬೆಳೆಗೆ ಸರಕಾರದಿಂದ ಅವರಿಗೆ ಸೂಕ್ತ ಪರಿಹಾರ ನೀಡುವ ಕೆಲಸ ನಡೆಯಬೇಕಾದ ಅವಶ್ಯಕತೆ ಇದೆ. ಕೃಷಿಗೆ ಆಧಾರವಾಗಿರುವ ಮತ್ತು ನದಿ ಮೂಲವಾಗಿಸಿಕೊಂಡು ನೀರಾವರಿ ಮಾಡಿಕೊಂಡಿರುವ ರೈತರ ಪಂಪ್‌ಸೆಟ್‌ಗಳ ಪೈಪ್‌ಲೈನ್ ಪ್ರವಾಹಕ್ಕೆ ತುತ್ತಾಗುವುದರಿಂದ ರೈತರು ಚಿಂತಾಕ್ರಾಂತರಾಗುತ್ತಾರೆ. ಇದರಿಂದಾಗಿ ಪ್ರತಿವರ್ಷ ಅವರು ಮತ್ತಷ್ಟು ಆರ್ಥಿಕ ನಷ್ಟಕ್ಕೆ ಗುರಿಯಾಗುತ್ತಾರೆ.

ನದಿ ತೀರದಲ್ಲಿರುವ ನಡುಗಡ್ಡೆಗಳ ಸದ್ಯದ ಪರಿಸ್ಥಿತಿಯ ಸ್ಪಷ್ಟವಾದ ಮತ್ತು ವಿವರ ಒಂದು ಕಡೆ ದೊರೆಯದಿರುವದೇ ಒಂದು ಸವಾಲು. ಈ ವ್ಯಾಪಕ ಸಾಲಿನಲ್ಲಿ ಉಳಿದೆಲ್ಲ ಉಪಸವಾಲುಗಳು ಅಡಕವಾಗುತ್ತವೆ. ಈ ನಡುಗಡ್ಡೆಗಳ ಚಿತ್ರಣ ಸ್ವರೂಪವನ್ನು ತಿಳಿದುಕೊಳ್ಳುವುದು ಅವಶ್ಯ. ನಡುಗಡ್ಡೆ ಸಮುದಾಯಗಳ ಉತ್ತಮ ಅಂಶಗಳು ಉಪಯುಕ್ತ ಮತ್ತು ಪ್ರೇರಕ ಅಂಶಗಳೊಂದಿಗೆ ಅವರ ಸಮಸ್ಯೆಗಳ ಕುಂದುಕೊರತೆಗಳು ಹಾಗೂ ನಡುಗಡ್ಡೆಗಳ ಸ್ಥಿತಿಗತಿಯ ಅರಿತುಕೊಂಡು ಸರಕಾರ ಮತ್ತು ರಾಜಕೀಯ ವ್ಯಕ್ತಿಗಳು ಉತ್ತಮ ಅಂಶಗಳನ್ನು ಅವರಿಗೆ ನೀಡಿ ಅವರ ಸಮಸ್ಯೆಗಳ ನಿವಾರಣೆಗೆ ಮಾರ್ಗದರ್ಶನ ಮಾಡಬೇಕಾಗಿದೆ. ನಡುಗಡ್ಡೆಗಳ ಜನರ ಸಮಾಜ ತನ್ನ ಜಡತ್ವವನ್ನು ಕಿತ್ತೊಗೆದು ಈ ಯುಗದ ಆಧುನಿಕತೆಯನ್ನು ಮೈಗೂಡಿಸಿಕೊಂಡು ಬೆಳೆಯಬೇಕಾಗಿದೆ.

ಈ ಸಮಾಜದ ಸಮೃದ್ಧಿಗಾಗಿ ಆಗತಕ್ಕ ಕಾರ್ಯಗಳು ಆಗದೇ ಇರುವದೇ ಸವಾಲು. ಈ ಆಗತಕ್ಕ ಕಾರ್ಯಗಳ ಪರಿಚಯ ಹಾಗೂ ಪರಿಹಾರಗಳನ್ನು ಇಲ್ಲಿ ನೋಡಬೇಕಾಗಿದೆ. ಹಿಂದೆ ಬಿದ್ದ ಈ ನಡುಗಡ್ಡೆಗಳ ಸಮುದಾಯದ ಸುಧಾರಣೆಗಾಗಿ ವ್ಯವಹಾರಿಕವಾಗಿ ವಿವೇಚಿಸಬೇಕಾಗಿದೆ. ಇವರ ಆರ್ಥಿಕ ಸ್ಥಿತಿ ಅಲ್ಪ ಇರುವುದರಿಂದ ಇವರಲ್ಲಿ ಉಳಿತಾಯ ಪ್ರವೃತ್ತಿಯು ಬಹಳ ಕಡಿಮೆ. ಸರಕಾರದಿಂದ ದೊರೆಯುವ ಆರ್ಥಿಕ ಸವಲತ್ತು ಇರುವುದಿಲ್ಲ. ಸವಲತ್ತು ಇಲ್ಲದಿದ್ದರು ತಮ್ಮ ನೆಲೆ ಬಿಟ್ಟು ಹೊರ ಜಗತ್ತಿಗೆ ಬರುವುದಕ್ಕೆ ಅವರು ಒಪ್ಪುವುದಿಲ್ಲ. ಇದಕ್ಕೆ ಐತಿಹಾಸಿಕ ಕಾರಣವಿದೆ. ಅಂದರೆ ತಮ್ಮ ಪೂರ್ವಜರು ನೆಲೆಸಿದ ನೆಲೆಯನ್ನು ಬಿಟ್ಟುಬರಲು ಅವರು ಸಿದ್ಧರಿಲ್ಲ. ಈ ಜಡತ್ವವನ್ನು ಕಿತ್ತುಹಾಕುವುದೇ ಒಂದು ದೊಡ್ಡ ಸವಾಲಾಗಿದೆ.

ಸಾಮಾಜಿಕ ಸ್ಥಿತಿಯಲ್ಲಿ ಅವರ ಬಡತನ, ನಿರಕ್ಷತೆಯಿಂದಾಗಿ ಬಹುಪಾಲು ಜನರನ್ನು ಕೀಳರಿಮೆ ಕಾಡುತ್ತಿದೆ. ಮೂಢನಂಬಿಕೆಗಳೂ ಸಾಕಷ್ಟಿವೆ. ವೈಚಾರಿಕ ಜಾಗೃತಿ ಇಲ್ಲ. ಪೂರ್ವಜರು ಬದುಕಿದಂತೆ ನಾವು ಬದುಕುತ್ತೇವೆ ಎನ್ನುವ ಭಾವನೆ ಅವರನ್ನು ಬಲವಾಗಿ ಹಿಡಿದಿಟ್ಟಿದೆ. ರಾಜಕೀಯ ಅಧಿಕಾರವಿಲ್ಲದೆ ಪ್ರಗತಿ ಸಾಧ್ಯವೆಂದು ಹೇಳಲಾಗುತ್ತದೆ. ಪಕ್ಷ ಯಾವುದೇ ಇರಲಿ, ಸಮುದಾಯ ಯಾವುದೇ ಇರಲಿ, ಎಲ್ಲಾ ಹಂತಗಳಲ್ಲಿ ಜನರ ಅಭಿವೃದ್ಧಿಗಾಗಿ ಜನಹಿತಕ್ಕಾಗಿ ಹೋರಾಟ ಗುರಿಯಾಗಿರಬೇಕು. ರಾಜಕಾರಣ, ಸಮಾಜ ಸೇವೆಯ ಒಂದು ಪ್ರಮುಖ ಅಂಗ. ಇದು ಯಾವುದೇ ಸಮುದಾಯಗಳ ಸಮಸ್ಯೆಗಳಿಗೆ ಸ್ಪಂದಿಸಬೇಕು. ಅಂದಾಗ ಮಾತ್ರ ಅವರ ಸಮಸ್ಯೆಗಳಿಗೆ ಪರಿಹಾರ ಸಿಗಬಹುದು. ಆ ಕೆಲಸ ನಡುಗಡ್ಡೆಗಳ ಸಮುದಾಯಗಳಿಗೆ ಇರುವ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ರಾಜಕಾರಣಿಗಳು ಸವಾಲುಗಳನ್ನಾಗಿ ಸ್ವೀಕರಿಸಬೇಕಾಗಿದೆ.

ಪ್ರತಿಯೊಂದು ಕಾರಣ, ಸಮಸ್ಯೆಗಳಿಗೆ ಸಂಘಟನೆ ಹೋರಾಟಗಳು ಅವ್ಯಾಹತವಾಗಿ ನಡೆಯುತ್ತಿವೆ. ಜಾಗೃತಿ ಮೂಡಿಸಿ ಮುನ್ನುಗ್ಗುತ್ತಿವೆ. ಆದರೆ ಅಂತಹ ಜಾಗೃತಿ ಮೂಡಿಸುವಲ್ಲಿ ಸಂಘಟನೆ, ಹೋರಾಟಗಳು ನಡುಗಡ್ಡೆ ಸಮುದಾಯಗಳಿಗೆ ಸಹಾಯ ಮಾಡಬೇಕಾಗಿದೆ. ತಮ್ಮನ್ನು ತಾವು ಇತರ ಜಗತ್ತಿನೊಂದಿಗೆ ಗುರ್ತಿಸಿಕೊಳ್ಳಲು ಜಾಗೃತರಾಗಬೇಕಾಗಿದೆ. ಇದರಿಂದ ಅವರು ತಮ್ಮವರನ್ನು ಗೌರವಿಸುವ, ಪ್ರೀತಿಸುವ, ಎತ್ತಿಹಿಡಿಯುವ ಅವರಿಗೆ ಮಾರ್ಗದರ್ಶಿ ಸಹಾಯ ಮಾಡುವ ಮನೋಭಾವ ಮತ್ತು ಸರಕಾರವನ್ನು ಮಣಿಸಿ ತಮ್ಮ ಕೆಲಸ ಮಾಡಿಸಿಕೊಳ್ಳುವ ಕೆಚ್ಚು–ಇವು ಅವರಲ್ಲಿ ಕೆಲಸ ಮಾಡಬೇಕಾಗಿದೆ. ಕೊರತೆ, ಜಡತೆ ಇವು ಅವರಲ್ಲಿ ಮನೆಮಾಡಿಕೊಂಡಿವೆ. ಹೀಗಾಗಿ ತಮಗಾಗುವ ಅನ್ಯಾಯ, ಅಸಡ್ಡೆಗಳನ್ನು ಪ್ರತಿಭಟಿಸಿ ಸರಕಾರವನ್ನು ಒಗ್ಗಿಸುವ ಸಿದ್ಧತೆ ಅವರಿಗೆ ಸಿಗಬೇಕಾಗಿದೆ. ಈ ಎಲ್ಲಾ ಕಾರಣಗಳಿಂದಾಗಿ ನಡುಗಡ್ಡೆಗಳ ಸಮುದಾಯಗಳ ವ್ಯಕ್ತಿಗಳ ಮನೋಭಾವ ಬದಲಿಸಬೇಕಾಗಿದೆ. ಹೊಸ ವ್ಯಕ್ತಿತ್ವವನ್ನು ನಿರ್ಮಿಸಬೇಕಾಗಿದೆ. ಸ್ಪರ್ಧಾ ಜಗತ್ತನ್ನು ಕಾಣದ ಈ ಸಮುದಾಯಗಳಿಗೆ

ಚೈತನ್ಯ ತುಂಬಿದ ಆಧುನಿಕರನ್ನಾಗಿ ಮಾಡಬೇಕಾಗಿದೆ. ಎಲ್.ಜಿ. ಹಾವನೂರು ಆಯೋಗವು ೧೯೩ ಗ್ರಾಮಗಳಲ್ಲಿ ೧೮೫ ನಗರ ಪ್ರದೇಶಗಳಲ್ಲಿ ಸಮೀಕ್ಷೆಯನ್ನು ಕೈಗೊಂಡಿತು. ಹಾವನೂರರು ಸಾಮಾಜಿಕ ಹಿಂದುಳಿದಿರುವಿಕೆಯನ್ನು ಗುರುತಿಸಲು ಕೆಲವು ಮಾನದಂಡಗಳನ್ನು ಬಳಸಿದ್ದಾರೆ. ಅಂದರೆ ಗ್ರಾಮೀಣ ಪ್ರದೇಶಗಳಲ್ಲಿ ಪ್ರತ್ಯೇಕ ಸ್ಥಳಗಳಲ್ಲಿ ವಾಸಿಸುವುದು ಬಡತನದಿಂದಾಗಿ. ಜಮೀನು, ಮನೆ ಮತ್ತಿತರ ಯಾವುದೇ ಆಸ್ತಿಯನ್ನು ಹೊಂದಲು ಅಸಮರ್ಥರಾಗಿರುವುದು ಸಾಮಾಜಿಕವಾಗಿ ನಿಕೃಷ್ಟವಾಗಿದೆ. ಆರ್ಥಿಕವಾಗಿ ಲಾಭದಾಯಕವಲ್ಲದ ವೃತ್ತಿಗಳಲ್ಲಿ ನಿರತರಾಗಿರುವುದು, ಶಿಕ್ಷಣಕ್ಕೆ ಉತ್ತೇಜನ ಇಲ್ಲದ ಕಾರಣಕ್ಕಾಗಿ ಅನಕ್ಷರಸ್ಥರಾಗಿರುವವರು, ಹಿಂದುಳಿದ ಸಮುದಾಯಗಳು, ಹಿಂದುಳಿದ ಜಾತಿಗಳು, ಹಿಂದುಳಿದ ಬುಡಕಟ್ಟುಗಳು ಈ ರೀತಿಯಾಗಿ ಈ ಆಯೋಗದ ಯೋಜನೆಗಳನ್ನು ನಡುಗಡ್ಡೆಗಳ ಸಮುದಾಯ, ಬುಡಕಟ್ಟುಗಳು ಬಳಸಿಕೊಂಡು ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಹುದು. ಈ ಆಯೋಗದಿಂದಾದ ಶಿಫಾರಸ್ಸುಗಳ ಹಿನ್ನೆಲೆಯಲ್ಲಿಯೂ ಸರಕಾರ ಅವರಿಗೆ ಅನೇಕ ಸೌಲಭ್ಯಗಳನ್ನು ನೀಡುವಲ್ಲಿ ವಿಫಲವಾಗಿದೆ.

ಸಮಾಜವು ನಿಂತ ನೀರಲ್ಲ. ಅದು ನಿತ್ಯ ಪರಿವರ್ತನಾಶೀಲವಾದದ್ದು. ತನ್ನೊಳಗಿನ ಹಲವಾರು ಅಂಶಗಳಲ್ಲಿ ಆದ ಬದಲಾವಣೆಗಳನ್ನು ಕಂಡುಕೊಳ್ಳಬೇಕಾಗಿದೆ. ಮಾನವ ಸಮಾಜ ಇವು ಒಂದನ್ನು ಬಿಟ್ಟು ಮತ್ತೊಂದಿಲ್ಲ. ಮಾನವ ಸಮಾಜದ ಚರಿತ್ರೆ ತುಂಬಾ ದೀರ್ಘವಾದುದು. ಒಂದು ಕಾಲದ ಅನಾಗರಿಕ ಮಾನವ ಸಮುದಾಯ ಬೆಳೆದು ಆಧುನೀಕರಣಗೊಳ್ಳಬೇಕಾಗಿದೆ. ಮಾನವನು ಜನಿಸಿ, ಹಂತವಾಗಿ ವಿಕಾಸ ಹೊಂದಿ, ಭೌತಿಕ ಹಾಗೂ ಬೌದ್ಧಿಕ ಅಂಶಗಳಲ್ಲಿ ಬದಲಾವಣೆ ಹೊಂದುತ್ತಾ ಬಂದಿದ್ದಾನೆ. ಅದೇ ರೀತಿ ಸಮಾಜವು ಸಹ ಬಹಳಷ್ಟು ವಿಕಾಸ ಹೊಂದುತ್ತಲೇ ಬಂದಿದೆ. ಆದರೆ ನಡುಗಡ್ಡೆಗಳ ಸಮುದಾಯಗಳ ಬದುಕು ಇದಕ್ಕೆ ಹೊರತಾಗಿದೆ. ವಿವಿಧ ನಡುಗಡ್ಡೆಗಳಲ್ಲಿ ನೆಲೆಸಿರುವ ಬುಡಕಟ್ಟು ಜನರ ಬದುಕು ವಿವಿಧ ಕಾರಣಗಳಿಂದಾಗಿ ಸ್ಥಿತ್ಯಂತರಗೊಳ್ಳುತ್ತಿದೆ. ಸೂಕ್ಷ್ಮವಾಗಿ ಗಮನಿಸಿದಾಗ ಸಾಮಾಜಿಕ ಬದಲಾವಣೆ ಹಾದಿಯಲ್ಲಿ ಸಾಕಷ್ಟು ಸಮುದಾಯಗಳ ಬುಡಕಟ್ಟುಗಳು ಸಾಗುತ್ತಿರುವುದನ್ನು ನಾವು ಕಾಣಬಹುದು. ಆದರೆ ನಡುಗಡ್ಡೆಗಳು ಯಾವ ಬದಲಾವಣೆಯನ್ನು ಕಾಣದೆ ಹಾಗೆ ಉಳಿದುಕೊಂಡಿವೆ. ಇಂದಿನ ದಿನಗಳಲ್ಲಿ ಸಮಾಜದ ಮೇಲೆ ಹಿಡಿತ ಸಾಧಿಸಿರುವ ಮುಖ್ಯ ಅಂಶಗಳಾದ ಆಧುನೀಕರಣ, ನಗರೀಕರಣ, ಪಾಶ್ಚಾತ್ಯೀಕರಣ, ಔದ್ಯೋಗಿಕರಣಗಳ ಪ್ರಭಾವಕ್ಕೆ ಒಳಗಾಗಿ ಬದಲಾವಣೆ ಗೊಳ್ಳತೊಡಗಿದ್ದಾರೆ. ಈ ನಡುಗಡ್ಡೆಗಳ ಬದಲಾವಣೆ ಆಗದಿರುವುದಕ್ಕೆ ಇವುಗಳ ಪ್ರಭಾವ ಅವರ ಮೇಲೆ ಬೀರಿಲ್ಲ ಅನ್ನುವುದಕ್ಕಿಂತ, ಬಲವಾದ ಕಾರಣ ಅವರು ಹೊರಜಗತ್ತಿನೊಡನೆ ಆಧುನೀಕರಣ ಗೊಂಡಿಲ್ಲ ಎನ್ನುವುದೇ ಇಲ್ಲಿ ಸವಾಲಾಗಿದೆ. ತಮ್ಮದೇ ಆದ ಸಾಮಾಜಿಕ ಸಂಸ್ಥೆ ಒಳಗಡೆ ಅವರು ಬದುಕುತ್ತಿದ್ದಾರೆ. ಈ ದಿನಮಾನಗಳಲ್ಲಿ ಪರಿವರ್ತನೆಗೊಳ್ಳುವ ಹವಣಿಕೆಯಲ್ಲಿದ್ದಾರೆ. ಆದರೆ

ಪರಿವರ್ತಗೊಳ್ಳುವಂತಹ ಯಾವ ಸೌಲಭ್ಯಗಳು ಅವರಿಗೆ ಸಿಗುತ್ತಿಲ್ಲ. ಯಾಕೆಂದರೆ ಹೊರಜಗತ್ತಿನ ಸಂಪರ್ಕದಿಂದ ದೂರ ಉಳಿದಿರುವುದೇ ಕಾರಣವಾಗಿದೆ. ಸಮಾಜದ ಜೀವನದಲ್ಲಿ ಈ ಹಿಂದೆ ಇದ್ದ ರೀತಿ ನೀತಿಗಳನ್ನು ಬದಲಿಸುವ ಅಥವಾ ಮಾರ್ಪಾಡಿಸುವ ಹೊಸ ವಿಧಾನಕ್ಕೆ ಸಾಮಾಜಿಕ ಬದಲಾವಣೆಮಾಡುವಲ್ಲಿ ಸರಕಾರ ಮತ್ತು ರಾಜಕಾರಣಿಗಳ ಕಾರ್ಯಕೆಲಸ ಅಗತ್ಯವಾಗಿದೆ. ಅವರ ಜೀವನ ಬದಲಾವಣೆ ಮಾಡಿ ಎಲ್ಲರಿಗೂ ಸಿಗಬೇಕಾದ ಸಮಾನಹಕ್ಕುಗಳು ಅವರಿಗೆ ಸಿಕ್ಕಾಗ ಅವರು ಪರಿವರ್ತನೆಗೊಳ್ಳುವಲ್ಲಿ ಯಾವ ಸಂಶಯವಿಲ್ಲ. ನಡುಗಡ್ಡೆಗಳಲ್ಲಿ ವಾಸಿಸುವ ಬೇಡ, ಕುರುಬ, ಕಬ್ಬಲಿಗ ಅನೇಕ ಸಮುದಾಯಗಳ ಸಮಸ್ಯೆಗಳ ಅಧ್ಯಯನ ಪ್ರಮುಖ ಉದ್ದೇಶವಾಗಿದ್ದರಿಂದ ಸಮಸ್ಯೆ ಪದದ ಅರ್ಥದ ಬಗ್ಗೆ ಸ್ಪಷ್ಟ ಕಲ್ಪನೆ ಅವಶ್ಯಕ. ಜೀವನದ ಪ್ರತಿಯೊಂದು ಹಂತದಲ್ಲಿಯೂ ನಾವು ಸಮಸ್ಯೆಗಳನ್ನು ಎದುರಿಸುತ್ತೇವೆ. ನಾವು ಎದುರಿಸುವಂತಹ ಸಮಸ್ಯೆಗಳು ಸ್ಥಳದಿಂದ ಸ್ಥಳಕ್ಕೆ ಭಿನ್ನವೆನಿಸುತ್ತವೆ. ಸಾಮಾನ್ಯವಾದ ಸಮಸ್ಯೆ, ಸಾಮಾಜಿಕ ಸಮಸ್ಯೆಯಾಗಿ ಪರಿವರ್ತನೆಯಾಗಬಹುದು. ಸಮಾಜಶಾಸ್ತ್ರಜ್ಞ **'ಗಿಲಿನ್'** ಅವರು ಸಾಮಾಜಿಕ ಸಮಸ್ಯೆಗಳು ಎಂಬ ತಮ್ಮ ಹೊತ್ತಿಗೆಯಲ್ಲಿ ಸಮುದಾಯಗಳಲ್ಲಿ ತಲೆದೋರಿರುವ ವಾದಗ್ರಸ್ತವಾದ ಪ್ರಮುಖ ಸಮಸ್ಯೆಗೆ ಸಾಮಾಜಿಕ ಸಮಸ್ಯೆ ಎಂದು ವ್ಯಾಖ್ಯಾನಿಸಿದ್ದಾರೆ. ನಡುಗಡ್ಡೆಗಳಲ್ಲಿ ವಾಸಿಸುವ ಸಮುದಾಯಗಳ ಏಳಿಗೆಯ ದೃಷ್ಟಿಯಿಂದ ಇಂತಹ ವಿವಾದಗ್ರಸ್ತ ಸಮಸ್ಯೆಗಳ ನಿವಾರಣೆಯು ಅತ್ಯಂತ ಮಹತ್ವದ್ದಾಗಿದೆ.

ನಡುಗಡ್ಡೆಗಳಲ್ಲಿ ವಾಸಿಸುವ ಜನರ ಅಭಿವೃದ್ಧಿ ದೃಷ್ಟಿಯಿಂದ ಈ ಸಾಮಾಜಿಕ ಸಮಸ್ಯೆಗಳ ನಿವಾರಣೆ ಅತ್ಯಂತ ಅವಶ್ಯ. ಲಾಭದಾಯಕವಲ್ಲದ ಕೃಷಿ ಪ್ರಧಾನ ಆರ್ಥಿಕ ವ್ಯವಸ್ಥೆ, ಹಲವು ನಂಬಿಕೆ, ಪದ್ಧತಿಗಳು, ಸೌಲಭ್ಯವಿಲ್ಲದ ನೆಲೆಗಳು, ನಿರುದ್ಯೋಗ ಸಮಸ್ಯೆ ನಿರಂತರವಾಗಿ ಮತ್ತು ಮಹಿಳೆಯರ ಸಮಸ್ಯೆಗಳು, ಶಿಕ್ಷಣದ ಕೊರತೆ ಇತ್ಯಾದಿ ಇದರಿಂದ ಹಳ್ಳಿ ಬದುಕಿಗಿಂತ ನಡುಗಡ್ಡೆಗಳಲ್ಲಿ ವಾಸಿಸುವ ಜನರ ಬದುಕು ಅತ್ಯಂತ ಕೆಳಮಟ್ಟದ್ದಾಗಿದೆ. ಗ್ರಾಮೀಣ ಪ್ರದೇಶ, ಹಳ್ಳಿಗಳ ಗುಣಮಟ್ಟಕ್ಕೆ ಅನುಸಾರವಾಗಿ ಯೋಜನೆಗಳನ್ನು ಜಾರಿಗೆ ತರಲಾಗುತ್ತಿದೆ. ಇವುಗಳಿಂದ ಹಳ್ಳಿಗಳನ್ನು ಬಿಟ್ಟು ಪ್ರತ್ಯೇಕವಾಗಿರುವ ನಡುಗಡ್ಡೆಗಳಿಗೆ ಇದರ ಪ್ರಯೋಜನ ತೀರ ಅಲ್ಪಮಟ್ಟದ್ದಾಗಿದೆ. ಇಂತಹ ಪರಿಸ್ಥಿತಿಯಿಂದ ಇನ್ನಷ್ಟು ನಿಕೃಷ್ಟವಾದ ಜೀವನ ಮಟ್ಟಕ್ಕೆ ಇಳಿಮುಖವಾಗಲೂ ಕಾರಣವಾಗಿದೆ. ನಡುಗಡ್ಡೆಗಳಲ್ಲಿ ನೆಲೆಸಿರುವ ಸಮುದಾಯದವರಿಗೆ ಹಿಂದಿನ ಕಾಲದ ರೀತಿಯಲ್ಲಿ ಅರಣ್ಯ, ಹೊಲಗಳು ಅವರ ಮೂಲಭೂತ ಅವಶ್ಯಕತೆಗಳನ್ನು ಪೂರೈಸುತ್ತಿಲ್ಲವಾದ್ದರಿಂದ ತಮ್ಮ ಮೂಲಭೂತ ಅವಶ್ಯಕತೆಗಳ ಪೂರೈಕೆಗೆ ಅವರು ಹೊರಗಿನ ಲೋಕದೊಂದಿಗೆ ಸಂಪರ್ಕ ಹೊಂದುವುದು ಅನಿವಾರ್ಯವಾಗಿದೆ. ಹೀಗೆ ಹೊರಗಿನ ಸಂಪರ್ಕದಿಂದ ನಡುಗಡ್ಡೆಗಳ ಸಮುದಾಯಗಳ ಬದುಕಿನ ಕ್ರಮವನ್ನೇ ಬದಲಾಯಿಸುತ್ತದೆ. ನಡುಗಡ್ಡೆಗಳ ನಿವಾಸಿಗಳಿಗೆ ಶಿಕ್ಷಣ ಕೊರತೆಯಿಂದ ತಮಗೆ ಇರುವ ಸೌಲಭ್ಯಗಳನ್ನು

ಪಡೆದುಕೊಳ್ಳುವುದು ದೊಡ್ಡ ಸಮಸ್ಯೆಯಾಗಿದೆ. ಸಮುದಾಯಗಳು ಮುಖ್ಯವಾಹಿನಿಗೆ ಬರಬೇಕಾದರೆ ಆರ್ಥಿಕ ಚೈತನ್ಯ ನೀಡುವುದು ಅವಶ್ಯಕ. ನಡುಗಡ್ಡೆಗಳ ಮೂಲ ನೆಲೆ ಇಂದು ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗಿದೆ. ತಮ್ಮ ಮೂಲ ನೆಲೆ ಉಳಿಸಿಕೊಳ್ಳುವ ಪ್ರಯತ್ನದಿಂದ ಆರ್ಥಿಕವಾಗಿ ತೀರ ಸಂಕಷ್ಟವನ್ನು ಎದುರಿಸುತ್ತಿದ್ದಾರೆ.

ಕೃಷ್ಣಾನದಿ ತೀರದ ನಡುಗಡ್ಡೆಗಳ ಸಮಸ್ಯೆ ಒಂದೇ ತೆರನಾಗಿಲ್ಲ. ಹಲವು ನಡುಗಡ್ಡೆಗಳು ಅಭಿವೃದ್ಧಿಯ ವಾಹಿನಿಯಿಂದ ದೂರ ಉಳಿದಿವೆ. ಮತ್ತು ಗಂಭೀರ ಸ್ವರೂಪದ ಸಮಸ್ಯೆಗಳನ್ನು ಎದುರಿಸುತ್ತಿವೆ. ಕೆಲವು ನಡುಗಡ್ಡೆಗಳಲ್ಲಿ ಇರುವವರು ಶಿಕ್ಷಣದ ಸದುಪಯೋಗ ಪಡಿಸಿಕೊಂಡರೆ ಬಹುತೇಕ ನಡುಗಡ್ಡೆಗಳಲ್ಲಿ ವಾಸಿಸುವವರು ಶಿಕ್ಷಣಕ್ಕೂ ತಮಗೂ ಯಾವುದೇ ರೀತಿಯ ಸಂಬಂಧವಿಲ್ಲ ಎನ್ನುವಂತೆ ಕಷ್ಟಗಳ ಕಡಲಲ್ಲಿ ಕಾಲ ಕಳೆಯುತ್ತಿದ್ದಾರೆ. ಉದಾ: ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ಬರುವಂತ "ನೀಲಕಂಠರಾಯನಗಡ್ಡೆ" ಕನಿಷ್ಠ ಮೂಲ ಸೌಕರ್ಯಗಳಿಲ್ಲದೆ, ಅವರ ದಿನನಿತ್ಯದ ಜೀವನ ನಿರ್ವಹಣೆಗೆ ತುಂಬಾ ಸಂಕಷ್ಟವಾಗಿರುವುದು ಕಂಡುಬರುತ್ತದೆ. "ಕುರುವಪೂರ ಗಡ್ಡೆ" ಕೂಡ ಇದೆ ಪರಿಸ್ಥಿತಿಯನ್ನು ಅನುಭವಿಸುತ್ತದೆ. ರಾಯಚೂರು ಜಿಲ್ಲೆಯ ಸ್ಥಳದಿಂದ ೩೫ ಕಿ.ಮೀ ಬೂರ್ದಿಪಾಡುವಿನಿಂದ ೫ ಕಿ.ಮೀ ಹತ್ತಿರದಲ್ಲಿ ಈ ಗಡ್ಡೆ ಬರುತ್ತದೆ. ಈ ಎರಡು ಗಡ್ಡೆಗಳ ಸಮುದಾಯಗಳು ನಾಗರಿಕ ಸಮಾಜದಿಂದ ದೂರವಿದ್ದುದರಿಂದ ಯಾವುದೇ ಸೌಲಭ್ಯ ಕೊಡದೇ ಇರುವುದರಿಂದ ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿದ್ದು, ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ನಡುಗಡ್ಡೆಗಳ ಪ್ರಮುಖ ಸಮಸ್ಯೆಗಳೆಂದರೆ ಸಾರಿಗೆ ವ್ಯವಸ್ಥೆ, ಅಲ್ಪಸ್ವಲ್ಪ ಭೂಮಿ, ಬಡತನ, ಅನಕ್ಷರತೆ, ಆರೋಗ್ಯದ ಕೊರತೆ, ನಿರುದ್ಯೋಗ, ವಸತಿ, ಬರಗಾಲ, ಉದ್ಯೋಗದ ಕೊರತೆ, ಕರೆಂಟ್‌ಪವರ್ ಕೊರತೆ ಇತ್ಯಾದಿ ಸಮಸ್ಯೆಗಳು. ಶಿಕ್ಷಣವಿಲ್ಲದೆ ಇವರಿಗೆ ಕೃಷಿ ಕೂಲಿಯ ಹೊರತು ಹೆಚ್ಚಿನ ಆದಾಯ ನೀಡುವಂತಹ ಉದ್ಯೋಗ ದೊರಕುವುದು ಅಸಾಧ್ಯ. ರಾಜಕೀಯವಾಗಿ ನೋಡ ಬೇಕಾದರೆ ಈ ನೆಲೆಯಲ್ಲಿ ವಾಸಿಸುವವರಿಗೆ ಚುನಾವಣೆ ಬಂದಾಗ ಸಿಗುತ್ತಾರೆ ನಂತರ ಅವರನ್ನು ಭೇಟಿಯಾಗಬೇಕಾದರೆ ತುಂಬಾಕಷ್ಟ.

ಒಟ್ಟಿನಲ್ಲಿ ಹೇಳುವುದಾದರೆ ಸಾಮಾಜಿಕ ಸಮಸ್ಯೆಗಳು, ಆರ್ಥಿಕ ಸಮಸ್ಯೆಗಳು, ಶೈಕ್ಷಣಿಕ ಸಮಸ್ಯೆಗಳು, ರಾಜಕೀಯ ಸಮಸ್ಯೆಗಳು, ಸಾರಿಗೆ ಸಮಸ್ಯೆ ಮತ್ತು ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗಿರುವುದು. ಪ್ರಸ್ತುತ ಅಧ್ಯಯನದಲ್ಲಿ ಈ ಸಮಸ್ಯೆಗಳ ಮೇಲೆ ಹೆಚ್ಚಿನ ಪ್ರಯತ್ನ ಮಾಡಲಾಗಿದೆ.

**ಸಾಮಾಜಿಕ ಸಮಸ್ಯೆಗಳು**

ನಾಗರಿಕ ಸಮಾಜದಿಂದ ದೂರವಿರುವಂಥ ನಡುಗಡ್ಡೆಗಳಲ್ಲಿ ಜೀವಿಸುವಂತಹ ಸಮುದಾಯಗಳ ಜನರು ಇತರ ಜನರ ಜೊತೆ ಸಂಪರ್ಕ ಬಹಳ ಕಡಿಮೆ. ಇವರ ಬಗ್ಗೆ ಚಿಂತಿಸುವವರಿಗೆ ಇದು

ಗಂಭೀರ ಸಮಸ್ಯೆಯನಿಸಿದರೂ ಕೂಡ ಸ್ವತಃ ತಾವು ಆಯಿತು. ತಮ್ಮ ಹೊಲ, ಮನೆ, ಬೇಸಾಯ ಮತ್ತು ಸಂಸಾರ ಆಯಿತು. ಆದರೆ ಅವರಿಗೆ ವೇಗವಾಗಿ ಬೆಳೆಯುತ್ತಿರುವ ಜಗತ್ತಿನ ಬಗ್ಗೆ ಅಷ್ಟೊಂದು ಚಿಂತೆ ಇಲ್ಲದಿರುವುದು ಒಂದು ವಿಷಾಧನೀಯ ಸಂಗತಿಯಾಗಿದೆ.

**ಬಾಲ್ಯ ವಿವಾಹ**

ನಡುಗಡ್ಡೆಗಳಲ್ಲಿ ವಾಸಿಸುವ ಸಮುದಾಯಗಳು ತಮ್ಮ ಮಕ್ಕಳಿಗೆ ಸರಿಯಾದ ಆಸ್ತಿ ಇಲ್ಲದಿದ್ದರೂ ಅತಿ ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡಿ ಬಿಡುತ್ತಾರೆ. ಮದುವೆ ಮಾಡಿದ ತಕ್ಷಣ ತಮ್ಮ ಜವಾಬ್ದಾರಿ ಕಳೆಯಿತು ಎಂದು ತಿಳಿದುಕೊಳ್ಳುವವರ ಸಂಖ್ಯೆ ಹೆಚ್ಚು. ತಮ್ಮ ಮಕ್ಕಳಿಗೆ ಶಿಕ್ಷಣ ಕಲಿಸದಿದ್ದರೂ ಬಡತನದ ಅನುಭವವನ್ನು ಮಾತ್ರ ಸರಿಯಾದ ರೀತಿಯಲ್ಲಿ ಕಲಿಸಿರುತ್ತಾರೆ. ಮಕ್ಕಳನ್ನು ಶಾಲೆಗೆ ಕಳುಹಿಸುವ ಬದಲು ತಮ್ಮ ಜೊತೆಗೆ ಕೃಷಿ ಕೆಲಸಕ್ಕೆ ಅಥವಾ ಕೂಲಿ ಕೆಲಸಕ್ಕೆ ಕರೆದುಕೊಂಡು ಹೋಗುತ್ತಾರೆ. ನಡುಗಡ್ಡೆಗಳಲ್ಲಿ ಪ್ರಾಣಿಗಳ ಸಾಕಾಣಿಕೆ ಹೆಚ್ಚಿನ ವೃತ್ತಿಯಾಗಿದ್ದರಿಂದ, ಇಲ್ಲಿ ಬಹುತೇಕ ಮಕ್ಕಳು ಕುರಿಗಳನ್ನು ಹಸುಗಳನ್ನು ಕಾಯುತ್ತಿರುತ್ತಾರೆ. ಬದುಕಿನ ತುಂಬಾ ದುಸ್ಥರವನ್ನು ಬಾಲ್ಯದಲ್ಲಿಯೇ ಇಲ್ಲಿನ ಮಕ್ಕಳು ಅನುಭವಿಸುವುದನ್ನು ಕಾಣುತ್ತೇವೆ. ಬಾಲ್ಯ ವಿವಾಹ ವ್ಯವಸ್ಥೆಯಲ್ಲಿ ೭ ರಿಂದ ೧೪ ವರ್ಷದ ಪ್ರಾಯದ ಮಕ್ಕಳು ವಿವಾಹವೆಂಬ ಬಂಧನದೊಳಗೆ ತಳ್ಳಲ್ಪಟ್ಟು ಜೀವನವಿಡಿ ಅದರ ದುಷ್ಪರಿಣಾಮಗಳನ್ನು ಎದುರಿಸಬೇಕಾಗಿ ಬರುವುದು. ದೈಹಿಕವಾಗಿ ಬೌದ್ಧಿಕವಾಗಿ ವಿಕಾಸನ ಹೊಂದದ ಮಕ್ಕಳು ವಿವಾಹವಾಗಿ ಸಂಸಾರದ ಜವಾಬ್ದಾರಿಯನ್ನು ಹೊರಲು ಅಸಮರ್ಥರಾಗಿರುತ್ತಾದ್ದರಿಂದ ಇದರ ಪರಿಣಾಮವಾಗಿ ದೈಹಿಕ ನಿಶ್ಯಕ್ತತೆ, ಮಾನಸಿಕ ದೌರ್ಬಲ್ಯ ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾಗುವುದು.

ಇನ್ನು ಚಿಕ್ಕ ವಯಸ್ಸಿನಲ್ಲಿಯೇ ಆಡಿ ಓದಿ ಬೆಳೆಯಬೇಕಾದ ಹೆಣ್ಣುಮಕ್ಕಳನ್ನು ಬಾಲ್ಯವಿವಾಹದ ಮೂಲಕ ಸಂಸಾರದ ನೌಕೆ ನಾವಿಕರನ್ನಾಗಿ ಮಾಡಿಬಿಡುತ್ತಾರೆ. ಶಿಕ್ಷಣ ಸಿಗದೇ ಅಂಧಕಾರದಲ್ಲಿ ಅವರು ಜೀವನವಿಡಿ ಅನೇಕ ಸಂಕಷ್ಟಗಳನ್ನು ಮೂಲ ಸೌಕರ್ಯಗಳಿಲ್ಲದ ನಡುಗಡ್ಡೆಗಳಲ್ಲಿ, ಹೆಣ್ಣು ಮಕ್ಕಳ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗಿ ರಕ್ತಹೀನತೆ, ದೈಹಿಕತೆ, ಮಾನಸಿಕ ದೌರ್ಬಲ್ಯ ಮುಂತಾದ ತೊಂದರೆಗಳಿಗೆ ಸಿಲುಕಿ ತಾಯಿತನದ ಸಂದರ್ಭದಲ್ಲಿ ಬಲಿಯಾಗಬೇಕಾಗುತ್ತದೆ. ಪದೇ ಪದೇ ಗರ್ಭದಾರಣೆ, ಮಕ್ಕಳ ಪಾಲನೆ–ಪೋಷಣೆ ಜವಾಬ್ದಾರಿ, ಮನೆಯಲ್ಲಿ ಅವಿರತ ದುಡಿಮೆ ಈ ವಿಷವರ್ತುಲದೊಳಗೆ ಸಿಲುಕಿದ ಸ್ತ್ರೀಯರು ತಮ್ಮ ಹೆಣ್ಣು ಮಕ್ಕಳ ವಿಚಾರದಲ್ಲೂ ಇದೇ ತಪ್ಪನ್ನು ಮರುಕಳಿಸುವುದು ಶೋಚನೀಯ ಸಂಗತಿ. ಬಡಕುಟುಂಬಗಳ ದೈಹಿಕ, ಮಾನಸಿಕ ತೊಂದರೆಗಳೊಡನೆ ಅಪೌಷ್ಠಿಕತೆ, ಅನಾರೋಗ್ಯಗಳು ಸೇರಿ ಸಮಸ್ಯೆಗಳು ಇನ್ನಷ್ಟು ಗಂಭೀರ ಸ್ವರೂಪ ಪಡೆದುಕೊಳ್ಳುತ್ತವೆ. ದೇಶದಾದ್ಯಂತ ಮಹಿಳಾ ಅಭಿವೃದ್ಧಿಗೆ ಒಂದು ದೊಡ್ಡ ಸವಾಲಾಗಿದೆ. ಮೊನ್ನೆತಾನೆ ಯಾದಗಿರಿ

ಜಿಲ್ಲೆ ಸುರಪುರ ತಾಲೂಕಿನ ಕಕ್ಕೇರಾ ಗ್ರಾಮದಿಂದ ೮ ಕಿ.ಮೀ ದೂರದಲ್ಲಿರುವ ನೀಲಕಂಠರಾಯನ ಗಡ್ಡೆಯ ಗರ್ಭಿಣಿ ಮಹಿಳೆಯೊಬ್ಬರು ನದಿಯನ್ನು ಈಜಿ ಬಂದು ಆಸ್ಪತ್ರೆ ಸೇರಿ ಮಗುವನ್ನು ಹೆತ್ತಳು ಎಂಬುದನ್ನು ನೋಡಬಹುದಾಗಿದೆ ಇಂತಹ ಸಮಸ್ಯೆಗಳು ಹೆಣ್ಣು ಮಕ್ಕಳಿಗೆ ಸವಾಲುಗಳಾಗಿ ನಿಂತಿವೆ. ಸ್ತ್ರೀಯರ ಸ್ವಾಭಿಮಾನಕ್ಕೆ, ಸ್ಥಾನಮಾನಕ್ಕೆ ಗೌರವ ಸಿಗಬೇಕಾಗಿದೆ.

**ಸಾಮಾಜಿಕ ತಿಳುವಳಿಕೆಯ ಕೊರತೆ**

ಸರ್ಕಾರವು ಜನರ ಅನುಕೂಲಕ್ಕಾಗಿ ಹತ್ತು ಹಲವು ಕಾರ್ಯಕ್ರಮಗಳನ್ನು ಜಾರಿಗೆ ತಂದರೂ ಅಜ್ಞಾನ ಅಂಧಃಕಾರದಿಂದ ಬದುಕುತ್ತಿರುವ ನಡುಗಡ್ಡೆಗಳ ಜನರಿಗೆ ಸರಿಯಾದ ರೀತಿಯಲ್ಲಿ ಆ ಯೋಜನೆಗಳು ತಲುಪದೇ ಇರುವುದು, ಮಕ್ಕಳ ಬೆಳವಣಿಗೆ, ಅವರ ಮುಂದಿನ ಜೀವನಕ್ಕೆ ಜ್ಞಾನದ ಅರಿವು ಸಿಗದಂತೆ ಆಗುತ್ತದೆ. ಮಕ್ಕಳನ್ನು ಕೆಲಸಗಳಲ್ಲಿ ತೊಡಗಿಸಿ ನಾಲ್ಕು ಗೋಡೆಗಳ ಮಧ್ಯೆ ಸೀಮಿತವಾಗಿ ಇರುವಂತೆ ಹೊರಗಿನ ನೆರೆಹೊರೆಯ ಅರಿವು ಇಲ್ಲದಂತೆ ಇವರು ಆ ನಡುಗಡ್ಡೆಗಳಲ್ಲಿ ಇರುವುದರಿಂದ ಸಾಮಾಜಿಕ ತಿಳುವಳಿಕೆಯ ಕೊರತೆಯನ್ನು ಎದುರಿಸುತ್ತಿದ್ದಾರೆ.

**ನಡುಗಡ್ಡೆಗಳಲ್ಲಿ ಬಾಲಕಾರ್ಮಿಕರು**

ಪ್ರತಿಯೊಂದು ದೇಶದ ನಿಜವಾದ ಸಂಪತ್ತೆಂದರೆ ಮಕ್ಕಳು. ಒಂದು ದೇಶದ ಅಭಿವೃದ್ಧಿ ಅಲ್ಲಿರುವ ಮಕ್ಕಳ ಗುಣಾತ್ಮಕ ಬೆಳವಣಿಗೆ ಮೇಲೆ ನಿಂತಿದೆ. ಮಕ್ಕಳಿಗೆ ಉತ್ತಮ ಶಿಕ್ಷಣ, ಆರೋಗ್ಯ, ಪೌಷ್ಠಿಕ ಆಹಾರ, ಮನೋರಂಜನೆ, ಮಾನವೀಯ ಹಾಗೂ ಸಾಮಾಜಿಕ ಕಳಕಳಿಯ ವಾತಾವರಣ ಪೂರೈಸಿದರೆ ಅವರೆಲ್ಲರೂ ಭವಿಷ್ಯದ ಸಬಲ ಸತ್ಪ್ರಜೆಯಾಗುವುದರಲ್ಲಿ ಸಂಶಯವಿಲ್ಲ.

ಬದುಕನ್ನು ಸಾಗಿಸುವ ಸಲುವಾಗಿ ತಮ್ಮ ಮಕ್ಕಳನ್ನು ದುಡಿಮೆಗೆ ಕಳುಹಿಸಿ ಕೊಡುವ, ದನ ಕುರಿಗಳನ್ನು ಕಾಯಲಿಕ್ಕೆ ಕಳಿಸುವ ಪಾಲಕರು ಒಂದು ಕಡೆಯಾದರೆ ಪರಿಸ್ಥಿತಿಗಳೇ ಮುಗ್ಧ ಮಕ್ಕಳನ್ನು ದುಡಿಮೆಗೆ ಒಡ್ಡುತ್ತಿವೆ. ಯಾವುದೇ ವಯಸ್ಸು ಲೆಕ್ಕಿಸದೆ ನಿಸ್ಸಹಾಯಕರಾದ ಪೋಷಕರು ಅನಿವಾರ್ಯವಾಗಿ ತಮ್ಮ ಮಕ್ಕಳನ್ನು ತಾವೇ ದಾರಿ ತಪ್ಪಿಸುತ್ತಿದ್ದಾರೆ. ಪ್ರಮುಖವಾಗಿ ನೋಡಬೇಕೆಂದರೆ ಸರ್ಕಾರವೇ ಇವರಿಗೆ ಶಿಕ್ಷಣದ ವ್ಯವಸ್ಥೆ ಮಾಡಿಕೊಟ್ಟಿಲ್ಲ. ಇದರಿಂದ ನಡುಗಡ್ಡೆಗಳನ್ನು ಬಿಟ್ಟುಹೋಗಿ ಸುತ್ತ ಮುತ್ತ ಹಳ್ಳಿಗಳಲ್ಲಿ ವ್ಯಾಸಂಗ ಮಾಡಲಿಕ್ಕೆ ಕೂಡ, ಇವರಿಗೆ ವಾಸಿಸುವ ನಡುಗಡ್ಡೆಗಳಿಗೆ ಯಾವುದೇ ರೀತಿಯ ದಾರಿ ಮಾರ್ಗವಿಲ್ಲ ಮತ್ತು ವಾಹನಗಳ ರಸ್ತೆ ಸಂಪರ್ಕವಿಲ್ಲ. ಇದರಿಂದಾಗಿ ಇವರು ತಮ್ಮ ನಡುಗಡ್ಡೆಗಳಲ್ಲಿ ಎಲ್ಲ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. ಅಪ್ರಾಪ್ತ ವಯಸ್ಸಿನ ಮಕ್ಕಳ ಬಾಲ್ಯದ ಕನಸುಗಳು ಕಮರಿ ಹೋಗುತ್ತಿವೆ. ಕೆಲವು ಗಡ್ಡೆಗಳಲ್ಲಿ ಅಂದರೆ ದೇವರಗಡ್ಡೆ, ಜಲದುರ್ಗಗಡ್ಡೆ ಮತ್ತು ಕುರುವಪೂರಗಡ್ಡೆ ಗಳಲ್ಲಿ ಪ್ರಾಥಮಿಕ ಶಾಲೆ ಇದ್ದು, ಒಬ್ಬ ಶಿಕ್ಷಕರು ಇದ್ದು ೬ ತಿಂಗಳ ಕಾಲ ನದಿ ತುಂಬಿ ಹರಿಯುತ್ತಿರುವಾಗ

ಆ ಶಿಕ್ಷಕರು ಕೂಡ ಆ ಶಾಲೆಗೆ ಮತ್ತು ತಮಗೆ ಯಾವುದೇ ಸಂಬಂಧವಿಲ್ಲ ಅನ್ನುವ ರೀತಿಯಲ್ಲಿ ಉಳಿದು ಬಿಡುತ್ತಾರೆ. ಇದರಿಂದ ಮಕ್ಕಳ ಅಲ್ಪ ಸ್ವಲ್ಪ ಶಿಕ್ಷಣ ಸಿಗದೇ, ಪೂರ್ತಿಯಾಗಿ ಶಾಲೆಯ ಕಡೆ ಗಮನಕೊಡದೆ ತಮ್ಮ ತಮ್ಮ ಹೊಲ ಮನೆ ಕೆಲಸಗಳಲ್ಲಿ ತೊಡಗುತ್ತಾರೆ. ಇವರು ದುಡಿಯುವ ಸ್ಥಿತಿಗೆ ಹೊಂದಿಕೊಳ್ಳುತ್ತಾರೆ.

**ಪೌಷ್ಠಿಕ ಆಹಾರದ ಕೊರತೆ**

ಸರ್ಕಾರ ರಿಯಾಯಿತಿ ದರದಲ್ಲಿ ಅಕ್ಕಿ ಗೋಧಿ ವಿತರಿಸುತ್ತಿದೆ. ಅದರಲ್ಲಿ ಅರ್ಧ ನ್ಯಾಯಬೆಲೆ ಅಂಗಡಿಯವರು ತಿಂದರೆ, ಅಲ್ಪಸ್ವಲ್ಪ ನಡುಗಡ್ಡೆಗಳ ಜನರಿಗೆ ಸಿಗುತ್ತವೆ. ಏಕೆಂದರೆ ಪಕ್ಕದ ಊರಿಗೆ ಹೋಗಿ ಅಲ್ಲಿನ ನ್ಯಾಯಬೆಲೆಯ ಅಂಗಡಿಯವರನ್ನು ಕೇಳಿದಾಗ, ಅಂಗಡಿ ಮಾಲೀಕರು ಇವರಿಗೆ 'ನಿಮಗೆ ಕಾರ್ಡ್ ಇಲ್ಲ ಮತ್ತು ನೀವು ಸರಿಯಾದ ಸಮಯಕ್ಕೆ ಬರುವುದಿಲ್ಲ, ರೇಷನ್ ಖಾಲಿ ಆಗಿದೆ' ಎಂದು ಹೇಳುವುದುಂಟು. ಅನಕ್ಷರಸ್ಥರಾದ ಇವರು ಹಕ್ಕುಗಳನ್ನು ಚಲಾಯಿಸದೆ ಸುಮ್ಮನೆ ಇದ್ದು ಬಿಡುತ್ತಾರೆ. ಪೋಷಕರು ತಮ್ಮ ಮತ್ತು ಮಕ್ಕಳ ಪೌಷ್ಠಿಕತೆಯ ಬಗ್ಗೆ ಯೋಚಿಸುವುದಿಲ್ಲ. ಜೀವನ ನಿರ್ವಹಣೆಗಾಗಿ ಮಾಡಿಕೊಂಡ ಉಪಕಸುಬುಗಳಾದ ದನ ಸಾಕಾಣಿಕೆ, ಕುರಿ ಸಾಕಾಣಿಕೆ, ಕೋಳಿ ಸಾಕಾಣಿಕೆ ಮುಂತಾದವುಗಳನ್ನು ಅವರು ಆರ್ಥಿಕತೆಯನ್ನು ಹೆಚ್ಚಿಸಲು ಬಳಿಸಿಕೊಳ್ಳುತ್ತಾರೆಯೇ ವಿನಃ, ದಿನಾಲು ಕೋಳಿಯಿಂದ ಪಡೆಯುವ ಮೊಟ್ಟೆಗಳು ಮಕ್ಕಳಿಗೆ ಇಲ್ಲ. ಒಂದು ಲೋಟ ಹಾಲು ಕೂಡಾ ಕೊಡುವುದಿಲ್ಲ. ಪ್ರಮುಖ ಸಮಸ್ಯೆಯೆಂದರೆ ವಾರಕ್ಕೊಂದು ಬಾರಿ ಅಥವಾ ತಿಂಗಳಿಗೊಮ್ಮೆ ಸಂತೆ ಮಾಡುವುದರಿಂದ ಪೌಷ್ಠಿಕವಾದ ಆಹಾರ ಇವರಿಗೆ ಸಿಗುವುದು ಬಹಳ ವಿರಳ. ಮಕ್ಕಳ ಪೌಷ್ಠಿಕ ಆಹಾರಕ್ಕಾಗಿ ಸರ್ಕಾರ ಅಂಗನವಾಡಿಗಳನ್ನು ಮಾಡಿದೆ. ಕೆಲವು ಗಡ್ಡೆಗಳಲ್ಲಿ ಇವೆ, ಇನ್ನು ಕೆಲವು ಗಡ್ಡೆಗಳಲ್ಲಿ ಇಲ್ಲ. ಇದ್ದ ನಡುಗಡ್ಡೆಗಳಲ್ಲಿ ಸರಿಯಾಗಿ ಕಾರ್ಯನಿರ್ವಹಿಸುತ್ತಿಲ್ಲ. ಇದರಿಂದ ಕೂಡ ನಡುಗಡ್ಡೆಗಳ ಮಕ್ಕಳು ವಂಚಿತರಾಗಿ ಅಪೌಷ್ಠಿಕತೆಯಿಂದ ಬಳಲುವಂತಾಗಿದೆ. ಇತ್ತೀಚೆಗೆ ಮಳೆಯ ಪ್ರಮಾಣ ಕಡಿಮೆ. ಆದುದರಿಂದ ಜೋಳಕ್ಕೆ ಬಂಗಾರದ ಬೆಲೆ ಬಂದಿದೆ. ಇದರಿಂದ ಕಾಳ ಸಂತೆಯಲ್ಲಿ ಅಕ್ಕಿಯನ್ನು ಕೊಂಡು ತಂದು ಜೀವನ ನಿರ್ವಹಿಸುತ್ತಿದ್ದಾರೆ. ಅದರಲ್ಲಿ ಹೆಣ್ಣುಮಕ್ಕಳಿಗೆ ಸಿಗಬೇಕಾದ ಪೌಷ್ಠಿಕ ಆಹಾರ ಸಿಗದೆ, ಅವರು ದಿನಂಪ್ರತಿ ಬೆಳಿಗ್ಗೆ ನಾಲ್ಕು ಗಂಟೆಗೆ ಎದ್ದು ರೊಟ್ಟಿ ಮಾಡುವುದು ಮತ್ತು ಅಲ್ಪ ಸ್ವಲ್ಪ ಮನೆಯಲ್ಲಿ ಇದ್ದ ಹೈನು ಮತ್ತು ಬೇಳೆ ಕಾಳುಗಳನ್ನು ಬೇಯಿಸಿ, ತಮ್ಮ ಹೊಲಗಳಲ್ಲಿ ಸಿಗುವಂತಹ ಪಲ್ಯಗಳನ್ನು ದಿನನಿತ್ಯ ಉಪಯೋಗಿಸುತ್ತಾರೆ. ಕೆಲವು ಸಮುದಾಯಗಳು ತಮ್ಮ ನಡುಗಡ್ಡೆಗಳಲ್ಲಿ ಬೇಟೆಯಾಡಿ ಊಟವನ್ನು ಕೂಡ ಮಾಡುತ್ತಾರೆ. ಅಂದರೆ ಬೇಡ ಸಮುದಾಯ, ಕುರುಬ, ಮಾದಿಗ ಸಮುದಾಯಗಳು ಹೊಳೆ ಬೇಟೆ ಕೂಡ ಆಡುತ್ತಾರೆ. ಇದರಲ್ಲಿ ಕಬ್ಬಲಿಗ ಸಮುದಾಯದವರು ದಿನಂಪ್ರತಿ ಇದೆ ಒಂದು ಕಸುಬಾಗಿ ಮಾಡಿಕೊಂಡಿದ್ದಾರೆ. ಇಂದಿನ ದಿನಮಾನಗಳಲ್ಲಿ

ಹಿರಿಯರು, ಮುದುಕರು, ಮೊದಲು ಮಕ್ಕಳುಗಳಿಗೆ ಪೌಷ್ಠಿಕವಾದ ಆಹಾರ ತುಂಬಾ ಅವಶ್ಯಕವಾಗಿ ಬೇಕು. ಪೋಷಕರು ತಮ್ಮ ಮಕ್ಕಳಿಗೆ ಪೌಷ್ಠಿಕ ಆಹಾರ ತುಂಬಾನೆ ಮುಖ್ಯ ಎಂದು ಮನೆಯ ಇತರರು ಮತ್ತು ತಂದೆ ತಾಯಿಗಳು ಯೋಚನೆ ಮಾಡಬೇಕಾಗಿದೆ. ಇದರ ಜೊತೆಗೆ ಸರ್ಕಾರದ ಅನೇಕ ಕಾರ್ಯಕ್ರಮಗಳ ಉಪಯೋಗ ಇವರಿಗೆ ತಟ್ಟಬೇಕಾಗಿದೆ.

## ನಡುಗಡ್ಡೆಗಳ ಜನರ ವಲಸೆ

ವಲಸೆ ಒಂದು ಸಾಮಾಜಿಕ ಪ್ರಕ್ರಿಯೆ. ಪ್ರತಿಯೊಂದು ಸಮಾಜದಲ್ಲೂ ಇದು ನಿರಂತರವಾಗಿ ನಡೆಯುವ ಪರಿಕಲ್ಪನೆಯಾಗಿದೆ. ಒಂದು ನಿರ್ಧಿಷ್ಟ ಭೂಪ್ರದೇಶದ ಜನಸಂಖ್ಯೆಯ ಗಾತ್ರದ ಬದಲಾವಣೆ, ಬೆಳವಣಿಗೆ, ನಗರೀಕರಣ, ಕೈಗಾರಿಕೀಕರಣ ಮತ್ತು ಸಂಪರ್ಕ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ವಲಸೆಯ ಪಾತ್ರ ಮಹತ್ತರವಾದದ್ದು. ವಲಸೆ ಎಂದರೆ ಒಬ್ಬ ವ್ಯಕ್ತಿ ಇಲ್ಲವೇ ಸಮುದಾಯಗಳು ಅಲಕ್ಷಿತವಾದ ನೆಲೆಯಿಂದ ದೈಹಿಕವಾಗಿ ಒಂದು ಸಾಮಾಜಿಕ ಪರಿಸರದಿಂದ ಇನ್ನೊಂದು ಸಾಮಾಜಿಕ ಪರಿಸರದಲ್ಲಿ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ನೆಲೆಸುವುದು ವಲಸೆ(ಗುಳೆ). ಇಲ್ಲವೇ ಋತುಮಾನಕಾಲದ ವಲಸೆ ಆಗಿರಬಹುದು. ವಿಶೇಷವಾಗಿ ಋತುಮಾನದ ಕಾಲದ ವಲಸೆ ಬಗೆಗೆ ಬಹುತೇಕ ಅಧ್ಯಯನ ಸಂಶೋಧನ ಕಾರ್ಯ ಆಗಿಲ್ಲ. ಇತ್ತೀಚೆಗೆ ನಡುಗಡ್ಡೆಗಳಲ್ಲಿ ನೆಲೆಸಿರುವ ಸಮುದಾಯದವರು ಬಹುತೇಕ ಜನರು ಋತುಮಾನ ಕಾಲದ ವಲಸೆಗಾರರಾಗಿರುತ್ತಾರೆ. ಇವರ ಮೇಲೆ ಸಂಶೋಧನಾ ಕಾರ್ಯದ ಅವಶ್ಯಕತೆ ಇರುತ್ತದೆ. ಋತುಮಾನದ ವಲಸೆಗೆ ಹಲವು ಕಾರಣಗಳಿವೆ. ಅವು ಬಡತನ, ಬರಗಾಲ, ಬೆಳೆಯ ವೈಫಲ್ಯ, ನಿರುದ್ಯೋಗ, ನೈಸರ್ಗಿಕ ವಿಕೋಪ, ಪರಸ್ಥಳದಲ್ಲಿ ಉತ್ತಮ ಕೂಲಿ, ಪ್ರಮುಖವಾಗಿ ಗಡ್ಡೆಗಳಲ್ಲಿ ಕೆಲಸ ಸಿಗದೆ ಖಾಲಿ ಕಾಲಕಳೆದಿರುವುದು ಮತ್ತು ಅಕ್ಕ ಪಕ್ಕ ಹಳ್ಳಿಗಳಿಗೆ ಹೋಗಿ ದುಡಿಯಲಿಕ್ಕೆ ಅವರಿಗೆ ದಾರಿ ಸಂಪರ್ಕಮಾರ್ಗ ಇಲ್ಲದಿರುವುದು ಮತ್ತು ನೈಸರ್ಗಿಕ ವಿಕೋಪ ದುಡಿಮೆ ವಿಶೇಷವಾಗಿ ಋತುಮಾನ ವಲಸೆಗೆ ಕಾರಣಗಳಾಗಿರುತ್ತವೆ.

ಕೃಷ್ಣಾನದಿ ತೀರದಲ್ಲಿ ೯-೧೦ ನಡುಗಡ್ಡೆಗಳು ಕಂಡುಬರುತ್ತವೆ. ಹೆಚ್ಚಿನ ಸಂಖ್ಯೆಯಲ್ಲಿ ಬೇಡ ಸಮುದಾಯದವರು ಕಂಡುಬಂದರೆ ಉಳಿದ ಸಮುದಾಯಗಳು ಅಲ್ಪ ಪ್ರಮಾಣದಲ್ಲಿವೆ. ಇಲ್ಲಿ ಎಲ್ಲಾ ಸಮುದಾಯಗಳಿಗೆ ಒಂದೇ ತೆರನಾದ ಸಮಸ್ಯೆ ಎಂದು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ. ಸಾಕಷ್ಟು ಸಮಸ್ಯೆಗಳಿಗೊಳಗಾಗಿರುವ ನಡುಗಡ್ಡೆಗಳ ನಿವಾಸಿಗಳು ಹೊಟ್ಟೆಪಾಡಿಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಜೀವನ ನಿರ್ವಹಣೆಗೆ ಕಷ್ಟದಿಂದ ವಲಸೆ ಹೋಗುತ್ತಿದ್ದಾರೆ. ಜನರು ಅತಿ ಕಡಿಮೆ ಆಸ್ತಿಯನ್ನು ಹೊಂದಿರುವ ಕುಟುಂಬದವರು, ಜೊತೆಗೆ ಪರ್ಯಾಯ ಕೂಲಿಕಸುಬು ಇಲ್ಲದ ಸಮುದಾಯದವರು ಹೆಚ್ಚಿನ ಸಂಖ್ಯೆಯಲ್ಲಿ ೬-೮ ತಿಂಗಳುಗಳ ಕಾಲ ಬೇರೊಂದು ಊರಿಗೆ ವಲಸೆ ಹೋಗಿ ಇನ್ನೊಂದು ಸ್ಥಳದಲ್ಲಿ ಇದ್ದು ಕಷ್ಟಪಟ್ಟು ಕೂಲಿ ಕೆಲಸ ಮಾಡಿ ಜೀವನ ಸಾಗಿಸುತ್ತಿದ್ದಾರೆ.

ಗುಳೆ ಹೋದವರು ಹೆಚ್ಚಾಗಿ ರಾಜ್ಯದ ರಾಜಧಾನಿಯಾದ ಬೆಂಗಳೂರಿಗೆ ಕೆಲಸ ಅರಸಿ ವಲಸೆ ಹೋಗುತ್ತಾರೆ. ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಿ ವಲಸೆ ಹೋಗುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಗುಳೆಹೋದ ನಡುಗಡ್ಡೆ ಜನರು ಹೊರ ಪ್ರಪಂಚದ ಜ್ಞಾನ ತಿಳುವಳಿಕೆ ಮೂಡಿದ ನಂತರ ಅವರು ಮರಳಿ ನಡುಗಡ್ಡೆಗೆ ಬರುವುದಕ್ಕೆ ಬಯಸುವುದಿಲ್ಲ. ಆದರೂ ಪೂರ್ವಜರು ಮತ್ತು ಹಿರಿಯರ ಮೇರೆಗೆ ಹಬ್ಬ ಹರಿದಿನಗಳಿಗೆ ಬರುವುದಕ್ಕೆ ಇಷ್ಟಪಡುತ್ತಾರೆ. ನಡುಗಡ್ಡೆಗಳಿಂದ ವಲಸೆ(ಗುಳೆ) ಹೋಗುವವರು ಯುವ ಜನರು ಮಾತ್ರ ಎಂದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಬೆಂಗಳೂರಂತಹ ನಗರಗಳಲ್ಲಿ ಇರುವ ಇವರ ಎದುರಿಗೆ ಕೆಟ್ಟ ಘಟನೆಗಳು ನಡೆದರೆ, ಮತ್ತೆ ಅವರು ನಡುಗಡ್ಡೆಗಳೆ ವಾಸಿಯೆಂದು ಭಾವಿಸಿ ಬಂದೆ ಬಿಡುತ್ತಾರೆ. ಸರ್ಕಾರ ಕೇವಲ ಶಾಲೆ ನಿರ್ಮಿಸಿ ಶಿಕ್ಷಕರ ನೇಮಕಾತಿ ಮಾಡಿದರೆ ಸಾಲದು. ಶಾಲೆ ಮತ್ತು ಶಿಕ್ಷಕರ ಬಗ್ಗೆ ಸರಿಯಾದ ನಿಗಾವಹಿಸಿದರೆ ಮಾತ್ರ ಶಿಕ್ಷಣ ಕಾರ್ಯಕ್ರಮಗಳು ಯಶಸ್ವಿಯಾಗುತ್ತವೆ. ಇಲ್ಲದಿದ್ದರೆ ಸರ್ಕಾರ ಸಾಕಷ್ಟು ಹಣಖರ್ಚು ಮಾಡಿದರೂ ಅದರ ಅನುಷ್ಠಾನದಲ್ಲಿ ವಿಫಲವಾಗುತ್ತದೆ. ಇದರಿಂದ ಸುಂದರ ಭವಿಷ್ಯ ನಿರ್ಮಿಸಿಕೊಳ್ಳಬೇಕಾದ ಮಕ್ಕಳ ಭವಿಷ್ಯ ಕುಗ್ಗಿಹೋಗುತ್ತದೆ.

**ಸಾರಿಗೆ ಸಮಸ್ಯೆ**

ಒಂದು ದೇಶ ಅಭಿವೃದ್ಧಿಯಾಗಿದೆ ಎಂಬುದನ್ನು ತಿಳಿದುಕೊಳ್ಳಬೇಕಾದರೆ ಸಾರಿಗೆ ಅಭಿವೃದ್ಧಿಯು ಸಹಜವಾಗಿದೆ. ಆದರೆ ಭಾರತವು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಒಂದಾಗಿದೆ ಎಂದರ್ಥ. ಇಲ್ಲಿ ಸಮರ್ಪಕ ಸಾರಿಗೆ ಅಭಿವೃದ್ಧಿಯಾಗದೆ ಇರುವುದನ್ನು ಕಾಣಬಹುದು. ಅನೇಕ ನಡುಗಡ್ಡೆಗಳಲ್ಲಿ ವಾಸಿಸುತ್ತಿರುವ ಜನರು ಇಂದೂ ತಮ್ಮ ಗಡ್ಡೆಗಳಿಂದ ಬೇರೆ ಹಳ್ಳಿಗಳಿಗೆ ಹೋಗಿಬರಲು ಕಾಲುದಾರಿಯಿಂದಲೇ ನಡೆದುಕೊಂಡು ಹೋಗುತ್ತಾರೆ, ವಿನಃ ರಸ್ತೆಗಳಿಲ್ಲ. ಕೆಲವೊಂದು ಗಡ್ಡೆಗಳಿಗೆ ಕಾಲುದಾರಿ ಕೂಡ ಇಲ್ಲ. ಸುತ್ತಲು ನದಿಯಿರುವುದರಿಂದ ನದಿ ಈಜಿಕೊಂಡೆ ಹೋಗಿ ಬರುವಂತಹ ದೊಡ್ಡ ಪರಿಸ್ಥಿತಿ ಇದೆ. ನಾನು ಸಂದರ್ಶಿಸಿದ ಕ್ಷೇತ್ರಗಳನ್ನು ಗಮನಿಸಿದಾಗ ಇತ್ತೀಚೆಗೆ ಕೆಲವು ಗಡ್ಡೆಗಳಿಗೆ ದೇವರಗಡ್ಡೆ, ಜಲದುರ್ಗ, ಕಡದರಗಡ್ಡೆಗೆ ರಸ್ತೆ ಆಗಿದೆ. ಆದರೆ ಇದರಲ್ಲಿ ದೇವರಗಡ್ಡೆಗೆ ಸರ್ಕಾರಿ ವಾಹನಗಳ ಸಂಪರ್ಕವಿಲ್ಲ. ಮತ್ತೆ ಜಲದುರ್ಗ, ಕಡದರಗಡ್ಡೆಗೆ ಒಂದು ದಿನಕ್ಕೆ ೩ ಬಾರಿ ಸರ್ಕಾರಿ ಬಸ್ಸು ಹೋಗಿ ಬರುತ್ತದೆ ಮತ್ತು ಯಾವ ಖಾಸಗಿ ವಾಹನಗಳು ಹೋಗುವುದಿಲ್ಲ. ಇನ್ನು ಕೆಲವು ಗಡ್ಡೆಗಳಿಗೆ ಕಾಲುದಾರಿ ಇಲ್ಲ, ರಸ್ತೆ ಇಲ್ಲ, ವಾಹನಗಳ ಸಂಪರ್ಕವಿಲ್ಲ. ಈ ಗಡ್ಡೆಗಳು ಯಾವುವೆಂದರೆ ಸುರಪುರ ತಾಲೂಕಿನ ಕಕ್ಕೇರಾ ಗ್ರಾಮದಿಂದ ೧೦ ಕಿ.ಮೀ ದಲ್ಲಿ ಇರುವ ನೀಲಕಂಠರಾಯನಗಡ್ಡೆ, ರಾಯಚೂರು ಜಿಲ್ಲೆ ಸ್ಥಳದಲ್ಲಿ ಬರುವ ಆತುಕೂರದಿಂದ ೩ ಕಿ.ಮೀ ದಲ್ಲಿ ಬರುವ ಕುರುವಾಪುರಗಡ್ಡೆ ಹಾಗೂ ಬೂರ್ದಿಪಾಡುವಿನಿಂದ ೩ ಕಿ.ಮೀ.ದಲ್ಲಿರುವ ನಾರದಗಡ್ಡೆ,

ಕೂರ್ತಕುಂದದಿಂದ ೩ ಕಿ.ಮೀ.ದಲ್ಲಿ ಬರುವ ರಾಮಗಡ್ಡೆ. ಈ ಎಲ್ಲ ನಡುಗಡ್ಡೆಗಳಿಗೆ ಯಾವುದೇ ದಾರಿ ರಸ್ತೆ ಇಲ್ಲ. ಇಲ್ಲಿ ಜನರು ದೋಣಿಯ ಮೂಲಕ ಮತ್ತು ಈಜುಕಾಯಿಗಳ ಮೂಲಕ ಈಜಿಕೊಂಡು ಹೋಗಿಬರಬೇಕು. ಇವರು ಹೋಗಿ ಬರುವಾಗ, ನದಿ ತುಂಬಿ ಹರಿಯುವಾಗ, ದೋಣಿ ಮುಳಗಡೆ ಆಗುತ್ತಾ ಗೊತ್ತಿಲ್ಲ. ಉದಾಃ ನೀಲಕಂಠರಾಯನಗಡ್ಡೆಯಲ್ಲಿ ಹಿಂದೆ ಒಂದು ಬಾರಿ ದೋಣಿ ಮುಳಗಡೆ ಆಗಿ ೩ ಜನ ಸಾವು ಆಗಿರುವುದನ್ನು ಕ್ಷೇತ್ರಕಾರ್ಯದಿಂದ ತಿಳಿದುಕೊಂಡಿದ್ದೇನೆ. ಈ ನಡುಗಡ್ಡೆಗಳ ಜನರ ಸಂಚಾರ ಬಹಳ ಆಪತ್ತಿನಿಂದ ಕೂಡಿದೆ. ಇನ್ನು ರಾತ್ರಿಯ ಸಮಯಕ್ಕೆ ಇಂತಹ ನಡುಗಡ್ಡೆಗಳಿಗೆ ಹೋಗುವುದಕ್ಕೆ ಯಾವುದೆ ದೋಣಿಗಳು ಕೂಡ ಇರುವುದಿಲ್ಲ ಮತ್ತು ಈಜಿಕೊಂಡು ಹೋಗುವುದಕ್ಕೂ ಆಗುವುದಿಲ್ಲ. ಏಕೆಂದರೆ ರಾತ್ರಿಯ ಸಮಯದಲ್ಲಿ ನದಿಯಲ್ಲಿ ಸಾಗಿ ಬರುವ ದಿಮ್ಮಿಗಳು ಕಾಣಿಸುವುದಿಲ್ಲ. ಇವರಿಗೆ ನದಿ ದಂಡೆ ಗತಿ ಎಂದು ತಿಳಿಯುತ್ತಾರೆ.

ಈ ಕಾರಣದಿಂದ ನಡುಗಡ್ಡೆ ಜನರು ದಿನಾಲು ಹೋಗಿಬರುವುದಿಲ್ಲ. ವಾರಕ್ಕೊಂದು ಬಾರಿ, ತಿಂಗಳಿಗೊಂದು ಬಾರಿ ತಮಗೆ ಬೇಕಾದ ದಿನನಿತ್ಯದ ಅಗತ್ಯ ವಸ್ತುಗಳನ್ನು ಒಂದೇ ಬಾರಿಗೆ ತೆಗೆದುಕೊಂಡು ಬರುತ್ತಾರೆ. ಅದರಲ್ಲಿ ಹೋಗುವವರು ಗಂಡು ಮಕ್ಕಳು ಮಾತ್ರ. ಹೆಣ್ಣು ಮಕ್ಕಳು ಹೋಗುವುದಿಲ್ಲ. ಹೆಣ್ಣು ಮಕ್ಕಳು ತಮ್ಮ ಗಡ್ಡೆಯನ್ನು ಬಿಡುವಂತಹ ಸಂದರ್ಭಗಳೆಂದರೆ, ಬಂಧು ಬಳಗಗಳ ಮದುವೆ ಕಾರ್ಯಕ್ರಮಗಳು. ಅವರಿಗೆ ಆರೋಗ್ಯ ಸರಿಯಾಗಿ ಇಲ್ಲದಿರುವಾಗ ಮತ್ತು ಕೆಲಸಕ್ಕೆ ಅವರ ಅವಶ್ಯಕತೆ ಇದ್ದಾಗ ಮಾತ್ರ ಹೆಣ್ಣು ಮಕ್ಕಳು ಗಡ್ಡೆಯಿಂದ ಹೊರಗಡೆ ದೋಣಿ ಮೂಲಕ ಅವರನ್ನು ಕರೆದುಕೊಂಡು ಹೋಗುತ್ತಾರೆ. ಇದು ಇತ್ತೀಚೆಗೆ. ಮೊದಲು ಇವರು ಹೆಣ್ಣು ಮತ್ತು ಗಂಡು ಎಲ್ಲರೂ ಈಜು ಕಾಯಿಗಳ ಮೂಲಕ ನದಿಯನ್ನು ಈಜಿಕೊಂಡು ದಾಟಿ ಹೋಗಿ ಬರುತ್ತಿದ್ದೇವೆ ಎಂದು ಹೇಳುತ್ತಾರೆ. ಈ ನಡುಗಡ್ಡೆಗಳ ಎಲ್ಲಾ ಜನರಿಗೆ ಚಿಕ್ಕ ಮಕ್ಕಳಿಂದ ಹಿಡಿದು ದೊಡ್ಡವರಿಗೆ ಈಜು ಬರುತ್ತದೆ. ದೋಣಿ ಸಿಗದೆ ಇರುವಂತಹ ಸಂದರ್ಭದಲ್ಲಿ ಇವರು ಈಜು ಕಾಯಿಗಳನ್ನು ಬಳಸಿ ಈಜಿಕೊಂಡು ಹೋಗಿ ಬರುತ್ತಾರೆ. ನಾನು ಕ್ಷೇತ್ರಕಾರ್ಯದಿಂದ ಕಣ್ಣಾರೆ ಕಂಡಿದ್ದೇನೆ. ನಾನು ಈ ಕ್ಷೇತ್ರಕಾರ್ಯವನ್ನು ದೋಣಿಗಳ ಮೂಲಕ ಹೋಗಿ ನಡುಗಡ್ಡೆಗಳ ಜನರನ್ನು ಸಂದರ್ಶನ ಮಾಡಿದ್ದು. ಹಿಂದಿನ ಕಾಲದಲ್ಲಿ ಇವರು ನದಿಯನ್ನು ದಾಟುವಾಗ ನಾಲ್ಕು ಕಾಲಿನ ಹೊರಸು ಮತ್ತು ಮಣ್ಣಿನ ಗಡಿಗೆಗಳನ್ನು, ಈಜುಕಾಯಿಗಳನ್ನು ಬಳಸುತ್ತಿದ್ದರಂತೆ. ಹೊರಸಿನಲ್ಲಿ ಜನರನ್ನು ಕೂಡಿಸಿಕೊಂಡು ಒಬ್ಬ ಹುಟ್ಟು ಹಾಕುತ್ತಿದ್ದರಂತೆ, ಇದನ್ನು ಈಗ ಬಳುಸುತ್ತಿಲ್ಲ. ಇದರ ಬದಲು ದೋಣಿ ಬಳಸುತ್ತಿದ್ದಾರೆ. ಗಡಿಗೆಗಳಲ್ಲಿ ತಮ್ಮ ಮಕ್ಕಳನ್ನು ಹಾಗೂ ಸಾಮಾನುಗಳನ್ನು ಹಾಕಿ ಒಂದು ಕೈಯಲ್ಲಿ ಗಡಿಗೆ, ಇನ್ನೊಂದು ಕೈಯಲ್ಲಿ ಈಜುನ್ನ ಬಡಿಯುತ್ತಾ ದಡವನ್ನು ಸೇರುತ್ತಿದ್ದರಂತೆ. ಸಾಮಾನುಗಳಲ್ಲದೆ ಗಡಿಗೆಗಳನ್ನು, ಮಕ್ಕಳನ್ನು ತೆಗೆದುಕೊಂಡು ಹೋಗಲು ಬಳಸುತ್ತಿದ್ದರಂತೆ.

ಕೃಷಿ ಉತ್ಪನ್ನಗಳ ಸರಕುಗಳನ್ನು ನಗರ ಪ್ರದೇಶಗಳಿಗೆ ಮಾರಾಟಕ್ಕೆ ತೆಗೆದುಕೊಂಡು ಹೋಗಬೇಕಾದರೆ, ಮೊದಲ ದಿನಗಳಲ್ಲಿ ಅದೇ ಹೊರಸುಗಳನ್ನು ಬಳಸುತ್ತಿದ್ದರು. ಆದರೆ ಈಗ ದೋಣಿಗಳನ್ನು ಬಳಕೆ ಮಾಡಿಕೊಳ್ಳುತ್ತಿದ್ದಾರೆ. ಇದರಿಂದ ಇವರು ತುಂಬಾ ಸಾರಿಗೆ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ ಮತ್ತು ಆರ್ಥಿಕವಾಗಿ ನಷ್ಟವನ್ನು ಅನುಭವಿಸುತ್ತಿದ್ದಾರೆ. ಏಕೆಂದರೆ ಒಂದು ಬಾರಿ ತೆಗೆದುಕೊಂಡುಹೋದ ಕೃಷಿ ಉತ್ಪನ್ನಗಳನ್ನು ಬೆಲೆ ಸಿಗದೆ ಇದ್ದಾಗ ಮತ್ತೆ ವಾಪಾಸು ತರುವುದಕ್ಕೆ ತುಂಬಾ ತೊಂದರೆ ಇರುವುದರಿಂದ ಅವರು ಹೇಳಿದ ಬೆಲೆಗೆ ಮಾರಾಟ ಮಾಡಿಬರುತ್ತಾರೆ. ಇದು ಕೂಡ ಇವರು ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗಿದೆ.

ನಗರಗಳು ಬೆಳದಂತೆ ಜನಸಂಖ್ಯೆ ಏರುತ್ತಿದ್ದಂತೆ ಅವರಿಗೆ ಮೂಲಭೂತ ಸೌಕರ್ಯ ಒದಗಿಸುವುದು ಕಷ್ಟದ ಕೆಲಸ. ಆದರೆ ಸರ್ಕಾರ ಸಾರಿಗೆ ಅಭಿವೃದ್ಧಿಪಡಿಸುವುದಕ್ಕೆ ಸಾಕಷ್ಟು ಹಣವನ್ನು ಎಲ್ಲಾ ಗ್ರಾಮಗಳಿಗೆ ಖರ್ಚುಮಾಡುತ್ತಿದೆ. ಆದರೆ ಈ ನಡುಗಡ್ಡೆಗಳಿಗೆ ಯಾವುದೇ ಸಾರಿಗೆ ಸಂಪರ್ಕ ಒದಗಿಸುವಲ್ಲಿ ಮುಂದೆ ಬರುತ್ತಿಲ್ಲ. ಯಾಕೆಂದರೆ ನದಿಗೆ ಸೇತುವೆ ನಿರ್ಮಾಣ ಮಾಡುವುದಕ್ಕೆ ದೊಡ್ಡ ಪ್ರಮಾಣದ ಮೊತ್ತ ಬೇಕಾಗುವುದರಿಂದ ಅವರ ಗಡ್ಡೆಗಳಿಗೆ ಸೇತುವೆ ನಿರ್ಮಾಣ ಕಾರ್ಯವನ್ನು ಕೈಗೊಳ್ಳದೆ ಅವರಿಗೆ ಬರಿಯ ಹೊರಗಡೆ ಆಶ್ರಯ ಮನೆಗಳನ್ನು ಒದಗಿಸಿಕೊಟ್ಟಿದೆ. ಆದರೆ ಆ ಮನೆಗಳಿಗೆ ನಡುಗಡ್ಡೆಗಳ ಜನರು ಯಾರು ಹೋಗಿ ವಾಸಮಾಡಿಲ್ಲ, ಮಾಡುವುದಿಲ್ಲ ಎಂದು ಹೇಳುತ್ತಾರೆ. ಯಾಕೆಂದರೆ ನಮಗೆ ಬರಿ ಮನೆ ಕೊಟ್ಟರೆ ಸಾಲದು. ನಮಗೆ ಭೂಮಿ ಕೊಡುತ್ತಾರೆಯೇ, ಮತ್ತು ನಮಗೆ ಬೇಕಾದ ಪಶುಸಂಗೋಪನೆಗೆ ಜಾಗ ಕೊಡುತ್ತಾರೆಯೇ ಇಲ್ಲಿ ಎಂದು ಅವರ ವಾದ. ಅವರಿಗೆ ಸೇತುವೆ ನಿರ್ಮಾಣ ಬೇಕೆನ್ನುವ ಅವರ ಆಶೆ. ಆದರೆ ಸ್ವಲ್ಪಪ್ರಮಾಣದ ಜನರಿಗೆ ದೊಡ್ಡ ಪ್ರಮಾಣದ ಮೊತ್ತವನ್ನು ಖರ್ಚುಮಾಡಿ ಸೇತುವೆ ಕಟ್ಟುವುದಕ್ಕೆ ಆಗುವುದಿಲ್ಲವೆಂದು ಸರ್ಕಾರ ಕೈಚೆಲ್ಲುತ್ತದೆ. ಮತ್ತು ಆ ಕ್ಷೇತ್ರದ ರಾಜಕೀಯ ವ್ಯಕ್ತಿಗಳು ಕೂಡ ಅವರಿಂದ ಬರುವ ಮತಗಳಾದರೆಷ್ಟು ಎಂದು ನಿರೀಕ್ಷೆ ಮಾಡುವುದರ ಬದಲು ಅವರಿಗೆ ಸೌಲಭ್ಯ ಕೊಡಲು ಮನಸ್ಸು ಮಾಡಿಲ್ಲ. ಈ ಕಾರಣದಿಂದ ನಡುಗಡ್ಡೆಗಳ ಜನರಿಗೆ ಸಾರಿಗೆ ಸೌಲಭ್ಯವು ದೊರೆಯದೆ ಇರುವುದೂ ಸಹ ಅವರ ಹಿಂದುಳಿಯುವಿಕೆಗೆ ಕಾರಣವಾಗಿದೆ.

## ನೈಸರ್ಗಿಕ ಸಮಸ್ಯೆಗಳು

ಕಡುಬಡತನದಲ್ಲಿಯೇ ನಿಸರ್ಗದ ಮಡಿಲಲ್ಲಿ ಬದುಕುತ್ತಿರುವ ನಡುಗಡ್ಡೆಗಳ ಸಮುದಾಯಗಳು ನೈಸರ್ಗಿಕ ಸಮಸ್ಯೆಗಳಿಂದ ಮುಕ್ತರಾಗಿಲ್ಲ. ಬೆಳೆಗಳಿಗೆ ರೋಗ ಬಿದ್ದು ಬೆಳೆ ನಾಶ. ಆದರೆ ಕೂಲಿ ಕೆಲಸಕ್ಕೆ ಹೋದಾಗ ಅಥವಾ ಮನೆಯಲ್ಲಿಯೇ ಇದ್ದಾಗ ವಿಷಪೂರಿತ ಹಾವು, ಚೇಳು ಕಡಿತ,

ದನಕರು, ಕುರಿಗಳಿಗೆ ರೋಗ ಬಂದು ಸತ್ತರೆ ಆರ್ಥಿಕವಾಗಿ ನಷ್ಟ ಅನುಭವಿಸಬೇಕಾಗುತ್ತದೆ. ವಿಚಿತ್ರವೆಂದರೆ ೨೧ನೇ ಶತಮಾನದಲ್ಲಿಯೂ ಹಲ್ಲುನೋವಿಗೆ, ಹಾವು ಕಡಿತಕ್ಕೆ, ಜ್ವರಕ್ಕೆ, ನಾಯಿ ಕಡಿತಕ್ಕೆ ಪ್ರತಿಯೊಂದು ರೋಗಕ್ಕೂ ಇವರು ಮನೆಯಲ್ಲಿ ಅಥವಾ ಇರುವ ಅಕ್ಕಪಕ್ಕದವರು ಗಿಡಮೂಲಿಕೆ ಔಷಧಿಯನ್ನು ನೀಡುತ್ತಾರೆ. ಆದರೆ ಗಂಭೀರ ಸ್ಥಿತಿಯಲ್ಲಿ ಇದು ಪ್ರಯೋಜನಕಾರಿ ಆಗದು. ಇದಲ್ಲದೆ ಶುದ್ಧ ಆಹಾರ ಕೊರತೆ, ಕುಡಿಯುವ ನೀರಿನ ಕೊರತೆ. ಇವರು ನದಿಯ ನೀರನ್ನೇ ಕುಡಿಯುತ್ತಾರೆ. ನದಿ ತುಂಬಿ ಹರಿಯುವಾಗ ನದಿ ಕೆಟ್ಟ ನೀರಿನಿಂದ ಮತ್ತು ಕೊಳಚೆ ಹೊಲಸಿನಿಂದ ತುಂಬಿರುತ್ತದೆ. ಇದೇ ನೀರನ್ನು ಅವರು ಕುಡಿಯಲು ಬಳಸುತ್ತಾರೆ. ಇದರಿಂದ ಆರೋಗ್ಯಕ್ಕೆ ಹಾನಿಕಾರವಾಗುತ್ತದೆ ಮತ್ತು ನದಿ ತುಂಬಿದಾಗ ಅನಾರೋಗ್ಯಕರ ಹವಾಗುಣ. ಇಂತಹ ಹಲವಾರು ರೀತಿಯ ನೈಸರ್ಗಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಎಲ್ಲ ನಡುಗಡ್ಡೆಗಳಿಗೆ ವಿದ್ಯುತ್ ಸಂಪರ್ಕದಿಂದ ಅವರು ಅಲ್ಪಸ್ವಲ್ಪ ನೀರಾವರಿಯನ್ನು ಹೊಂದಿದ್ದಾರೆ. ಆದರೆ ಸುರಪುರ ತಾಲೂಕಿನ ನೀಲಕಂಠರಾಯನಗಡ್ಡೆಗೆ ವಿದ್ಯುತ್ ಸಂಪರ್ಕವಿಲ್ಲ. ಅಲ್ಲಿ ಮಳೆ ಬಂದರೆ ಬೆಳೆ. ಗಡ್ಡೆ ಸುತ್ತಲೂ ನೀರಿದ್ದರೂ ಬಳಿಸಿಕೊಳ್ಳಲು ವಿದ್ಯುತ್ ಸಂಪರ್ಕವಿಲ್ಲ. ಇದರಿಂದ ಇಲ್ಲಿನ ರೈತರ ಗೋಳು ಕೇಳುವವರಿಲ್ಲ. ಮಳೆಯಿಂದ ತಕ್ಕಮಟ್ಟಿಗೆ ಬೆಳೆಯನ್ನು ಬೆಳೆದರೆ ಬೆಳೆದ ಫಸಲಿಗೆ ಸರಿಯಾದ ಬೆಲೆ ಸಿಗದೆ ಹತಾಶರಾಗುತ್ತಾರೆ. ಇನ್ನೊಂದು ದುರಂತವೆಂದರೇ ನದಿ ತುಂಬಿ ಬಂದು ದಡದಲ್ಲಿರುವ ಹೊಲಗಳಿಗೆ ನೀರು ನುಗ್ಗಿ ಬೆಳೆಗಳು ಹಾಳಾಗುತ್ತವೆ. ಇದಕ್ಕೆ ಸರಕಾರ ಪರಿಹಾರಧನ ಕೂಡ ಕೊಡುವುದಿಲ್ಲ. ಬೆಳೆ ಹೋಗಲಿ ಈ ನಡುಗಡ್ಡೆಗಳ ಜನರು ನದಿ ತುಂಬಿ ಹರಿಯುವಾಗ ತಮ್ಮನ್ನು ತಾವೇ ರಕ್ಷಣೆಮಾಡಿಕೊಳ್ಳುವ ಆತಂಕದಲ್ಲಿ ಕೂಡ ಭಯಭೀತರಾಗಿರುತ್ತಾರೆ.

### ಆರೋಗ್ಯ ಹಾಗೂ ನೈರ್ಮಲ್ಯದ ಸಮಸ್ಯೆಗಳು

ನಡುಗಡ್ಡೆಗಳ ಜನರು ಸರ್ವ ಚೇತನವಾದಿಗಳಾದುದರಿಂದ ಅನಾರೋಗ್ಯದ ನಿವಾರಣೆಗೆ ದೇವರ ಮೊರೆ ಹೋಗುತ್ತಾರೆ. ಆದುದರಿಂದ ಇವರು ಅನೇಕ ರೋಗರುಜಿನಗಳಿಂದ ಬಳಲುತ್ತಾರೆ. ಆರೋಗ್ಯಕ್ಕೆ ಸಂಬಂಧಪಟ್ಟ ಅರಿವಿನ ಕೊರತೆಯಿಂದಾಗಿ ಅನಾರೋಗ್ಯ ಸಮಸ್ಯೆ ಇವರಲ್ಲಿ ಕಾಡುತ್ತದೆ. ಹೊರಗಿನ ಪ್ರಪಂಚಕ್ಕೆ ಮತ್ತು ನಡುಗಡ್ಡೆಗಳಿಗೆ ಹೋಲಿಸಿದರೆ ನಡುಗಡ್ಡೆಗಳಲ್ಲಿ ಸ್ವಲ್ಪ ಬೇಗ ಕಾಯಿಲೆಗೆ ತುತ್ತಾಗುವುದಿಲ್ಲ, ಅಂತಾನೆ ಹೇಳಬಹುದು. ಏಕೆಂದರೆ ಅವರು ಪ್ರತ್ಯೇಕ ವಾತವಾರಣದಲ್ಲಿ ಜನಸಂಪರ್ಕವಿಲ್ಲದ ಪ್ರದೇಶದಲ್ಲಿರುವುರಿಂದ ಬೇಗನೆ ಕಾಯಿಲೆಗಳಿಗೆ ತುತ್ತಾಗುವುದಿಲ್ಲ ಎನ್ನಬಹುದು. ಆದರೂ ಮನುಷ್ಯ ಎಂದು ಮೇಲೆ ಕಾಯಿಲೆ ಬರುವುದೇ. ಇದರಿಂದ ಅನೇಕ ಸಣ್ಣಮಟ್ಟ ಕಾಯಿಲೆಗಳು ಬರುವುದು ಸಹಜ. ಇವರನ್ನು ಕಾಡುವ ಮೂಢನಂಬಿಕೆಗಳೇ ಹೆಚ್ಚು ಕಾರಣ. ಮಹಿಳೆಯರಲ್ಲಿ

ಹೆರಿಗೆಯ ಸಮಯದಲ್ಲಿ ತಾಯಿ ಮತ್ತು ಮಗು ಸಾವನ್ನಪ್ಪುವ ಪ್ರಸಂಗಗಳೂ ಇವೆ. ಗರ್ಭಿಣಿ ಸ್ತ್ರೀಯರಿಗೆ ಪೌಷ್ಟಿಕ ಆಹಾರದ ಕೊರತೆ ಮತ್ತು ಹೆರಿಗೆ ಸಂದರ್ಭದಲ್ಲಿ ಕಷ್ಟ. ನದಿ ದಾಟಿ ದೋಣಿ ಮೂಲಕ ಅಥವಾ ಈಜಿಕೊಂಡು ಪಕ್ಕದ ಗ್ರಾಮದ ಆಸ್ಪತ್ರೆಗೆ ಹೋಗಬೇಕು. ಇದು ನಡುಗಡ್ಡೆಗಳ ಜನರಿಗೆ ಗಂಭೀರ ಸಮಸ್ಯೆಯಾಗಿದೆ. ಉದಾ: ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ನೀಲಕಂಠರಾಯನ ಗಡ್ಡೆ ಹೆಣ್ಣು ಮಗಳು ನೀಲಮ್ಮ ಎನ್ನುವ ಗರ್ಭಿಣಿ ಸ್ತ್ರೀ ಹೆರಿಗೆ ಸಂದರ್ಭದಲ್ಲಿ ನದಿಯನ್ನು ಈಜಿಕೊಂಡು ಹೋಗಿ ಸುರಪುರ ಆಸ್ಪತ್ರೆಯಲ್ಲಿ ಮಗುವಿಗೆ ಜನ್ಮವನ್ನು ನೀಡಿದ್ದನ್ನು ನೋಡಬಹುದು. ಇದು ಮೊನ್ನೆತಾನೆ ನಡೆದ ಘಟನೆ. ಇಂಥ ಘಟನೆಗಳು ನಡೆದರೂ ಕೂಡ ಯಾವ ಮಹಿಳಾ ಸಂಘಟನೆಗಳು ಹೋರಾಟ ಮಾಡದೆ ವಿಷಯವನ್ನು ತಿಳಿದು ಕೈಕಟ್ಟಿ ಕುಳಿತವು. ಇಂತಹ ಘಟನೆಗಳನ್ನು ನೋಡಿದರೆ ಇಡೀ ಸಮಾಜದಲ್ಲಿರುವ ಹೆಣ್ಣು ಕುಲಕ್ಕೆ ಅವಮಾನ. ಸರ್ಕಾರ ಕೂಡ ಪ್ರತಿಯೊಂದು ನಡುಗಡ್ಡೆಗಳಿಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಒದಗಿಸಿಕೊಡುವುದು ತುಂಬ ಅವಶ್ಯಕತೆ ಇದೆ. ಆದರೆ ಆ ನಡುಗಡ್ಡೆಗಳ ಜನರು ತಮಗೆ ಯಾವುದೇ ರೀತಿಯ ಸಂಬಂಧವಿಲ್ಲ ಎನ್ನುವ ರೀತಿಯಲ್ಲಿ ಕಣ್ಣುಮುಚ್ಚಿ ಕುಳಿತಿವೆ. ಇದರ ಸೌಲಭ್ಯ ಪಡೆಯುವಲ್ಲಿ ಕೂಡ ನಡುಗಡ್ಡೆಯ ಜನರ ವಿಫಲವಾಗಿದ್ದಾರೆ. ಇದಕ್ಕೆ ಶಿಕ್ಷಣದ ಕೊರತೆ ಎಂದು ಹೇಳಬಹುದು.

ರಾತ್ರಿಯ ಸಮಯದಲ್ಲಿ ಆರೋಗ್ಯದಲ್ಲಿ ಏರುಪೇರು ಆದರೆ ಗಿಡಮೂಲಿಕೆ ಔಷಧಿಯ ಮೊರೆ ಇಲ್ಲವೆ ದೇವರ ಮೊರೆಹೋಗಬೇಕು. ಆಸ್ಪತ್ರೆಗೆ ಹೋಗಲು ಅಂತಹ ರಾತ್ರಿಯಲ್ಲಿ ನದಿ ದಾಟಿಕೊಂಡು ಹೋಗುವುದಕ್ಕೆ ಆಗುವುದಿಲ್ಲ. ಹರಸಾಹಸಮಾಡಿ ಹೋಗುವುದರಲ್ಲಿ ರೋಗಿಯ ಸ್ಥಿತಿ ಚಿಂತಾಜನಕ ಪರಿಸ್ಥಿತಿ ತಲುಪುತ್ತದೆ. ಇಲ್ಲವೆಂದರೆ ಕೈಲಾಸವನ್ನು ಕಾಣಬಹುದು. ವೈದ್ಯಕೀಯ ಸೇವೆ ಇಲ್ಲದೇ ಮರಣ ಹೊಂದಿದ್ದು, ಅಲ್ಲಿನ ಜನರು ತಮ್ಮ ಗೋಳು ತೋಡಿಕೊಳ್ಳುತ್ತಾರೆ. ಇಂತಹ ಕನಿಷ್ಠ ಸೌಲಭ್ಯಗಳನ್ನಾದರೂ ಸರ್ಕಾರ ಅವರಿಗೆ ಒದಗಿಸಿಕೊಡಬೇಕು. ಒಟ್ಟಾರೆಯಾಗಿ ನಡುಗಡ್ಡೆಗಳ ಜನರು ನೆಮ್ಮದಿಯಿಂದ ಕಾಲಕಳೆಯಬೇಕಾದರೆ ಅವರಿಗೆ ಕೆಲವು ಮೂಲಭೂತ ಸೌಕರ್ಯಗಳ ಅವಶ್ಯಕತೆ ಇದೆ. ಇದನ್ನು ಅರಿತು ಸರ್ಕಾರ ಸಮಾಜದ ಎಲ್ಲ ನಾಗರಿಕರಿಗೆ ಒದಗಿಸಿದಂತೆ ಇವರಿಗೆ ಕೂಡ ಮೂಲಭೂತ ಹಕ್ಕುಗಳನ್ನು ಒದಗಿಸಿಕೊಡಬೇಕು ಎನ್ನುವುದೇ ಈ ಸಂಶೋಧಕಳ ಆಸೆ. ಜನರು ಕೂಡ ತಮ್ಮ ಹಕ್ಕುಗಳನ್ನು ಪಡೆಯವಲ್ಲಿ ಮುಂದೆ ಬರಬೇಕಾಗಿದೆ ಅಂದಾಗ ಮಾತ್ರ ಅವರ ಸಮಸ್ಯೆಗಳನ್ನು ನಿವಾರಿಸಿಕೊಳ್ಳಬಹುದು. ಇಲ್ಲಿನ ಎಷ್ಟೋ ನಿವಾಸಿಗಳಿಗೆ ಮನೆಗಳೇ ಇಲ್ಲ. ಇನ್ನು ಶೌಚಾಲಯದ ವಿಷಯಬಂದರೆ ಶೋಚನೀಯವೆನಿಸುತ್ತದೆ. ಇನ್ನು ಇವರ ಬದುಕು ಅತಂತ್ರ ಸ್ಥಿತಿಯಲ್ಲಿ ಮುಂದೆಸಾಗಿದೆ. ಈ ಸಮಸ್ಯೆಗಳಿಗೆ ಒಂದೇ ಪರಿಹಾರ. ಸೇತುವೆ ಸಂಪರ್ಕ ಮತ್ತು ವಾಹನಗಳ ಸೌಲಭ್ಯ.

## ಸ್ಥಳಾಂತರ ಮತ್ತು ಪುನರ್ವಸತಿ ಸಮಸ್ಯೆಗಳು

ಸ್ಥಳಾಂತರವೆಂದರೆ ತಮ್ಮ ಮೂಲ ಮನೆ, ಆಸ್ತಿ, ಉದ್ಯೋಗಗಳನ್ನು ತೊರೆದು ಪರಿಚಯವಿಲ್ಲದ ಬೇರೆ ವಾಸಸ್ಥಳ ಮತ್ತು ಸಂಬಂಧಗಳನ್ನು ಹೊಂದುವದು. ಭಾವನಾತ್ಮಕವಾಗಿ ಸುಲಭವಲ್ಲ. ಜನಪದ ಸಮುದಾಯಗಳು ಅತಿ ಭಾವನಾತ್ಮಕವಾಗಿರುತ್ತವೆ. ಆದರೆ ಪ್ರಕೃತಿಯ ವಿಕೋಪದಿಂದಲೋ ಪ್ರವಾಹದಿಂದಲೋ ಸೌಲಭ್ಯಗಳ ಸಮಸ್ಯೆಗಳಿಂದಲೋ ಸಮಾಜ ಸಂಪರ್ಕ ಸಮಸ್ಯೆಯಿಂದಲೋ ಸ್ಥಳಾಂತರ ಮತ್ತು ಪುನರ್ವಸತಿ ಅನಿವಾರ್ಯ. ಪುನರ್ವಸತಿ ಎಂದರೇ ಪುನಶ್ಚೇತನವನ್ನು ಪಡೆಯಲು ಒದಗಿಸುವ ಮರುವಸತಿ.

ಸ್ಥಳಾಂತರಗಳಿಂದ ಜನರ ಸಾಮಾಜಿಕ ಮತ್ತು ಆರ್ಥಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳ ಮೇಲೆ ದುಷ್ಪರಿಣಾಮ ಕಾಣುತ್ತದೆ. ಗ್ರಾಮೀಣ ಜನರು, ಪರಿಶಿಷ್ಟ ಸಮುದಾಯ, ಪರಿಶಿಷ್ಟ ಪಂಗಡ, ಆರ್ಥಿಕವಾಗಿ ಹಿಂದುಳಿದವರು, ಭೂರಹಿತರು, ನಿರಾಶ್ರಿತರಾಗಿ ತಮ್ಮದೆ ಆದ ಅನೇಕ ಸಮಸ್ಯೆಗಳನ್ನು ಎದುರಿಸುವುದನ್ನು ಕಾಣುತ್ತೇವೆ. ಸ್ಥಳಾಂತರದಿಂದ ಬುಡಕಟ್ಟುಗಳು ಅಧಿಕಾರ ಇಲ್ಲದವರಾಗಿರುತ್ತಾರೆ. ದೈಹಿಕ, ಮಾನಸಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಣಾಮಗಳನ್ನು ಅವಲೋಕಿಸಿದ್ದಾರೆ. ಸ್ಥಳಾಂತರಗಳಿಂದ ತಮ್ಮ ಆಸ್ತಿ ಕಳೆದುಕೊಳ್ಳುವ ಬಗೆಗೆ ದುಃಖ, ಕರಾಳ ಭವಿಷ್ಯ ಮತ್ತು ಸ್ಥಳಾಂತರ ಅವಧಿಯಲ್ಲಿಯ ಆಹಾರದ ಕೊರತೆ, ಆದಾಯದಲ್ಲಿ ಇಳಿಕೆ ಕಾರಣ, ರೋಗಗಳು, ಸಾವುಗಳ ಪ್ರಮಾಣ ಹೆಚ್ಚಾಗುತ್ತವೆ. ಸಾಂಸ್ಕೃತಿಕ ಚಟುವಟಿಕೆಗಳು ಕಡಿಮೆಯಾಗುತ್ತವೆ. ಸಮುದಾಯಗಳು ಸಂಕಷ್ಟದಲ್ಲಿ ನಂಬಿಕೆ ಕಳೆದುಕೊಳ್ಳುವ ಸಾಧ್ಯತೆಗಳಿರುತ್ತವೆ.

### ಪುನರ್ವಸತಿ

ಸ್ಥಾಳಂತರದಿಂದ ಜನರ ಮೇಲಾಗುವ ಮೇಲಿನ ಎಲ್ಲಾ ಅಂಶಗಳನ್ನು ಗಮನಹರಿಸಿ ಯೋಗ್ಯ ಪುನರ್ವಸತಿ ಒದಗಿಸಬೇಕು. ಪುನರ್ವಸತಿ ಎಂದರೇ **ಆಕ್ಸ್‌ಫರ್ಡ್** ನಿಘಂಟಿನ ಪ್ರಕಾರ 'ಪೂರ್ವದ ಸ್ಥಿತಿಗೆ ಮರಳುವಂತೆ ಮಾಡುವುದು'. **ಛೇಂಬರ್ಸ್** ನಿಘಂಟಿನಲ್ಲಿ 'ಸ್ಥಾನಮಾನ ಹಕ್ಕು ಮತ್ತು ಸೌಲಭ್ಯಗಳನ್ನು ಮುಂಚಿನ ಸ್ಥಿತಿಯಲ್ಲಿರುವಂತೆ ಒದಗಿಸುವುದು' ಎಂದು ತಿಳಿಸಿದೆ.

ಪುನರ್ವಸತಿ ಹಕ್ಕು ಎಂದು ಪರಿಗಣಿಸುವ ಕಾನೂನಿನ ಕೊರತೆ ಇದೆ ಎಂದು ವಿದ್ವಾಂಸರ ಅಭಿಪ್ರಾಯ. ಪುನರ್ವಸತಿ ಸ್ಥಳಗಳನ್ನು ಆಯ್ಕೆ ಮಾಡುವಲ್ಲಿ ಜನರ ಅಭಿಪ್ರಾಯ ಸಂಗ್ರಹಿಸದೇ ಇರುವುದು ಸರ್ವೆ ಸಾಮಾನ್ಯ. ಜನ–ಜಾನುವಾರುಗಳು ಮರಣ ಹೊಂದುವುದು, ಸಹಸ್ರಾರು ಎಕರೆ ಭೂಮಿ ಜಲಾವೃತಗೊಳ್ಳುವುದು, ಪ್ರವಾಹದ ಸಂದರ್ಭದಲ್ಲಿ ಮನೆಮಠ ಬಿಟ್ಟು ಜನರು ಸುರಕ್ಷಿತ ಸ್ಥಳಕ್ಕೆ ಬಂದು ಇರುವುದು, ಮತ್ತೆ ಹೋಗುವುದು ಇವು ನಡುಗಡ್ಡೆ ಸಮುದಾಯಗಳಿಗೆ

ತಪ್ಪದ ಸಮಸ್ಯೆಗಳು. ಇದರಿಂದಾಗಿ ಸರಕಾರಕ್ಕೆ ಸಾಕಷ್ಟು ಹಣವನ್ನು ಪರಿಹಾರಕ್ಕಾಗಿ ವೆಚ್ಚ ಮಾಡುವ ಅನಿವಾರ್ಯತೆ ಉಂಟಾಗುತ್ತದೆ. ಸರಕಾರದ ಖರ್ಚುಗಳು ಬಕಾಸುರನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯಂತೆ ಆಗುತ್ತವೆ. ನಷ್ಟದ ಪ್ರಮಾಣ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತದೆ. ಸಮುದಾಯಗಳ ಜನಸಂಖ್ಯೆ ಕೂಡಾ ಹೆಚ್ಚುತ್ತದೆ. ಯೋಜನಾ ಆಯೋಗ ಪ್ರತಿ ವರ್ಷ ಪರಿಹಾರ ಹಣ ಅಥವ ಅಪಾರ ಸಾಮಗ್ರಿ ಒದಗಿಸುವ ಬದಲಾಗಿ ಶಾಶ್ವತ ಪುನರ್‌ವಸತಿ ಒದಗಿಸುವುದು ಒಳ್ಳೆಯ ಕೆಲಸ.

ಸ್ಥಳಾಂತರ ಮತ್ತು ಪುನರ್ವಸತಿಗಳು ಸರಕಾರದ ಪ್ರಮುಖ ಕ್ರಮಗಳು .ಜನರ ಅಭಿಪ್ರಾಯಗಳು ಹಾಗೂ ಗ್ರಾಮದ ನಾಯಕರ ಪಾತ್ರ ಅಷ್ಟೆ ಮುಖ್ಯವಾಗಿ ಬೇಕಾಗುತ್ತದೆ. ಪ್ರವಾಹದಿಂದ ನದಿ ದಡ ಕೊಚ್ಚಿರುವುದು, ಹಳ್ಳಗಳ ಎದುರು ಪ್ರವಾಸದಿಂದ ಜಮೀನುಗಳು ಕೊಚ್ಚಿ ಹೋಗಿರುವುದು, ನದಿ ದಡಗಳಲ್ಲಿರುವ ಕೃಷಿ ಪಂಪ್‌ಸೆಟ್‌ಗಳಿಗೆ ಹಾನಿಯಾಗುವುದು. ಪ್ರವಾಹಗಳ ಕಾರಣ ಜನರು ಶುದ್ಧ ಕುಡಿಯುವ ನೀರಿನ ಸಮಸ್ಯೆ ಎದುರಿಸುತ್ತಿದ್ದಾರೆ. ಸರಕಾರ ಶುದ್ಧ ಕುಡಿಯುವ ನೀರಿಗೆ ಯಾವುದೇ ಕ್ರಮಕೈಗೊಳ್ಳದಿರುವುದು, ಶುದ್ಧ ಕುಡಿಯುವ ನೀರಿಗಾಗಿ ಸರಕಾರವನ್ನು ಒತ್ತಾಯಿಸದೇ ಇರುವುದು, ಸರಕಾರ ಪ್ರವಾಹದ ಸಮಯದಲ್ಲಿ ಯಾಂತ್ರಿಕ ದೋಣಿಗಳ ವ್ಯವಸ್ಥೆ ಮಾಡುತ್ತಿರುವುದು ಇವುಗಳ ಬದಲಾಗಿ ಗಡ್ಡೆಗಳಿಗೆ ಸೇತುವೆಗಳನ್ನು ನಿರ್ಮಿಸುವುದರಿಂದ ಪರಿಹಾರ ಕಂಡುಕೊಳ್ಳಬಹುದು. ಪ್ರವಾಹದಿಂದ ಜಮೀನುಗಳಿಗೆ ಮತ್ತು ಮನೆಗಳಿಗೆ ಹಾನಿಯಾಗುವುದನ್ನು ಕಾಣಬಹುದು. ಪ್ರವಾಹದಿಂದ ಬಾಧಿತವಾದ ಕುಟುಂಬಗಳಿಗೆ ಸರ್ಕಾರದ ವಿವಿಧ ಇಲಾಖೆಯಲ್ಲಿ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡಲು ಮೀಸಲಾತಿ ಒದಗಿಸುವ ಪ್ರಮಾಣ ಪತ್ರಗಳನ್ನು ಕೆಲವೊಂದು ಕುಟುಂಬಗಳಿಗೆ ಮಾತ್ರ ನೀಡಿದೆ. ನದಿಯ ದಡದಲ್ಲಿರುವ ನಡುಗಡ್ಡೆಗಳು ಪ್ರವಾಹದಿಂದ ಬಾಧಿತವಾಗುವ ಜಮೀನುಗಳನ್ನು ಹೊಂದಿರುವ ಕುಟುಂಬಗಳಿಗೆ ಮಾತ್ರ ಈ ಸೌಲಭ್ಯವನ್ನು ಸರಕಾರ ನೀಡಿರುತ್ತದೆ. ಆದರೆ ಈ ಅವಕಾಶ ನಡುಗಡ್ಡೆಗಳ ಸಮುದಾಯಗಳು ಉಪಯೋಗಿಸಿಕೊಂಡಿಲ್ಲ ಎಂದು ಹೇಳುತ್ತಾರೆ.

ಸರಕಾರಕ್ಕೆ ಮತ್ತು ಜನಪ್ರತಿನಿಧಿಗಳಿಗೆ ಸ್ಥಳಾಂತರದ ಕುರಿತು ಜನರು ತಮ್ಮ ವಿಚಾರಗಳನ್ನು ತಿಳಿಸಬೇಕು. ಪುನರ್ವಸತಿ ಸ್ಥಳಗಳನ್ನು ಆಯ್ಕೆ ಮಾಡುವಲ್ಲಿ ಜನರ ಅಭಿಪ್ರಾಯಗಳನ್ನು ಸಂಗ್ರಹಿಸುವದಿಲ್ಲವೆಂದು **ಕೊಠಾರಿ**ಯವರು ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ. ಪ್ರವಾಹ ಪೀಡಿತ ನಡುಗಡ್ಡೆಗಳ ಮನೆಗಳ ಮೌಲ್ಯಮಾಪನ ಕಾರ್ಯ ಪ್ರಗತಿಯಲ್ಲಿದೆ. ಉದ್ದ ಅಗಲವಾಗಿ ಮನೆಗಳನ್ನು ನಿರ್ಮಿಸಬೇಕಾಗುತ್ತದೆ. ಯಾಕೆಂದರೆ ಜನಪದರಿಂದ ಸ್ವಲ್ಪ ದೊಡ್ಡದಾದ ಮನೆಬೇಕಾಗುತ್ತದೆ. ಆದರೆ ಸರಕಾರ ಗಂಡಹೆಂಡತಿ ವಾಸಿಸುವಷ್ಟು ಕೊಠಡಿಗಳ ನಿರ್ಮಾಣ ಮಾಡುತ್ತದೆ. ಇದರಿಂದ ಸಮುದಾಯಗಳು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಮತ್ತು ಕಳಪೆ ಮನೆಗಳನ್ನು ನಿರ್ಮಿಸಿಕೊಡುತ್ತದೆ. ಆಧುನಿಕ ಜಗತ್ತಿನಲ್ಲಿ ಭ್ರಷ್ಟಾಚಾರ ಒಂದು ಪದ್ಧತಿಯಾಗಿ ಸಾಮಾಜಿಕ ಮನ್ನಣೆ ಪಡೆದು ನಿಧಾನವಾಗಿ,

ಅನಿವಾರ್ಯದ ಚಟುವಟಿಕೆಯಾಗಿ, ಒಂದು ಹಕ್ಕಿನ ರೂಪವಾಗಿ ಸ್ವಾಭಾವಿಕ ಚಟುವಟಿಕೆಯಾಗಿದೆ. ಭ್ರಷ್ಟಾಚಾರವೆಂದರೆ ಕೇವಲ ಲಂಚ ಸ್ವೀಕರಿಸುವುದು ಮಾತ್ರವಾಗಿರದೇ ಕೆಲಸಕ್ಕಾಗಿ ಹಣ ಪಡೆಯುವುದು ಶಾಸನ ಬಾಹಿರ ಕಾರ್ಯಗಳನ್ನು ಮಾಡುವುದು, ಮಾಡಿದ ಕಾರ್ಯಕ್ಕೆ ಅತಿ ಹೆಚ್ಚಿನ ಸಂಭಾವನೆ ಕೇಳುವುದು, ಅದರಲ್ಲೂ ಸ್ಥಳಾಂತರ, ಸರಕಾರದಿಂದ ಪರಿಹಾರವನ್ನು ಪಡೆದುಕೊಳ್ಳುವಾಗ ಇದರ ತೀವ್ರತೆ ಹೆಚ್ಚಾಗಿರುತ್ತದೆ. ಇಲಾಖೆಯಲ್ಲಿನ ಲಂಚಗುಳಿತನ ಸ್ಥಳಾಂತರಗೊಂಡ ಸಮುದಾಯಗಳ ದುಃಖಕ್ಕೆ ಮತ್ತೊಂದು ಕಾರಣವಾಗುತ್ತದೆ.

ನೈಸರ್ಗಿಕ ವಿಕೋಪಗಳು ಸ್ಥಾಪನ ಸ್ಥಳಾಂತರಗಳಿಗೆ ಪರಿಹಾರ ಪುನರ್ವಸತಿ ಒದಗಿಸುವುದು ಸರಕಾರದ ಆದ್ಯಕರ್ತವ್ಯ. ಸ್ಥಳಾಂತರಗೊಂಡ ಜನರಿಗೆ ಪರಿಹಾರಗಳನ್ನು ಹಣದ ರೂಪದಲ್ಲಿ ನೀಡುವುದು ಸರಿಯಲ್ಲ. ಪರಿಹಾರ ಹಣದಿಂದ ಯಾವುದೇ ಆಸ್ತಿ ಹೊಂದಲು ಸಾಧ್ಯವಿಲ್ಲವೆಂದು ತಿಳಿಸಿದ್ದಾರೆ. ತಮ್ಮ ನೆಲೆಯನ್ನು ಬಿಟ್ಟುಬಂದ ಸಮುದಾಯಗಳಿಗೆ ಸೂಕ್ತನೆಲೆಯಲ್ಲಿ ಕ್ರಮವನ್ನು ಒದಗಿಸಬೇಕು.

ನಡುಗಡ್ಡೆಗಳಿಗೆ ಸಂಬಂಧಿಸಿದ ಗ್ರಾಮಗಳಲ್ಲಿ ನಾಯಕರಿಗೆ ಹೆಚ್ಚಿನ ಗೌರವ ಆದರಗಳು ಕಂಡುಬರುತ್ತವೆ. ಈ ನಾಯಕರಿಗೆ ನಡುಗಡ್ಡೆಗಳಿಗೆ ಸೌಲಭ್ಯಗಳನ್ನು ಕಲ್ಪಿಸಿಕೊಡುವುದು ಮಹತ್ವದ ಕಾರ್ಯವಾಗಿದೆ. ಪಕ್ಷ ರಾಜಕೀಯ ಪ್ರವೇಶ ಮಾಡಿರುವುದರಿಂದ ನಾಯಕರುಗಳ ಸಂಖ್ಯೆ ಹೆಚ್ಚುತ್ತಿದೆ. ನಿಸ್ವಾರ್ಥದಿಂದ ಗಡ್ಡೆಗಳ ಜನತೆ ಸಲುವಾಗಿ ಕಾರ್ಯನಿರ್ವಹಿಸುವವರ ಸಂಖ್ಯೆ ಕಡಿಮೆ ಇರುವುದನ್ನು ಕಾಣುತ್ತೇವೆ. ಪಕ್ಷಾತೀತ, ಧರ್ಮಾತೀತ ನಾಯಕರುಗಳ ಕೊರತೆ ಎದ್ದು ಕಾಣುತ್ತಿದೆ. ಯಾವುದೇ ಕಾರ್ಯ ಮಾಡಬೇಕಾದರೆ ಅದರಿಂದ ತಮಗೇನು ಲಾಭವೆಂದು ವಿಚಾರಿಸುವವರ ಸಂಖ್ಯೆ ಹೆಚ್ಚುತ್ತದೆ. ಈ ವ್ಯಕ್ತಿ ಅಧಿಕಾರಕ್ಕೆ ಬಂದರೂ ಲಾಭದ ಕೆಲಸವನ್ನು ಬಯಸುತ್ತಾರೆ. ಈ ನಡುಗಡ್ಡೆಗಳ ಜನರಿಂದ ನಮಗೆಷ್ಟು ಮತಗಳೆಂಬ ಆಶೆಯನ್ನು ಹೊಂದಿರುತ್ತಾರೆ. ಸಣ್ಣ ಸಣ್ಣ ಗಡ್ಡೆಗಳು ಇರುವದರಿಂದ ಇದರಿಂದ ನಮಗೇನು ಲಾಭ ಎನ್ನುವಷ್ಟು ಇತ್ತೀಚಿನ ರಾಜಕೀಯ ವಿಚಾರಮಾಡುತ್ತದೆ. ಆ ಕಾರಣದಿಂದ ಈ ನಡುಗಡ್ಡೆಗಳ ಪರಿಸ್ಥಿತಿ ಹಾಗೆ ಉಳಿದುಕೊಂಡು ಬಂದಿದೆ. ಇದರಿಂದ ಸಮುದಾಯದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದು ಅಸಾಧ್ಯವಾಗುತ್ತದೆ.

ಪ್ರತಿಯೊಂದು ಸಮುದಾಯವು ತಮ್ಮದೇ ಆದ ನಾಯಕರುಗಳನ್ನು ಹೊಂದಿರುತ್ತದೆ. ಅವರು ತಮ್ಮ ಸಮುದಾಯಗಳ ಹಿತಾಸಕ್ತಿ ಕಾಪಾಡಿಕೊಳ್ಳುತ್ತಾರೆ. ಸಮುದಾಯಗಳು ತಮ್ಮ ನಾಯಕರುಗಳನ್ನು ಹೊಂದಿದ್ದರೆ ಅವರ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದು ಎಂದು ಹೇಳುತ್ತಾರೆ. ಈ ಮಾತನ್ನು ಕೇಳಿದಾಗ ಎಲ್ಲರಿಗೂ ನಿರೀಕ್ಷೆ ಇರುತ್ತದೆ. ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ನೀಲಕಂಠ ರಾಯನಗಡ್ಡೆಯಲ್ಲಿ ಬೇಡ ಸಮುದಾಯದ ಜನರೇ ವಾಸವಾಗಿದ್ದಾರೆ. ಬೇರೆ ಸಮುದಾಯಗಳು

ಇಲ್ಲ. ಇಲ್ಲಿಯ ರಾಜಕೀಯ ತಲತಲಾಂತರದಿಂದ ಬೇಡ ನಾಯಕರ ರಾಜಕೀಯ. ಆದರೂ ಜನರ ಸಮಸ್ಯೆಗಳಿಗೆ ಯಾರು ಪರಿಹಾರ ಕೊಟ್ಟಿಲ್ಲ. ನಮ್ಮವರು ಅನ್ನುವ ಭಾವನೆ ಬಂದಿಲ್ಲವೋ ಅಥವಾ ಇವರಿಂದ ನಮಗೆಷ್ಟು ಲಾಭ ಅಂತನೋ. ಯಾರೂ ಇವರ ಸಮಸ್ಯೆಗೆ ಪರಿಹಾರ ಕೊಟ್ಟಿಲ್ಲ. ಇವರಿಗೆ ಇರುವ ಸಮಸ್ಯೆ ಏನೆಂದರೇ, ನದಿಯನ್ನು ದಾಟಿಹೋಗಿ ಬೇರೆ ಊರುಗಳಿಗೆ ಹೋಗಬೇಕು. ಯಾವುದೇ ದಾರಿ ಮಾರ್ಗವಿಲ್ಲ. ನದಿ ಪ್ರವಾಹ ಬಂದಾಗ ೩-೪ ತಿಂಗಳ ಕಾಲ ಗಡ್ಡೆಯಲ್ಲಿ ಇರಬೇಕು. ಈ ಸಮಸ್ಯೆಯಿಂದ ಅವರು ಅನೇಕ ಸಮಸ್ಯೆಗಳಿಂದ ಸೌಲಭ್ಯ ವಂಚಿತರಾಗಿದ್ದಾರೆ. ಅವರಿಗೆ ಈ ಸಮಸ್ಯೆಗೆ ಪರಿಹಾರ ನದಿಗೆ ಒಂದು ಸೇತುವೆ ಬೇಕೆಂದು ಕಾಲಾಂತರದಿಂದ ಕೇಳುತ್ತಾ ಬಂದಿದ್ದರು. ಅವರ ಸ್ಪಂದನೆಗೆ ಯಾರು ಕರೆಕೊಡುತ್ತಿಲ್ಲ. ಪ್ರವಾಹ ಬಂದಾಗ ಮಾತ್ರ ಸರಕಾರ ೩ ತಿಂಗಳ ಕಾಲ ಅಷ್ಟೆ ಅವರಿಗೆ ವ್ಯವಸ್ಥೆ ಮಾಡುತ್ತದೆ. ಮತ್ತೆ ಅದೇ ಪರಿಸ್ಥಿತಿ. ನಮ್ಮ ಸಮಸ್ಯೆಗೆ ಪರಿಹಾರ ಸಿಗಬೇಕಾದರೇ ನಮ್ಮ ಸಮುದಾಯದ ನಾಯಕರಾಗಿರಲಿ, ಯಾವುದೇ ಸಮುದಾಯದ ನಾಯಕರೇ ಆಗಲಿ ಸಮಸ್ಯೆಗಳಿಗೆ ಸ್ಪಂದಿಸುವ ನಾಯಕ ಬಂದಾಗ ಮಾತ್ರ ಪರಿಹಾರ ಸಿಗುವುದು. ಇವರು ಸುಮ್ಮನೆ ಕೂಡದೆ, ತಮ್ಮ ಬೇಡಿಕೆಗಳನ್ನು ನಾಯಕರಿಗೆ ಸಲ್ಲಿಸಿದರೂ ಯಾವುದೇ ಭರವಸೆ ಸಿಕ್ಕಿಲ್ಲ ಎಂದು ಹೇಳುತ್ತಾರೆ. ಸ್ಥಳಾಂತರ ಮಾಡುತ್ತೇವೆ ಎಂದು ಹೇಳುತ್ತಾರೆ ಅಷ್ಟೆ ಆದರೆ ಸ್ಥಳಾಂತರಕ್ಕೆ ಜನರು ತಮ್ಮ ಗಡ್ಡೆಗಳನ್ನು ಬಿಡಲು ಹಿಂದೇಟು ಹಾಕುತ್ತಾರೆ. ಮೂಲ ವಾಸಸ್ಥಳಗಳನ್ನು ಬಿಟ್ಟು ಹೋಗುವುದು ಮನಸ್ಸಿಗೆ ನೋವುಕೊಡುವ ಸಂಗತಿ ಮತ್ತು ನಮ್ಮ ಪೂರ್ವಿಕರು ವಾಸಿಸಿದ ನೆಲೆಯನ್ನು ನಾವು ಬಿಡುವುದಿಲ್ಲ ಅದರ ಜೊತೆಗೆ ನಮ್ಮ ಆಸ್ತಿ ಪಾಸ್ತಿಯನ್ನು ತೊರೆಯಲು ಸಿದ್ಧವಿಲ್ಲ ಎನ್ನುತ್ತಾರೆ.

ಪ್ರವಾಹದಿಂದ ಬೇಸತ್ತು ಬೇರೆ ಕಡೆ ಸ್ಥಳಾಂತರಗೊಳ್ಳಲು ಬಯಸುತ್ತೀರಾ? ಎಂದು ಕೇಳಿದಾಗ ಸ್ಥಳಾಂತರಗೊಳ್ಳಬಯಸುವುದಿಲ್ಲ ಎನ್ನುತ್ತಾರೆ. ನಮಗೆ ಸೌಲಭ್ಯ ಬೇಕು ಎನ್ನುತ್ತಾರೆ. ಸೌಲಭ್ಯದಿಂದ ವಂಚಿತರಾಗಿದ್ದೇವೆ ಅದನ್ನು ನಮಗೆ ಒದಗಿಸಬೇಕೆನ್ನುತ್ತಾರೆ ಮಾಹಿತಿದಾರರು. ಸಂಶಯ ವ್ಯಕ್ತಪಡಿಸಿದರು. ಬೇರೆ ಕಡೆ ನಾವು ಹ್ಯಾಂಗ ನೆಮ್ಮದಿಯಿಂದ ಇರಲು ಸಾಧ್ಯ ಎಂದು ಪ್ರತಿಕ್ರಿಯಿಸಿದರು. ನಡುಗಡ್ಡೆಗಳ ಸಮುದಾಯಗಳು ಅವಲಂಬಿತವಾಗಿರುವುದು ಪಶುಸಂಗೋಪನೆ ಮತ್ತು ಕೃಷಿ. ಹೀಗಾಗಿ ನಾವು ಅಲ್ಲಿ ಹೇಗೆ ಕಟ್ಟಳೆಗಳ ಬಂದನದಲ್ಲಿ ಇರಬೇಕು ಎನ್ನುತ್ತಾರೆ. ಇಲ್ಲಿ ನಾವು ಸ್ವತಂತ್ರರು ಎಂದು ಹೇಳುತ್ತಾರೆ. ಹೊರ ಪ್ರಪಂಚದ ಅನುಭವ ಇಲ್ಲದಿದ್ದರು ನಮ್ಮ ಬದುಕು, ಸಂಪ್ರದಾಯ, ನಮಗೆ ನೆಮ್ಮದಿ ಕೊಡುತ್ತದೆ ಎಂದು ಹೇಳುತ್ತಾರೆ.

ಭಾರತೀಯ ಸಾಮಾಜಿಕ ಜೀವನದಲ್ಲಿ ಸಮುದಾಯ ಪ್ರಮುಖವಾದ ಪಾತ್ರ ವಹಿಸುತ್ತದೆ. ಆರ್ಥಿಕ, ರಾಜಕೀಯ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಸಮುದಾಯದ ಪ್ರಭಾವವನ್ನು ಕಾಣುತ್ತೇವೆ. ಗ್ರಾಮೀಣ ಪ್ರದೇಶದಲ್ಲಿ ಸಮುದಾಯ ಆಧಾರಿತ ಸ್ಥಾನಮಾನಗಳ ಸಂಘಟನೆಗಳಿರುತ್ತವೆ. ಆದರೆ

ಇಲ್ಲಿ ನಡುಗಡ್ಡೆಗಳಲ್ಲಿ ಯಾವ ಸಮುದಾಯ ಸಂಘಟನೆಗಳು ಇಲ್ಲ. ಎಲ್ಲಾ ಸಮುದಾಯದವರು ಒಂದೇ ಸಮುದಾಯದಂತೆ ಜೀವನ ಮಾಡುತ್ತೇವೆ ಎಂದು ನೀಲಕಂಠರಾಯನಗಡ್ಡೆ ಬಿಟ್ಟು ಉಳಿದ ನಡುಗಡ್ಡೆ ಸಮುದಾಯಗಳು ಹೇಳುತ್ತಿವೆ. ಈ ನಡುಗಡ್ಡೆ ಸಮುದಾಯಗಳಲ್ಲಿ ಸಾಮಾಜಿಕ ಸಂಬಂಧಗಳು ಪ್ರಮುಖ ಪಾತ್ರವಹಿಸುತ್ತವೆ. ವಿವಿಧ ಸಮುದಾಯ ಉದ್ಯೋಗ ನಿರ್ವಹಿಸುವ ಜನರಲ್ಲಿ ಒಳ್ಳೆಯ ಸಂಬಂಧಗಳಿರುತ್ತವೆ. ವೈವಾಹಿಕ ಸಂಬಂಧಗಳು ಗಡ್ಡೆಗಳ ಇಲ್ಲವೆ ಸಮೀಪದ ಗ್ರಾಮಗಳ ಜೊತೆ ಇರುತ್ತವೆ.

ಮಾಹಿತಿದಾರರನ್ನು ಪರಿಹಾರ ಹೇಗಿರಬೇಕೆಂಬುದನ್ನು ಪ್ರಶ್ನಿಸಿದಾಗ ಪ್ರವಾಹ ಬಂದಾಗ ಮನೆಗಳು ಮುಳುಗಡೆಯಾಗಲಿರುವ ಮನೆಗಳಿಗೆ ಹಣಕಾಸಿನ ಪರಿಹಾರ ಕೊಡಬೇಕು. ಪ್ರವಾಹದಿಂದ ಭೂಮಿ ನೀರಿನ ಹೊಂಡಗಳಾಗಿ ಫಲವತ್ತತೆ ಕಳೆದುಕೊಳ್ಳುತ್ತಿದೆ. ಅದಕ್ಕೆ ಪ್ರತಿವರ್ಷ ಪರಿಹಾರಬೇಕು.

ಆದಿವಾಸಿಗಳಿಗೆ ಅನುಕೂಲವಾಗುವ ಬದಲಾವಣೆ ಬೇಕಿದೆ. ಯೋಜನೆಗಳಿಂದಾಗುವ ಲಾಭಾಂಶಗಳು ಅವರಿಗೆ ದೊರಕಬೇಕಿದೆ. ಈ ನಡುಗಡ್ಡೆಗಳ ಸಮಸ್ಯೆಗಳು

೧. ಸ್ಥಳಾಂತರ ಯೋಜನೆಯ ಪರಿಚಯ ಪಡೆಯದಿರುವುದು.
೨. ಸಮುದಾಯ ನಾಯಕರುಗಳ ಕೊರತೆ.
೩. ಸರಕಾರ, ಅಧಿಕಾರಿಗಳು ನಡುಗಡ್ಡೆ ಸಮುದಾಯಗಳೊಂದಿಗೆ ಸವಿಸ್ತಾರ ಚರ್ಚೆ ನಡೆಸದಿರುವುದು.
೪. ಶಾಶ್ವತ ಪರಿಹಾರ ದೊರಕದಿರುವುದು.

**ನಡುಗಡ್ಡೆಗಳ ಪ್ರವಾಹ ಸಾಮಾಜಿಕ ಸಮಸ್ಯೆಗಳು**

ಪ್ರವಾಹ ಸಾಮಾಜಿಕ ಜೀವನ ಮೇಲೆ ಪರಿಣಾಮ ಬೀರುತ್ತದೆ. ತಿಂಗಳುಗಟ್ಟಲೆ ಗಡ್ಡೆ ಬಿಡುವ ಪರಿಸ್ಥಿತಿ ಬರುತ್ತದೆ. ತಮ್ಮ ಅಂತಸ್ತು ಸ್ಥಾನಮಾನಗಳನ್ನು ಮರೆತು ಸರಕಾರ ನಿರ್ಮಿಸಿದ ಶೆಡ್‌ಗಳಲ್ಲಿ ವಾಸಿಸಬೇಕು. ಎಲ್ಲಿಯೇ ವಾಸ್ತವ್ಯ ಮಾಡಿದರೂ ಯಾರೂ ನೆಮ್ಮದಿಯಿಂದ ಇರಲು ಸಾಧ್ಯವಿಲ್ಲ. ಮಹಿಳೆಯರು ಮಕ್ಕಳು ಕುಟುಂಬದ ಹಿರಿಯರು ಪ್ರವಾಹದಿಂದ ತೊಂದರೆಗೊಳಗಾಗ ಬೇಕಾಗುತ್ತದೆ. ಜಮೀನುಗಳ ಫಲವತ್ತತೆ ಕುಸಿಯುತ್ತಿರುವುದು. ವೈವಾಹಿಕ ಸಂಬಂಧಗಳ ಮೇಲೆ ಪರಿಣಾಮ ಬೀರುತ್ತದೆ. ವೈದ್ಯಕೀಯ ಸೇವೆ ವಂಚಿತರಾಗುತ್ತಾರೆ ಮತ್ತು ಪ್ರವಾಹದಿಂದ ಮಕ್ಕಳ ಶಿಕ್ಷಣಕ್ಕೆ ತೊಂದರೆಯಾಗುತ್ತದೆ. ಸರಕಾರ ಮಕ್ಕಳ ಶಿಕ್ಷಣಕ್ಕೆ ಯಾವುದೇ ಕ್ರಮಕೈಗೊಳ್ಳದಿರುವುದು ನೋವಿನ ಸಂಗತಿ. ಮೂರು ನಾಲ್ಕು ತಿಂಗಳಿಂದ ನಿರುದ್ಯೋಗ ಅನುಭವಿಸುವುದು. ಸರಕಾರ ನಿರುದ್ಯೋಗಕ್ಕೆ ಯಾವುದೇ ಕ್ರಮ ಕೈಗೊಳ್ಳದಿರುವುದು.

**ನಡುಗಡ್ಡೆಗಳು ಮತ್ತು ಪ್ರಸ್ತುತ ಜಗತ್ತು**

ಕೃಷ್ಣಾನದಿ ತೀರದ ನಡುಗಡ್ಡೆಗಳನ್ನು ಪ್ರಸ್ತುತ ಜಗತ್ತಿಗೆ ಹೋಲಿಸಿ ನೋಡುವುದಾದರೆ ಇವತ್ತಿಗೂ ಕೂಡ ಆ ನಡುಗಡ್ಡೆಗಳ ಜೀವನ ಪರಿಸ್ಥಿತಿ ಹಾಗೆ ಉಳಿದಿದೆ. ಯಾವುದರಲ್ಲಿಯೂ ಬದಲಾವಣೆ ಕಂಡಿಲ್ಲ ಎಂದು ಹೇಳಬಹುದು. ಆಧುನಿಕ ಜಗತ್ತು ಎಷ್ಟೇ ಮುಂದುವರಿದರು, ನಡುಗಡ್ಡೆಗಳ ಜನರ ಬದುಕು ಅತಂತ್ರ ಸ್ಥಿತಿಯಲ್ಲಿ ಸಾಗಿದೆ. ಎಲ್ಲಾ ಸರ್ಕಾರದ ಸೌಲಭ್ಯಗಳಿಂದ ವಂಚಿತರಾಗಿ ಈ ದೇಶದ ಪ್ರಜೆಗಳೇ ಅಲ್ಲವೇನೊ ಎಂಬುವಂತೆ ಜೀವನ ಮಾಡುತ್ತಿದ್ದಾರೆ. ಸರ್ಕಾರವು ಕೂಡ ಒಬ್ಬ ಪ್ರಜೆಗೆ ನೀಡಬೇಕಾದ ಯಾವುದೇ ಸೌಲಭ್ಯವನ್ನು ಅವರಿಗೆ ನೀಡಿಲ್ಲ. ಆಧುನಿಕ ಜಗತ್ತಿನಲ್ಲಿ ಎಲ್ಲಾ ಬುಡಕಟ್ಟು ಸಮುದಾಯಗಳು ಸ್ವಲ್ಪಮಟ್ಟಿಗೆ ಬದಲಾವಣೆ ಹೊಂದಿವೆ. ಆದರೆ ಈ ನಡುಗಡ್ಡೆಗಳು ತಾವು ವಾಸಿಸುವ ನಡುಗಡ್ಡೆಗಳಿಗೆ ಹಾದಿಯ ಮಾರ್ಗವಿಲ್ಲದೇ ವಾಹನಗಳ ಸೌಲಭ್ಯವಿಲ್ಲದೇ ಈ ಜನರು ನದಿಯನ್ನು ತೆಪ್ಪದ ಮೂಲಕವೇ ಹಾದು ಹೋಗಬೇಕು. ನಮ್ಮ ಸಮಾಜ ಆಧುನಿಕತೆ ಕಂಡಿದ್ದರು, ಇಲ್ಲಿರುವ ಕೆಲವು ಗಡ್ಡೆಗಳಿಗೆ ಹಾದಿಯ ಮಾರ್ಗವಿಲ್ಲ. ಈಜುವುದರ ಮೂಲಕ ನಡುಗಡ್ಡೆಯನ್ನು ಸೇರುತ್ತಾರೆ. ಇಂತಹ ಗಡ್ಡೆಗಳೆಂದರೆ ನಾರದಗಡ್ಡೆ, ಕುರುವಪುರಗಡ್ಡೆ, ರಾಮಗಡ್ಡೆ, ನೀಲಕಂಠರಾಯನಗಡ್ಡೆ. ಈ ಗಡ್ಡೆಗಳು ಇವತ್ತಿಗೂ ಸಮಾಜಕ್ಕೆ ನಿಲುಕದ ಈ ಜನರ ಬದುಕು ಕಲ್ಪನೆಗೆ ಮೀರಿ ನಿಂತಿದೆ. ಅದರಲ್ಲಿ ಮಕ್ಕಳ ಮತ್ತು ಮಹಿಳೆಯರ ಸ್ಥಿತಿ ಹೀನಾಯವಾಗಿದೆ. ಉದಾ: ಮೊನ್ನೆ ತಾನೇ ನೀಲಕಂಠರಾಯನಗಡ್ಡೆಯ ಮಹಿಳೆಯೊಬ್ಬರು ತೆಪ್ಪ ಇಲ್ಲದ ಸಮಯದಲ್ಲಿ ತಾನೇ ನದಿಯನ್ನು ಈಜಿಕೊಂಡು ಬಂದು ಆಸ್ಪತ್ರೆಯಲ್ಲಿ ಮಗುವಿಗೆ ಜನ್ಮ ನೀಡಿದ್ದಾಳೆ. ಇಂತಹ ಸಂಗತಿ ನೋಡಿದ ಈ ಆಧುನಿಕ ಜಗತ್ತಿನಲ್ಲಿ ಇನ್ನು ಇಂತಹ ಸಮಸ್ಯೆಗಳನ್ನು ಎದುರಿಸುವಂತಹ ಸಮುದಾಯಗಳು ಇವೆ ಎನ್ನುವ ಪ್ರಶ್ನೆ ನಮ್ಮ ಆಧುನಿಕ ಜಗತ್ತಿನ ಸಮುದಾಯಗಳಿಗೆ ಯಕ್ಷ ಪ್ರಶ್ನೆಯಾಗಿ ಕಾಡುತ್ತಿದೆ.

ಬದಲಾವಣೆ ಎನ್ನುವುದು ನಿಸರ್ಗ ನಿಯಮ. ಈ ಗಡ್ಡೆಗಳಲ್ಲಿ ಜನಸಂಖ್ಯೆಯಲ್ಲಿ ಬದಲಾವಣೆಯನ್ನು ಮಾತ್ರ ಕಂಡಿದೆ. ಉಳಿದೆಲ್ಲವು ಹಾಗೇ ಇದೆ. ಹಿಂದೇ ಕೇವಲ ೧೦–೨೦ ಇದ್ದ ಕುಟುಂಬಗಳು, ಈ ದಿನಗಳಲ್ಲಿ ೫೦, ೭೦, ೧೦೦ ಕುಟುಂಬಗಳಾಗಿವೆ. ಸಮಸ್ಯೆಗಳು ಹೆಚ್ಚಾಗುತ್ತಲಿವೆ, ಹೊರತು ಕಡಿಮೆಯಂತು ಇಲ್ಲ. ಇಲ್ಲಿ ಅರಣ್ಯ ಪ್ರದೇಶವು ಹೇರಳವಾಗಿತ್ತು. ಗಿಡ ಮರಗಳ ಪೊಟರೆಗಳಲ್ಲಿ ಕಾಡು ಪ್ರಾಣಿಗಳಿದ್ದವು, ಅಧಿಕವಾಗಿದ್ದವು. ಆದರೆ ಇಂದು ಜನಸಂಖ್ಯೆಯ ಹೆಚ್ಚಳದಿಂದ ಅರಣ್ಯ ಪ್ರದೇಶ ಮಾಯವಾಗುತ್ತಿದೆ. ದಿನದ ಬೇಟೆಯಿಂದ ತುಂಬಿ ತುಳುಕುತ್ತಿದ್ದ ಪ್ರಾಣಿ ಸಂಕುಲ, ಇವತ್ತಿನ ದಿನದಲ್ಲಿ ಅಲ್ಪ ಪ್ರಮಾಣದಲ್ಲಿ ಇರುವುದನ್ನು ಕಾಣಬಹುದು.

ಈ ನಡುಗಡ್ಡೆಗಳಲ್ಲಿ ಇವತ್ತಿಗೂ, ಸಾಕಷ್ಟು ಸಮುದಾಯಗಳು ಗುಡಿಸಲುಗಳಲ್ಲಿ ಬದುಕುತ್ತಿದ್ದಾರೆ. ತಮ್ಮ ಪರಂಪರಾಗತವಾದ ಕೆಲವು ಆಚರಣೆಗಳನ್ನು ಜೀವಂತವಾಗಿ ಉಳಿಸಿಕೊಂಡು ಬಂದಿದ್ದಾರೆ. ತಲೆ ತಲಾಂತರದಿಂದ ಬಂದ ಸಮುದಾಯದ ಕುಲಕಸುಬುಗಳು ಆಧುನಿಕತೆಯ ಪ್ರಭಾವಕ್ಕೆ ಒಳಗಾಗದೇ,

ಬಡಿಗತನ, ಕಮ್ಮಾರಿಕೆ ಕೆಲಸಗಳನ್ನು ಇಂದು ತಮ್ಮ ಪ್ರಾಚೀನ ಉಪಕರಣಗಳಿಂದಲೇ ಮಾಡುತ್ತಾರೆ. ಕೃಷಿಯಲ್ಲಂತೂ ಯಾವ ಆಧುನಿಕ ಉಪಕರಣಗಳನ್ನು ಬಳಸುವುದಿಲ್ಲ. ರೈತರೇ ಕೂಲಿಕಾರರು. ಎಲ್ಲ ಕೃಷಿ ಕೆಲಸಗಳನ್ನು ಮಾಡುತ್ತಾರೆ. ಇನ್ನು ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಎತ್ತಿನ ಬಂಡಿಗಳನ್ನು ತಮ್ಮ ಹೊಲ, ಮನೆಗೆ, ಕಾಳು ಕಡ್ಡಿಗಳನ್ನು ತರಲು ಉಪಯೋಗಿಸುತ್ತಾರೆ. ಆಹಾರ ಪದ್ಧತಿಯಲ್ಲಿ ಕೂಡ ಬದಲಾವಣೆಯನ್ನು ಕಂಡಿಲ್ಲ. ಅದೇ ರೊಟ್ಟಿ, ಪಲ್ಯ, ಕಾಳು, ಜೋಳದ ನುಚ್ಚು, ಸಜ್ಜೆ, ನುಚ್ಚು, ಸಾರು, ಅತಿ ಹೆಚ್ಚು ಊಟ ಮಾಡುತ್ತಾರೆ. "ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ" ಎಂಬಂತೆ ಆಧುನಿಕ ಜಗತ್ತಿನ ಮೋಹಕತೆಗೆ ಜನ ಇನ್ನೂ ಇಲ್ಲಿ ಮರುಳಾಗಿಲ್ಲ ಎಂದು ಕ್ಷೇತ್ರಕಾರ್ಯದಿಂದ ತಿಳಿಯುತ್ತದೆ.

ಮನುಷ್ಯರ ಹುಟ್ಟಿನಿಂದ ಸಾವಿನವರೆಗೆ ಆಚರಣೆಯಲ್ಲಿದ್ದ ಹಲವಾರು ಆಚರಣೆಗಳು ಇಂದಿನ ಸಮಾಜದಲ್ಲಿ ಮಾಯವಾಗುತ್ತಲಿವೆ. ಇಲ್ಲಿ ಸೂಲಗಿತ್ತಿಯರ ಮೂಲಕ ಹೆರಿಗೆ ಮನೆಯಲ್ಲಿಯೇ ಆಗಿ ಮಗುವಿಗೆ ಮತ್ತು ತಾಯಿಗೆ ಆಯಾ ಧರ್ಮಕ್ಕನುಸಾರವಾಗಿ ವಿವಿಧ ಆಚರಣೆಗಳನ್ನು ಮಾಡಲಾಗುತ್ತಿದೆ. ಮಗುವಿನ ಜನನ ಸಮಯದಲ್ಲಿ ಮಾಂಸವನ್ನು ಮನೆಯ ಮುಂಬಾಗಿಲ ಬಲಭಾಗದಲ್ಲಿ ನೆಲಕ್ಕೆ ಹುಗಿದು ಹಾಕುತ್ತಾರೆ. ಈ ಆಚರಣೆ ಇಲ್ಲಿ ಇನ್ನು ಹಾಗೆ ಉಳಿದಿದೆ. ಆಧುನಿಕತೆಯಿಂದ ಹೆರಿಗೆ ಆಸ್ಪತ್ರೆಯಲ್ಲಿ ನಡೆಯುವುದರಿಂದ ಇಂತಹ ಆಚರಣೆ ಇಂದು ನಶಿಸಿ ಹೋಗಿರುವುದನ್ನು ಕಾಣುತ್ತೇವೆ. ಋತುಮತಿಯಾದ ಸಮಯದಲ್ಲಿ ಪ್ರತಿದಿನ ಕೂಡಿಸಿ ಸೋಬಾನ ಪದ ಹಾಡುವ ಆಚರಣೆ ಆಧುನಿಕತೆಯಿಂದ ಅಳಿದು ಹೋಗುತ್ತದೆ. ಆದರೆ ಇಲ್ಲಿ ತನ್ನ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದೆ. ಹಾಗೆಯೇ ಬಾಳ ಸಂಗಾತಿಯ ಆಯ್ಕೆಯಲ್ಲಿ ವರ ಮತ್ತು ಕನ್ಯೆಯರನ್ನು ಗುರುತಿಸಿ ನಿಶ್ಚಯಿಸುವುದು ಹಿರಿಯರ ಕೆಲಸವಾಗಿದೆ. ಇಂದು ಆಧುನಿಕತೆಗೆ ಹಿರಿಯರ ಸಲಹೆ ಸೂಚನೆಗೆ ಯಾವ ಬೆಲೆ ಮತ್ತು ಗೌರವಗಳಿಲ್ಲ ಎನ್ನುವುದನ್ನು ನಾವು ಕಾಣಬಹುದು. ಆದರೆ ನಡುಗಡ್ಡೆಗಳಲ್ಲಿ ಹಿರಿಯರ ಸಲಹೆ ಮತ್ತು ಸೂಚನೆಗಳಿಗೆ ತುಂಬ ಗೌರವವಿರುವುದನ್ನು ನೋಡಬಹುದು.

ಮಗುವಿನ ನಾಮಕರಣದಲ್ಲಿ ಹೆಸರುಗಳನ್ನು ಇಡುವಾಗ ಮನೆಯ ಹಿರಿಯರ ಅಥವಾ ದೇವರ ಹೆಸರು ಇಡುವುದು ಸಂಪ್ರದಾಯವಾಗಿದೆ. ಗಡ್ಡೆಗಳಲ್ಲಿ ನಡೆಯುವ ಉತ್ಸವಗಳಲ್ಲಿ ಗಡ್ಡೆಗಳ ಜನರು ತನು, ಮನ, ಧನದಿಂದ ಪಾಲ್ಗೊಂಡು ಎಲ್ಲಾ ಕೆಲಸ ಕಾರ್ಯಗಳನ್ನು ಭೇದವೆಣಿಸದಂತೆ ಜವಾಬ್ದಾರಿಯಿಂದ ನಿರ್ವಹಿಸುತ್ತಾರೆ. ಇನ್ನೊಬ್ಬರ ಮನೆಯ ನ್ಯಾಯವನ್ನು ತಮ್ಮ ಮನೆಯ ನ್ಯಾಯದಂತೆ ಅದನ್ನು ಹಿರಿಯರು ಬಗೆಹರಿಸುತ್ತಾರೆ. ಅತಿ ಹೆಚ್ಚು ನ್ಯಾಯಗಳನ್ನು ಗಡ್ಡೆಗಳವರು ತಮ್ಮತಮ್ಮಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಪೋಲೀಸ್ ಕಚೇರಿಗೆ ಹೋಗುವುದಿಲ್ಲ ಎಂದು ಸ್ಥಳೀಯರು ಕ್ಷೇತ್ರಕಾರ್ಯಕ್ಕೆ

ಹೋದಾಗ ಹೇಳಿದ್ದುಂಟು. ಇದುವರೆಗೂ ನಮ್ಮ ಗಡ್ಡೆಗಳಲ್ಲಿ ಜಗಳ ತೆಗೆದುಕೊಂಡು ನಾವು ಕಚೇರಿಗೆ ಹೋಗಿಲ್ಲ. ನಾವೇ ಬಗೆಹರಿಸಿಕೊಳ್ಳುತ್ತೇವೆ ಎಂದು ಗಡ್ಡೆಯ ಮುಖ್ಯಸ್ಥರು ತಿಳಿಸಿದರು.

ಈ ಗಡ್ಡೆಗಳಲ್ಲಿ ಇವತ್ತಿಗೂ ನೆಲಮೂಲ ಸಂಸ್ಕೃತಿಯನ್ನು ಗೌರವಿಸಿ ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಹೊರ ಜಗತ್ತಿನಲ್ಲಿ ಎಷ್ಟೊಂದು ವಿಚಿತ್ರ ವಿದೇಶಿಯ ಸಂಸ್ಕೃತಿಗೆ ಜನರು ಮಾರು ಹೋಗುತ್ತಾರೆ. ಆದರೆ ಈ ನಡುಗಡ್ಡೆಗಳಲ್ಲಿ ಆಚರಣೆ ಶೈಲಿ ಬೇರೆ ಬೇರೆ ರೂಪಗಳನ್ನು ಪಡೆದುಕೊಂಡಿಲ್ಲ. ಆಚರಣೆಯ ಉದ್ದೇಶ, ಗುರಿ, ಆಶಯ ಒಂದೇ ಆಗಿದೆ. ಆಚರಣೆಗಳನ್ನು ಆಧುನಿಕತೆಯ ಕಾಲ ತನ್ನೊಳಗೆ ಹಿಡಿದಿಟ್ಟುಕೊಳ್ಳುವ ಸಂದರ್ಭ ಎಂತಹ ಅತ್ಯಾಧುನಿಕತೆಯೇ ಬಂದರು ಇಲ್ಲಿನ ಜನರು ಆಚರಣೆಗಳಿಗೆ, ನಂಬಿಕೆಗಳಿಗೆ ತಲೆಬಾಗಿದಂತಿದೆ. ಭಕ್ತಿ, ನಂಬಿಕೆ ಜನರಲ್ಲಿ ಅಚ್ಚಳಿಯದೇ ಉಳಿದು ಬಂದಿದೆ.

ಅಪಾರವಾದ ಜನಪದ ಸಾಹಿತ್ಯ ಈ ನಡುಗಡ್ಡೆಗಳ ಜನರಲ್ಲಿ ತುಂಬಿದೆ. ಇಂದು ಅದರ ಪ್ರಭಾವ ಕ್ಷೀಣಿಸುತ್ತಿದೆ. ಇಂದಿನ ಆಧುನಿಕತೆಯ ಪ್ರಭಾವದಿಂದ ಎಲೆಕ್ಟ್ರಾನಿಕ್ ಉಪಕರಣಗಳ ಬಳಕೆ ಹೆಚ್ಚಾಗುತ್ತಿದ್ದು ಕಾಲಘಟ್ಟದಲ್ಲಿ ಜನಪದ ಕಥೆ, ಗಾದೆ ಮತ್ತು ಒಗಟುಗಳ ಸ್ಥಾನವನ್ನು ಟಿವಿ, ರೇಡಿಯೋ, ಮೊಬೈಲ್‌ಗಳು ಆಕ್ರಮಿಸಿಕೊಳ್ಳುತ್ತಿವೆ. ಆದರೆ, ನಾನು ಅಧ್ಯಯನಕ್ಕೆ ಒಳಪಡಿಸಿರುವ ಕೆಲವು ನಡುಗಡ್ಡೆಗಳಲ್ಲಿ ವಿದ್ಯುತ್ ಸಂಪರ್ಕವೇ ಇಲ್ಲ. ವಿದ್ಯುತ್ ಸಂಪರ್ಕ ಇಲ್ಲ ಅಂದ ಮೇಲೆ, ಟಿವಿ, ಮೊಬೈಲ್‌ಗಳ ಬಳಕೆ ಅಲ್ಲಿ ಇಲ್ಲ. ಇದು ಕೇಳಿದರೆ ನಿಮಗೆ ಆಶ್ಚರ್ಯವೆನಿಸಬಹುದು. ನಾವು ಕ್ಷೇತ್ರಕಾರ್ಯಕ್ಕೆ ಹೋದಾಗ, ನೀಲಕಂಠರಾಯನ ಗಡ್ಡೆಯಲ್ಲಿ ಪ್ರತಿಯೊಬ್ಬರನ್ನು ಭೇಟಿ ಮಾಡಿದಾಗ, ಯಾರ ಹತ್ತಿರವೂ ಮೊಬೈಲ್ ಇಲ್ಲದನ್ನು ನೋಡಿ ನನಗೆ ಆಶ್ಚರ್ಯವೆನಿಸಿತು. ಈ ಜಗತ್ತಿನಲ್ಲಿ ಬದುಕುವ ಜನರು ಮೊಬೈಲ್ ಇಲ್ಲದ ವ್ಯಕ್ತಿಗಳು ಯಾರು ಇಲ್ಲ, ಒಂದು ದಿನ ಬೇಕಾದರೆ ಉಪವಾಸ ಇರುತ್ತಾರೆ. ಮದುವೆ ಮಾಡಿಕೊಂಡ ಹೆಂಡತಿಯನ್ನು ಬೇಕಾದರೆ ಒಂದು ತಾಸು ಬಿಟ್ಟು ಜೀವನ ಮಾಡುತ್ತಾರೆ. ಆದರೆ ಮೊಬೈಲ್ ಬಿಟ್ಟು ಮಾತ್ರ ಒಂದು ಕ್ಷಣವು ಯಾವ ವ್ಯಕ್ತಿಯು ಇರುವುದಕ್ಕೆ ಇಷ್ಟ ಪಡಲಾರದಂತೆ ಹೊರಜಗತ್ತು ಮುಂದುವರೆದಿದೆ. ಇಂತಹ ಸಂದರ್ಭಗಳಲ್ಲಿ ಈ ನಡುಗಡ್ಡೆಗಳಲ್ಲಿ ಯಾವುದು ಗಮನಕ್ಕೆ ಬರದೇ ತನ್ನ ಜಗತ್ತಿನಲ್ಲಿ ಸೀಮೆ ಎಣ್ಣೆಯ ಬೆಳಕಿನಲ್ಲಿ ಜೀವನ ಮಾಡುತ್ತಿದ್ದಾರೆ. ಇದಕ್ಕೆಲ್ಲ ಕಾರಣ ಶಿಕ್ಷಣ ಪಡೆಯದೇ ಇರುವುದು, ಪ್ರಮುಖ ಕಾರಣವೆಂದು ಹೇಳಬಹುದು. ಬೈಕ್, ಕಾರುಗಳಂತಹ ವಾಹನಗಳನ್ನು ಹೊರಜಗತ್ತಿನ ಜನರು ತಮ್ಮ ಜೀವನಕ್ಕೆ ರೂಢಿಸಿಕೊಂಡಿದ್ದಾರೆ. ನಡುಗಡ್ಡೆಗಳಲ್ಲಿ ಇನ್ನೂ ಕಾಲ್ನಡುಗೆಯೇ ಬೈಕ್, ಕಾರುಗಳಾಗಿವೆ.

ಈ ನಡುಗಡ್ಡೆಗಳ ಜನರ ಜೀವನ ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಮನೆಗಳಲ್ಲಿ ಪಿತೃ ಪ್ರಧಾನತೆಯನ್ನು ಕಾಣಬಹುದು ಅವಿಭಕ್ತ

ಕುಟುಂಬಗಳು ಹೆಚ್ಚಾಗಿರುವುದನ್ನು ಈ ನಡುಗಡ್ಡೆಗಳಲ್ಲಿ ಕಾಣಬಹುದು. ಪ್ರಸ್ತುತ ಪರಿಸರದಲ್ಲಿ ಸಮಾಜದ ಕನಿಷ್ಠ ಘಟಕವಾದ ಕುಟುಂಬವು ಆಧುನಿಕತೆಯ ಸ್ವಾರ್ಥತನ ಪ್ರಭಾವದಿಂದ ತನ್ನ ಸ್ವರೂಪವನ್ನು ಹೊರಗಿನ ಹಳ್ಳಿಗಳು ಬಹುಪಾಲು ಬದಲಾಯಿಸಿಕೊಂಡಿವೆ. ಅವಿಭಕ್ತ ಕುಟುಂಬದ ಸ್ಥಾನದಲ್ಲಿ ವಿಭಕ್ತ ಕುಟುಂಬಗಳು ಸ್ಥಾಪನೆಯಾಗಿವೆ. ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬಗಳು ತುಂಬಾ ವಿರಳವಾಗಿವೆ. ಆಧುನಿಕತೆಯ ಕಾಲಘಟ್ಟದಲ್ಲಿ ಅವಿಭಕ್ತ ಕುಟುಂಬದ ಪರಿಕಲ್ಪನೆಯೇ ಅಪ್ರಸ್ತುತವಾಗಿ ಮಾರ್ಪಟ್ಟಿದೆ. ಆದರೆ ನಡುಗಡ್ಡೆಗಳಲ್ಲಿ ಆ ವಿಭಕ್ತ ಕುಟುಂಬಗಳಲ್ಲೇ ಜೀವನ ಸಾಗಿಸುತ್ತಾರೆ. ಇದು ವಿಶೇಷವಾದ ಸಂಗತಿಯೆಂದು ಹೇಳಬಹುದು.

ಜಾಗತೀಕರಣದ ಮಾಯಾಜಾಲಕ್ಕೆ ಒಳಗಾಗುತ್ತಿರುವ ಇಂದಿನ ಜೀವನದಲ್ಲಿ ಕೃಷಿಯಲ್ಲಿ ಸಾಂಪ್ರದಾಯಿಕ ಕೃಷಿಯನ್ನೇ ಹೆಚ್ಚಾಗಿ ಅನುಸರಿಸುವ ಇಲ್ಲಿನ ಜನರು ಕೃಷಿಯಲ್ಲಿನ ಸಂಪ್ರದಾಯ ಗಳನ್ನೆಲ್ಲಾ ಆಚರಿಸುತ್ತಾ ಬಂದಿದ್ದಾರೆ. ಇಲ್ಲಿ ಕೃಷಿ ಕೆಲಸಗಳನ್ನು ಆಧುನಿಕ ಯಂತ್ರೋಪಕರಣಗಳಿಂದ ಮಾಡದೇ ಇರುವುದರಿಂದ ಇಲ್ಲಿನ ಎಷ್ಟೋ ಜನರು ಭೂಮಿಯಿಲ್ಲದೆ ಕೂಲಿ ಕೆಲಸ ಮಾಡಿ ಜೀವನ ಸಾಗಿಸುತ್ತಾರೆ. ಒಂದು ವೇಳೆ ಯಂತ್ರೋಪಕರಣಗಳನ್ನು ಬಳಸಿ ಕೆಲಸ ಮಾಡುವದೇ ಆಗಿದ್ದರೇ ಇಲ್ಲಿನ ಕೂಲಿಕಾರ ಜನ ಹೊಟ್ಟೆಗೆ ಬಟ್ಟೆ ಹಾಕಿಕೊಂಡು ಮಲಗಬೇಕಾಗಿತ್ತು. ಇದು ಇನ್ನು ಇಲ್ಲಿ ನಡೆದಿಲ್ಲ ಎಂದು ಹೇಳಬಹುದು.

ಇಲ್ಲಿ ಮೂರು ನಾಲ್ಕು ದಶಕಗಳು ಕಳೆದರೂ ಕೃಷಿ ಪದ್ಧತಿ ಹಾಗೇ ಉಳಿದಿದೆ. ಅಂದರೆ ಕೃಷಿಯಲ್ಲಿ ಬದಲಾವಣೆ ಕಂಡಿಲ್ಲ. ಸಾಮಾನ್ಯವಾಗಿ ಬೆಳೆಯುವ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ವಾಣಿಜ್ಯ ಬೆಳೆಗಳನ್ನು ಅಳವಡಿಸಿಕೊಳ್ಳದೆ ಇರುವುದೇ ಇವರ ಆರ್ಥಿಕ ಸ್ಥಿತಿ ಕೆಳಮಟ್ಟದಲ್ಲಿದೆ ಎನ್ನಬಹುದು. ಸಾಂಪ್ರದಾಯಿಕ ಸಾವಯವ ಕೃಷಿ, ಸಹಜ ಕೃಷಿ ಪದ್ಧತಿಗಳಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡುವ ಮುಯ್ಯಾಳು ಪದ್ಧತಿ ಇದೆ.

ಒಟ್ಟಾರೆ ಈ ನಡುಗಡ್ಡೆಗಳ ಸಾಮಾಜಿಕ ವ್ಯವಸ್ಥೆ, ಆರ್ಥಿಕ ಸ್ಥಿತಿಗತಿ, ಶೈಕ್ಷಣಿಕ ಬದುಕು ರಾಜಕೀಯ ಆಡಳಿತ, ಇವೆಲ್ಲದರಲ್ಲಿ ಇವರ ಜೀವನ ಶೈಲಿ ಬದಲಾವಣೆಯನ್ನು ಕಾಣದೇ ನಿಂತ ನೀರಿನಂತೆ ಇವರ ಸಮಸ್ಯೆಗಳು ಸರಮಾಲೆಯಾಗಿವೆ. ಶಿಕ್ಷಣದಿಂದ ವಂಚಿತರಾಗಿ ಬೇರೆ ಊರಿಗೆ ಹೋಗಿ ಕಲಿಯಲು ಸಹ ಅನುಕೂಲವಿಲ್ಲ, ನದಿ ಈಜಿ ಹೋಗಬೇಕು, ಅದು ಹೇಗೆ ಮಕ್ಕಳ ಭವಿಷ್ಯ. ಇಲ್ಲಿ ಅನೇಕ ಕುಟುಂಬಗಳು ಅನಕ್ಷರಸ್ಥರವು. ಆದರೆ ಶಿಕ್ಷಣವು ಎಲ್ಲ ವರ್ಗಗಳ ಸ್ವತ್ತು ಎಂದು ಹೇಳುವುದು. ಗಡ್ಡೆಗಳ ಜನರಿಗೆ ಶಿಕ್ಷಣ ವ್ಯವಸ್ಥೆ ಇಲ್ಲ. ಇಲ್ಲಿಯ ಆಡಳಿತದ ಬಗ್ಗೆ ಹೇಳಬೇಕೆಂದರೆ ಆಡಳಿತ ವ್ಯವಸ್ಥೆ, ಅಧಿಕಾರಿ ವರ್ಗಗಳ ನಡುವಿನ, ರಾಜಕೀಯ ವ್ಯಕ್ತಿಗಳ ನಡುವಿನ ಪರಸ್ಪರ ಸಂಬಂಧದಿಂದಲೂ ಇಲ್ಲಿನ ಜನರ ಸಮಸ್ಯೆ ಬಗೆಹರಿದಿಲ್ಲ. ಆಡಳಿತ ಸ್ವರೂಪ ಬದಲಾವಣೆ

ಕಂಡಿಲ್ಲ. ಈ ಗಡ್ಡೆಗಳ ಜನರು ತಾವೆಲ್ಲರೂ ಪರಸ್ಪರ ಒಬ್ಬರಿಗೊಬ್ಬರು ಅಧೀನರಾಗಿ ಬಾಳುತ್ತಿರುವರು. ಈ ಆಧುನಿಕತೆಯ ಸುಂದರ ತಳಕು ಬಳುಕಿನ ಬಣ್ಣದ ಲೋಕವನ್ನು ಕಣ್ಣು ತೆರೆದು ನೋಡದೆ ನಡುಗಡ್ಡೆಯಲ್ಲಿ ಕಣ್ಣಿಗೆ ಬಟ್ಟೆಯನ್ನು ಕಟ್ಟಿಕೊಂಡು ಕತ್ತಲೆಯ ಪ್ರಪಂಚವೇ ನಮ್ಮದು ಎಂದು ಭಾವಿಸಿರುವರು.

ಹಿಂದೆ ಈ ಗಡ್ಡೆಗಳು ತೀರ ನಿಕೃಷ್ಟ ಬದುಕನ್ನು ಬದುಕುತ್ತಿದ್ದವು. ಈಗ ಸ್ವಲ್ಪ ಪರವಾಗಿಲ್ಲ. ಕೆಲವು ನಡುಗಡ್ಡೆಗಳು ಅಂದರೆ ಮೇಲಿನಗಡ್ಡೆ, ದೇವರಗಡ್ಡೆಗಳಲ್ಲಿ ಮೊದಲು ನದಿ ಈಜಿ ಬೇರೆ ಗ್ರಾಮಗಳಿಗೆ ಹೋಗಬೇಕಾಗಿತ್ತು. ಈಗ ದಾರಿ ಮಾರ್ಗವನ್ನು ಕಂಡುಕೊಂಡಿದ್ದಾರೆ. ಇನ್ನು ರಸ್ತೆ ಪ್ರಗತಿಯಲ್ಲಿ ನಡದೆ ಇದೆ. ಆದರೆ ಯಾವ ರೀತಿಯ ವಾಹನಗಳ ಸೌಲಭ್ಯವಿಲ್ಲ. ನಡೆದುಕೊಂಡು ಹೋಗಿ ಬರಬೇಕು. ಜಲದುರ್ಗ, ಹಂಚಿನಾಳ, ಯರಗೋಡೆ, ಯಳಗುಂದ, ಕಡದರಗಡ್ಡೆ ಈ ಗಡ್ಡೆಗಳ ಜನರು ಹಿಂದಿನ ಕಾಲದಿಂದಲೂ, ನದಿಯನ್ನು ಈಜಿಕೊಂಡು ೧೦-೧೫ ಕಿ.ಮೀ.ವರೆಗೆ ಹಾಲಭಾವಿ ಗ್ರಾಮಕ್ಕೆ ನಡೆದುಕೊಂಡೆ ಬರಬೇಕಾಗಿತ್ತು. ಆದರೆ ಈಗ ಜಲದುರ್ಗವು ಪ್ರವಾಸ ತಾಣವಾಗಿ ಮತ್ತು ಧಾರ್ಮಿಕ ಕೇಂದ್ರವಾಗಿರುವುದರಿಂದ ಸೇತುವೆಯನ್ನು ನಿರ್ಮಾಣ ಮಾಡಿದ್ದಾರೆ. ಈ ಸೇತುವೆ ಮೂಲಕವೇ ಈ ಎಲ್ಲ ನಡುಗಡ್ಡೆಗಳಿಗೆ ಸುತ್ತುವರಿದು ಹೋಗಬೇಕು. ಸರ್ಕಾರ ವಾಹನ ಸೌಲಭ್ಯ ಕೂಡ ಒದಗಿಸಿದೆ. ಒಂದು ದಿನಕ್ಕೆ ಮೂರು ಬಾರಿ ಬಸ್ಸು ಎಲ್ಲ ನಡುಗಡ್ಡೆಗಳಿಗೆ ಹೋಗಿ ಬರುತ್ತದೆ. ಆದರೆ ಬಸ್ಸಿನಲ್ಲಿ ಜನಗಳೇ ಇರುವುದಿಲ್ಲ. ಒಂದೊಂದು ಸಾರಿ ಡೀಸಲ್‌ಗೆ ದಂಡ ಎನ್ನುವಂತೆ ಬಸ್ಸು ಬಿಡುವುದಿಲ್ಲ. ಇಷ್ಟಾದರೂ ಇಲ್ಲಿನ ಜನರು ಆಧುನಿಕತೆಯಿಂದ ದೂರವೇ ಉಳಿದಿದ್ದಾರೆ ಎಂದು ಹೇಳಬಹುದು.

ಇನ್ನುಳಿದ ರಾಮಗಡ್ಡೆ, ನಾರದಗಡ್ಡೆ ಈ ಗಡ್ಡೆಗಳಲ್ಲಿ ಹಿಂದೆ ಈಜಿಕೊಂಡೆ ಬೇರೆ ಗ್ರಾಮಗಳಿಗೆ ಹೋಗಬೇಕಾಗಿತ್ತು. ಆದರೆ, ಈಗ ತೆಪ್ಪಗಳನ್ನು ಕಂಡುಕೊಂಡಿದ್ದಾರೆ. ಆಗ ಗಂಡಸರು ಅಷ್ಟೇ ಹೊರಗಿನ ಊರುಗಳಿಗೆ ಹೋಗಿ ಬರುತ್ತಿದ್ದರು. ಈಗ ಹೆಣ್ಣು ಮಕ್ಕಳು ಸಹ ಊರುಗಳಿಗೆ ಹೋಗಿ ಬರುತ್ತಾರೆ. ಆಗ ಮದುವೆ ಮಾಡಿಕೊಂಡು ಬಂದಂತಹ ಹೆಣ್ಣು ಮಕ್ಕಳು ತವರ ಮನೆಗೆ ಹೋಗುವಂತೆ ಇರಲಿಲ್ಲ. ಈಗ ಹೋಗಿ ಬರಬಹುದು. ಇನ್ನುಳಿದ ನೀಲಕಂಠರಾಯನ ಗಡ್ಡೆಯು ಅಷ್ಟೇ ತೆಪ್ಪವನ್ನು ಆಧರಿಸಿದೆ.

ದಿನ ಪತ್ರಿಕೆಗಳು, ಸುದ್ದಿಮಾಧ್ಯಮಗಳ ವಿಷಯವೇ ಇವರಿಗೆ ತಲುಪುವುದಿಲ್ಲವೆಂದ ಮೇಲೆ ಇವರು ತಮ್ಮ ಅಭಿವೃದ್ಧಿಯನ್ನು ಹೇಗೆ ಅಭಿವೃದ್ಧಿಪಡಿಸಿಕೊಳ್ಳಲು ಸಾಧ್ಯ. ಇವರು ಹೊರಜಗತ್ತಿಗೆ ಬರುವ ಮನಸ್ಸು ಮಾಡಿದರೆ, ಈ ಸುದ್ದಿ ಮಾಧ್ಯಮಗಳಿಂದ ತಮ್ಮ ಹಕ್ಕುಗಳು ಮತ್ತು ತಮ್ಮ ಭವಿಷ್ಯವನ್ನು ತಾವೇ ಕಂಡುಕೊಳ್ಳಬಹುದು. ತಾವು ಅಕ್ಷರ ಕಲಿಯದಿದ್ದರು ತಮ್ಮ ಮಕ್ಕಳಿಗಾದರೂ

ಶಿಕ್ಷಣ ಕೊಡುವ ಮನಸ್ಸು ಮಾಡಬೇಕು. ಆಗಲಾದರೂ ತಮ್ಮ ಸಮಸ್ಯೆಗಳಿಗೆ ಸ್ವಲ್ಪಮಟ್ಟಿಗಾದರೂ ಪರಿಹಾರ ಕಾಣಬಹುದು. ಇಲ್ಲವೆಂದರೇ ಇನ್ನು ಅನೇಕ ಶತಮಾನಗಳು ಕಳೆದರೂ ತಮ್ಮ ಜೀವನ ಶೈಲಿ ಮತ್ತು ಆರ್ಥಿಕ ಸ್ಥಿತಿ, ರಾಜಕೀಯದಿಂದ ದೂರವೇ ಉಳಿಯಬೇಕಾಗುತ್ತದೆ. ಇದನ್ನು ಅವರಿಗೆ ಹೆಚ್ಚಿನ ರೀತಿಯಲ್ಲಿ ತಿಳಿಸಬೇಕಾದರೆ ನಮ್ಮ ಸರ್ಕಾರ ಹೆಚ್ಚಿನ ಕಾರ್ಯಕ್ರಮಗಳ ಮೂಲಕ ಅವರಿಗೆ ತಿಳಿಯಪಡಿಸುವುದು ಮತ್ತು ಸಂಘಸಂಸ್ಥೆಗಳು ಹೋರಾಟದ ಮೂಲಕ ಗಡ್ಡೆಗಳ ಜನರಿಗೆ ಅನುಕೂಲ ಮಾಡಿಕೊಡಬೇಕು. ಗಡ್ಡೆಗಳ ಕುರಿತು ಹೆಚ್ಚಿನ ಅಧ್ಯಯನಗಳು ನಡೆದರೆ ಆ ಸಮುದಾಯಗಳನ್ನು ನಡುಗಡ್ಡೆ ಬಿಟ್ಟು ಪ್ರಸ್ತುತ ಜಗತ್ತಿಗೆ ಕರೆ ತರಲು ಸಾಧ್ಯವೆಂದು ಹೇಳಬಹುದು.

# ಅಧ್ಯಾಯ ಎಂಟು

# ಸಮಾರೋಪ

ಭಾರತವು ವಿಶಾಲವಾದ ಭೂಪ್ರದೇಶ ಹೊಂದಿದ್ದು, ಜಗತ್ತಿನ ಏಳನೇ ಅತಿ ದೊಡ್ಡ ದೇಶವೆಂದು ಹಾಗೂ ಜನಸಂಖ್ಯೆಯಲ್ಲಿ ಎರಡನೆಯ ಅತಿದೊಡ್ಡ ದೇಶವೆಂದು ಜಾಗತಿಕ ಮಟ್ಟದಲ್ಲಿ ಗುರುತಿಸಲ್ಪಟ್ಟಿದೆ. ಇಲ್ಲಿನ ಸಂಸ್ಕೃತಿ, ಇತಿಹಾಸ ವೈವಿಧ್ಯಮಯವಾಗಿದ್ದು, ಸರ್ವಧರ್ಮಗಳ ಸಮನ್ವಯವೆಂದು ಹೇಳಲಾಗುತ್ತದೆ. ಭಾರತವನ್ನು ಆರ್ಯ, ಶಾತವರ್ಣ, ಹೂಣ, ಪೋರ್ಚುಗೀಸ್, ಡಚ್, ಗ್ರೀಕ್, ಅರಬ್, ಮುಸ್ಲಿಂ ಮುಂತಾದವರು ವಿವಿಧ ಪ್ರದೇಶ ಹಾಗೂ ಧರ್ಮ ಜನಾಂಗಗಳಿಗೆ ಸೇರಿದವರು ಅನಾದಿ ಕಾಲದಿಂದಲೂ ಆಕ್ರಮಣ ಮಾಡಿರುವುದು ಕಾರಣವಾಗಿದೆ(ವೆಂಕಟೇಶ ಎಚ್.ಎಲ್., ೨೦೧೦, ಪು.೪೫).

ಇವರ ಆಕ್ರಮಣದಿಂದ ಸಂಸ್ಕೃತಿಯ ಕುರುಹುಗಳು ಇಲ್ಲಿಯೇ ಉಳಿದಿರುವುದನ್ನು ಕಾಣುತ್ತೇವೆ. ಇದರಿಂದ ಮೂಲ ಸಂಸ್ಕೃತಿಯ ಮೇಲೆ ಹೇರಿರುವ ಪರಿಣಾಮಗಳು ಇಂದಿನ ವೈವಿಧ್ಯಮಯ ಸಂಸ್ಕೃತಿಗೆ ಕಾರಣವಾಗಿವೆ. ಭಾರತಕ್ಕೆ ಬಂದವರೆಲ್ಲ ಹೊರಗಿನವರು. ಇಲ್ಲಿಯ ಮೂಲ ನಿವಾಸಿಗಳೆಂದರೆ ಬುಡಕಟ್ಟು ಪಂಗಡಗಳು ಎಂದು **ಎಸ್.ಆರ್.ಪಾಂಡೆಯವರು** ಪ್ರತಿಪಾದಿಸಿರುವರು. ಭಾರತವು ಮೇಲಿನವರ ಆಕ್ರಮಣಗಳಿಗೆ ತುತ್ತಾದಾಗ ಇಲ್ಲಿನ ಮೂಲ ನಿವಾಸಿಗಳಾದ ಬುಡಕಟ್ಟು ಸಮುದಾಯಗಳು ಭಾರತದಾದ್ಯಂತ ಅನೇಕ ಕಡೆ ಚದುರಿ, ಕಾಡು, ಬೆಟ್ಟ, ಗುಡ್ಡಗಳಲ್ಲಿ ಮತ್ತು ನಡುಗಡ್ಡೆಗಳಲ್ಲಿ ವಾಸವಾಗಿದ್ದಾರೆ. ಎಲ್ಲಾ ಬುಡಕಟ್ಟುಗಳು ನಾಡಿಗೆ ದೂರವಾಗಿ ಕಾಡನ್ನೇ ಅವಲಂಬಿಸಿ ಬದುಕುವ ಕಾಲಘಟ್ಟವನ್ನು ಸೂಚಿಸುತ್ತವೆ.

ಬ್ರಿಟಿಷರ ನೀತಿಗಳು ವೈದಿಕತೆಯ ಪ್ರಭಾವ ಇಂತಹ ಬುಡಕಟ್ಟುಗಳನ್ನು ವಿಂಗಡಣೆಗೊಳಿಸಿ, ನಾಡಿಗೆ ಕರೆತಂದಿರುವುದನ್ನು ಕಾಣಬಹುದು. ಆದರೆ ಈ ನಡುಗಡ್ಡೆಗಳಲ್ಲಿ ವಾಸ ಮಾಡುವ, ಸಮುದಾಯಗಳನ್ನು ನಾಡಿಗೆ ತರುವ ಪ್ರಯತ್ನ ಮಾಡಿಲ್ಲ. ಇನ್ನು ಅಲ್ಲಿಯೇ ಉಳಿದು ಭೀಕರ ಸಮಸ್ಯೆಗಳನ್ನು ಎದುರಿಸುತ್ತಿವೆ.

೪೦೦ ವರ್ಷಗಳು ಗತಿಸಿಹೋದರು ಇನ್ನು ಆಧುನಿಕ ಜಗತ್ತನ್ನು ನೋಡದೇ ತಮ್ಮ ಪ್ರಾಚೀನತೆಯೊಳಗೆ ಬದುಕುತ್ತಿದ್ದಾರೆ. ಕೇವಲ ತಮ್ಮ ಗಡ್ಡೆಯೇ ಇಡೀ ಪ್ರಪಂಚವೆಂದು ಬದುಕುವ ಈ ಜನರು ತಮ್ಮ ತಮ್ಮಲ್ಲಿ ಸಹಕಾರಿಯಾಗಿ ಬದುಕುತ್ತಿರುವರು. ಇವತ್ತಿಗೂ ಆಧುನಿಕ ಸಮಾಜ ಎಷ್ಟೊಂದು ಮುಂದುವರಿದರೂ ಕೂಡ ಆ ಜಗತ್ತನ್ನು ಕಣ್ಣು ಇಲ್ಲದ ಕುರುಡರಂತೆ ನೋಡುತ್ತ ತಮ್ಮ ಗಡ್ಡೆಯಲ್ಲಿ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಜೀವನ ಸಾಗಿಸುತ್ತಿದ್ದಾರೆ. ಅದಕ್ಕಾಗಿ ಅವರಿಗೆ ಆಧುನಿಕತೆಯ ಬದುಕನ್ನು ಕಟ್ಟಿಕೊಡುವುದರ ಕುರಿತಾಗಿ ಜಾನಪದೀಯವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಸಮುದಾಯದ ಎಲ್ಲ ಸ್ತರಗಳನ್ನು ಗಮನಿಸುವುದು ಆಕಾಶದಲ್ಲಿರುವ ನಕ್ಷತ್ರಗಳನ್ನು ಎಣಿಸಿದ ಹಾಗೆಯೇ. ಲಕ್ಷಾಂತರ ವರ್ಷಗಳಿಂದ ಕೋಟ್ಯಾಂತರ ವ್ಯಕ್ತಿಗಳ ಮೂಲಕ ಹನಿಹನಿಯಾಗಿ ಕೂಡಿದ ಸಂಸ್ಕೃತಿಯನ್ನು ವಿವರವಾಗಿ ತಿಳಿಯುವುದು ಅಸಾಧ್ಯದ ಮಾತಾದರೂ ಅಧ್ಯಯನದ ದೃಷ್ಟಿಯಿಂದ ಮಾಡಲೇಬೇಕಾಗಿದೆ.

ಈ ನಡುಗಡ್ಡೆಗಳಲ್ಲಿ ಜನಸಂಖ್ಯೆ ಕಡಿಮೆ ಇರುವುದರಿಂದ ಎಲ್ಲರೂ ಪರಸ್ಪರ ಪರಿಚಿತರಾಗಿರುವರು. ಯಾರು ಅಪರಿಚಿತರಲ್ಲ, ಹೊಸಬರೆನಿಸುವುದಿಲ್ಲ. ಜನರ ನಡುವಿನ ಸಂಬಂಧವು ವೈಯಕ್ತಿಕವೂ, ಪ್ರತ್ಯಕ್ಷ ಸ್ವರೂಪದ್ದು, ಸಮಗ್ರವಾಗಿರುತ್ತದೆ. ಪರಸ್ಪರ ಪ್ರೀತಿ ವಿಶ್ವಾಸದಿಂದ ಬದುಕುತ್ತಾರೆ. ಜನರು ತಮ್ಮ ಮಾತುಕತೆ, ವ್ಯವಹಾರಗಳಲ್ಲಿ ಪ್ರಾಮಾಣಿಕರು ಹಾಗೂ ಮುಚ್ಚು ಮರೆಯಿಲ್ಲದೆ ತಮ್ಮ ಸಮುದಾಯದೊಂದಿಗೆ ಅನ್ಯೋನ್ಯತೆಯಿಂದ ಬಾಳುತ್ತಾರೆ. ಆದರೂ ಕೆಲವು ಗಡ್ಡೆಗಳಲ್ಲಿ ಕುರವಪುರ ಗಡ್ಡೆಯಲ್ಲಿ ಗೊಲ್ಲ ಸಮುದಾಯದವರೇ ಅಧಿಕವಾಗಿರುವುದರಿಂದ ಇತರ ಸಮುದಾಯಗಳ ಮೇಲೆ ಅಧಿಕಾರ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಎಲ್ಲಾ ಗಡ್ಡೆಗಳಲ್ಲಿ ಸಮಾನತೆಯನ್ನು ಕಾಣ ಬಹುದಾಗಿದೆ.

ಎಲ್ಲಾ ನಡುಗಡ್ಡೆಗಳಲ್ಲಿ ಜನರ ಜೀವನದಲ್ಲಿ ಏಕತೆಯನ್ನು ಕಾಣಬಹುದಾಗಿದೆ. ಜನರ ಜೀವನ ಕ್ರಮಗಳಲ್ಲಿ, ಚಿಂತನೆ, ಭಾವನೆಗಳಲ್ಲಿ, ಊಟ-ಉಪಚಾರಗಳಲ್ಲಿ, ಉಡುಗೆ-ತೊಡುಗೆಗಳಲ್ಲಿ, ಆಲೋಚನೆ, ಅಭಿಪ್ರಾಯಗಳಲ್ಲಿ ಏಕರೂಪತೆ ಕಂಡುಬರುತ್ತದೆ. ಒಂದೇ ಬಗೆಯ ಧಾರ್ಮಿಕ ನಂಬಿಕೆಗಳ ಆಚರಣೆಗಳು, ನೈತಿಕ ನಿಯಮಗಳು, ಲೋಕಾಚಾರಗಳು, ರೂಢಿ ಸಂಪ್ರದಾಯಗಳಲ್ಲಿ ಸಮುದಾಯದ ಜನರು ಕೂಡಿ ಬಾಳುವ ಸಾಮರಸ್ಯದ ಬದುಕನ್ನು ಸಾಗಿಸುತ್ತಿದ್ದಾರೆ.

ಈ ನಡುಗಡ್ಡೆ ಜನರಲ್ಲಿ ಆಡಂಬರತೆ ಇಲ್ಲದಿರುವುದು ಕಂಡುಬರುತ್ತದೆ. ಅಂದರೆ ಸರಳರು, ಮುಗ್ಧರು, ಅಮಾಯಕರು ಕಪಟತೆ, ಆಡಂಬರದ ವರ್ತನೆ ಅವರಲ್ಲಿ ಇಲ್ಲ. ಅವರು ಸ್ನೇಹಮಯಿಗಳು, ಕಷ್ಟಸಹಿಷ್ಣುಗಳು, ಅತಿಥಿ ಸತ್ಕಾರದಲ್ಲಿ ಆಸೆಯುಳ್ಳವರು ಆಗಿದ್ದಾರೆ. ಇಲ್ಲಿನ ಸಮುದಾಯಗಳು ನೀತಿ, ನಿಯಮಗಳಿಗೆ ಗೌರವ ಮನ್ನಣೆ ನೀಡುತ್ತವೆ. ಸಂಪ್ರದಾಯಗಳು, ಪ್ರತಿಯೊಂದು ಆಚರಣೆಗಳಿಗೆ

ತಲೆಬಾಗಿ ಜೀವನ ನಡೆಸುವ ಪ್ರವೃತ್ತಿ ಇಲ್ಲಿನ ಸಮುದಾಯದ್ದಾಗಿದೆ. ಬಿಟ್ಟು ಬಿಡದೆ ನಡೆದುಕೊಂಡು ಬಂದ ಪದ್ಧತಿಗಳು, ನಂಬಿಕೆಗಳು ಹಾಗೂ ಆದರ್ಶಗಳು, ಜನರ ನಡವಳಿಕೆಗೆ ಆಧಾರಗಳು. ಪ್ರತಿವರ್ಷ ನಡೆಯುವ ಜಾತ್ರೆಗಳಿಗೆ, ಬಿಟ್ಟು ಬಿಡದೆ ಹೋಗುವಂತದ್ದು ಇಲ್ಲಿನ ಸಮುದಾಯದವರಲ್ಲಿ ವಿಶೇಷವಾಗಿದೆ. ಜನಸಂಖ್ಯೆ ಕಡಿಮೆಯಿರುವುದರಿಂದ ಹಾಗೂ ಮುಖಾ-ಮುಖಿ ಸಂಬಂಧಗಳು ಅಸ್ಥಿತ್ವದಲ್ಲಿರುವುದರಿಂದ ಯಾವುದೇ ಒಬ್ಬ ವ್ಯಕ್ತಿಯೂ ನಿಯಮಗಳನ್ನು ಉಲ್ಲಂಘಿಸುವುದಿಲ್ಲ. "ಜನರ ಬಾಯಿಗೆ ಬೀಳಬಾರದು" ಅಥವಾ ಜನರು ಆಡಿಕೊಳ್ಳುವ ವಸ್ತುವಾಗಬಾರದು ಎಂಬ ನೈತಿಕ ಭಯ, ಈ ನಡುಗಡ್ಡೆ ಜನರ ಮುಗ್ಧ ಮನಸ್ಸಿನಲ್ಲಿರುವುದು ಕಂಡುಬರುತ್ತದೆ.

ಈ ನಡುಗಡ್ಡೆ ಜನರ ನೋವು, ನಲಿವು, ಕೆಲಸ ಕಾರ್ಯ, ವ್ಯವಹಾರ, ವಿಚಾರ ಎಲ್ಲವುಗಳಲ್ಲಿ ಕುಟುಂಬದ ಪಾತ್ರ ಹಿರಿದಾದುದು. ಇಲ್ಲಿ ವ್ಯಕ್ತಿಗಿಂತ ಕುಟುಂಬವೇ ಮುಖ್ಯ. ಏಕೆಂದರೆ ವ್ಯಕ್ತಿಯ ಹಿತಾಸಕ್ತಿಗಳು ಕುಟುಂಬಕ್ಕೆ ಅಧೀನವಾಗಿರುತ್ತವೆ. ಸಾಮಾನ್ಯವಾಗಿ ಇಲ್ಲಿನ ಕುಟುಂಬಗಳು ಪಿತೃ ಪ್ರಧಾನವಾಗಿರುತ್ತವೆ. ಅಂದರೆ ತಂದೆಯೇ ಕುಟುಂಬದ ಹಿರಿಯ ಯಜಮಾನ. ಎಲ್ಲರೂ ಆತನಿಗೆ ತಲೆಬಾಗಿ ನಡೆಯುವುದು ಒಳ್ಳೆಯ ಕುಟುಂಬದ ಲಕ್ಷಣ. ಈ ಪದ್ಧತಿಯನ್ನು ಈ ನಡುಗಡ್ಡೆಗಳಲ್ಲಿ ಕಾಣಬಹುದಾಗಿದೆ.

ಈ ನಡುಗಡ್ಡೆಗಳಲ್ಲಿ ತಂದೆ-ತಾಯಿಗಳು, ಮಕ್ಕಳ ಶಿಕ್ಷಣಕ್ಕೆ ಆದ್ಯತೆ ನೀಡುವುದಿಲ್ಲ. ತಮ್ಮ ಕೆಲಸಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ಸ್ತ್ರೀಯರ ಬಗೆಗೆ ಹೇಳುವುದಾದರೆ ಅವರಿಗೆ ಪ್ರತ್ಯೇಕ ಅಸ್ತಿತ್ವವಿದೆ ಎಂದು ಅನ್ನಿಸುವುದೇ ಇಲ್ಲ. ಏಕೆಂದರೆ ಪುರುಷರ ಜೀವನದ ಒಂದು ಭಾಗದಂತೆಯೇ ಕೆಲಸ ಮಾಡುತ್ತಾರೆ. ಪುರುಷರಿಗೆ ಅಧೀನರಾಗಿ, ವಿಧೇಯರಾಗಿ ಅವರು ನಡೆದುಕೊಳ್ಳುತ್ತಾರೆ. ಭಾರತೀಯ ಪರಂಪರೆಯಲ್ಲಿ ವೈಭವೀಕರಿಸಲಾಗಿರುವ ಪಾತಿವ್ರತದ ಕಲ್ಪನೆ ಅವರಲ್ಲಿ ಬೇರೂರಿದೆ. ಕೆಲವು ಗಡ್ಡೆಗಳಲ್ಲಿ ಇತ್ತೀಚಿಗೆ, ಸ್ತ್ರೀಯರು ಸ್ವಸಹಾಯ ಸಂಘಗಳಲ್ಲಿ ಸೇರಿಕೊಂಡು ಸ್ವಲ್ಪ ಮಟ್ಟಿಗೆ ಹೊರಗಿನ ಪ್ರಪಂಚದ ಜ್ಞಾನವನ್ನು ಆಗು-ಹೋಗುಗಳನ್ನು ಆರ್ಥಿಕ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇನ್ನೊಂದು ದೃಷ್ಟಿಯಲ್ಲಿ ನೋಡುವುದಾದರೆ, ಸ್ತ್ರೀಯರು ಕುಟುಂಬದ ಬೆನ್ನೆಲುಬಿದ್ದಂತೆ. ಕುಟುಂಬದ ನಿತ್ಯ ಕೆಲಸಗಳಿಗೆ ತಮ್ಮ ಜೀವನವನ್ನು ಬಿಡುವಿಲ್ಲದಂತೆ ಅವರು ತೇಯುತ್ತಿದ್ದಾರೆ. ಇಲ್ಲಿನ ಸ್ತ್ರೀಯರು ಗಂಡಸರೊಂದಿಗೆ ರಂಟೆ, ಕುಂಟೆ, ಕೂರಿಗೆಗಳ ಕೆಲಸಗಳನ್ನು ಕೃಷಿಯಲ್ಲಿ ಗಂಡಸರೊಂದಿಗೆ ಕೂಡಿ ಮಾಡುವುದನ್ನು ನೋಡಬಹುದು. ಇಲ್ಲಿನ ಸ್ತ್ರೀಯರಿಗೆ ಕೃಷಿ ಕಾರ್ಯಗಳು, ಅವರ ದೈನಂದಿನ ಕಾರ್ಯಗಳಾಗಿ ಬಿಟ್ಟಿವೆ. ಮಳೆ, ಚಳಿ, ಬಿಸಿಲೆನ್ನದೇ ಹಗಲು ರಾತ್ರಿ ದುಡಿಯುವ ಶ್ರಮ ಜೀವಿಗಳು ಸ್ತ್ರೀಯರು. ಇದರ ಜೊತೆಗೆ, ದನಕರು, ಎಮ್ಮೆ ಕುರಿ, ಕೋಳಿ, ಸಾಕುವ ಕೆಲಸದಲ್ಲಿಯೂ ಸ್ತ್ರೀಯರು ಆಸಕ್ತಿ ವಹಿಸುತ್ತಾರೆ. ಒಟ್ಟಿನಲ್ಲಿ ಸ್ತ್ರೀಯರದು "ದಣಿವರಿಯದ ಜೀವ".

ಮನುಕುಲದ ಸಂಸ್ಕೃತಿಯು ಮೌಲ್ಯಾಧಾರಿತವಾಗಿದ್ದು, ಭಾಷೆ, ಸಾಹಿತ್ಯ, ಜನಪದ ಗೀತೆ, ಗಾದೆ, ಒಡಮ, ಒಗಟುಗಳು, ಮುಂತಾದ ಸಾಹಿತ್ಯ ಪ್ರಕಾರಗಳನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದಿ ಕಾಲದಲ್ಲಿದ್ದ ಮಾನವನು ಅಂದ್ರೆ ಕೈ ಸನ್ನೆ ಮಾಡಿ ಕರೆಯುವ ಮಟ್ಟದಲ್ಲಿ ಇದ್ದಿರುವಂತ ಮಾನವ ಸಾಹಿತ್ಯ ರಚನೆ ಮಾಡುವ ಮಟ್ಟಕ್ಕೆ ತಲುಪಿದ್ದಾನೆ. ಆದಿ ಮಾನವನ ಮೊದಲನೆಯ ಉಸಿರಿನಿಂದ ಹೊರ ಹೊಮ್ಮಿದ ಈ ಹಾಡುಗಳು ಆಧುನಿಕ ಮಾನವನವರೆಗೂ, ಆತನೊಡನೆ ಬೆಳೆದುಕೊಂಡು ಬಂದಿವೆ. ನಿತ್ಯ ಪರಿವರ್ತನಶೀಲವಾದ ಸಮಾಜ ಪ್ರಗತಿ ಪಥದಲ್ಲಿ ಮುನ್ನಡೆದಿದೆ. ಅಂದಂದಿನ ಅವನ ಸಮಸ್ಯೆಗಳಿಗೆ ಸಾಹಸಗಳಿಗೆ, ಸಾಧನೆಗಳಿಗೆ ಆಶೋತ್ತರಗಳಿಗೆ ಅನುಗುಣವಾಗಿ ಅವು ರಚನೆಯಾಗದಂತೆ ಇವು ಜನಜೀವನದಿಂದಲೇ ಮಾಡಿದ್ದರೂ ಜನಪದರ ಅಂತರಂಗದ ದರ್ಶನವೇ ಆಗಿದೆ.

ಜನಪದ ಸಾಹಿತ್ಯ ಸೃಷ್ಟಿಗೆ ಮುಖ್ಯವಾಗಿ ಹಿನ್ನಲೆಯಾದ ಪರಿಸರವೆಂದರೆ ಹಳ್ಳಿ ಜೀವನ. ಸಮಾಜವೆಂದೊಡನೆ ಸಂಕೀರ್ಣತೆ ವೈವಿಧ್ಯಗಳು ಅನಿವಾರ್ಯವಾಗಿರುತ್ತವೆ. ಏಕೆಂದರೆ ಅನೇಕ ಮನೋಧರ್ಮಗಳು, ಸಂಸ್ಕಾರಗಳ ಜನರು ಅಲ್ಲಿ ಇರುತ್ತಾರೆ. ಅನೇಕ ಉದ್ಯೋಗಗಳನ್ನು ಕೈಗೊಂಡಿರುತ್ತಾರೆ. ಸಹ ಜೀವನ ತತ್ವವನ್ನು ಅವಲಂಬಿಸಿ ಒಂದೇ ಕಡೆ ಬಾಳುತ್ತಾರೆ. ಈ ಎಲ್ಲ ವೈವಿಧ್ಯಗಳಿಗೆ ಅನುಗುಣವಾಗಿ ರೂಪುಗೊಳ್ಳುತ್ತದೆ ಜನಪದ ಸಾಹಿತ್ಯ.

ಸಾಹಿತ್ಯ ಒಂದು ಸಮುದಾಯದ ಸಂಸ್ಕೃತಿಯ ಪ್ರತಿಬಿಂಬ. ವ್ಯಕ್ತಿಯ ಸಂಸ್ಕೃತಿಯನ್ನು ಅವನ ಆಚರಣೆಯಲ್ಲಿ ನೋಡಬಹುದು. ಆ ಆಚರಣೆಯ ಅನುಭವದ ಅಭಿವ್ಯಕ್ತಿಯೇ ಜನಪದ ಸಾಹಿತ್ಯ. ಜೀವನದ ಆದರ್ಶವನ್ನು ಹೇಳಲು ಜನಪದ ಹಾಡುಗಳು ಸಹಾಯಕವಾದವು. ದುಡಿದು ಬೇಸತ್ತಾಗ ಅವುಗಳ ಹಿನ್ನೆಲೆಯಲ್ಲಿ ತಮ್ಮ ಅನುಭವಗಳನ್ನು ಹಾಡಿನಲ್ಲಿ ತೋಡಿಕೊಂಡರು. ಹಿಡಿದುದು ಕೈಗೂಡಿದಾಗ ಹಿಗ್ಗಿನಿಂದ ದನಿಯೆತ್ತಿ ಹಾಡುತ್ತಿದ್ದರು. ಸುಖ ದುಃಖಗಳೆರಡು ಅವರ ಹಾಡಿನ ವಸ್ತುಗಳಾದವು.

ಧರ್ಮ ಸಂಸ್ಕೃತಿಯ ಬೆನ್ನೆಲುಬು. ಜೀವನದ ಎಲ್ಲ ಆಚಾರ ವ್ಯವಹಾರಗಳನ್ನು ಜನಮನಗಳಲ್ಲಿ ಅದು ವ್ಯಾಪಿಸಿದೆ. ಇಹಪರಗಳೆರಡರ ಸಮನ್ವಯ ಸಿದ್ಧಾಂತ ಜೀವನದಲ್ಲಿ ಹಾಸು ಹೊಕ್ಕಾಗಿದೆ. ಪರಂಪರೆಯಿಂದ ಬಂದ ಧಾರ್ಮಿಕ ಶ್ರದ್ಧೆಯೇ ಗಡ್ಡೆಗಳ ಬಾಳಿನ ಆಧಾರ.

ಒಟ್ಟಾರೆಯಾಗಿ ಈ ನಡುಗಡ್ಡೆಗಳ ಸಾಮಾಜಿಕ ಬದುಕು ಮಹತ್ವವನ್ನು ಜಾನಪದ ಅಧ್ಯಯನ ಮುಖಾಂತರ ಅರಿತುಕೊಳ್ಳಲಾಗಿದೆ. ಅದು ದಿನಪತ್ರಿಕೆಯಲ್ಲಿ ವರದಿಯಾಗಿರುವ ಲೇಖನಗಳನ್ನು ಬಿಟ್ಟರೆ, ಸಂಶೋಧನಾತ್ಮಕ ಅಧ್ಯಯನಗಳು ನಡೆದಿಲ್ಲ. ಈ ನಡುಗಡ್ಡೆಗಳಲ್ಲಿ ನೆಲೆಸಿರುವ ಸಮುದಾಯಗಳು ಅತ್ಯಂತ ಬಡ ಕುಟುಂಬಗಳು ಸರ್ಕಾರದ ಯಾವುದೇ ಮೂಲಭೂತ ಅವಕಾಶ ಸೌಲಭ್ಯಗಳಿಲ್ಲದೇ

ಆಧುನಿಕ ಕಾಲದಲ್ಲಿ ಪ್ರಾಚೀನ ಕಾಲದ ಜೀವನ ನಡೆಸುತ್ತಿರುವುದು ತಿಳಿದುಬರುತ್ತದೆ. ಅದರಲ್ಲಿ ನೀಲಕಂಠರಾಯನ ಗಡ್ಡೆ ಸಮಸ್ಯೆಗಳ ಕೊಂಪೆ ಎಂದು ಅಧ್ಯಯನದ ಮುಖಾಂತರ ಅರಿತುಕೊಳ್ಳಲಾಗಿದೆ.

ಇದುವರೆಗೂ ನಡುಗಡ್ಡೆಗಳ ಬಗ್ಗೆ ಅಧ್ಯಯನಗಳು ನಡೆಯದೇ ಇರುವುದು, ಅಧ್ಯಯನಕಾರರ ಮಿತಿಯನ್ನು ತಿಳಿಸುತ್ತದೆ. ಅಧ್ಯಯನ ನಡೆಯದೆ ಮತ್ತು ಅಲಕ್ಷತೆಗೆ ಒಳಗಾಗಿರುವ ಈ ನಡುಗಡ್ಡೆಗಳ ಕುರಿತು ಜಾನಪದೀಯವಾಗಿ ಅಧ್ಯಯನ ಕೈಗೊಳ್ಳಲಾಗಿದೆ.

## ೮.೧. ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನವು ಕೃಷ್ಣಾನದಿ ತೀರದ ನಡುಗಡ್ಡೆಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಅಲ್ಲಿನ ಕೆಲವು ಹಿರಿಯ ತಿಳುವಳಿಕೆದಾರರ ಮಾಹಿತಿ ಆಧರಿಸಿ ಅಧ್ಯಯನದ ಫಲಿತಗಳನ್ನು ಗುರುತಿಸಲಾಗಿದೆ.

೧. ಈ ನಡುಗಡ್ಡೆಗಳ ಜನರ ವೃತ್ತಿ ಇನ್ನು ಹಳೆ ಸಂಪ್ರದಾಯ ಮೌಲ್ಯಗಳನ್ನು ರೂಢಿಸಿಕೊಂಡಿದೆ. ರೀತಿ–ನೀತಿಯೊಂದಿಗೆ ಕೃಷಿಯಲ್ಲಿ ಬದಲಾವಣೆ ಇಲ್ಲ. ಬೇಟೆ ಇವರ ಜೀವನ ವೃತ್ತಿಯಾಗಿದೆ ಎಂದು ಎಲ್ಲ ಸಮುದಾಯಗಳು ಬ್ರಾಹ್ಮಣ, ಪಾಂಚಾಳ, ಲಿಂಗಾಯಿತರು ಬಿಟ್ಟು, ಉಳಿದೆಲ್ಲ ಜನರು ದಿನನಿತ್ಯ ಬೇಟೆಯಾಡುವುದು ಅಧ್ಯಯನದಿಂದ ತಿಳಿದುಬರುತ್ತದೆ.

೨. ಗಡ್ಡೆಗಳನ್ನು ಚಾರಿತ್ರಿಕವಾಗಿ ನೋಡಿದಾಗ ಈ ಗಡ್ಡೆಗಳ ಪಾಳೆಯಗಾರ ಆಡಳಿತ ವಿವಿಧ ರಾಜರುಗಳು ಈ ಗಡ್ಡೆಗಳಿಗೆ ಆಡಳಿತ ನಡೆಸಿದರು. ಸುರಪುರ ನಾಯಕರು, ಗುಂಗೂಳಿ ದೊರೆಗಳು ಮತ್ತು ಈಗಲೂ ಕೂಡ ಈ ಜನರ ಮೇಲೆ ದೊರೆಗಳು ದರ್ಬಾರು ನಡೆಸುತ್ತಾರೆ. ಸರಕಾರ ಇದ್ದರು ಕೂಡ ಈ ಗಡ್ಡೆಗಳ ಜನ ತಮ್ಮ ನಾಯಕನಿಗೆ ಗೌರವ ಸೂಚಿಸುತ್ತಾರೆ. ಕೆಲವು ಕಾರ್ಯಗಳು ಅವರ ಆದೇಶದ ಮೇಲೆ ನಡೆಯುತ್ತವೆ. ಹಬ್ಬ, ಆಚರಣೆಗಳು, ಜಾತ್ರೆಗಳು, ನ್ಯಾಯ ಇವುಗಳಿಗೆ ಇವರ ಒಪ್ಪಿಗೆ ಪಡೆಯುತ್ತಾರೆ ಎಂದು ಅಧ್ಯಯನದ ಫಲಿತದಿಂದ ತಿಳಿಯಲಾಗಿದೆ.

೩. ಗಡ್ಡೆಗಳ ದೈವಗಳ ಮತ್ತು ದೇವಾಲಯಗಳು ಪೂಜೆ ಪುನಸ್ಕಾರ, ದೇವಸ್ಥಾನದ ಆಡಳಿತ ಹಾಗೂ ನಂಬಿಕೆ ಮತ್ತು ಹರಕೆಗಳು ಪ್ರಾಚೀನ ಕಾಲದ ಮೌಲ್ಯಗಳಿಂದ ಕೂಡಿವೆ ಎಂದು ಹೇಳಬಹುದು. ಆಧುನಿಕತೆಯ ಯಾವ ಬದಲಾವಣೆಗಳು ಆಗಿಲ್ಲ ಎಂದು ಅಧ್ಯಯನದ ಮುಖಾಂತರ ಕಂಡುಕೊಳ್ಳಲಾಗಿದೆ.

೪. ನಡುಗಡ್ಡೆ ಸಮುದಾಯಗಳ ತಮ್ಮ ಮಕ್ಕಳನ್ನು ಸಾಮಾಜೀಕರಣಕ್ಕೊಳಪಡಿಸುವಾಗ ಲಿಂಗ ತಾರತಮ್ಯತೆಯ ಭಾವನೆಗಳನ್ನು ಬೆಳೆಸದೇ ಶಿಕ್ಷಣ, ಆಸ್ತಿ ಹಕ್ಕು, ಆರೋಗ್ಯ ಸೇವೆಗಳು,

ಸಾಂಸ್ಥಿಕ ಪ್ರವೇಶ, ರಾಜಕೀಯದಲ್ಲಿ ಸಮಾನ ರೀತಿಯ ಪ್ರತಿಸ್ಪರ್ಧಿ ಕಲ್ಪಿಸಿಕೊಡುವುದರ ಜೊತೆ ಗೌರವ ಭಾವನೆ ಮೂಡಿಸಬೇಕು. ದೇವರು, ಧರ್ಮ, ಸಂಪ್ರದಾಯ ಆಚರಣೆಗಳ ಹೆಸರಿನಲ್ಲಿ ಕುಟುಂಬದ ಒಳಗೆ ನಡೆಯುವ ಹಿಂಸೆಗಳ ಬಗ್ಗೆ ಹೆಣ್ಣುಮಕ್ಕಳಲ್ಲಿ ಜಾಗೃತಿ ಮೂಡಿಸಬೇಕು. ಇದಕ್ಕೆ ಸಂಬಂಧಿಸಿದಂತೆ ಜಾಗೃತಿ ಕಾರ್ಯಕ್ರಮಗಳನ್ನು ನಡೆಸಬೇಕು. ಲಿಂಗ ಅಸಮಾನತೆಯ ಹಿನ್ನೆಲೆಯಲ್ಲಿ ಕಿರುಕುಳ, ದೌರ್ಜನ್ಯಗಳನ್ನು ಮಹಿಳೆಯರು ಪ್ರತಿಭಟಿಸುವ, ಪ್ರಶ್ನಿಸುವ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಪುರುಷತ್ವ ಮತ್ತು ಸ್ತ್ರೀತ್ವದ ಪರಿಕಲ್ಪನೆಗಳು ಬದಲಾಗಬೇಕು. ಈ ನಿಟ್ಟಿನಲ್ಲಿ ಲಿಂಗ ಸೂಕ್ಷ್ಮತೆಯ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಹೆಣ್ಣು ಮಕ್ಕಳಿಗೆ ಮದುವೆ ಅಂತಿಮ ಗುರಿ ಅಲ್ಲ. ಅವರು ವ್ಯಕ್ತಿಯಾಗಿ ವಿಕಾಶಗೊಳ್ಳಲು ಪೂರಕವಾದ ಶಿಕ್ಷಣದ ಅವಕಾಶಗಳನ್ನು ನೀಡಬೇಕು. ಈ ನಡುಗಡ್ಡೆಗಳಲ್ಲಿ ಈ ಮಹಿಳಾ ಸಂವೇದನೆಗಳನ್ನು ಅಧ್ಯಯನದ ಮೂಲಕ ಗುರುತಿಸಲಾಗಿದೆ.

೫. ಇವರಿಗೆ ನ್ಯಾಯಬೆಲೆ ಅಂಗಡಿಗಳಲ್ಲಿ ಸಿಗಬೇಕಾದ ಆಹಾರ ವಿತರಣೆ ತಾರತಮ್ಯ ಏಷ್ಟೊಂದು ಪಕ್ಕದ ಊರಿನಲ್ಲಿ ನ್ಯಾಯಬೆಲೆ ಅಂಗಡಿ ಇರುವುದರಿಂದ ಇವರಿಗೆ ಸರಿಯಾದ ಸಮಯಕ್ಕೆ ಹೋಗದೆ ಇರುವುದು ಕಾರಣವಾಗಿದೆ. ಪ್ರತಿಯೊಂದು ಗಡ್ಡೆಗಳಲ್ಲಿ ನ್ಯಾಯಬೆಲೆ ಅಂಗಡಿ, ಪ್ರಾಥಮಿಕ ಆರೋಗ್ಯ ಕೇಂದ್ರ ಹಾಗೂ ಅಂಗನವಾಡಿಗಳು ತುಂಬ ಅವಶ್ಯಕವಾಗಿವೆ. ಇದರ ಜೊತೆಯಲ್ಲಿ ಸರ್ಕಾರದ ಯೋಜನೆಗಳು ಅವರಿಗೆ ತಲುಪುವುದು ಬಹಳ ವಿರಳ. ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿ ಇರುವುದು ಅಧ್ಯಯನದಿಂದ ತಿಳಿದುಕೊಳ್ಳಲಾಗಿದೆ.

೬. ನೀಲಕಂಠರಾಯನ ಗಡ್ಡೆಗೆ ವಿದ್ಯುತ್ ಸಂಪರ್ಕ, ಸಾರಿಗೆ ಸಂಪರ್ಕ ಸಂಪೂರ್ಣವಾಗಿ ಈ ಗಡ್ಡೆ ಜನರಿಗಿಲ್ಲ. ಇವರು ತೆಪ್ಪವನ್ನು ಅಥವಾ ದೋಣಿಯನ್ನು ಅವಲಂಬಿಸಿರುತ್ತಾರೆ. ಇವರ ಹೆಸರಿನಲ್ಲಿ ಮನೆ, ಭೂಮಿಯನ್ನು ಹೊಂದಿರುವುದಿಲ್ಲ. ಪಡಿತರ ಚೀಟಿ, ಆಧಾರ ಕಾರ್ಡ್ ಕೂಡ ಪಡೆದಿಲ್ಲ. ಸೌಲಭ್ಯಗಳ ಕುರಿತಾಗಿ ಮಾಹಿತಿಯ ಕೊರತೆ ಇರುವುದನ್ನು ಈ ಅಧ್ಯಯನದ ಮೂಲಕ ತಿಳಿದುಬರುತ್ತದೆ. ಈ ನಡುಗಡ್ಡೆ ಸಮಸ್ಯೆಗಳ ಕೊಂಪೆ ಎಂದು ಹೇಳಬಹುದು.

೭. ಮಹಿಳೆಯರನ್ನು ಈ ಕೌಟುಂಬಿಕ ಹಿಂಸೆಯ ಸಾಮಾಜಿಕ ಸಂಸ್ಥೆಗಳಿಂದ ದೂರ ಉಳಿಯುವಂತೆ ಮಾಡಿ ಆಕೆಯ ಚಲನಶೀಲತೆ ಹಾಗೂ ಸ್ವಂತ ಶಕ್ತಿಯ ಕುರಿತು ಆಲೋಚಿಸುವ ಅವಕಾಶವನ್ನೆ ಕಸಿದುಕೊಂಡಿದೆ. ಮದುವೆಯಾಗಿ ಹೊಸ ಬದುಕಿನ ಕನಸುಗಳೊಂದಿಗೆ ಗಂಡನ ಮನೆಗೆ ಬರುವ ಮಹಿಳೆಯು ಹಲವು ರೀತಿಯ ಸವಾಲುಗಳನ್ನು ಎದುರಿಸುತ್ತಿದ್ದಾರೆ. ತಾನು ಹುಟ್ಟಿ ಬೆಳೆದ ಪರಿಸರವನ್ನು ಬಿಟ್ಟು ಹೊಸ ಪರಿಸರಕ್ಕೆ ಹೊಂದಿಕೊಂಡು ಅವರ ಅಭಿರುಚಿ ಧೋರಣೆಗಳನ್ನು ಅರ್ಥ ಮಾಡಿಕೊಳ್ಳುವಾಗ ಏನಾದರೂ ವ್ಯತ್ಯಾಸವಾದರೆ

ಹಿಂಸೆಗೊಳಗಾಗುವುದು ಮಹಿಳೆ. ಈ ಹಿಂಸೆಯ ಒಳಗಡೆ ಪುರುಷ ಪ್ರಧಾನ ಮೌಲ್ಯಗಳು ವಿಜೃಂಭಣೆಯಿದೆ. ಗಂಡನ ಸಂಶಯ, ದುಡಿಯುವುದಿಲ್ಲ, ಗಂಡನ ದುಷ್ಚಟಗಳಿಂದ ಹೀಗೆ ನಾನಾ ರೀತಿಯಲ್ಲಿ ಮಹಿಳೆಯರು ಹಿಂಸೆಯನ್ನು ಮಾಡಿ ಆಕೆಯನ್ನೆ ಹೊಣೆಗಾರಳನ್ನಾಗಿಸುತ್ತಾರೆ.

೮. ನಡುಗಡ್ಡೆಗಳಲ್ಲಿ ನದಿ ತುಂಬಿ ಹರಿಯುವಾಗ ನೀರಿನ ಸಮಸ್ಯೆ ಗಂಭೀರ ಸ್ವರೂಪ ಪಡೆದು ಕೊಳ್ಳುತ್ತದೆ. ೩ ತಿಂಗಳ ಕಾಲ ನಡುಗಡ್ಡೆಯೊಳಗೆ ಜಗತ್ತಿನ ಸಂಪರ್ಕ ಕಳೆದುಕೊಳ್ಳುತ್ತಾರೆ. ಈ ಸಮಯದಲ್ಲಿ ಗಡ್ಡೆಗಳ ಜನರು ತುಂಬ ಗಂಭೀರ ಸವಾಲುಗಳೊಂದಿಗೆ ಇಲ್ಲಿನ ಸಮುದಾಯಗಳು ತಮ್ಮ ಜೀವನಾಂಶಕಗಳಾದ ಆಹಾರ, ಆರೋಗ್ಯ, ವಸತಿ ಇಲ್ಲದಂತಾಗಿ ಪರದಾಡುತ್ತಾರೆ ಎನ್ನುವುದನ್ನು ಅಧ್ಯಯನದಿಂದ ತಿಳಿದುಕೊಳ್ಳಲಾಗಿದೆ.

೯. ಭಾರತೀಯ ಸಮಾಜದಲ್ಲಿ ಮಹಿಳೆಯರಿಗೂ ಪರಿವರ್ತನೆಯ ಹೊಸ ಆಯಾಮಗಳು ಎಟುಕುತ್ತಿವೆ. ಸಮುದಾಯಗಳ ಮಹಿಳೆಯರು ಸ್ಥಿರ ಮನಸ್ಸು ಕಾರ್ಯ ಸಾಧನೆಯ ಸಾಮರ್ಥ್ಯ ಹಾಗೂ ನಿಸ್ವಾರ್ಥ ಸೇವಾಮನೋಭಾವ ಇವೆಲ್ಲವು ಬೆಳಕಿಗೆ ಬರುವಂತಹ ಅವಕಾಶಗಳನ್ನು ಅವರು ಕಲ್ಪಿಸಿಕೊಳ್ಳಬೇಕಾದ ಪರಿಸ್ಥಿತಿಯು ಉಂಟಾಗಿದೆ. ಮಹಿಳೆಯರು ಸಂಪ್ರದಾಯ, ಮೂಢನಂಬಿಕೆಗಳನ್ನು ದಿಕ್ಕರಿಸುವ ಹಾಗೂ ಹೊಸ ಬಗೆಯ ದಿಟ್ಟತನದಿಂದ ಪ್ರಜ್ಞಾವಂತಿಕೆ, ಹೊಸದನ್ನು ಸೃಜಿಸುವ ಕ್ರಿಯಾಶೀಲತೆ ಧ್ಯೇಯೋದ್ದೇಶಗಳು ಸಾಧಿಸಬೇಕಾಗಿದೆ ಎಂದು ಈ ಅಧ್ಯಯನದಿಂದ ತಿಳಿಯಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ನಡುಗಡ್ಡೆಗಳಲ್ಲಿರುವ ಮೇಲಿನ ಎಲ್ಲ ಅಂಶಗಳನ್ನು ಅತಿಮುಖ್ಯವಾಗಿ ಗಮನಿಸಲಾಗಿದೆ. ಇಷ್ಟಲ್ಲದೆ ಇನ್ನು ಫಲಿತಗಳು ತೆರೆಮರೆಯಲ್ಲಿ ಉಳಿದುಕೊಂಡಿವೆ ಎಂದು ಹೇಳಬಹುದು. ಈ ಎಲ್ಲ ಅಂಶಗಳನ್ನು ಈ ಅಧ್ಯಯನ ಮಾಡುವುದರ ಜೊತೆಗೆ ಕ್ಷೇತ್ರಕಾರ್ಯ ದಿಂದ ಸಾಧ್ಯವಾಗಿದೆ. ಒಟ್ಟಾರೆಯಾಗಿ ಈ ಅಧ್ಯಯನವನ್ನು ಜಾನಪದ ಹಿನ್ನೆಲೆಯ ದೃಷ್ಟಿಯಿಂದ ಅಧ್ಯಯನ ಕೈಗೊಳ್ಳಲಾಗಿದೆ. ಇನ್ನಿತರ ಫಲಿತಗಳನ್ನು ಕೂಡ ಕ್ಷೇತ್ರಕಾರ್ಯದ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

### ೮.೨. ಸಲಹೆಗಳು

* ನಡುಗಡ್ಡೆಗಳಲ್ಲಿ ವಾಸಿಸುವ ಜನರಿಗೆ ಸರ್ಕಾರದ ವತಿಯಿಂದ ಆಶ್ರಯ ಮನೆಗಳನ್ನು ಕಲ್ಪಿಸುವುದು.
* ಅಧಿಕಾರಿಗಳ ಅವರ ಮನವೊಲಿಸಿ ಗಡ್ಡೆಯೊಳಗಿಂದ ಹೊರಗಡೆ ಸ್ಥಳಾಂತರಗೊಳಿಸಬೇಕು.
* ನಡುಗಡ್ಡೆಗಳಿಗೆ ನಾಗರಿಕ ಸೌಲಭ್ಯ ಕಲ್ಪಿಸಬೇಕು.
* ಉಚಿತ ಆರೋಗ್ಯ ಸೌಲಭ್ಯವನ್ನು ಒದಗಿಸಬೇಕು.

* ಸ್ಥಳೀಯ ಸರ್ಕಾರದ ಯೋಜನೆಗಳಲ್ಲಿ ಒಂದಾದ ಉದ್ಯೋಗ ಖಾತ್ರಿಯೋಜನೆಯನ್ನು ನಡುಗಡ್ಡೆಗಳಲ್ಲಿ ಅನುಷ್ಠಾನಗೊಳಿಸಬೇಕು.

* ಪ್ರತಿಯೊಂದು ಗಡ್ಡೆಗೆ ಅಂಗನವಾಡಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಬೇಕು.

* ನಡುಗಡ್ಡೆಗಳ ಅಭಿವೃದ್ಧಿ ಮಂಡಳಿ ರಚನೆ ಮಾಡಬೇಕು.

* ಸರ್ಕಾರದ ವತಿಯಿಂದ ಇಂತಹ ನೆಲೆಗಳಲ್ಲಿ ಇರುವ ಜನರಿಗಾಗಿ ಜಾಗೃತಿ ಕಾರ್ಯಕ್ರಮ ಆಯೋಜಿಸಬೇಕು.

* ಪ್ರತಿಯೊಂದು ಕುಟುಂಬಕ್ಕೆ ಗುರುತಿನ ಚೀಟಿಗಳ ವಿತರಣೆ ಸಮರ್ಪಕವಾಗಿ ಆಗಬೇಕು. ಮತ್ತು ಅಂತ್ಯೋದಯ ಪಡಿತರ ಚೀಟಿ ದೊರೆಯಬೇಕು.

* ಈ ನಡುಗಡ್ಡೆಗಳಲ್ಲಿ ವಯಸ್ಕರ ಶಿಕ್ಷಣ ಕೇಂದ್ರಗಳು ಜಾರಿಯಾಗಬೇಕು.

* ಶಿಕ್ಷಣದ ಅರಿವಿನೊಂದಿಗೆ ಸಮುದಾಯಗಳ ಸಂಘಟನೆ ಮತ್ತು ಹಕ್ಕುಗಳ ಕುರಿತು ತಿಳುವಳಿಕೆ ಮತ್ತು ಹೋರಾಟದ ಅಗತ್ಯತೆ ತಿಳಿಸಿ ಕೊಡಬೇಕು.

* ಆರೋಗ್ಯ ಮತ್ತು ನೈರ್ಮಲ್ಯದ ಕುರಿತು ತಿಳುವಳಿಕೆ ಮೂಡಿಸುವುದರಿಂದ ಆರೋಗ್ಯ ಸಂಬಂಧಿ ಸಮಸ್ಯೆಗಳನ್ನು ತಡೆಯಬಹುದು.

* ಕ್ಷೇತ್ರಕಾರ್ಯ ಆಧಾರಿತವಾದ ಮತ್ತು ಸಮಾಜ ಮುಖಿಯಾದ ಯೋಜನೆಗಳ ಜಾರಿಗಾಗಿ ಸಮುದಾಯಗಳನ್ನು ಕೇಂದ್ರೀಕರಿಸಬೇಕಾಗಿದೆ.

* ನದಿ ತುಂಬಿ ಹರಿದು ಹೊಲಗದ್ದೆಗಳಲ್ಲಿ ಬೆಳೆ ನಾಶವಾದಾಗ ಪರಿಹಾರ ಧನವನ್ನು ಕಲ್ಪಿಸಬೇಕು.

* ನದಿಗೆ ಅತಿಹೆಚ್ಚು ನೀರು ಬಂದಾಗ, ಒಂದು ವೇಳೆ ಮನೆಗೆ ನೀರು ನುಗ್ಗಿದರೆ ಇಂತಹ ಸಮಯದಲ್ಲಿ ಉಳಿದುಕೊಳ್ಳಲು, ಒಂದು ಅತಿ ಎತ್ತರವಾದ ತಂಗುದಾಣವನ್ನು ಸರ್ಕಾರ ಪ್ರತಿಯೊಂದು ನಡುಗಡ್ಡೆಗೆ ನಿರ್ಮಿಸಿಕೊಡಬೇಕು.

* ನದಿಗೆ, ನೀರು ಬರುವ ಮುನ್ಸೂಚನೆಯನ್ನು ಒಂದು ವಾರ ಮೊದಲೇ ಸರ್ಕಾರ ಈ ಸಮುದಾಯಗಳಿಗೆ ತಿಳಿಸಬೇಕು.

## ೮.೩. ಮುಂದಿನ ಅಧ್ಯಯನದ ಸಾಧ್ಯತೆಗಳು

ಕೃಷ್ಣಾ ನದಿತೀರದ ನಡುಗಡ್ಡೆಗಳ ಜಾನಪದ ಅಧ್ಯಯನ ಎಂಬ ಶೀರ್ಷಿಕೆ ಅಡಿಯಲ್ಲಿ ಜಾನಪದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಈ ನಡುಗಡ್ಡೆಗಳನ್ನು ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ, ಚಾರಿತ್ರಿಕವಾಗಿ ಹಾಗೂ ಮಾನವಶಾಸ್ತ್ರೀಯ ಮತ್ತು ಪುರಾತತ್ತ್ವ ಹಿನ್ನಲೆಯಲ್ಲಿ ಇನ್ನು ಹೆಚ್ಚಿನ ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ. ಇದುವರೆಗೂ ಈ ನಡುಗಡ್ಡೆಗಳ ಕುರಿತಾಗಿ ಅಧ್ಯಯನ ನಡೆದಿಲ್ಲ. ಈಗ ನಡೆದ ಸಂಶೋಧನೆ ಮೊದಲನೆಯದ್ದಾಗಿದೆ ಎನ್ನಬಹುದು. ಮೊದಲ ಪ್ರಯತ್ನದಲ್ಲಿ ಸ್ಪರ್ಷಿಸಲಾಗದ ತೆರೆಮರೆಯಲ್ಲಿರುವ ಸಾಂಸ್ಕೃತಿಕ ಜಾನಪದ ಅಂಶಗಳನ್ನು ಆಸಕ್ತ ಅಧ್ಯಯನಕಾರರು ಹೆಚ್ಚಿನದಾಗಿ ಅಧ್ಯಯನ ಮಾಡಬಹುದಾಗಿದೆ. ನಡುಗಡ್ಡೆಗಳ ಸಮಸ್ಯೆಗಳ ಕುರಿತು ಇನ್ನು ಹೆಚ್ಚಿನ ಅಧ್ಯಯನ ಆಗಬೇಕಾಗಿದೆ.

ಒಟ್ಟಿನಲ್ಲಿ ಈ ನಡುಗಡ್ಡೆಗಳ ಅಧ್ಯಯನವು ನನ್ನ ಅಧ್ಯಯನ ಮಿತಿಯಲ್ಲಿ ಸಮುದಾಯಗಳ ಅನಾವರಣ ಮತ್ತು ಅಭಿವೃದ್ಧಿಯ ಹಿನ್ನೆಲೆಯಲ್ಲಿ ಸಮಾಜ ಮುಖಿಯಾಗಲೆಂಬ ಆಶಯದೊಂದಿಗೆ ಈ ಸಂಶೋಧನಾ ಚಟುವಟಿಕೆಯನ್ನು ಕೈಗೊಳ್ಳಲಾಗಿದೆ.

ಪರಿಸರದ ಬಗ್ಗೆ ಹೇಳಬೇಕೆಂದರೆ ವರ್ಣಿಸಲು ಅನುಭವಗಳು ಸಾಲದು. ಅಲ್ಲಿನ ನಡುಗಡ್ಡೆಗಳ ವಾತಾವರಣದ ಪರಿಸರ ಸ್ವಚ್ಛಂದ ಪರಿಸರ, ಕಡಲತೀರದ ಕೃಷ್ಣೆಯ ಜುಳು, ಜುಳು ಗಾನ, ಹಕ್ಕಿಗಳ ಇಂಚರ, ಗುಂಪು ಕಟ್ಟಿದ ಬನಸಿರಿ, ಆ ಬನದಲ್ಲಿ ತೊಟ್ಟಿಲಲ್ಲಿ ಕುಳಿತ ತಂಪಾದ ಗಾಳಿಯ ಸೇವೆ ಸವಿಯುತ್ತ ಜುಳು ಜುಳು ನಾದದ ಲಾಲಿ ಹಾಡು ಕೇಳುತ್ತ ನೋಡುಗರನ್ನು ಮೈ ಮರೆಸುತ್ತದೆ ಈ ನಡುಗಡ್ಡೆಗಳ ಪರಿಸರ. ಆದರೆ ಈ ಒಂದು ಅನುಭವ ನಡುಗಡ್ಡೆ ಜನರಿಗೆ ಸಾಮಾನ್ಯವಾಗಿ ಕಾಣುತ್ತದೆ. ಇಂತಹ ನಿಸರ್ಗದ ಮಡಿಲಿನಲ್ಲಿ ವಾಸಿಸುವ ನಡುಗಡ್ಡೆ ಜನರು ಒಂದು ಕಡೆ ಆರೋಗ್ಯವಂತರು, ಇನ್ನೊಂದು ಕಡೆ ಅಲೆಗಳ ಅಬ್ಬರದ ನಡುವೆ ಬದುಕುವ ಇವರ ಜೀವನ ಭಯಂಕರ ಎಂದು ಕ್ಷೇತ್ರಕಾರ್ಯದಿಂದ ಈ ಅನುಭವ ಕಂಡುಕೊಂಡಿದ್ದೇನೆ.

ಸಂಶೋಧನೆಯು ನಿರಂತರ ಪ್ರಕ್ರಿಯೆಯಾಗಿದ್ದು, ಅದು ಈ ನಡುಗಡ್ಡೆಗಳು ಅಧುನಿಕ ಸಮುದಾಯಗಳೊಂದಿಗೆ, ಸಾಗುವಂತಾಗಬೇಕು. ಇದುವರೆಗೂ ಸಂಶೋಧಕರಿಗೆ ನಿಲುಕದ ಜಗತ್ತಿನ ನಡುವೆ ಇದ್ದರೂ ಕೂಡ ಇಲ್ಲದಂತೆ ಬದುಕನ್ನು ಕಟ್ಟಿಕೊಳ್ಳಲಾಗದ ಈ ನಡುಗಡ್ಡೆಗಳು ಸಾಮಾಜಿಕ ಬದುಕನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಇದೇ ಅಂತಿಮವಲ್ಲ. ನಾನು ಇಲ್ಲಿ ನೀಡಿರುವ ಕೆಲವು ಸುಳಿವುಗಳ ಮುಂದೆ ವಿಭಿನ್ನ ದೃಷ್ಟಿಕೋನಗಳಿಂದ ನಡೆಯಬಹುದಾದ ಅಧ್ಯಯನಗಳಿಗೆ ಪೂರಕವಾಗಬಲ್ಲದು ಎಂಬ ಶೈಕ್ಷಣಿಕ ಉದ್ದೇಶದಿಂದ ಅಧ್ಯಯನ ಕೈಗೊಂಡಿದ್ದರೂ ನಡುಗಡ್ಡೆಗಳ ಪರವಾದ ಜಾನಪದ ಆಶಯಗಳಿಂದ ಈ ಮಹಾಪ್ರಬಂಧವನ್ನು ರೂಪಿಸಲಾಗಿದೆ.

## ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ಮಾಹಿತಿದಾರರ ವಿವರಗಳು

೩. ಪ್ರಶ್ನಾವಳಿ

೪. ಛಾಯಾಚಿತ್ರಗಳು

ಅನುಬಂಧ: ಒಂದು

# ಪರಾಮರ್ಶನ ಗ್ರಂಥಗಳು


೧. ಅರ್ಚಕ ಬಿ., ರಂಗಸ್ವಾಮಿ, ೨೦೦೧, **ಹುಟ್ಟಿದ ಹಳ್ಳಿ**, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨. ಅಮೃತ ಸೋಮೇಶ್ವರ, ೧೯೯೮, **ಭಗವತೀ ಆರಾಧನೆ**, ಪ್ರಕೃತಿ ಪ್ರಕಾಶನ, ದಕ್ಷಿಣ ಕನ್ನಡ

೩. ಅಮರೇಶ ಯತಗಲ್, ೨೦೦೭, **ಇತಿಹಾಸ ಇಂಚರ**, ಅದಿತಿ ಪ್ರಕಾಶನ, ಲಿಂಗಸುಗೂರು

೪. ಕರೀಗೌಡ ಬೀಚನಹಳ್ಳಿ, ೧೯೭೯, **ಜಾತ್ರೆಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫. ಕರೋಸ್ಕಿನ, ೧೯೮೭, **ಪುರಾತನ ಜಗತ್ತಿನ ಇತಿಹಾಸ**, ಪ್ರಕಾಶನ

೬. ಕರಿಶೆಟ್ಟಿ ರುದ್ರಪ್ಪ, ೧೯೯೫, **ಮ್ಯಾಸ ನಾಯಕರು: ಒಂದು ಜನಾಂಗೀಯ ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೭. ಕ್ಯಾತನಹಳ್ಳಿ ರಾಮಣ್ಣ, ೧೯೯೭, **ಕ್ಷೇತ್ರಕಾರ್ಯದ ಹಾದಿಯಲ್ಲಿ**, ಅಚ್ಚೆ ಹೊತ್ತಿಗೆ ಪ್ರಕಾಶನ, ಮಂಡ್ಯ ಜಿಲ್ಲೆ

೮. ಕೃಷ್ಣಯ್ಯ ಎ.ಡಿ., ೧೯೭೯, **ಛಲವಾದಿ ಜನಾಂಗ**, ಎ.ಡಿ.ಕೃಷ್ಣಯ್ಯ ಪ್ರಕಾಶನ, ಮೈಸೂರು

೯. ಕೃಷ್ಣಮೂರ್ತಿ ಹನೂರು, ೧೯೯೮, **ಜನಪದ ಮತ್ತು ಬುಡಕಟ್ಟು ಗೀತೆಗಳು**, ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ

೧೦. ಕೃಷ್ಣ ಅಯ್ಯಂಗಾರ ಡಿ., ೧೯೫೬, **ಕನ್ನಡ ನಾಡಿನ ಆದಿವಾಸಿಗಳು**, ಮೈಸೂರು ರಾಜ್ಯ ವಾರ್ತಾ ಇಲಾಖೆ, ಬೆಂಗಳೂರು

೧೧. ಗದ್ದಗಿಮಠ ಬಿ.ಎಸ್., ೧೯೮೮, **ಗದ್ದಗಿಮಠ ಬರಹಗಳು**, ಕನ್ನಡ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೨. ಗುರುಪ್ರಸಾದ್ ಸಿ.ಟಿ., ೨೦೦೫, **ಏಳು ಊರಿನ ದೇವತೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ಗುರುಪ್ರಸಾದ್ ಎಚ್.ಎಸ್., ೨೦೦೭, **ವಲಸಿಗರ ನೆಲೆ ಮರಿಯಮ್ಮನಹಳ್ಳಿ ಸಂಕಥನ**,

೧೪. ಚಂದ್ರಶೇಖರ ಕಂಬಾರ, ೧೯೮೫, **ಕನ್ನಡ ಜಾನಪದ ವಿಶ್ವಕೋಶ, ಸಂ.೨**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೫. ಚಂದ್ರಶೇಖರ ಟಿ.ಆರ್., ೨೦೦೦, **ಕರ್ನಾಟಕ ಅಭಿವೃದ್ಧಿ ಸಾಮಾಜಿಕ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬. ಚೆನ್ನಣ್ಣ ವಾಲೀಕಾರ, ೧೯೯೮, **ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ**, ವಿರಸಂ ದಲಿತ ಬಂಡಾಯ ಸಾಹಿತ್ಯ, ಗುಲಬರ್ಗಾ

೧೭. ಜವರೇಗೌಡ ದೇ.., ೧೯೯೦, **ಸ್ಥಳನಾಮ ವ್ಯಾಸಂಗ**, ಸಹ್ಯಾದ್ರಿ ಪ್ರಕಾಶನ, ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು

೧೮. ಜಗನ್ನಾಥ ಹೆಬ್ಬಾಳೆ, ೧೯೯೭, **ಜಾತ್ರೆಗಳು**

೧೯. ಜಾಜಿ ದೇವೇಂದ್ರಪ್ಪ, ೨೦೦೪, **ಆಂಧ್ರ-ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು**, ವಿಕಾಸ ಪ್ರಕಾಶನ, ಹೊಸಪೇಟೆ

೨೦. ಜೋಗನ್ ಶಂಕರ್, ೧೯೯೫, **ಗ್ರಾಮ ಸಮಾಜ**, ಜೀವ ಪ್ರಕಾಶನ, ಮೈಸೂರು

೨೧. ತಾರಿಹಳ್ಳಿ ಹನುಮಂತಪ್ಪ, ೨೦೧೧, **ಕರ್ನಾಟಕ ಬುಡಕಟ್ಟು, ಸಮುದಾಯಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೨. ತಿಪ್ಪೇಸ್ವಾಮಿ ಜಿ.ಆರ್., ೧೯೯೬, **ಕೋಲಾರಮ್ಮ**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

೨೩. ದೇವರಕೊಂಡಾ ರೆಡ್ಡಿ ಮತ್ತು ಇತರರು(ಸಂ), ೧೯೯೯, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭**, ರಾಯಚೂರು ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೪. **ದೇವನಾಂಪ್ರಿಯ ಸ್ಮರಣ ಸಂಚಿಕೆ**, ೧೯೯೫, ತಾಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಲಿಂಗಸುಗೂರು

೨೫. ನರಸಿಂಹಮೂರ್ತಿ ಎಚ್.ವಿ., ೨೦೦೨, **ನಮ್ಮ ಹಬ್ಬಗಳು**, ನವದುರ್ಗ ಲೋಸರ್‌ಟೆಕ್ ಹೊನ್ನ ಪದ್ಮ ಪ್ರಿಂಟರ್ಸ್, ಉಡುಪಿ

೨೬. ನಾಗೇಗೌಡ ಎಚ್.ಎಲ್., ೧೯೯೧, **ಮಾರಮ್ಮ ಗ್ರಾಮದೇವತೆ,** ಕರ್ನಾಟಕ ಜಾನಪದ ಟ್ರಸ್ಟ್, ಬೆಂಗಳೂರು

೨೭. ನಾಗೇಶ ಎಚ್.ವಿ., ೧೯೮೧, **ಗ್ರಾಮ ವ್ಯಾಸಂಗ,** ಚಂದ್ರನಾಥ ಪ್ರಕಾಶನ, ಧಾರವಾಡ

೨೮. ನಾಯಕ ಹಾ.ಮಾ., ೧೯೭೧, **ಜಾನಪದ ಸವರೂಪ,** ಟಿ.ವಿ.ಮೆಮೋರಿಯಲ್ ಸಿರಿಸ್, ಮೈಸೂರು

೨೯. ಪ್ರಭಾಕರ ಎ.ಎಸ್., ೨೦೦೦, **ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ಪರಮಶಿವಯ್ಯ ಜಿ.ಸಂ., ೧೯೮೮, **ಕನ್ನಡ ಜನಪದ ಕಥೆಗಳು,** ಚೇತನ ಬುಕ್‌ಹೌಸ್, ಮೈಸೂರು

೩೧. ಪುರುಷೋತ್ತಮ ಬಿಳಿಮಲೆ, ೧೯೯೭, **ಕೂಡುಕಟ್ಟು(ಜಾನಪದ ಅಧ್ಯಯನದ ಲೇಖನಗಳು),** ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ

೩೨. ಪುರುಷೋತ್ತಮ ಬಿಳಿಮಲೆ, ೧೯೯೩, **ಜಾನಪದ ಕ್ಷೇತ್ರಕಾರ್ಯ ಆಧುನಿಕ ವಿಧಾನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೩. ಬಸವರಾಜ ಸಬರದ, ೧೯೯೪, **ಜನಪದ ದೇವತೆಗಳು ಮತ್ತು ಶಿಷ್ಟ ದೇವತೆಗಳು,** ಡಾ.ಗುಂಡ್ಮಿ ಪ್ರಶಸ್ತಿ ಸಮಿತಿ, ಕುಂದಾಪುರ

೩೪. ಬಸವರಾಜ ಸಬರದ, ೨೦೦೨, **ಸಮುದಾಯ ಮತ್ತು ಸಂಸ್ಕೃತಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೩೫. ಬಸವರಾಜ ಬಿ.ಎಸ್., ೨೦೧೪, **ಕಬ್ಬಾಳ ಸಂಕಥನ,** ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೬. ಬೋರಲಿಂಗಯ್ಯ ಹಿ.ಚಿ., ೧೯೭೯, **ಉಜ್ಜನಿ ಚೌಡಮ್ಮ,** ದಿನಕರ ಪ್ರಕಾಶನ, ಬೆಂಗಳೂರು

೩೭. ಮಂಜುನಾಥ ಬೇವಿನಕಟ್ಟಿ, ೧೯೯೪, **ಜನಪದ ಸಂಸ್ಕೃತಿ,** ತೇಜಸ್ವಿ ಪ್ರಕಾಶನ, ಹ್ಯಾರಡ

೩೮. ಮಂಜುನಾಥ ಬೇವಿನಕಟ್ಟಿ, ೧೯೯೪, **ಮಲಿಯಮ್ಮ ನಿನ್ನಾಲ್ಕು ಧೋ–ಉಧೋ,** ಅಂಬಿಕಾ ಪ್ರಕಾಶನ, ಹೊಸಪೇಟೆ

೩೯. ಮಂಜುನಾಥ ಬೇವಿನಕಟ್ಟಿ, ೨೦೦೫, **ಜನ ಜಾನಪದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೦. ಮಂಜುನಾಥ ಬೇವಿನಕಟ್ಟಿ, ೨೦೧೬, **ತಳಾದಿ**, ಅರುಣ್ ಪ್ರಕಾಶನ, ಬೆಂಗಳೂರು

೪೧. ಮಂಜುನಾಥ ಬೇವಿನಕಟ್ಟಿ, ೨೦೧೬, **ನೆಮ್ಮು: ನೆಲೆ-ಬೆಲೆ**, ಅರುಣ ಪ್ರಕಾಶನ, ಬೆಂಗಳೂರು

೪೨. ಮಲ್ಲಪ್ಪ ಭೀಮಣ್ಣ, ೨೦೧೬, **ರಾಯಚೂರು ಜಿಲ್ಲೆಯ ದೊಡ್ಡಿಗಳ ತೌಲನಿಕ ಅಧ್ಯಯನ**, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೩. ಮೊಗಳ್ಳಿ ಗಣೇಶ್, ೨೦೦೦, **ಶತಮಾನ**, ಲೋಹಿಯಾ ಪ್ರಕಾಶನ, ಬಳ್ಳಾರಿ

೪೪. ರಂಗಸ್ವಾಮಿ ಡಿ.ಟಿ, ೨೦೦೦, **ಭಾರತದ ಹಬ್ಬಗಳು**,

೪೫. ರಮೇಶ್ ಸ.ಚಿ., ೨೦೧೦, **ಕರ್ನಾಟಕದ ಜನಪದ ಆಚರಣೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೬. ರಮೇಶ್ ಸ.ಚಿ.(ಸಂ), ೨೦೧೧, **ಜಾನಪದ ಸೆಲೆ**, ಅಖಿಲ ಭಾರತ ಜಾನಪದ ಸಮ್ಮೇಳನ, ಬೀದರ್

೪೭. ರಮೇಶ್ ಬೆ.ಗೋ., ೧೯೯೮, **ಭಾರತೀಯ ಹಬ್ಬಗಳು ಮತ್ತು ಸಂಪ್ರದಾಯಗಳು**, ವಾಸನ್ ಬುಕ್ ಡಿಪೋ, ಬೆಂಗಳೂರು

೪೮. ರಾಜಪ್ಪ ಟಿ.ಎಸ್., ೧೯೭೬, **ರಾಯಚೂರು ಜಿಲ್ಲೆಯ ಜನಪದ ಗೀತೆಗಳು**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೪೯. ವಾಲಿ ಎಂ.ಎನ್., ೧೯೮೨, **ಜನಪದ ಜೀವನ ತರಂಗಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫೦. ವೀರಣ್ಣ ದಂಡೆ, ೧೯೯೬, **ಜನಪದ ಸಾಹಿತ್ಯ ಸಿದ್ಧಾಂತಗಳು**, ಬಸವ ಪ್ರಕಾಶನ, ಕಲಬುರ್ಗಿ

೫೧. ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ, ೨೦೧೩, **ಯಮನೂರು ಗ್ರಾಮ ಸಾಂಸ್ಕೃತಿಕ ಸಂಕಥನ**, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೨. ಶಿವರುದ್ರಪ್ಪ ಜಿ.ಎಸ್., ೧೯೮೦, **ಕರ್ನಾಟಕ ಜಾನಪದ**, **ಪ್ರಸಾರಾಂಗ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೫೩. ಸಂಗಣ್ಣ ಆಂದಾನಪ್ಪ ಅಗಡಿ, ೧೯೯೮, **ಶ್ರೀ ನಾರದಗಡ್ಡೆ ಕ್ಷೇತ್ರದರ್ಶನ**, ಸ್ವಯಂ ಪ್ರಭಾ ಗ್ರಂಥಮಲಾ ನಾರದಗಡ್ಡೆ ಮಠ, ರಾಯಚೂರು

೫೪. ಸಿದ್ಧಲಿಂಗಯ್ಯ, ೧೯೮೨, **ಅವತಾರಗಳು**, ಸ್ನೇಹ ಪ್ರಕಾಶನ, ಬೆಂಗಳೂರು

೫೫. ಸಿದ್ಧಲಿಂಗಯ್ಯ ೧೯೯೭, **ಗ್ರಾಮ ದೇವತೆಗಳು**, ಮೂಲಭಾರತಿ ಪ್ರಕಾಶನ, ಬೆಂಗಳೂರು

೫೬. ಸುಮಂಗಲಾ ಬಿ.ಅತ್ತಿಗೇರಿ, ೨೦೦೩, **ಶಿಗ್ಗಾಂವ ದೈವದ್ಯಾಮವ್ವ: ಪ್ರಸ್ತುತಿಕರಣ**, ಪಿಎಚ್.ಡಿ.ಮಹಾ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೭. ಸುಂಕಾಪುರ ಎಂ.ಎಸ್., ೧೯೭೫, **ಜೀವನ ಜೋಕಾಲಿ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫೮. ಸೋಮಶೇಖರ ಇಮ್ರಾಪೂರ, ೧೯೭೭, **ಜಾನಪದ ವಿಜ್ಞಾನ**, ಚೇತನಾ ಪ್ರಕಾಶನ, ಧಾರವಾಡ

೫೯. ಹಿರೇಮಠ ಎಸ್.ಎಸ್, ೧೯೯೨, **ಕರ್ನಾಟಕ ಸಂಸ್ಕೃತಿ ಪರಂಪರೆ**, ಸಮತಾ ಪ್ರಕಾಶನ, ಹರಪನಹಳ್ಳಿ

೬೦. ಹೆಗಡೆ ಎಲ್.ಆರ್., ೧೯೭೮, **ಜನಪದ ಸಾಹಿತ್ಯ**, ಐ.ಬಿ.ಎಚ್., ಪ್ರಕಾಶನ, ಬೆಂಗಳೂರು

**English Books**

1. Ethren fels or mother Rightin India, Hyderbad, 1941

2. Thursto E., Castes and Tribes of South India Volumes 2, VI-105, Madras, 1909

3. A Noble Queenal A Romance of Indian History Meadows Taylor, 1996

**ದಿನಪತ್ರಿಕೆಗಳು**

೧. ಪ್ರಜಾವಾಣಿ ದಿನಪತ್ರಿಕೆ

೨. ವಿಜಯ ಕರ್ನಾಟಕ ದಿನಪತ್ರಿಕೆ

೩. ಕನ್ನಡ ಪ್ರಭ ದಿನಪತ್ರಿಕೆ

೪. ರಾಯಚೂರುವಾಣಿ ದಿನಪತ್ರಿಕೆ

೫. ಸಂಯುಕ್ತ ಕರ್ನಾಟಕ ದಿನಪತ್ರಿಕೆ

೬. ಕರ್ಮವೀರ ವಾರಪತ್ರಿಕೆ

೭. ಸುಧಾ ವಾರಪತ್ರಿಕೆ

೮. ತರಂಗ ವಾರಪತ್ರಿಕೆ

೯ ಸಾಪ್ತಾಹಿಕ ವಾರಪತ್ರಿಕೆ

೧೦. ಟಿ.ವಿ.೯, ಕನ್ನಡ ದೃಶ್ಯ ಮಾಧ್ಯಮ(ನ್ಯೂಸ್ ಚಾನಲ್) ಕರ್ನಾಟಕ

**ನಿಯತಕಾಲಿಕೆಗಳು**

೧. ªÀÄdÄ£ÁxÀ¨ÉÃ«£ÀPÀÖ(¸À), 2016, **ಜಾನಪದ ಕರ್ನಾಟಕ,** ಸಂಪುಟ ೯, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೨. ಮಂಜುನಾಥ ಬೇವಿನಕಟ್ಟಿ(ಸಂ), ೨೦೧೬, **ಜಾನಪದ ಕರ್ನಾಟಕ,** ಸಂಪುಟ೮, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ರಮೇಶ್ ಸ.ಚಿ.(ಸಂ), ೨೦೧೦, **ಜಾನಪದ ಕರ್ನಾಟಕ,** ಸಂಪುಟ ೯, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಹೆಬ್ಬಾಲೆ ಕೆ.ನಾಗೇಶ್(ಸಂ), ೨೦೦೬, **ಜಾನಪದ ಕರ್ನಾಟಕ,** ಸಂಪುಟ ೫, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಅನುಬಂಧ: ಎರಡು

# ಮಾಹಿತಿದಾರರ ವಿವರ

| ಹೆಸರು | ಲಿಂಗ | ವಯಸ್ಸು | ಜಾತಿ | ಸ್ಥಳ |
|---|---|---|---|---|
| ಸಾವರಮ್ಮ/ಜಂಗ್ಲಿಪ್ಪ | ಹೆಣ್ಣು | ೮೦ | ಮಾದಿಗ | ಕುರವಪುರ ಗಡ್ಡೆ |
| ಮಲ್ಲಮ್ಮ/ತಿಮ್ಮಪ್ಪ | ಹೆಣ್ಣು | ೩೦ | ಮಾದಿಗ | – |
| ಅಂಜಿನಮ್ಮ/ಮಹದೇವಪ್ಪ | ಹೆಣ್ಣು | ೭೫ | ಹರಿಜನ | – |
| ನರಸಮ್ಮ/ಆಂಪ್ಪ | ಹೆಣ್ಣು | ೬೦ | ಹರಿಜನ | – |
| ಲಕ್ಷ್ಮಮ್ಮ | ಹೆಣ್ಣು | ೬೩ | ಹರಿಜನ | – |
| ದಳಪತಿ | ಗಂಡು | ೬೫ | ಗೊಲ್ಲರ | – |
| ನಿಂಗಪ್ಪ | ಗಂಡು | ೭೫ | ಗೊಲ್ಲರು | – |
| ಗದ್ದೆಪ್ಪ ಬಯಲುಗುಡ್ಡ | ಗಂಡು | ೮೦ | – | ದೇವರಗಡ್ಡೆ |
| ಮಹಾದೇವಪ್ಪ | ಗಂಡು | – | – | – |
| ಲಕ್ಕಪ್ಪ | ಗಂಡು | – | – | – |
| ಗದ್ದೆಮ್ಮ | ಹೆಣ್ಣು | – | – | – |
| ಲಕ್ಷ್ಮೀಅಂಗನವಾಡಿ(ಟೀಚರ್) | ಹೆಣ್ಣು | ೩೫ | – | – |
| ಹಾಜಿಮಲಂಗ ಚಾಂದಸಾಬ | ಗಂಡು | ೩೯ | ಮುಸ್ಲಿಂ | ಮೇಲಿನಗಡ್ಡೆ |

(ಬಿಜಲಿ ಸ್ಕೂಲ್ ಟೀಚರ್)

| | | | | |
|---|---|---|---|---|
| ಖಾಸೀಂ ಸಾಬ್ | ಗಂಡು | ೪೫ | ಮುಸ್ಲಿಂ | – |
| ಲಕ್ಕಪ್ಪ–ಮಾಳಪ್ಪ | ಗಂಡು | ೭೫ | ಕುರುಬ | – |
| ಮುದಕಪ್ಪಗೌಡ | ಗಂಡು | ೬೫ | ಕುರುಬ | – |
| ಮಾನಪ್ಪ/ಹನುಮಪ್ಪ | ಗಂಡು | ೪೫ | ನಾಯಕ | ಹಂಚಿನಾಳ |

| ಹೆಸರು | ಲಿಂಗ | ವಯಸ್ಸು | ಜಾತಿ | ವೃತ್ತಿ | ಸ್ಥಳ |
|---|---|---|---|---|---|
| ಲಿಂಗಪ್ಪ/ದುರುಗಪ್ಪ | ಗಂಡು | ೩೦ | – | ಬಸ್‌ಕಂಡಕ್ಟರ್ | – |
| ಫಕೀರಪ್ಪ/ಮಾಳಪ್ಪ | ಗಂಡು | ೬೫ | ಕುರುಬ | ಒಕ್ಕಲುತನ | ಹಂಚಿನಾಳ |
| ಬಸಪ್ಪ/ಹನಮಪ್ಪ | ಗಂಡು | ೬೫ | ನಾಯಕ | ಒಕ್ಕಲುತನ | – |
| ಯಲ್ಲಪ್ಪ/ತಿಪ್ಪಣ್ಣ | ಗಂಡು | ೬೦ | ನಾಯಕ | ಒಕ್ಕಲುತನ | – |
| ಬಸವರಾಜತಾತ | ಗಂಡು | ೭೦ | ಜಂಗಮ | ಪೂಜಾರಿ | ಜಲದುರ್ಗ |
| ಖಾಸಿಂಸಾಬ | ಗಂಡು | ೭೦ | ಮುಸ್ಲಿಂ | ಒಕ್ಕಲುತನ | ಕಡದರಗಡ್ಡೆ |
| ಹುಲಗಪ್ಪ | ಗಂಡು | ೪೦ | ನಾಯಕ | ಒಕ್ಕಲುತನ | – |
| ರಾಮಪ್ಪ | ಗಂಡು | ೪೦ | ನಾಯಕ | ಒಕ್ಕಲುತನ | – |
| ದುರಗಪ್ಪ | ಗಂಡು | ೩೦ | ನಾಯಕ | – | – |
| ಬಾಲಗೌಡ | ಗಂಡು | ೩೦ | – | ಪೊಲೀಸ್ | – |
| ಯಲ್ಲಪ್ಪ/ದ್ಯಾನಪ್ಪ | ಗಂಡು | ೫೦ | ನಾಯಕ | ಒಕ್ಕಲುತನ | ಯರಗೋಡಿ |
| ಹನುಮಪ್ಪ/ಹನುಮಪ್ಪ | ಗಂಡು | ೫೫ | ನಾಯಕ | ಒಕ್ಕಲುತನ | – |
| ಹನುಮವ್ವ/ಫಕೀರಪ್ಪ | ಹೆಣ್ಣು | ೪೫ | – | – | – |
| ದೇವಮ್ಮ/ದುರುಗಪ್ಪ | ಹೆಣ್ಣು | ೪೮ | – | – | – |
| ವಿಜಯಬಾಯಿ ಪೂಜಾರ | ಹೆಣ್ಣು | ೬೮ | ಬ್ರಾಹ್ಮಣ | ಮನೆಕೆಲಸ | ಕುರವಪುರಗಡ್ಡೆ |
| ಶ್ರೀಪಾದಭಟ್ಟ ಪೂಜಾರ | ಗಂಡು | ೭೦ | ಬ್ರಾಹ್ಮಣ | ಪೂಜಾರ | – |

| | | | | | |
|---|---|---|---|---|---|
| ನಳಿನಿ ಪೂಜಾರ | ಹೆಣ್ಣು | ೪೦ | ಬ್ರಾಹ್ಮಣ | ಟೀಚರ್ | – |
| ರಜನಿ ಪೂಜಾರ | ಹೆಣ್ಣು | ೩೫ | ಬ್ರಾಹ್ಮಣ | ಟೀಚರ್ | – |
| ತಿಪ್ಪಯ್ಯ | ಗಂಡು | ೪೦ | – | ಪೋಸ್ಟ್‌ಮಾಸ್ಟರ್ | – |
| ಜಗನ್ನಾಥ | ಗಂಡು | ೪೦ | – | LIC ಏಜೆಂಟ್ | – |
| ಶ್ರೀಸಿದ್ದಲಿಂಗಸ್ವಾಮಿ | ಗಂಡು | ೮೦ | ಜಂಗಮ | ಪೂಜಾರ | ರಾಮಗಡ್ಡೆ |
| ಗುರುಸಿದ್ದಲಿಂಗಸ್ವಾಮಿ | ಗಂಡು | ೩೦ | ಜಂಗಮ | ಪೂಜಾರ | – |
| ಸುರೇಂದ್ರನಾಯ್ಕ | ಗಂಡು | ೩೭ | ಲಂಬಾಣಿ | ಶಿಕ್ಷಕರು | ದೇವರಗಡ್ಡೆ |
| ವಾಸುದೇವಭಟ್ಟ | ಗಂಡು | ೬೫ | ಬ್ರಾಹ್ಮಣ | ಅರ್ಚಕರು | ಕುರವಪುರಗಡ್ಡೆ |
| ಹಣಮಂತ್ರಾಯ | ಗಂಡು | ೪೩ | – | ಶಿಕ್ಷಕರು | ದೇವರಗಡ್ಡೆ |
| ಬಸವಂತರಾಯಗೌಡ | ಗಂಡು | ೪೫ | – | ಶಿಕ್ಷಕರು | – |
| ಶ್ರೀಮತಿ ಇಂದಿರಾ | ಹೆಣ್ಣು | ೪೫ | – | ಶಿಕ್ಷಕರು | – |
| ಸುಭಾಸ್ | ಗಂಡು | ೪೬ | – | ಶಿಕ್ಷಕರು | – |
| ಮುಕ್ತಮನಾ | ಗಂಡು | ೫೪ | – | ಶಿಕ್ಷಕರು | – |
| ಗದ್ದೆಪ್ಪ | ಗಂಡು | ೪೦ | ನಾಯಕ | ಒಕ್ಕಲುತನ | – |
| ಜಕ್ಕಪ್ಪ ಮಕಾಶಿ | ಗಂಡು | ೬೫ | ಕುರುಬ | ಕೃಷಿ | – |
| ಬಸಪ್ಪ | ಗಂಡು | ೬೦ | ಕುರುಬ | ಕೃಷಿ | – |
| ಜಿ.ಸತ್ಯನಾರಾಯಣ | ಗಂಡು | ೫೨ | ಕುರುಬ | ಒಕ್ಕಲುತನ | ಕಡದರಗಡ್ಡೆ |
| ಬಸವಣ್ಣ/ಬಾಲಪ್ಪ | ಗಂಡು | ೫೫ | ನಾಯಕ | ಒಕ್ಕಲತನ | ಯರಗೋಡೆ |
| ಬಸಪ್ಪ | ಗಂಡು | ೩೫ | ನಾಯಕ | ಸದಸ್ಯರು | – |
| ಗುಂಡಪ್ಪ/ಹನುಮಪ್ಪ | ಗಂಡು | ೪೦ | ನಾಯಕ | ಸದಸ್ಯರು | – |
| ಪ್ರಭುದೇವತಾತ | ಗಂಡು | ೭೦ | ಜಂಗಮ | ಅರ್ಚಕರು | ಜಲದುರ್ಗ |
| ಬಸವರಾಜತಾತ | ಗಂಡು | ೭೩ | ಜಂಗಮ | ಅರ್ಚಕರು | – |

| | | | | | |
|---|---|---|---|---|---|
| ನೀಲಮ್ಮ/ಹನುಮಪ್ಪ | ಹೆಣ್ಣು | ೬೫ | ನಾಯಕ | ಕೂಲಿ | ನೀಲಕಂಠರಾಯನಗಡ್ಡೆ |
| ಚಂದ್ರಶೇಖರಯ್ಯ ಸ್ವಾಮಿ | ಗಂಡು | ೫೧ | ಜಂಗಮ | ಪೂಜಾರಿ | ನಾರದಗಡ್ಡೆ |
| ಧರ್ಮರೆಡ್ಡಿ | ಗಂಡು | ೫೫ | ಜಂಗಮ | ಕೃಷಿ | ನಾರದಗಡ್ಡೆ |
| ಹನುಮಂತಿ | ಹೆಣ್ಣು | ૩೧ | ಮಾದಿಗ | ಕೂಲಿ | ಕುರಬಗಡ್ಡೆ |
| ಗದ್ದೆಮ್ಮ | ಹೆಣ್ಣು | ೫೫ | ನಾಯಕ | ಕೂಲಿ | ದೇವರಗಡ್ಡೆ |
| ದ್ಯಾವಮ್ಮ | ಹೆಣ್ಣು | ೬೦ | ನಾಯಕ | ಕೃಷಿಕೆಲಸ | ಹಂಚಿನಾಳ |
| ದೇವಮ್ಮ | ಹೆಣ್ಣು | ೬೫ | ನಾಯಕ | ಮನೆಕೆಲಸ | – |
| ದುರುಗಮ್ಮ | ಹೆಣ್ಣು | ೬೨ | ಹರಿಜನ | ಕೂಲಿ | ಕುರವಪುರಗಡ್ಡೆ |
| ಹನಮವ್ವ | ಹೆಣ್ಣು | ೬೦ | ನಾಯಕ | ಕೂಲಿ | ಜಲದುರ್ಗ |
| ಶಾಂತಮ್ಮ | ಹೆಣ್ಣು | ೬೨ | ಕಟ್ಬಿರ | ಕೂಲಿ | ದೇವರಗಡ್ಡೆ |
| ಹನಮಪ್ಪ | ಗಂಡು | ೬೫ | ನಾಯಕ | ಕೃಷಿ | ಹಂಚಿನಾಳ |
| ಬಸಮ್ಮ | ಹೆಣ್ಣು | ೬೩ | ನಾಯಕ | ಕೃಷಿ | ಹಂಚಿನಾಳ |
| ನೀಲಕಂಠರಾಯ | ಗಂಡು | ೪೫ | ನಾಯಕ | ಕೃಷಿ | ನೀಲಕಂಠರಾಯನಗಡ್ಡೆ |
| ನೀಲಮ್ಮ | ಹೆಣ್ಣು | ೪೦ | ನಾಯಕ | ಕೂಲಿ | – |
| ಯಲ್ಲವ್ವ | ಹೆಣ್ಣು | ೪೧ | ನಾಯಕ | ಕೂಲಿ | – |
| ಹನುಮಪ್ಪ | ಗಂಡು | ೫೦ | ನಾಯಕ | ಕೃಷಿ | – |
| ಸೋಮಶೇಖರ | ಗಂಡು | ೪೫ | ನಾಯಕ | ಟೀಚರ್ | ಕಕ್ಕೆರಾ. |

## ಅನುಬಂಧ: ಮೂರು

# ಪ್ರಶ್ನಾವಳಿ

### I ಸಾಮಾನ್ಯ ಮಾಹಿತಿ

೧. **ಹೆಸರು**.................................

೨. **ಲಿಂಗ**

೧. ಗಂಡು ೨. ಹೆಣ್ಣು

೩. **ವಯಸ್ಸು**

೧. ೨೦–೩೦ ೨. ೩೧–೪೦ ೩. ೪೧–೫೦

೪. ೫೧–೬೦ ೫. ೬೦ಕ್ಕಿಂತ ಮೇಲ್ಪಟ್ಟು

೪. **ಜಾತಿ**

೧. ಪ.ಜಾತಿ ೨. ಪ.ಪಂಗಡ ೩. ಹಿಂದುಳಿದವರ್ಗ ೪. ಸಾಮಾನ್ಯ

೫. **ಉಪಜಾತಿ**

೧. ಹಿಂದೂ ೨. ಮುಸ್ಲಿಂ ೩. ಕ್ರಿಶ್ಚಿಯನ್ ೪. ಇತರೆ

೬. **ವೈವಾಹಿಕ ಸಂಬಂಧ**

೧. ವಿವಾಹಿತೆ ೨. ಅವಿವಾಹಿತೆ ೩. ವಿವಾಹ ವಿಚ್ಛೇದನ ೪. ವಿಧವೆ

೭. **ಶಿಕ್ಷಣ**

೧. ಅನಕ್ಷರತೆ ೨. ಅಕ್ಷರ ಜ್ಞಾನ ೩. ಪೂರ್ವಪ್ರಾಥಮಿಕ(೧ರಿಂದ ೫)

೪. ಹಿರಿಯ ಪ್ರಾಥಮಿಕ(೬ರಿಂದ ೮) ೫. ಪ್ರೌಢ ಶಿಕ್ಷಣ(೯ರಿಂದ ೧೦)

೬. ಪದವಿಪೂರ್ವ ೭. ಪದವಿ

೮. **ಕುಟುಂಬದ ವಿಧ**

೧. ವಿಭಕ್ತ ೨. ಅವಿಭಕ್ತ

೯. **ಕುಟುಂಬದ ಗಾತ್ರ**

೧. ಇಬ್ಬರು ೨. ೩ರಿಂದ ೫ ೩. ೬ರಿಂದ ೧೦ ೪. ೧೧ಕ್ಕಿಂತ ಮೇಲ್ಪಟ್ಟು

## II ಸಾಮಾಜಿಕ ಸ್ಥಾನಮಾನ

೧೧. ನಿಮ್ಮ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆಯೇ

೧. ಹೌದು ೨. ಇಲ್ಲ

೧೨. ಹೌದಾದರೆ ಯಾವ ಶಾಲೆಗೆ

೧. ಸರ್ಕಾರಿ ಶಾಲೆ ೨. ಖಾಸಗಿ ಶಾಲೆ

೧೩. ನೀವು ಹೆರಿಗೆ ಎಲ್ಲಿ ಮಾಡಿಸುತ್ತೀರಿ

೧. ಮನೆಯಲ್ಲಿ ೨. ಆಸ್ಪತ್ರೆಯಲ್ಲಿ

೧೪. ಯಾವ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸುತ್ತೀರಾ

೧. ಸರಕಾರಿ ಆಸ್ಪತ್ರೆ ೨. ಖಾಸಗಿ ಆಸ್ಪತ್ರೆ

೧೫. ನೀವು ಖಾಸಗಿ ವೈದ್ಯವನ್ನು ಪಡೆಯಲು ಖರ್ಚು ಎಷ್ಟು

೧. ೫೦೦ರಿಂದ ೧೦೦೦ ೨. ೧೦೦೧ರಿಂದ ೨೦೦೦

೩. ೨೦೦೦ಕ್ಕಿಂತ ಮೇಲ್ಪಟ್ಟು

೧೬. ನೀವು ಸರಕಾರಿ ವೈದ್ಯವನ್ನು ಪಡೆಯಲು ಖರ್ಚು ಎಷ್ಟು

೧. ೧೦ರಿಂದ ೫೦ ೨. ೫೧ರಿಂದ ೧೦೦

೩. ೧೦೧ರಿಂದ ೨೦೦

೧೭. ಸರಕಾರಿ ವೈದ್ಯಾಧಿಕಾರಿಗಳು ಸರಕಾರದಿಂದ ಬಂದಿರುವ ಮಾತ್ರೆಗಳನ್ನು ಕೊಡುತ್ತಾರೆಯೇ ಅಥವಾ ಹೊರಗಡೆ ತರಲು ಚೀಟಿ ಕೊಡುತ್ತಾರೆಯೇ?

೧. ಹೌದು ೨. ಇಲ್ಲ

೧೮. ತಪಾಸಣೆ ಮಾಡಿದಾಗ ಸರಕಾರದಿಂದ ಬಂದಿರುವ ಗುಳಿಗೆಗಳನ್ನು ಅಥವಾ ಹೊರಗಡೆ ತರಲು ಚೀಟಿ ಕೊಡುತ್ತಾರೆಯೇ?

೧. ಸರ್ಕಾರದಿಂದ ಬಂದಿರುವ ಗುಳಿಗೆಗಳು

೨. ಹೊರಗಡೆಯಿಂದ ತುರುವುದಕ್ಕೆ ಹೇಳುತ್ತಾರೆ

೧೯. ನಿಮಗೆ ಪಡಿತರ ಚೀಟಿ ಇದೆಯೇ?

೧. ಹೌದು ೨. ಇಲ್ಲ

೨೦. ಹೌದಾದರೆ

೧. ಎಪಿಎಲ್ ೨. ಬಿಪಿಎಲ್ ೩. ಅಂತ್ಯೋದಯ

೨೧. ನಿಮಗೆ ಪಡಿತ ಚೀಟಿಯಿಂದ ದೊರೆತ ಆಹಾರ ಪ್ರಮಾಣ

| ಕ್ರ.ಸಂ. | ವಿವರ | ತಿಂಗಳಿಗೆ(ಕೆ.ಜಿ.ಗಳಲ್ಲಿ) |
|---|---|---|
| ೧. | ಅಕ್ಕಿ | |
| ೨. | ಗೋಧಿ | |

೨೨. ನಿಮ್ಮ ಕುಟುಂಬಕ್ಕೆ ಎಷ್ಟು ಆಹಾರ ಬೇಕು

| ಕ್ರ.ಸಂ. | ವಿವರ | ತಿಂಗಳಿಗೆ(ಕೆ.ಜಿ.ಗಳಲ್ಲಿ) |
|---|---|---|
| ೧. | ಅಕ್ಕಿ | |
| ೨. | ಗೋಧಿ | |

೨೩. ಒಂದು ದಿನದಲ್ಲಿ ಎಷ್ಟು ಬಾರಿ ಊಟ ಮಾಡುತ್ತೀರಿ

೧. ಒಂದು ಸಾರಿ ೨. ಎರಡು ಸಾರಿ ೩. ಮೂರು ಸಾರಿ

೨೪. ಮನೆ ಇದೆಯೇ

೧. ಇದೆ ೨. ಇಲ್ಲ

೨೫. ಮನೆಯ ಸ್ವರೂಪ

೧. ಗುಡಿಸಲು ೨. ಮಣ್ಣಿನ ಮನೆ ೩. ಶೀಟಿನ ಮನೆ ೪. ಆರ್.ಸಿ.ಸಿ.ಮನೆ

೨೬. ಸ್ನಾನಗೃಹ ಇದೆಯೇ

೧. ಇದೆ ೨. ಇಲ್ಲ

೨೭. ನಿಮ್ಮ ಮನೆಯಲ್ಲಿ ಶೌಚಾಲಯ ಇದೆಯೇ

೧. ಇದೆ ೨. ಇಲ್ಲ

೨೮. ಇಲ್ಲವಾದರೆ ಎಲ್ಲಿಗೆ ಹೋಗುತ್ತೀರಿ

೧. ಸಮುದಾಯ ಶೌಚಾಲಯ ೨. ಹೊರಗೆ ಹೋಗುತ್ತೇವೆ.

೨೯. ಇಲ್ಲವಾದರೆ ಏಕೆ

೧. ಸ್ಥಳದ ಕೊರತೆ ೨. ಹಣದ ಕೊರತೆ ೩. ಇತರೆ ಕಾರಣಗಳು

೩೦. ಕುಡಿಯುವ ನೀರಿನ ಮೂಲ ಯಾವುದು

೧. ಸ್ವಂತ ನಳ ೨. ಸಾರ್ವಜನಿಕ ನಳ ೩. ಬಾವಿ

೪. ಬೋರ್‌ವೆಲ್ ೫. ಕಾಲುವೆ ೬. ನದಿ

೩೧. ಮನೆಯಿಂದ ಕುಡಿಯುವ ನೀರು ಎಷ್ಟು ದೂರದಲ್ಲಿದೆ

೧. ೧೦ರಿಂದ ೫೦ ಮೀಟರ್ ೨. ೫೧ರಿಂದ ೧೦೦ ಮೀಟರ್

೩. ೧೦೧ರಿಂದ ೨೦೦ ಮೀಟರ್ ೪. ೨೦೦ಕ್ಕಿಂತ ಮೇಲ್ಪಟ್ಟು

೩೨. ನಿಮ್ಮ ಊರಿನಲ್ಲಿ ಕುಡಿಯುವ ನೀರಿನ ಗುಣಮಟ್ಟ ಹೇಗಿದೆ

೧. ಉತ್ತಮ ೨. ತೃಪ್ತಿಕರ ೩. ಶೋಚನೀಯ

೩೩. ನಿಮ್ಮ ಮಕ್ಕಳು ಎಷ್ಟು ಇರಬೇಕೆಂದು ಯಾರು ನಿರ್ಧಾರ ಮಾಡುತ್ತಾರೆ

೧. ನಾನು ೨. ನಾನು ಮತ್ತು ನನ್ನ ಗಂಡ

೩. ಗಂಡ ಮತ್ತು ಅತ್ತೆ, ಮಾವ ೪. ಕುಟುಂಬದ ಎಲ್ಲಾ ಸದಸ್ಯರು

೩೪. ಸಾಮಾನ್ಯವಾಗಿ ಹೆಣ್ಣುಮಕ್ಕಳಿಗೆ ಯಾವ ವಯಸ್ಸಿನಲ್ಲಿ ವಿವಾಹ ಮಾಡುತ್ತಾರೆ

೧. ೧೬ ರಿಂದ ೧೮ ವರ್ಷ ೨. ೧೯ರಿಂದ ೨೦ ವರ್ಷ

೩. ೨೧ರಿಂದ ೨೨ ವರ್ಷ

೩೫. ಹೆಣ್ಣಮಕ್ಕಳಿಗೆ ಇಷ್ಟೇ ವಯಸ್ಸಿನಲ್ಲಿ ಮದುವೆಯನ್ನು ಮಾಡಬೇಕೆಂದು ಯಾರು ನಿರ್ಧಾರ ಮಾಡುತ್ತಾರೆ.

೧. ನಾನು ೨. ನಾನು ಮತ್ತು ನನ್ನ ಗಂಡ ೩. ಕುಟುಂಬದ ಎಲ್ಲಾ ಸದಸ್ಯರು

೩೬. ನೀವು ಊಟ ಮಾಡುವ ಸಮಯದಲ್ಲಿ ಕುಟುಂಬದ ಎಲ್ಲ ಸದಸ್ಯರೂ ಸೇರಿ ಮಾಡುತ್ತೀರಾ

೧. ಹೌದು ೨. ಇಲ್ಲ

೩೭. ಇಲ್ಲವಾದರೆ ಯಾರು ಮೊದಲು ಊಟ ಮಾಡುತ್ತಾರೆ

೧. ನನ್ನ ಗಂಡ ಮತ್ತು ಅತ್ತೆ, ಮಾವ

೨. ಕುಟುಂಬದ ಎಲ್ಲಾ ಸದಸ್ಯರು ಆದ ನಂತರ

೩೮. ನಿಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಸಂಬಂಧಿಸಿದಂತೆ ನೀವು ನಿರ್ಧಾರ ತೆಗೆದುಕೊಳ್ಳುತ್ತೀರಾ

೧. ಹೌದು ೨. ಇಲ್ಲ

೩೯. ನೀವು ಆಸ್ತಿ ಕೊಂಡುಕೊಳ್ಳುವುದರ ವಿಚಾರದಲ್ಲಿ ನಿಮ್ಮದೇ ಅಂತಿಮ ನಿರ್ಣಯವಾಗಿರು

ತ್ತದೆಯೇ

೧. ಹೌದು ೨. ಇಲ್ಲ

೪೦. ಇಲ್ಲವಾದರೆ ಯಾರು ಅಂತಿಮ ನಿರ್ಧಾರ ತೆಗೆದುಕೊಳ್ಳುತ್ತಾರೆ.

೧. ನಾನು ಮತ್ತು ನನ್ನ ಗಂಡ

೨. ಗಂಡ ಮತ್ತು ಅತ್ತೆ ಮಾವ

೩. ಕುಟುಂಬದ ಎಲ್ಲಾ ಸದಸ್ಯರು

೪೧. ನೀವು ಗಳಿಸಿದ ಆದಾಯವನ್ನು ಯಾರು ಖರ್ಚು ಮಾಡುತ್ತಾರೆ

೧. ನನ್ನ ಇಷ್ಟದ ಪ್ರಕಾರ

೨. ನನ್ನ ಗಂಡನಿಗೆ ಒಪ್ಪಿಸುವುದು

೩. ಗಂಡ–ಹೆಂಡತಿ ಇಬ್ಬರು ತೀರ್ಮಾನಿಸಿದಂತೆ ಖರ್ಚು ಮಾಡುತ್ತೇವೆ

೪. ಕುಟುಂಬದ ಹಿರಿಯರಿಗೆ ಒಪ್ಪಿಸುವುದು

೪೨. ಮಕ್ಕಳನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವ ಸಮದಯಲ್ಲಿ ಯಾವ ಆಸ್ಪತ್ರೆಗೆ ಹೋಗಬೇಕೆಂದು ಯಾರು ನಿರ್ಧಾರ ತೆಗೆದುಕೊಳ್ಳುತ್ತಾರೆ.

೧. ನಾನು ೨. ನಾನು ಮತ್ತು ನನ್ನ ಗಂಡ

೩. ಅತ್ತೆ ಮಾವ ೪. ಕುಟುಂಬದ ಎಲ್ಲಾ ಸದಸ್ಯರು

## II ಆರ್ಥಿಕ ಸ್ಥಾನಮಾನ

೪೩. ನೀವು ಯಾವ ಕೆಲಸ ಮಾಡುತ್ತೀರಾ________________

೪೪. ನಿಮಗೆ ಸ್ವಂತ ಭೂಮಿ ಇದೆಯೇ

೧. ಹೌದು ೨. ಇಲ್ಲ

೪೫. ಹೌದಾದರೆ

| ಕ್ರಸಂ. | ವಿವರ | ಸ್ವಂತ(ಎಕರೆಗಳಲ್ಲಿ) | ಗೇಣಿ(ಎಕರೆಗಳಲ್ಲಿ) |
|---|---|---|---|
| ೧. | ನೀರಾವರಿ | | |
| ೨. | ಒಣಭೂಮಿ | | |
| ೩. | ಬಂಜರು ಭೂಮಿ | | |

೪೬. ನೀವು ಯಾವ ಬೆಳೆಯನ್ನು ಬೆಳೆಯುತ್ತೀರಾ

೧. ಭತ್ತ ೨. ಹತ್ತಿ ೩. ಗೋಧಿ

೪. ಮೆಕ್ಕೆಜೋಳ ೫. ತೊಗರಿ ೬. ಈರುಳ್ಳಿ ೭. ಇತರೆ

೪೭. ನಿಮ್ಮ ಕುಟುಂಬ ಹೊಂದಿದ ಆಸ್ತಿ

೧. ಟಿವಿ ೨. ಫ್ಯಾನ್ ೩. ಸೈಕಲ್ ೪. ಸೈಕಲ್ ಮೋಟರ್

೫. ಎತ್ತಿನ ಬಂಡಿ ೬. ದನಗಳು ೭. ಎಮ್ಮೆಗಳು ೮. ಕುರಿ ಮತ್ತು ಮೇಕೆ

೯. ಕೋಳಿಗಳು ೧೦. ಆಟೋರಿಕ್ಷಾ ೧೧. ಇತರೆ

೪೮. ನಿಮ್ಮ ಕುಟುಂಬಕ್ಕೆ ಯಾವ ಮೂಲಗಳಿಂದ ಆದಾಯ ಬರುತ್ತದೆ

೧. ಕೃಷಿ ೨.ಕೂಲಿ ೩. ಹೈನುಗಾರಿಕೆ ೪. ವ್ಯಾಪರ

೫. ಅಂಗಡಿ ೬. ಹೋಟೆಲ್ ೭. ಇಲ್ಲ

೪೯. ವಾರ್ಷಿಕವಾಗಿ ನಿಮ್ಮ ಕುಟುಂಬಕ್ಕೆ ಎಷ್ಟು ಆದಾಯ ಬರುತ್ತದೆ

೧. ೧೦೦ದಿಂದ ೨೦೦೦೦

೨. ೨೧೦೦೦ದಿಂದ ೩೦೦೦೦

೩. ೩೧೦೦೦ದಿಂದ ೪೦೦೦೦

೪. ೪೧೦೦೦ದಿಂದ ೫೦೦೦೦

೫. ೫೧ಸಾವಿರಕ್ಕಿಂತ ಮೇಲ್ಪಟ್ಟು

೬. ಉಳಿಯುವುದಿಲ್ಲ

೫೦. ನೀವು ಅಡಿಗೆ ಮಾಡಲು ಬಳಸುವ ಇಂಧನ ಯಾವುದು

೧. ಎಲ್‌ಪಿಜಿ ೨. ಗೋಬರ್ ಗ್ಯಾಸ್ ೩. ಕಟ್ಟಿಗೆ

೫೧. ನಿಮ್ಮ ಮನೆಯ ವಿದ್ಯುತ್ ಸಂಪರ್ಕ ಇದೆಯೇ

೧. ಇದೆ ೨. ಇಲ್ಲ

೫೨. ಇದೆ ಎಂದರೆ

೧. ನಾವೇ ತೆಗೆದುಕೊಂಡಿದ್ದು

೨. ಭಾಗ್ಯ ಜ್ಯೋತಿ ಯೋಜನೆಯಲ್ಲಿ ಪಡೆದಿದ್ದು

## IV ರಾಜಕೀಯ ಸ್ಥಿತಿಗತಿ

೫೩. ಮತ ಚಲಾಯಿಸಲು ಭಾಗವಹಿಸಿದ್ದೀರಾ

೧. ಹೌದು ೨. ಇಲ್ಲ

೫೪. ಚುನಾವಣಾ ಪ್ರಚಾರದಲ್ಲಿ ಭಾಗವಹಿಸಿದ್ದೀರಾ

೧. ಹೌದು ೨. ಇಲ್ಲ

೫೫. ಚುನಾವಣೆಯಲ್ಲಿ ಸ್ಪರ್ಧಿಸಲು ಇಚ್ಚಿಸಿದ್ದೀರಾ

೧. ಹೌದು ೨. ಇಲ್ಲ

೫೬. ದೂರದ ಸ್ಥಳಗಳಲ್ಲಿ ನಡೆಯುವ ರಾಜಕೀಯ ಸಭೆಗಳಲ್ಲಿ ಭಾಗವಹಿಸಲು ಹೋಗಿದ್ದೀರಾ

೧. ಹೌದು ಇಲ್ಲ

೫೭. ರಾಜಕೀಯ ವ್ಯಕ್ತಿಗಳ ಜೊತೆಗೆ ನಿಮ್ಮ ಸಂಪರ್ಕ ಬೆಳೆದಿದೆಯೇ

## ಅನುಬಂಧ: ಮೂರು



ನಡುಗಡ್ಡೆಯಲ್ಲಿರುವ ಪಶುಸಂಗೋಪನೆ



ಕುರುವಪುರ ನಡುಗಡ್ಡೆ



ದೋಣಿಗಾಗಿ ಕಾಯುತ್ತಿರುವ ನಡುಗಡ್ಡೆ ಜನರು



ಬೇಸಿಗೆ ದಿನಗಳಲ್ಲಿ ನೀರಿನ ಮಟ್ಟ



ಸಮಸ್ಯೆಗಳನ್ನು ವಿಚಾರಿಸುತ್ತಿರುವ ಸಂಶೋಧಕರು



ನಡುಗಡ್ಡೆಯನ್ನು ದೋಣಿಯಲ್ಲಿ ತಲುಪುವುದು



ನದಿ ದಾಟಿದ ಮೇಲೆ ಗಡ್ಡೆಯಲ್ಲಿ ಹೋಗಲು ಎತ್ತಿನಗಾಡಿ ಬಳಸುತ್ತಿರುವುದು



ದೋಣಿಗಳ ನಿಲುಗಡೆ ಸ್ಥಳ



ಭಾರವಾದ ಸರಕುಗಳನ್ನು ಸಾಗಿಸಲು ಎತ್ತಿನಬಂಡಿಗಳನ್ನು ಬಳಸುತ್ತಿರುವುದು



ಜಲದುರ್ಗದಲ್ಲಿ ನಡೆಯುತ್ತಿರುವ ದಾಸೋಹ



ಸಂಗಮೇಶ್ವರ ತೇರು, ಜಲದುರ್ಗ



ಸಂಗಮೇಶ್ವರ ಜಾತ್ರೆ, ಜಲದುರ್ಗ



ತಾತನವರ ಮೆರವಣಿಗೆ, ಜಲದುರ್ಗ



ಗುರು-ಹಿರಿಯರಿಗೆ ಸನ್ಮಾನ ಮಾಡುತ್ತಿರುವುದು, ಜಲದುರ್ಗ



ಸಾಮೂಹಿಕ ವಿವಾಹ, ಜಲದುರ್ಗ



ಜಲದುರ್ಗಕ್ಕೆ ಬಂದಿರುವ ಹಾಲಭಾವಿ ದ್ಯಾವಮ್ಮ



ನಡುಗಡ್ಡೆಯಲ್ಲಿನ ಮೀನುಗಾರಿಕೆ, ಕುರುವಪುರ



ರಾಯಚೂರಿನಿಂದ ಕುರುವಪುರಗೆಡ್ಡೆಗೆ ಹೋಗುವ ರಸ್ತೆ



ನಾರದಗೆಡ್ಡೆ



ಚನ್ನಬಸವೇಶ್ವರ ಮಠ, ನಾರದಗೆಡ್ಡೆ



ದೇವರಗೆಡ್ಡೆ ಗುಡಿಸಲು



ಚೌಳೇಂದ್ರಸ್ವಾಮಿಗಳ ಮಠ, ರಾಮಗೆಡ್ಡೆ



ಕೋಟೆ, ದೇವರಗೆಡ್ಡೆ



ಗದ್ದೆಮ್ಮನಿಗೆ ಅರಕೆ ಕಾಯಿಗಳನ್ನು ಕಟ್ಟಿರುವುದು, ದೇವರಗೆಡ್ಡೆ



ನಡುಗಡ್ಡೆಗಳ ಮನೆಗಳ ನೋಟ


ಜಲದುರ್ಗದ ಕೋಟೆ ಮತ್ತು ಸಂಗಮೇಶ್ವರ ದೇವಸ್ಥಾನ


ಹಿರೇಹೊಳೆ, ಜಲದುರ್ಗ


ಜಲದುರ್ಗದ ಸೇತುವೆ



ಮಕ್ಕಳ ವರಕೋಡುವ ಮಳಮಾತಪ್ಪ, ದೇವರಗೆಡ್ಡೆ



ಆಂಜನೇಯ ವಿಗ್ರಹ, ದೇವರಗಡ್ಡೆ



ಯಲ್ಲಮ್ಮನಗಟ್ಟ, ಕುರುವಪುರ ಗೆಡ್ಡೆ



ತಂಗುದಾಣ, ಕುರುವಪುರಗೆಡ್ಡೆ



ಈಶ್ವರಲಿಂಗ, ನಾರದಗೆಡ್ಡೆ




ಕೃಷ್ಣಾನದಿಯಲ್ಲಿ ಬರುವ ನಡುಗಡ್ಡೆ

ಆಹಾರ ಪದಾರ್ಥಗಳನ್ನು ನೀಲಕಂಠರಾಯನ ಗಡ್ಡಿಗೆ ಕಳಿಸಲು ನದಿ ತೀರದಲ್ಲಿ ಸಂಗ್ರಹಿಸಿಟ್ಟ ಸರಕಾರ

ಶಾಸಕ ರಾಜೂಗೌಡರು ಪ್ರವಾಹ ಸಂದರ್ಭದಲ್ಲಿ ನೀಲಕಂಠರಾಯನಗಡ್ಡಿ ನಿವಾಸಿಗಳನ್ನು ವಿಚಾರಿಸಲು ಬೋಟಿನಲ್ಲಿ ಹೊರಟಿರುವದು

ಲಿಂಗಸುಗೂರ ತಾಲೂಕಿನ ಶೀಲಹಳ್ಳಿ ಸೇತುವೆ ಕೃಷ್ಣಾ ಪ್ರವಾಹಕ್ಕೆ ಮುಳುಗಡೆಯಾಗಿರುವುದು

ಎಸ್‌ಪಿ ರೂಪಾ ಮೌದ್ಗಿಲ್ ಅವರ ಮುಂದೆ ತಮ್ಮ ಸಂಕಷ್ಟ ತೋಡಿಕೋಳ್ಳುತ್ತಿರುವ ನೀಲಕಂಠರಾಯನ ಗಡ್ಡಿ ಜನರು

